कुमार वाल्मीकि
एक अध्ययन
(विश्लेषणात्मक प्रबंध)
लेखक —
डा० एच सीताराम आचार्य
एम०ए०, पी०एच० डी०
गोविन्द दास कालेज
सुरतकल (दक्षिण कन्नड)
कर्नाटक

## ತೊರವೆಯ ನರಹರಿಯ ಸನ್ನಿಧಿಯಲ್ಲಿ



ದೇವಾಲಯದ ದ್ವಾರ (ಅರ್ವಾಚೀನ ರಚನೆ)



ತೊರವೆಯ ನರಹರಿ-ಇಂದು ಗುಹಾವಾಸಿ



ವೃಂದಾವನದ 'ಹನುಮ'



ತೊರವೆಯ 'ಪುರ-ದ್ವಾರ'



ಅಂದಿನ ಪುರ-ಇಂದಿನ ಹಾಳುಬಿದ್ದ ಹಳ್ಳಿ

# ಕುಮಾರ ವಾಲ್ಮೀಕಿ–ಒಂದು ಅಧ್ಯಯನ

ಡಾ. ಎಚ್. ಸೀತಾರಾಮ ಆಚಾರ್, ಎಂ.ಎ., ಪಿಎಚ್.ಡಿ.
ಗೋವಿಂದ ದಾಸ ಕಾಲೇಜು, ಸುರತ್ಕಲ್ (ದ. ಕ.)




1976

KUMARA VALMIKI-ONDU ADHYAYANA: Dr. H. Seetharama Achar, Govinda Dasa College, Suratkal, S. Kanara.

Published by the Director, Prasaranga, University of Mysore, Manasagangotri Mysore-570 012. First Edition: 1976, cr. 1/4. pp. xvi+354, Price ordinary Rs. 25-00, calico Rs. 35-00.



ಮೊದಲ ಮುದ್ರಣ 1976

ಬೆಲೆ : ಸಾದಾ ಪ್ರತಿ : ರೂ. 25–00 ; ಉತ್ತಮ ಪ್ರತಿ : ರೂ. 35–00

ಪ್ರಕಾಶಕರು : ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು–570 012

ಮುದ್ರಕರು : ಹರ್ಷ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು–570 008

## ಪ್ರಕಾಶಕರ ಮಾತು

ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯರ ಈ ಗ್ರಂಥವನ್ನು ತುಂಬ ಸಂತೋಷದಿಂದ ಓದುಗರಿಗೆ ಒದಗಿಸುತ್ತಿದ್ದೇವೆ.

ಡಾ. ಸೀತಾರಾಮ ಆಚಾರ್ಯರ ಅನೇಕ ವರ್ಷಗಳ ಆಳವಾದ ಅಧ್ಯಯನದ ಫಲ ಈ ವಿದ್ವತ್ಪೂರ್ಣವಾದ ಕೃತಿ. ಕನ್ನಡದ ಜನಪ್ರಿಯ ಕಾವ್ಯಗಳಲ್ಲಿ ಒಂದಾದ ತೊರವೆ ರಾಮಾಯಣವನ್ನು ಕುರಿತು ಇಷ್ಟು ವಿಸ್ತಾರವಾದ ಗ್ರಂಥವೊಂದು ಹೊರಬರುತ್ತಿರುವುದು ನಮಗೆ ತಿಳಿದಂತೆ ಇದೇ ಮೊದಲು. ವಿದ್ವಾಂಸರೂ ವಿದ್ಯಾರ್ಥಿಗಳೂ ಮಾತ್ರವಲ್ಲದೆ ಸಾಮಾನ್ಯ ವಾಚಕ ವರ್ಗವೂ ಈ ನಮ್ಮ ಪ್ರಕಟಣೆಯನ್ನು ಸಂತೋಷದಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇವೆ.

ಸಂಶೋಧನಾತ್ಮಕವಾದ ತಮ್ಮ ಪುಸ್ತಕವನ್ನು ಪ್ರಕಟಿಸಲು ಅನುಮತಿ ಕೊಟ್ಟುದಕ್ಕಾಗಿ ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯರಿಗೂ ಇದನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ 'ಹರ್ಷ ಪ್ರಿಂಟರ್ಸ್' ಅವರಿಗೂ ನಮ್ಮ ಕೃತಜ್ಞತೆಗಳು.

ಮೈಸೂರು ೧-೪-೭೬

**ಪ್ರಭುಶಂಕರ**
ನಿರ್ದೇಶಕ

# ಮೊದಲ ಅರಿಕೆ: ಆತ್ಮನಿವೇದನ

'ರಾಮಾಯಣ'ದ ಕಥಾನಕಗಳಿಗೆ ಸಂಬಂಧಿಸಿದ-ಯಕ್ಷಗಾನ-ಪ್ರಸಂಗ-ಸಾಹಿತ್ಯವನ್ನು ಅವಲೋಕಿಸುತ್ತಿದ್ದಂತೆ, ಅದರ 'ಆಕರ'ದ ಬಗ್ಗೆ ನನ್ನಲ್ಲಿ ಕುತೂಹಲ ಮೂಡಿತು. ಆ ಕುರಿತು ಯಥಾಮತಿಯಾಗಿ ಅಭ್ಯಾಸ ನಡೆಸುತಿದ್ದಂತೆ, ಕುಮಾರ ವಾಲ್ಮೀಕಿಯ 'ತೊರವೆ ರಾಮಾಯಣ'ವು ಯಕ್ಷಗಾನ ಕವಿಗಳಿಗೆ ಪ್ರೇರಣೆ ನೀಡಿ, ಆಧಾರವಾಗಿ ನಿಂತ ಕೃತಿ ಎನ್ನುವುದು ಗಮನಕ್ಕೆ ಬಂದಿತು. ಇದರಿಂದ 'ತೊರವೆ ರಾಮಾಯಣ'ದ ವಿಚಾರವಾಗಿ ಹೆಚ್ಚು ಆಳವಾಗಿ ಅಧ್ಯಯನ ನಡೆಸಬೇಕೆನ್ನುವ ಆಸಕ್ತಿ ಕೆರಳಿ, ಆ ದಾರಿಯಲ್ಲಿ ಸಾಗುತ್ತಿದ್ದಂತೆ, ಈ ಕೃತಿಯು ಕನ್ನಡದಲ್ಲಿ ವಾಲ್ಮೀಕಿಯ-ರಾಮಾಯಣ ಪರಂಪರೆಗೆ ನಾಂದಿ ಹಾಡಿ, ಜನಸಾಮಾನ್ಯದ ಅಂತರಂಗದಲ್ಲಿ 'ಗುಪ್ತಗಾಮಿನಿ'ಯಾಗಿ ಯಾದರೂ-ಜೀವಂತವಾಗಿ ಬಾಳುತ್ತಿರುವ 'ಸತ್ಯ'ದ ಅರಿವಾಯಿತು. ಇಷ್ಟಿದ್ದರೂ, ಈ ಕೃತಿಗೆ ಸಂಬಂಧಿಸಿದ ಪರಿಚಯಾತ್ಮಕ, ವಿಮರ್ಶಾತ್ಮಕ ಕೃತಿಗಳು, ಲೇಖನಗಳು ಬೆರಳೆಣಿಕೆಯಷ್ಟು ಮಾತ್ರವಿದ್ದು, ಕುಮಾರ ವಾಲ್ಮೀಕಿಗೆ ಸಲ್ಲಬೇಕಾದ ಅರ್ಹ ಕೃತಜ್ಞತೆಯ ಕಾಣಿಕೆ ಸಲ್ಲಿಸಲ್ಪಟ್ಟಿಲ್ಲ, ಎಂದೆನಿಸಿತು. ಈ ನಿಟ್ಟಿನಲ್ಲಿ, ಅಭ್ಯಾಸ ಮುಂದುವರಿಸಬೇಕೆಂದು ಪ್ರೇರಣೆಯೊದಗುತ್ತಿರುವಷ್ಟರಲ್ಲಿ, ಪ್ರಾಧ್ಯಾಪಕ-ಕವಿ ಎಸ್. ವಿ. ಪರಮೇಶ್ವರ ಭಟ್ಟರು ನನಗೆ ಮಾರ್ಗದರ್ಶಕರಾಗಿ ಅನುಗ್ರಹಿಸಲು ಸಮ್ಮತಿಸಿದರು. ಮೈಸೂರು ವಿಶ್ವವಿದ್ಯಾಲಯವು ಈ ಸಂಬಂಧವಾಗಿ ಸಂಶೋಧನೆ ನಡೆಸಲು ಅನುಮತಿಯನ್ನೂ ನೀಡಿತು.

ಇವೆಲ್ಲವುಗಳ ಫಲವೇ ಈ ಪ್ರಬಂಧ.
ಈ ಪ್ರಬಂಧರಚನೆಗೆ ಹಿನ್ನೆಲೆಯಾಗಿ,

೧. ತೊರವೆ ರಾಮಾಯಣದ ತಾಳೀಗರಿ ಪ್ರತಿಗಳು.
೨. ರಾಮಕಥೆಯನ್ನು ಹೇಳುವ ಕನ್ನಡ ಮತ್ತು ಸಂಸ್ಕೃತ ಕೃತಿಗಳು.
೩. ರಾಮಾಯಣ ಕಥಾನಕಗಳುಳ್ಳ ಯಕ್ಷಗಾನ ಪ್ರಸಂಗಗಳು.
೪. ಕವಿಯ ಕಾಲ, ಕೃತಿ ವಿಶ್ಲೇಷಣೆಗಳಲ್ಲಿ ಬೆಳಕು ನೀಡಬಹುದಾದ ಶಾಸನಗಳು, ಐತಿಹಾಸಿಕ ಗ್ರಂಥಗಳು-

ಇವುಗಳ ಸಂಗ್ರಹ, ಟಿಪ್ಪಣಿ ತಯಾರಿ, ವಿಷಯ ವರ್ಗೀಕರಣಗಳ ಕಾರ್ಯ ಕಳೆದ ನಾಲ್ಕಾರು ವರ್ಷಗಳಿಂದಲೂ ನಡೆಯಿತು.

ತೊರವೆ ರಾಮಾಯಣವು ರೂಪುದಳೆದ "ನರಹರಿ"ಯ ಸನ್ನಿಧಿಯಾದ ಬಿಜಾಪುರದ "ತೊರವೆ"ಗೆ ಹೋಗಿ, ಅಲ್ಲಿ ಲಭ್ಯವಾದ ಮಾಹಿತಿಯನ್ನೂ, ಸಂಶೋಧನೆ, ವಿಶ್ಲೇಷಣೆಗಳಿಗೆ ಪ್ರೇರಕವಾದ, ಹಲವು ಪ್ರಶ್ನಾತ್ಮಕ ಅಂಶಗಳನ್ನೂ ತುಂಬಿಕೊಂಡು ಬಂದದ್ದಾಯಿತು.

ಈ ಸಂಗ್ರಹದಿಂದ ಕವಿ, ಕೃತಿಗಳ ಬಗ್ಗೆ ಹೊಸತಾಗಿ ಹೇಳಬಹುದಾದದ್ದು ಸಾಕಷ್ಟು ಇದೆ ಎನಿಸಿ ಶಾಸನಗಳ ಅಭ್ಯಾಸದಿಂದ ಕವಿಯ ಕಾಲ, ಪರಿಸರ, ಕೃತಿ ವಿಶ್ಲೇಷಣೆಯಲ್ಲಿ ಮುಂದಿನ ಹೆಜ್ಜೆಯಿರಿಸುವುದಕ್ಕೆ ಆತ್ಮ ಪ್ರತ್ಯಯವುಂಟಾಯಿತೆನ್ನಬಹುದು. ಅಂತೂ ಕಾರ್ಯ ನಡೆಯಿತು, ಪ್ರಬಂಧ ರೂಪುಗೊಂಡಿತು.

ಈ ಪ್ರಬಂಧದ ವಿಷಯ ವ್ಯವಸ್ಥೆಯ ಕುರಿತು ಹೀಗೆ ಹೇಳಬಹುದು:

೧. ಕೃತಿಯ ಪರಿಚಯ-ಪರಿಶೀಲನೆ, ಕೃತಿನಿಷ್ಠ ವಿಮರ್ಶೆ.
೨. ಕೃತಿಯ ಪರಿಸರದ ಪರಿಚಯ-ಕಾವ್ಯಸೃಷ್ಟಿಯ ಕಾಲ, ಪ್ರೇರಣೆಗಳು.
೩. ಕೃತಿಯ ವಿಶ್ಲೇಷಣಾತ್ಮಕ ಅಧ್ಯಯನ-ವಸ್ತು, ಸಾಹಿತ್ಯ, ಇತಿಹಾಸ, ತತ್ತ್ವ.
೪. ಸಮಾರೋಪ.

**ಮೊದಲ ಭಾಗದಲ್ಲಿ**

ಆದಿ ಕವಿ ವಾಲ್ಮೀಕಿಯ ಕಾವ್ಯದ ಹಿರಿಮೆ, ಗರಿಮೆಗಳು. ಅದರಿಂದ ಆಕರ್ಷಿತನಾದ ಕುಮಾರ ವಾಲ್ಮೀಕಿಯಿಂದ ಕನ್ನಡದಲ್ಲಿ ರಾಮಾಯಣ ರಚನೆ-ತೊ. ರಾ. ದ ವಸ್ತು ಪರಿಚಯ (ಕವಿವಾಣಿಯ ಉಲ್ಲೇಖಗಳೊಂದಿಗೆ) ಕಾವ್ಯ ಪರಿಶೀಲನೆ, ರಸವಿಮರ್ಶೆ-ಕುಮಾರ ವಾಲ್ಮೀಕಿಯ ಕೃತಿ ಸೌಂದರ್ಯ, ವಾಲ್ಮೀಕಿ-ಕುಮಾರವಾಲ್ಮೀಕಿ-ಕೃತಿಗಳ ತುಲಾಭಾರ ಈ ಅಂಶಗಳಿವೆ.

**ಎರಡನೆಯ ಭಾಗದಲ್ಲಿ**

ತೊರವೆ ರಾಮಾಯಣವು ಸೃಷ್ಟಿಗೊಂಡ ಪರಿಸರ, ಕಾಲಗಳ ವಿಚಾರವಾಗಿ ಒಂದು ನಿಲುಗಡೆಗೆ ಬರಲಾಗಿದೆ ; ಈ ಸಂಬಂಧವಾಗಿ ಇಷ್ಟರ ತನಕ ನಡೆದ ಎಲ್ಲ ವಿಚಾರಗಳನ್ನೂ ವಿವೇಚಿಸಿ-ಕೃತಿಯ ಅಂತರಿಕ, ಬಾಹ್ಯ ಪ್ರಮಾಣಗಳ (ಶಾಸನಾಧಾರ ಸಹಿತ) ಆಧಾರದ ಮೇಲೆ ಒಂದು ನಿರ್ಣಯಕ್ಕೆ ಬಂದು, ಕುಮಾರವ್ಯಾಸನ ಕಾಲದ ಮೇಲಿನ ಎಲ್ಲೆಯನ್ನು ಸ್ಪಷ್ಟವಾಗಿ ಗುರುತಿಸುವುದು ಸಾಧ್ಯವಾದೀತೆಂಬ ಆಶಯವನ್ನು ವ್ಯಕ್ತಪಡಿಸಲಾಗಿದೆ.

ಕುಮಾರ ವಾಲ್ಮೀಕಿಯವರೆಗಿನ ಕನ್ನಡ " ರಾಮಾಯಣ ಸಾಹಿತ್ಯ " (ಜೈನ, ವಾಲ್ಮೀಕೀಯ, ಶಾಸನೋಕ್ತ)ದ ವಿಹಂಗಮಾವಲೋಕನಮಾಡಿ-ಸಮಗ್ರ ವಾಲ್ಮೀಕಿ ರಾಮಾಯಣದ ಕನ್ನಡಾನುವಾದದ ಅಭಾವವನ್ನು ಗುರುತಿಸಿ, ತೊ. ರಾ. ದ ಸೃಷ್ಟಿಗೆ ಪ್ರೇರಣೆಗಳನ್ನು ಗಮನಿಸಲಾಗಿದೆ.

**ಮೂರನೆಯ ವಿಭಾಗದಲ್ಲಿ**

ತೊ. ರಾ.. ದ ವಿಶ್ಲೇಷಣೆಯನ್ನು " ಚತುರ್ಮುಖ "ವಾಗಿ ನಡೆಸಿ, ಕೃತಿಯ ನಾಲ್ಮೊಗಗಳ ಪರಿಚಯ ಮಾಡಿಸಲಾಗಿದೆ, ಸಮಾರೋಪವಾಗಿ ಅಧ್ಯಯನದ ಫಲಿತಾಂಶಗಳನ್ನು ಸೂಚಿಸಲಾಗಿದೆ.

೧. ಕೃತಿಯ ಕಥಾವೈಶಿಷ್ಟ್ಯಗಳ ತುಲನಾತ್ಮಕ ವಿವೇಚನೆ, ಕವಿಯ ಸ್ವತ್ವ ಪರಿಶೀಲನೆ.

೨. ಸಾಹಿತ್ತ್ಯಕ ಅಧ್ಯಯನ-ಕೃತಿಯಲ್ಲಿ ಪರಂಪರೆಯ ಸತ್ತ್ವ-ಕಾಳಿದಾಸನ ರಘುವಂಶ, ಅಧ್ಯಾತ್ಮ ರಾಮಾಯಣ ಇತ್ಯಾದಿ, ಕುಮಾರವ್ಯಾಸ, ನಾಗಚಂದ್ರ ಮೊದಲಾದವರ ಕೃತಿಗಳ ಪ್ರಭಾವ-ಇವನಿಂದ ಪ್ರಭಾವ ಹೊಂದಿದ ೨೧ ಕೃತಿಗಳು-ತುಲನಾತ್ಮಕವಾಗಿ ಪ್ರಭಾವ ನಿರ್ದೇಶನ.

೩. ಕೃತಿಯ ಸಾಮಾಜಿಕ ಅಧ್ಯಯನದಲ್ಲಿ ಸೂಚಿತವಾದ ಸಮಾಜ ಜೀವನದ ಬಹುಮುಖ ದರ್ಶನ-ವೀರ ಜೀವನ-ಕೋಟೆಕಾಳಗ-ರಾಜಕೀಯ ಸಂಗತಿಗಳು-ಪ್ರವಾಸಿಗಳ ವರದಿ, ಐತಿಹಾಸಿಕ ಗ್ರಂಥಗಳ ಹೇಳಿಕೆಗಳೊಂದಿಗೆ ಹೊಂದಾಣಿಕೆ.

೪. ತತ್ತ್ವದ ಅಧ್ಯಯನ.

೫. ಸಮಾರೋಪ : ಅಧ್ಯಯನದ ಫಲಶ್ರುತಿ-೧೨ ಅಂಶಗಳು.

**ಅನುಬಂಧಗಳು**

ತೊರವೆಯ ನರಹರಿ ದೇವಾಲಯದ ರೇಖಾಚಿತ್ರ.
ತೊ. ರಾ.ದ ತಾಳೆಗರಿ ಪ್ರತಿಗಳ ಮುಖ್ಯ ಪಾಠಾಂತರಗಳು– ವಿಚಾರಗಳು.
ವಾ. ರಾ. ಮತ್ತು ತೊ. ರಾ.ಗಳಲ್ಲಿ ಕಥೆಯ ಕಾಲಾನುಕ್ರಮಣಿಕೆ ಹೋಲಿಕೆ.
ರಾಮುಜನನ ಕುಂಡಲಿಗಳು–ವಾ. ರಾ. ಆನಂದರಾಮಾಯಣ, ರಾಮಚರಿತ ಮಾನಸ ಮತ್ತು ತೊ. ರಾ. ಗಳಲ್ಲಿ ಪೇಳಿದಂತೆ.
ವಾ. ರಾ. ದಲ್ಲಿ ಹೇಳಲಾದ ಆಯುಧಗಳು, ಕವಚ ಇತ್ಯಾದಿ.
ಸಂಸ್ಕೃತದಲ್ಲಿ ರಾಮಕಥಾ ಸಾಹಿತ್ಯ, ಲಲಿತ ಸಾಹಿತ್ಯ, ಧಾರ್ಮಿಕ ಸಾಹಿತ್ಯ.
ಕನ್ನಡದಲ್ಲಿ ರಾಮಕಥಾ ಸಾಹಿತ್ಯ–ಒಂದು ವ್ಯಾಪಕವಾದ ಪಟ್ಟಿ.

## ಕೃತಜ್ಞತೆಯ ನುಡಿಗಳು

ಈ ಕೆಲಸವನ್ನು ನನ್ನಿಂದ ನಡೆಯಿಸಿಕೊಟ್ಟವರು ಹಲವು ಸಹೃದಯ ವಿದ್ವಾಂಸರು, ಮಿತ್ರರು. ಇವರೆಲ್ಲರ ಸಹಕಾರ, ಮಾರ್ಗದರ್ಶನವಿಲ್ಲದೆ ಹೋಗುತ್ತಿದ್ದರೆ, ಈ 'ಕುಂಟ'ನು 'ರಾಮಾಯಣಗಿರಿ'ಯನ್ನು ಕಣ್ಣೆತ್ತಿ ನೋಡುವುದೂ ಅಶಕ್ಯವಾಗುತ್ತಿತ್ತು. ಇದು ಸತ್ಯ. ಆದುದರಿಂದ ಅವರೆಲ್ಲರಿಗೆ ನನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುವುದು ನನ್ನ ಪರಮಧರ್ಮವಾಗಿದೆಯೆಂದು ಭಾವಿಸಿದ್ದೇನೆ.

೧. ಸಂಶೋಧನೆಗೆ ಅನುಮತಿ ನೀಡಿ, ಪ್ರೋತ್ಸಾಹಿಸಿ, ನನ್ನಿಂದ ಈ ಕೆಲಸವು ಸಾಧ್ಯವಾಗುವಂತೆ ಹರಸಿದ, ಮೈಸೂರು ವಿಶ್ವವಿದ್ಯಾಲಯದ ಅಂದಿನ ಕುಲಪತಿ ಪ್ರಾ. ದೇ. ಜ. ಗೌ. ಅವರಿಗೆ,

೨. ಮಾರ್ಗದರ್ಶಕರಾಗಲು ಸಮ್ಮತಿಸಿ, ಪ್ರೀತಿ ಸೌಜನ್ಯಗಳಿಂದ ಆಗಾಗ ನನ್ನ ಬೆನ್ನುತಟ್ಟಿ, ಈ ಪ್ರಬಂಧವು ರೂಪುಗೊಳ್ಳುವುದಕ್ಕೆ ಮುಖ್ಯಕಾರಣರಾದ ಪ್ರಾಧ್ಯಾಪಕರೂ, ಮಂಗಳೂರಿನ "ಮಂಗಳಗಂಗೋತ್ರಿ"ಯ ನಿವೃತ್ತ ನಿರ್ದೇಶಕರೂ ಆದ ಕವಿವರ್ಯ ಎಸ್. ವಿ. ಪರಮೇಶ್ವರ ಭಟ್ಟ-ಇವರಿಗೆ,

೩. ನನ್ನ ಅಧ್ಯಯನ, ವಿಚಾರದಲ್ಲಿ, ಆತ್ಮೀಯವಾದ ಸಹಾನುಭೂತಿ ವ್ಯಕ್ತಪಡಿಸಿ, ಉತ್ತೇಜನ ನೀಡುತ್ತಾ ಬಂದದ್ದಲ್ಲದೆ, ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ನನಗೆ ಬೇಕಾದ ತಾಳೆಗರಿ ಗ್ರಂಥ ಮತ್ತು ಇತರ ಸಾಹಿತ್ಯ ಕೃತಿಗಳನ್ನು ಅಭ್ಯಾಸಕ್ಕೆ ಒದಗಿಸಿ, ನನ್ನ ಕೈ ಹಿಡಿದು ನಡೆಸಿರುವ ಪ್ರಾಧ್ಯಾಪಕ ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಡಾ. ಹಾ. ಮಾ. ನಾಯಕ-ಇವರಿಗೆ,

೪. ನನಗೆ ವಿಚಾರವಿನಿಮಯದಲ್ಲಿ ನೆರವಾದ ಕನ್ನಡ ಅಧ್ಯಯನ ಸಂಸ್ಥೆಯ ಸಹನಿರ್ದೇಶಕ ಶ್ರೀ. ಬಿ. ಎಸ್. ಸಣ್ಣಯ್ಯ ಮತ್ತು ಶ್ರೀ ಕೃಷ್ಣ ಜೋಯಿಸ್-ಇವರಿಗೆ,

೫. ಅಮೂಲ್ಯವೂ, ದುರ್ಲಭವೂ ಆದ ಹಲವಾರು ಶಾಸನಗಳನ್ನೂ, ವರದಿಗಳನ್ನೂ ಒದಗಿಸಿ, ಉಪಕರಿಸಿರುವ

ಡಾ. ಜಿ. ಎಸ್. ಗಾಯಿ ; ಚೀಫ್ ಎಪಿಗ್ರಾಫಿಸ್ಟ್ ಆಫ್ ಇಂಡಿಯಾ, ಮೈಸೂರು.
ಶ್ರೀ. ಯಮ್. ವಾಸುದೇವರಾವ್ ; ಎಂ. ಎ. ಎಲ್. ಟಿ, ಕುಳಾಯಿ.
ಶ್ರೀ. ಕೆ. ವೆಂಕಟರಾಯಾಚಾರ್ಯ, ವಿದ್ವಾನ್, ಸುರತ್ಕಲ್.
ಶ್ರೀ. ಎಂ. ಮುಕುಂದ ಪ್ರಭು, ಮಂಗಳೂರು—ಇವರೆಲ್ಲರಿಗೆ,

೬. ನನ್ನ ಅಭ್ಯಾಸ ವಿಚಾರದಲ್ಲಿ ಆಸ್ಥೆ ವ್ಯಕ್ತಪಡಿಸಿ, ಬೆಂಬಲ ನೀಡಿದ ಡಾ. ಪಿ. ನಾರಾಯಣರಾವ್ ; ಪ್ರಿನ್ಸಿಪಾಲ್, ಪೂರ್ಣಪ್ರಜ್ಞ ಕಾಲೇಜು, ಉಡುಪಿ ; ಶ್ರೀ. ಎಚ್. ಗೋಪಾಲಕೃಷ್ಣರಾವ್ ಎಂ.ಕಾಮ್. ಪ್ರಿನ್ಸಿಪಾಲ್, ಗೋವಿಂದದಾಸ ಕಾಲೇಜು, ಸುರತ್ಕಲ್ ; ನನಗೆ ಗ್ರಂಥಗಳನ್ನೊದಗಿಸುವಲ್ಲಿ ಆತ್ಮೀಯತೆಯಿಂದ ನೆರವಾದ ಮಿತ್ರರಾದ ಸರ್ವಶ್ರೀ ಪಿ. ಸೋಮಶೇಖರರಾವ್, ಶೇಖರ ಇಡ್ಯ, ಜಿ. ಜಿ. ಹೆಗ್ಡೆ, ಯಚ್. ಜಿ. ಹತ್ವಾರ್ ; ತೊರವೆ ರಾಮಾಯಣದ ತಾಳೆಗರಿ ಪ್ರತಿಗಳನ್ನು ನೀಡಿ. ಉಪಕರಿಸಿರುವ (ಅವರ ಹೆಸರುಗಳನ್ನು ಅನುಬಂಧದಲ್ಲಿ ಉಲ್ಲೇಖಿಸಿದ್ದೇನೆ)-ಎಲ್ಲ ಮಹನೀಯರುಗಳಿಗೆ,

೭. ನನ್ನ ತೊರವೆ ಪ್ರವಾಸದಲ್ಲಿ ಸಹಕರಿಸಿರುವ, ಸರ್ವಶ್ರೀ ಎಸ್. ಎಮ್. ಪಾಟೀಲ್, ರಿಜಿಸ್ಟ್ರಾರ್, ಕೆ. ಆರ್. ಇ. ಸಿ ; ತೊರವಿ ದೇವಾಲಯದ ಕಾರ್ಯಕರ್ತ ಡಾ. ಬಿ. ಎನ್. ಕುಲಕರ್ಣಿ, 'ಸಿಸು' ಸಂಗಮೇಶ, ವಿ. ಬಿ. ನಾಯಕ್, ಸಂಪಾದಕರು : 'ಸಂದರ್ಶನ', ಬಿಜಾಪುರ-ಇವರಿಗೆ,

೮. ನನಗೆ ಓಲೆಗಳ ಮೂಲಕ ತಮ್ಮ ಅಭಿಮತ, ಸಲಹೆಗಳನ್ನು ನೀಡಿದ ಡಾ. ರಂ. ಶ್ರೀ ಮುಗಳಿ, ಶ್ರೀ ಆರ್. ಎಸ್. ಪಂಚಮುಖಿ, ಶ್ರೀ ಉ. ಕಾ. ಸುಬ್ಬರಾಯಾಚಾರ್, ಡಾ. ಸಿ.ಪಿ.ಕೆ, ಡಾ. ಎಸ್. ಎಸ್. ಬ್ಯಾತನಾಳ ಮೊದಲಾದ ಮಹನೀಯರಿಗೆ,

ಇನ್ನು ಇತರ ರೀತಿಗಳಿಂದ ನೆರವಾದ ಎಲ್ಲರಿಗೆ-ನನ್ನ ಅನಂತ ವಂದನೆಗಳು.

ಇದೀಗ ನನ್ನ ಈ ಪ್ರಬಂಧಕ್ಕೆ ಪಿಎಚ್.ಡಿ. ಉಪಾಧಿಯನ್ನು ನೀಡಿದ್ದಲ್ಲದೆ, ಇದರ ಪ್ರಕಟಣೆಯ ಹೊಣೆಯನ್ನು ಹೊತ್ತ ಮೈಸೂರು ವಿಶ್ವವಿದ್ಯಾಲಯದ ಎಲ್ಲ ಹಿರಿಯರಿಗೂ ನಾನು ಕೃತಜ್ಞತೆಯಿಂದ ತಲೆಬಾಗುತಿದ್ದೇನೆ.

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕ ಡಾ. ಪ್ರಭುಶಂಕರ ಮತ್ತು ಉಪನಿರ್ದೇಶಕ ಶ್ರೀ ಆರ್. ಎಲ್. ಅನಂತರಾಮಯ್ಯ ಈ ಕೃತಿಯ ಪ್ರಕಾಶನದಲ್ಲಿ ಆತ್ಮೀಯತೆಯಿಂದ ನೆರವಾಗಿದ್ದಾರೆ. ಮೈಸೂರಿನ ಹರ್ಷ ಪ್ರಿಂಟರ್ಸ್ ಶ್ರದ್ಧೆಯಿಂದ ಮುದ್ರಣ ಕಾರ್ಯ ನಡೆಸಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ನಾನು ಋಣಿ.

ಎಳವೆಯಲ್ಲೇ ತಂದೆಯನ್ನು ಕಳೆದುಕೊಂಡರೂ, ಆ ಕೊರತೆಯ ಲವಲೇಶವೂ ನನ್ನನ್ನು ಕಾಡದಂತೆ ಮಾಡಿ ನನ್ನನ್ನು ಮುನ್ನಡೆಸಿದ ವಾತ್ಸಲ್ಯನಿಧಿಗಳಾದ ನನ್ನ ಅಣ್ಣಂದಿರೆಲ್ಲರ ಅನುಗ್ರಹಾಶೀರ್ವಾದಗಳ ದೈವೀಶಕ್ತಿಗೆ ನಾನು ಭಕ್ತಿಯಿಂದ ಮಣಿಯಬೇಕು. ಇವರಲ್ಲಿ ಮುಖ್ಯರಾದ ಹಿರಿಯಣ್ಣ ಶ್ರೀವೆಂಕಟಕೃಷ್ಣಾಚಾರ್ಯ, 'ಪುರಾಣೇತಿಹಾಸಾಚಾರ್ಯರೂ,' 'ವೇದಾಂತಸಾಹಿತ್ಯಭೂಷಣ'ರೂ ಆದ ಜಿತೇಂದ್ರಿಯಾಚಾರ್ಯ, 'ಹರಿದಾಸರತ್ನ' ಶ್ರೀ ಶ್ರೀಧರಾಚಾರ್ಯ–ಇವರೆಲ್ಲರ ಮುಂದೆ ನನಗೆ–ಭರತನಂತೆ–

ಆರ್ಯೇತ್ಯೇವಾಭಿ ಸಂಕ್ರುಶ್ಯ ವ್ಯಾಹರ್ತುಂ ನಾಶಕ್ತತತಃ– 'ಅಣ್ಣಾ' ಎಂದು ಮಾತ್ರ ಉದ್ಗಾರವೆತ್ತಿ ವಂದಿಸುವುದು ಸಾಧ್ಯವಾಗಿದೆ.

ಎಷ್ಟೇ ಎಚ್ಚರಿಕೆವಹಿಸಿದರೂ ಗ್ರಂಥದಲ್ಲಿ–ಮುಖ್ಯವಾಗಿ ಸಂಸ್ಕೃತ ಶ್ಲೋಕ, ಉಲ್ಲೇಖಗಳಲ್ಲಿ–ಕೆಲವು ಮುದ್ರಣ ದೋಷಗಳು ಉಳಿದುಕೊಂಡಿವೆ. ಇದಕ್ಕಾಗಿ ಓದುಗರ ಕ್ಷಮೆ ಕೋರಬೇಕಾಗಿದೆ.

ವಾಚಕ ಲೋಕ ನನ್ನ ಈ "ಅಧ್ಯಯನ'ವನ್ನು ಸಹೃದಯತೆಯಿಂದ ಮನಗಂಡು, ಇದರಲ್ಲಿನ ಲೋಪದೋಷಗಳನ್ನು ನನಗೆ ತಿಳಿಸಿ, ಸಾಹಿತ್ಯಾಧ್ಯಯನದ ಅನಂತಪಥದಲ್ಲಿ ನನ್ನನ್ನು ಮುನ್ನಡೆಸಬೇಕು ಎಂದು ಅರಿಕೆ ಮಾಡಿಕೊಳ್ಳುತ್ತಿದ್ದೇನೆ.

ಸುರತ್ಕಲ್, ದಕ್ಷಿಣ ಕನ್ನಡ

೨೧–೩–೧೯೭೬

ಹೊಸಬೆಟ್ಟು ಸೀತಾರಾಮಾಚಾರ್ಯ

# ವಿಷಯಾನುಕ್ರಮಣಿಕೆ

ಶಾಸನೋಕ್ತ ಆಧಾರಗಳು–ಯುದ್ಧ ವರ್ಣನೆಯ ದೀರ್ಘತೆಯ ಕಾರಣ–ಬಾಹ್ಯ–ಆಂತರಿಕ ಪ್ರಮಾಣಗಳು–ಮಧ್ವಾಚಾರ್ಯರು–ಅವರ ಪ್ರಭಾವದ ಹಿನ್ನೆಲೆ–ವೈರಾವಣ ಕಾಳಗದ ಕವಿಯ ಹೇಳಿಕೆ– ಆ ಕವಿಯೇ ಕುಮಾರ ವಾಲ್ಮೀಕಿಯಲ್ಲ–ಕುಮಾರ ವಾಲ್ಮೀಕಿಯು ೧೫ ನೆಯ ಶತಕದವನು ಎನ್ನುವುದಕ್ಕೆ ಪೂರಕವಾಗಿರುವ ವಿಷಯಗಳು–ಶಾಸನದ ಉಲ್ಲೇಖ ಗಳೊಂದಿಗೆ ಹೋಲಿಕೆ–ಕುಮಾರವ್ಯಾಸನ ಕಾಲದ ಈಚೆಯ ಎಲ್ಲೆಯ ನಿರ್ಣಯದ ಸಾಧ್ಯತೆ–ಕವಿಯ ಹೆಸರು: ಒಂದು ಊಹೆ–ವಿವೇಚನೆಯ ಮುಖ್ಯಾಂಶಗಳು.

### ಕೃತಿಯ ಪರಿಸರ

ರಾಜಕೀಯ–ತೊರವೆಯ ತತ್ಕಾಲೀನ ಸ್ಥಿತಿ–ಧಾರ್ಮಿಕ ಸನ್ನಿವೇಶ–ವೈಷ್ಣವ ಭಕ್ತಿ ಪಂಥ ಗಳು–ಮಹಾನುಭಾವ ಚಳವಳಿ–ಮಧ್ವಾಚಾರ್ಯ–ಸಾಹಿತ್ಯ ಕ್ಷೇತ್ರ–ಪರಿವರ್ತನೆ–ತೊರವೆ ರಾಮಾಯಣದ ಸೃಷ್ಟಿ–ಕನ್ನಡ ರಾಮಾಯಣ ಸಾಹಿತ್ಯದ ಹಿನ್ನೆಲೆ–೧೫ನೇ ಶತಮಾನದ ವರೆಗಿನ ಕನ್ನಡ ಸಾಹಿತ್ಯದಲ್ಲಿ ' ರಾಮಕಥೆ '–ಕವಿರಾಜಮಾರ್ಗ–ಪೊನ್ನನ ' ಭುವನೈಕ ರಾಮಾಭ್ಯುದಯ' (?)–ಚಾವುಂಡರಾಯ ಪುರಾಣ–ನಾಗಚಂದ್ರನ 'ರಾಮಚಂದ್ರಚರಿತ ಪುರಾಣ' ವಾದಿಕುಮುದ ಚಂದ್ರನ 'ರಾಮಾಯಣ'–ನಾಗವರ್ಮನ 'ಕಾವ್ಯಾವಲೋಕನ' ದಲ್ಲಿ ರಾಮಕಥೆ–ರುದ್ರಭಟ್ಟನ ' ಜಗನ್ನಾಥ ವಿಜಯ 'ದಲ್ಲಿ–ಬಂಧುವರ್ಮನ ' ಜೀವ ಸಂಬೋಧನೆ 'ಯಲ್ಲಿ–ಕುಮುದೇಂದುವಿನ ' ರಾಮಾಯಣ '–ಕೇಶಿರಾಜನ ' ಶಬ್ದಮಣಿ ದರ್ಪಣ 'ದಲ್ಲಿ–ನಾಗರಾಜನ ' ಪುಣ್ಯಾಸ್ರವ ' –ಕನ್ನಡ ಶಾಸನಗಳಲ್ಲಿ ರಾಮಕಥೆಯ ಉಲ್ಲೇಖಗಳು–

ಈ ಹಿನ್ನೆಲೆಯಲ್ಲಿ ಕುಮಾರ ವಾಲ್ಮೀಕಿಯ ಕಾವ್ಯರಚನೆಗೆ ಪ್ರೇರಣೆಗಳು–
ಕವಿಗೆ–

ವಸ್ತುದೃಷ್ಟಿಯಿಂದ–ಆದಿಕವಿ ವಾಲ್ಮೀಕಿ
ರೀತಿ ದೃಷ್ಟಿಯಿಂದ–ಕುಮಾರವ್ಯಾಸ
ತತ್ತ್ವ ದೃಷ್ಟಿಯಿಂದ–ಮಧ್ವಾಚಾರ್ಯ

ಈ ಮೂವರು ಮಾರ್ಗದರ್ಶಿಗಳು.

## ಅಧ್ಯಾಯ ೩–ಕೃತಿಯ ವಿಶ್ಲೇಷಣೆ ೧೩೩

### ಕೃತಿಯ ವಸ್ತು–ತುಲನಾತ್ಮಕ ಅಧ್ಯಯನ

ಕವಿಯ ಕಥಾ ದೃಷ್ಟಿ–ಉತ್ತರಕಾಂಡವಿಲ್ಲ–ಈಶ್ವರನು ಗಿರಿಜೆಗೆ ಹೇಳಿದ ಕಥೆ–ವಾಲ್ಮೀಕಿಯ ಪೂರ್ವಕಥೆ–ಶಾಪವಾಕ್ಯ–ಲವಕುಶ ಪ್ರಶ್ನೆ–ರಾಮನ ವಂಶವೃಕ್ಷ–....ದಶರಥನ ಯಜ್ಞ –ಪಾಯಸ ವಿತರಣೆಯ ವಿಧಾನ–ರಾಮಜನನ ತಿಥಿ ವಿವಿಧ ಅಭಿಮತಗಳು–ಮಾಯಾ ವತಾರಿಣಿ ಮಂಥರೆ–...ಅಹಲ್ಯೋದ್ಧಾರ ಪ್ರಸಂಗ–ಸೀತಾವಿವಾಹ ವಿಚಾರ ಸೀತಾಜನನ ಕಥಾನ್ವೈವಿಧ್ಯ–ಪರಶುರಾಮ ಪ್ರಕರಣ–....ರಾಮನ ವನವಾಸ ಕಾರಣಗಳು ದಶರಥನಿತ್ತ ರಾಜಮುದ್ರಿಕೆ–ಜಟಾಯು ವಿಚಾರ–ವಿಶೇಷವಾದ ಎರಡು ಉಪಾಖ್ಯಾನಗಳು–ಸೀತಾಪ ಹಾರ: ವಿಶಿಷ್ಟವಾದ ಹಿನ್ನೆಲೆ–ಮಾಯಾ ಮೃಗ ಪ್ರಕರಣ ಸಮಸ್ಯೆ–ಅಯೋಮುಖಿ–

ತುಂಗಭದ್ರೆಯ ಉಲ್ಲೇಖ-ಸಪ್ತತಾಲಭೇದನ ಪ್ರಸಂಗ ವೈಶಿಷ್ಟ್ಯ-ವಾಲಿವಧೆ-ಸೀತಾನ್ವೇಷಣೆಯ ವರ್ಣನೆ-ತೃಣಬಿಂದು-ಲಂಕಾದಹನ ವಿಚಾರ-ಇನ್ನೂ ಕೆಲವು ಕಥಾ ವೈಶಿಷ್ಟ್ಯಗಳು-ಆನಂದರಾಮಾಯಣದ ಪ್ರಭಾವ-ಸೇತುಬಂಧನ-ಹನುಮಂತನ ಹಿಮಾಲಯ ಯಾತ್ರೆ-ಎರಡು ಸಂದರ್ಭಗಳು-ರಾವಣಪರಿಭವ-ಕುಂಭಕರ್ಣ ವೈಶಿಷ್ಟ್ಯ ಇಂದ್ರಜಿತು ಪ್ರಕರಣ-ರಾವಣ ವಧೆಯ ಹಿನ್ನೆಲೆಯಲ್ಲಿ ಯಜ್ಞಭಂಗ ಇತ್ಯಾದಿ...ವಿಶ್ವರೂಪ ದರ್ಶನ-ತಾತ್ತ್ವಿಕ ದೃಷ್ಟಿ-ಮಂಡೋದರಿಯ ಸಹಗಮನ ವಿಚಾರ-(ಆದಿಕಾವ್ಯದೊಂದಿಗೆ ಅಧ್ಯಾತ್ಮರಾಮಾಯಣ, ಆನಂದರಾಮಾಯಣ, ಭಾರತತಾತ್ಪರ್ಯನಿರ್ಣಯ, ರಘುವಂಶ, 'ಪಂಪರಾಮಾಯಣ'ಗಳ ಪ್ರಭಾವ ನಿರ್ದೇಶನ)

**ಕೃತಿಯ ಸಾಹಿತ್ಯಿಕ ಅಧ್ಯಯನ**

೧. **ಕೃತಿಯಲ್ಲಿ ಪರಂಪರೆಯ ಸತ್ತ್ವ**: ಕವಿಯ ಬಹುಜ್ಞತೆಗೆ ನಿದರ್ಶನಗಳು-ಕಾಳಿದಾಸನ ರಘುವಂಶ – ಚಂಪೂರಾಮಾಯಣ – ಮಹಾನಾಟಕ-ರನ್ನ – ನಾಗಚಂದ್ರ-ಕುಮಾರವ್ಯಾಸ-ಕವಿಯ ಬಹುಜ್ಞತೆಗೆ ಸಾಕ್ಷಿಯಾದ ಕೆಲವು ಉಲ್ಲೇಖಗಳು.

೨. **ಕೃತಿಯ ಪ್ರಭಾವ ದರ್ಶನ**: ಮೈರಾವಣ ಕಾಳಗ-ಬತ್ತಲೇಶ್ವರನ "ರಾಮಾಯಣ"-ಕನ್ನಡ ಭಾಗವತದ "ರಾಮಕಥೆ"-ಸುಬ್ರಹ್ಮಣ್ಯ ಕವಿಯ "ಹನುಮದ್ರಾಮಾಯಣ" ವೆಂಕಟಾಚಲವಾಸ ಅಂಕಿತದ (ಅಪ್ರಕಟಿತ) ಕಪೋತ ಚರಿತೆ-ದಾಸಸಾಹಿತ್ಯದಲ್ಲಿ ತೊರವೆ ರಾಮಾಯಣದ ಸುಳವು ಹೊಳವುಗಳು-ಯಕ್ಷಗಾನ ಪ್ರಸಂಗಗಳ ಮೇಲೆ ತೊ. ರಾ.ದ ಪ್ರಭಾವ-"ಯಕ್ಷಗಾನ ಕವಿಗಳ ಆದಿಕವಿ"-೧. ಪುತ್ರಕಾಮೇಷ್ಟಿ ಮತ್ತು ಸೀತಾಕಲ್ಯಾಣ-೨. ಪಾದುಕಾ ಪಟ್ಟಾಭಿಷೇಕ (ಎರಡು ರಚನೆಗಳು). ೩. ಪಂಚವಟಿ-ಖರದೂಷಣ ವಧೆ-೪. ವಾಲಿಸುಗ್ರೀವರಕಾಳಗ (ಮೂರು ಕೃತಿಗಳು) ೫. ಚೂಡಾಮಣಿ-೬. ಸೇತುಬಂಧನ ೭. ಅಂಗದ ಸಂಧಾನ. ೮. ನಾಗಾಸ್ತ್ರ-ಕುಂಭಕರ್ಣಕಾಳಗ ೯. ಕುಂಭಕರ್ಣಕಾಳಗ ೧೦. ಅತಿಕಾಯ ಕಾಳಗ ೧೧. ಕಾಲನೇಮಿ ಕಾಳಗ ೧೨. ಇಂದ್ರಜಿತು ಕಾಳಗ ೧೩. ರಾವಣ ವಧೆ ೧೪. ಶ್ರೀರಾಮ ಪಟ್ಟಾಭಿಷೇಕ.

ಈ ಪ್ರಸಂಗಗಳಲ್ಲಿ ತೊರವೆ ರಾಮಾಯಣದ ಅನುಸರಣೆ.



**ಕೃತಿಯ ಸಾಮಾಜಿಕ ಮತ್ತು ರಾಜಕೀಯ ಅಧ್ಯಯನ**

ರಾಜಕೀಯ ಚಿತ್ರಣದ ರೂಪರೇಖೆ-ಕೆಲವು ಪದಗಳು-ಮಂಡಲೇಶ್ವರ ಮಂಡಳಿಕ-ಸಾಮಂತ – ಮನ್ನೆಯ – ನಿಯೋಗಿ – ಸಂಧಿವಿಗ್ರಹಿ – ದಂಡನಾಯಕ – ನಾಯಕವಾಡಿ-ಪಸಾಯತ-ಅಷ್ಟಾದಶ ಮಹಾಪ್ರಜೆ-ಜನಜೀವನ ಚಿತ್ರಣ-ವಿವಿಧವೃತ್ತಿಗಳು-ನೇಕಾರವೃತ್ತಿ ವೈವಿಧ್ಯಮಯ ಸೀರೆಗಳು-ಇತರ ವೃತ್ತಿಗಳ ಸೂಚನೆ-ವ್ಯಾಪಾರ-ವ್ಯಾಪಾರದ ಮಾನಗಳು-ಹಣಕಾಸು-ವ್ಯವಸ್ಥೆ ಕೆಲವು ಸಾಮಾಜಿಕ ಪದ್ಧತಿಗಳು – ಸಹಗಮನ ಪದ್ಧತಿ-ಕೆಲವು ನಂಬಿಕೆಗಳು-ಕೆಲವು ಆಚಾರಗಳು-ಶಕುನಗಳು-ಮದುವೆಯ ಕಟ್ಟಳೆ

## ಸಂಕ್ಷಿಪ್ತ ಪದಗಳ ವಿವರಣೆ

| | |
|---|---|
| ಅ. ರಾ: | ಅಧ್ಯಾತ್ಮ ರಾಮಾಯಣ. |
| ಆ. ರಾ. | ಆನಂದ ರಾಮಾಯಣ |
| ಕ. ಕ. ಚ. | ಕರ್ಣಾಟಕ ಕವಿ ಚರಿತೆ |
| ಕ. ಸಾ. ಚ. | ಕನ್ನಡ ಸಾಹಿತ್ಯ ಚರಿತ್ರೆ |
| ಕ. ಸಾ. ಪ. | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ |
| ತೊ. ರಾ. | ತೊರವೆ ರಾಮಾಯಣ |
| ಪ್ರ. ಕ. | ಪ್ರಬುದ್ಧ ಕರ್ಣಾಟಕ |
| ಭಾ. ತಾ. ನಿ. | ಭಾರತತಾತ್ಪರ್ಯ ನಿರ್ಣಯ |
| ವಾ. ರಾ. | ವಾಲ್ಮೀಕಿ ರಾಮಾಯಣ |
| ಹ. ರಾ. | ಹನುಮದ್ರಾಮಾಯಣ |
| ಎಸ್. ಐ. ಐ. | South Indian Inscriptions |

**ಸಂಖ್ಯಾ ವಿವರಣೆ : ಉದಾ :**

| ತೊ. ರಾ. * | ಕಾಂಡ ಸಂಖ್ಯೆ |
|---|---|
| ೫.೪-೭ ಎಂದರೆ | ೧. ಬಾಲಕಾಂಡ |
| ೫ : ಸುಂದರಕಾಂಡ | ೨. ಅಯೋಧ್ಯಾಕಾಂಡ |
| ೪ : ನಾಲ್ಕನೆ ಸಂಧಿ | ೩. ಅರಣ್ಯಕಾಂಡ |
| ೭ : ಏಳನೇ ಪದ್ಯ | ೪. ಕಿಷ್ಕಿಂಧಾಕಾಂಡ |
| | ೫. ಸುಂದರಕಾಂಡ |
| | ೬. ಯುದ್ಧಕಾಂಡ |

* ತೊ. ರಾ. : ತೊರವೆ ರಾಮಾಯಣ, ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ.

# ಅಧ್ಯಾಯ ೧ - ಕೃತಿ ಪರಿಚಯ

## ವಸ್ತು—ಪ್ರವೇಶ: ಆದಿಕಾವ್ಯ ರಾಮಾಯಣ

ಕುರು ರಾಮಕಥಾಂ ಪುಣ್ಯಾಂ ಶ್ಲೋಕಬದ್ಧಾಂ ಮನೋರಮಾಮ್
ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ
ತಾವದ್ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ[1]

'ಶ್ರೀ ರಾಮನ ಪುಣ್ಯಕಥೆಯನ್ನು ಶ್ಲೋಕಗಳಿಂದ ಮನೋಹರವಾಗಿ ಚಿತ್ರಿಸು. ಈ ಭೂಮಿಯಲ್ಲಿ ಪರ್ವತಗಳೂ ನದಿಗಳೂ ಎಲ್ಲಿಯವರೆಗೆ ಇರುವವೋ ಅಲ್ಲಿಯವರೆಗೆ ನಿನ್ನ ರಾಮಾಯಣ ಪ್ರಚಾರದಲ್ಲಿರುವುದು' ಎಂದು ಬ್ರಹ್ಮನು ವಾಲ್ಮೀಕಿಯನ್ನು ಅನುಗ್ರಹಿಸಿದ ಮಾತು ಅಕ್ಷರಶಃ ನಿಜವಾಗಿ ಪರಿಣಮಿಸಿದೆ. ಆದಿಕಾವ್ಯವೆನಿಸಿದ ರಾಮಾಯಣವು ಭಾರತದ ರಾಷ್ಟ್ರೀಯ ಕಾವ್ಯವೆನಿಸಿ, ಪರ್ವತದಂತೆ ಸ್ಥಿರಶಕ್ತಿಯಾಗಿ, ನದಿಯಂತೆ ಜೀವನದಾಯಿಯಾಗಿ ಜನತೆಯ ಅಂತರಂಗದಲ್ಲಿ ಒಂದು ಅವಿಭಾಜ್ಯ ಸ್ಥಾನವನ್ನು ಗಳಿಸಿಕೊಂಡಿದೆ; ದೇಶದ ವಿವಿಧತೆಗಳಲ್ಲಿ ಏಕತೆಯನ್ನು ಧ್ವನಿಸುತ್ತಿರುವ ಸಾಂಸ್ಕೃತಿಕ ಕೃತಿಯಾಗಿ ಅಮರತೆಯನ್ನು ಹೊಂದಿ ಮೆರೆಯುತ್ತಿದೆ.

'ಮಾನವ ಸಂಬಂಧಗಳಲ್ಲಿ ನೂತನವಾದ ವೀರ ಮತ್ತು ದೈವೀ ಸಂದೇಶವನ್ನು ಸಾರುವ ಅಪೂರ್ವ ಕೃತಿ ರಾಮಾಯಣ'[2]. 'ರಾಮಾಯಣವು ಅಖಂಡ ಭಾರತ ಜನತೆಯ ಆಸ್ತಿಯಾಗಿದೆ. ಶತಶತಮಾನಗಳಲ್ಲಿ ಮಾನವನ ಚಿಂತನೆ ಮತ್ತು ಕಾವ್ಯಗಳಮೇಲೆ ರಾಮಾಯಣದಷ್ಟು ಪ್ರಭಾವ ಬೀರಿದ ಇತರ ಕೃತಿ ಸಾಹಿತ್ಯ ಕ್ಷೇತ್ರದಲ್ಲಿ ಇನ್ನೊಂದಿಲ್ಲ.'[3] 'ಅದು ನಿಜವಾಗಿಯೂ 'ಜಾನಪದ' ಕಾವ್ಯವಾಗಿ ಸಂಶೋಭಿಸುತ್ತದೆ. ಅದು ಯಾವ ಕೃತಕ, ಕ್ಷಣಿಕ ಪ್ರಚೋದನೆಯ ಪ್ರಭಾವಕ್ಕೂ ಒಳಗಾಗದೆ ತಾನೇ ತಾನಾಗಿ, ಸ್ವಾಭಾವಿಕವಾಗಿ ಜನತೆಯ ಶಾಶ್ವತ ಹೃದಯಗರ್ಭದಿಂದ ಅವತರಿಸುತ್ತದೆ.'[4] —ಇಂತಹ ಹೇಳಿಕೆಗಳು ರಾಮಾಯಣದ ಹಿರಿಮೆಯನ್ನು ಸಾರಿ ಹೇಳುತ್ತವೆ. ಹೀಗೆ, ಭಾರತದ ವಿಷಯವನ್ನು ಯೋಚಿಸ ಹೊರಟ, ಹೇಳಹೊರಟ ಯಾವನೇ ಆಗಲಿ, ರಾಮಾಯಣವನ್ನು ಅಲಕ್ಷಿಸುವುದು ಸಾಧ್ಯವಿಲ್ಲ—ಎನ್ನುವಷ್ಟು ಅದು ಅನಿವಾರ್ಯತೆಯನ್ನು ಸ್ಥಾಪಿಸಿಕೊಂಡಿದೆ. ಇದರಿಂದಲೇ ಇದು ಅಮರಕಾವ್ಯ (The Immortal Epic)[5] ಎಂಬ ಕೀರ್ತಿಗೆ ಪಾತ್ರವಾಗಿದೆ.

### ಆದಿಕಾವ್ಯವೆಂದರೆ................

'ಆದಿಕಾವ್ಯ' ಎಂಬ ಹೆಸರಿನ ಸಾರ್ಥಕತೆಯನ್ನು ವಿವರಿಸುವ ಕಥೆಯೊಂದು—ರಾಮಾಯಣದ ಕವಿ ವಾಲ್ಮೀಕಿಗೆ ಸಂಬಂಧಿಸಿದಂತೆ—ಶ್ರೀಮದ್ರಾಮಾಯಣದ ಬಾಲಕಾಂಡದಲ್ಲೇ ನಮಗೆ ದೊರೆಯುತ್ತದೆ.

............ಶೋಕಾರ್ತಸ್ಯ ಪ್ರವೃತ್ತೋ ಮೇ ಶ್ಲೋಕೋ ಭವತು ನಾನ್ಯಥಾ[6]
............ಸಮಾಕ್ಷರೈಶ್ಚತುರ್ಭಿರ್ಯಃ ಪಾದೈರ್ಗೀತೋ ಮಹರ್ಷಿಣಾ
ಸೋಽನುವ್ಯಾಹರಣಾದ್ಭೂಯಃ ಶೋಕಃ ಶ್ಲೋಕತ್ವಮಾಗತಃ[7]

---

1. ವಾ. ರಾ. I ೨-೩೬, ೩೭.
2. ಎಸ್. ರಾಧಾಕೃಷ್ಣನ್—Indian Philosophy, Vol, I p. 57.
3. ವಿಂಟರ್‌ನಿಟ್ಜ್—A History of Indian Literature p. 476.
4. ದೇ. ಜ. ಗೌ.—ಶ್ರೀ ರಾಮಾಯಣದರ್ಶನಂ ವಚನ ಚಂದ್ರಿಕೆ, ಪು. ೨.
5. ಜವಾಹರಲಾಲ್ ನೆಹರು—'The Immortal Epic', Indian Inheritance, p. 33.
6. ವಾ. ರಾ. I ೨-೧೮.
7. ಇದೇ. ೨-೪೦.

ಜೀವನಾನುಭವದಿಂದ ಹೃದಯ ಉಕ್ಕಿಬಂದಾಗಲೇ ಕಾವ್ಯ ಪ್ರವಹಿಸುವುದು ಸಾಧ್ಯ—ಎನ್ನುವ ಕಾವ್ಯೋತ್ಪತ್ತಿಯ ರಹಸ್ಯವನ್ನು ಈ ಕಥೆಯು ಸಾಂಕೇತಿಕವಾಗಿ ತಿಳಿಸುತ್ತದೆ.

"ಅಶ್ವಘೋಷ, ಕಾಳಿದಾಸ, ಭವಭೂತಿಗಳಂತಹ ಮಹಾಕವಿಗಳೂ ಈ ಕಥೆಯ ಪ್ರಾಮಾಣ್ಯವನ್ನು ಅಂಗೀಕರಿಸಿದ್ದಾರೆ"....ವಾಲ್ಮೀಕಿಗಳಿಗಿಂತ ಮುಂಚೆ ಪಾದಬದ್ಧವೂ, ಅಕ್ಷರಸಮವೂ, ತಂತ್ರೀಲಯಸಮನ್ವಿತವೂ ಆದ ಶ್ಲೋಕವಿರಲಿಲ್ಲ. ವೇದಮಂತ್ರಗಳಲ್ಲಿಯೇ ಅನುಷ್ಟುಭ್ ಛಂದಸ್ಸಿರುವುದು ನಿಜ; ಆದರೆ ಅದು ಲೌಕಿಕ ವಿಷಯಗಳ ವರ್ಣನೆಗೆ ಉಪಯುಕ್ತವಾಗಿರಲಿಲ್ಲ. ಪ್ರಸಿದ್ಧವಾದ 'ಪಂಚಮಂ ಲಘು ಸರ್ವತ್ರ....' ಮುಂತಾದ ಶ್ಲೋಕಲಕ್ಷಣಗಳೆಲ್ಲವನ್ನೂ ಒಳಗೊಂಡಿರಲಿಲ್ಲ. ರಾಮಾಯಣಕ್ಕೆ ಪೂರ್ವದಲ್ಲಿಯೂ ನಳದಮಯಂತಿ ಮುಂತಾದ ಉಪಾಖ್ಯಾನಗಳ ಪೂರ್ವರೂಪಗಳಿದ್ದು ಅವುಗಳಲ್ಲಿ ಈ ಛಂದಸ್ಸು ಇದ್ದಿರಬಹುದಾದರೂ, ರಾಮಾಯಣದ ವ್ಯಾಪ್ತಿಯ ಮಹಾಕಾವ್ಯ ಈ ಛಂದಸ್ಸಿನಲ್ಲಿ ಹಿಂದೆ ರಚಿತವಾಗಿರಲಿಲ್ಲ.[1]

## ಕಾವ್ಯೋದ್ಯೋಗದ ಉದ್ದೇಶ: ಮೊದಲ ಉಲ್ಲೇಖ

"ಕಾವ್ಯಸೃಷ್ಟಿ"ಯ ರಹಸ್ಯ ಶೋಧನೆಮಾಡಿದ ಯಶಸ್ಸಿನೊಂದಿಗೆ, ಕಾವ್ಯದ ಪರಮೋದ್ದೇಶವಾದ ಸಹೃದಯಾನಂದವನ್ನು ಮೊದಲು ಕಂಡುಕೊಂಡ ಧನ್ಯತೆ ವಾಲ್ಮೀಕಿಗೆ ಲಭಿಸಿತು. ಕಾವ್ಯಾನುಭವದ ಪರಿಣಾಮದ ವಿವರಣೆಯು ನಮಗೆ ಮೊತ್ತಮೊದಲಿಗೆ 'ಆದಿಕಾವ್ಯ'ದಲ್ಲಿಯೇ ದೊರೆಯುತ್ತದೆ.

ತಂತ್ರೀಲಯಸಮತ್ಯರ್ಥಂ ವಿಶ್ರುತಾರ್ಥಮಗಾಯತಾಮ್
ಹ್ಲಾದಯತ್ಸರ್ವಗಾತ್ರಾಣಿ ಮನಾಂಸಿ ಹೃದಯಾನಿ ಚ.[2]
................ತಚ್ಛ್ರುತ್ವಾ ಮುನಯಃ ಸರ್ವೇ ಬಾಷ್ಪಪರ್ಯಾಕುಲೇಕ್ಷಣಾಃ[3]

"ರಾಮಾಯಣ ಗಾನವನ್ನು ಕೇಳಿ ಶ್ರೋತೃಗಳ ಮನಸ್ಸು ಹಿಗ್ಗಿತು, ಗಾನದಲ್ಲಿ ತಲ್ಲೀನವಾಯಿತು. ಅವರ ಹೃದಯಕ್ಕೆ ಅಪ್ಯಾಯನವಾಯಿತು. ಗಾನವು ಸಭೆಯಲ್ಲಿದ್ದವರಿಗೆ ಶ್ರವಣಾನಂದವನ್ನುಂಟುಮಾಡುತ್ತಾ ಹೃದಯವನ್ನು ಸೂರೆಗೊಂಡಿತು."

"ಶ್ರೀಮದ್ರಾಮಾಯಣದ ಗಾನವನ್ನು ಕೇಳಿ ಮುನಿಗಳೆಲ್ಲರೂ ಆಶ್ಚರ್ಯಪಟ್ಟು ಆನಂದಬಾಷ್ಪಗಳನ್ನು ಸುರಿಸಿದರು."

## ಕವಿದರ್ಶನದ ವ್ಯಾಪ್ತಿ

ಕಾವ್ಯ ಸಮಾಧಿಯಲ್ಲಿ ಕವಿದರ್ಶನಕ್ಕೆ ಹೊರತಾದ ವಿಷಯಗಳಿಲ್ಲ ಎನ್ನುವ ಸತ್ಯಕ್ಕೆ ವಾಲ್ಮೀಕಿ ರಾಮಾಯಣದಲ್ಲಿನ ಈ ಮಾತು ಸಾಕ್ಷಿ.

ತತಃ ಪಶ್ಯತಿ ಧರ್ಮಾತ್ಮಾ ತತ್ ಸರ್ವಂ ಯೋಗಮಾಸ್ಥಿತಃ
ಪುರಾ ಯತ್ತತ್ರ ನಿರ್ವೃತ್ತಂ ಪಾಣಾವಾಮಲಕಂ ಯಥಾ[4]

........ಹೀಗೆ ಧರ್ಮಾತ್ಮರಾದ ವಾಲ್ಮೀಕಿಗಳು ಸಮಾಧಿಸ್ಥರಾಗಿ ಹಿಂದೆ ನಡೆದ ವೃತ್ತಾಂತವೆಲ್ಲವನ್ನೂ ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಕಂಡರು.....

1. ಕೆ. ಕೃಷ್ಣಮೂರ್ತಿ, 'ಸಂಸ್ಕೃತಕಾವ್ಯ' ಪು. ೩೭-೩೯.
2. ವಾ. ರಾ. I ೪-೩೪.
3. ಇದೇ ೪-೧೫.
4. ಇದೇ ೩-೬.

### ಪರಂ ಕವೀನಾಮಾಧಾರಂ....

ತದುಪಗತಸಮಾಸಸಂಧಿಯೋಗಂ
ಸಮ ಮಧುರೋಪನತಾರ್ಥವಾಕ್ಯಬದ್ಧಮ್
ರಘುವರಚರಿತಂ ಮುನಿಪ್ರಣೀತಂ
ದಶಶಿರಸಶ್ಚ ವಧಂ ನಿಶಾಮಯಧ್ವಮ್[1]

"ವಾಲ್ಮೀಕಿಮುನಿಗಳು ರಚಿಸಿದ ಈ ರಾಮಾಯಣ ಕಾವ್ಯದಲ್ಲಿ ರಘುನಾಥನ ಚರಿತ್ರೆಯಿದೆ. ರಾವಣನನ್ನು ವಧಿಸಿದ ವೃತ್ತಾಂತವಿದೆ. ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರಗಳ ಮರ್ಯಾದೆಯನ್ನನುಸರಿಸಿ ಸಂಧಿಸಮಾಸಗಳ ಸಂಘಟನೆಯಿದೆ...." ಎನ್ನುವ ಮಾತಿನಲ್ಲಿ ಕಾವ್ಯಾಂಗಗಳಾದ ವಸ್ತು, ರೀತಿ, ಗುಣ, ರಸ ಮೊದಲಾದ ಮುಖ್ಯ ವಿಚಾರಗಳ ಸೂಚನೆಯಿದೆ. ಆದುದರಿಂದಲೇ ಈ ಮಹಾಕಾವ್ಯದ ಕುರಿತು 'ಪರಂ ಕವೀನಾಮಾಧಾರಂ' ಎಂದು ಉದ್ಗರಿಸಿದ ಸಹೃದಯಮುನಿಗಳ ನುಡಿಯೂ ಸತ್ಯವಾಗಿದೆ. ರಾಮಾಯಣವು ಶ್ರೋತೃಗಳಿಗೆ ಅವಿಸ್ಮರಣೀಯವಾದ ಆನಂದವನ್ನು ನೀಡುವುದರ ಜೊತೆಗೆ, ಆದಿಕಾವ್ಯವು ತನ್ನ ನಂತರದ ಕವಿಗಳಿಗೆಲ್ಲ ಎಂದೆಂದೂ ಬತ್ತಲಾರದ ಸ್ಫೂರ್ತಿಯ ಚಿಲುಮೆಯಾಗಿ ಪರಿಣಮಿಸಿದೆ. ಈ ಕಾವ್ಯದಿಂದ ಪ್ರೇರಿತರಾಗಿ, ಪ್ರಭಾವಿತರಾಗಿ ಸಾಹಿತ್ಯಸೃಷ್ಟಿಮಾಡಿದ ಕವಿಗಳ ಸಂಖ್ಯೆಯು ಅಸಂಖ್ಯವೆನ್ನುವಷ್ಟಿದೆ. ರಾಮಕಥಾ–ಸಾಹಿತ್ಯದ ವ್ಯಾಪ್ತಿಯನ್ನು ಕಂಡಾಗ, ರಾಮಕಥೆಯನ್ನು ಹೇಳದ ಸಂಸ್ಕೃತದ ಯಾವುದೇ ಸಾಹಿತ್ಯಪ್ರಕಾರವಾಗಲೀ, ರಾಮಾಯಣವನ್ನು ತನ್ನ ಲೇಖನ ಪ್ರಪಂಚದಲ್ಲಿ ಒಳಗೊಳ್ಳದ ಯಾವುದೇ ಭಾಷೆ–ಜೀವಂತವಾಗಲೀ, ಗ್ರಂಥಸ್ಥವಾಗಲೀ–ಇಲ್ಲ ಎಂಬ ನಿರ್ಣಯಕ್ಕೆ ನಾವು ಬರುವಂತಾಗುತ್ತದೆ.

### ಸಂಸ್ಕೃತಿಯ ಮೊದಲ ದಾಖಲೆ

ವೇದಗಳಲ್ಲಿ ನಮಗೆ ಭಾರತೀಯ ಸಂಸ್ಕೃತಿಯ ಮೊದಲ ಸುಳಿವು ಸಿಗುತ್ತದಾದರೂ, ವೈದಿಕ ಸಾಹಿತ್ಯವೆಲ್ಲ ಪ್ರಮುಖವಾಗಿ ಧಾರ್ಮಿಕ ಮತ್ತು ಆಧ್ಯಾತ್ಮಿಕವಾದುದರಿಂದ, ಅವುಗಳಲ್ಲಿ ದೊರೆಯುವ ಲೌಕಿಕ ವಿಚಾರಗಳು ಅತ್ಯಲ್ಪ; ಸಾಂಸ್ಕೃತಿಕ ಸಂಗತಿಗಳು ಅಸ್ಪಷ್ಟ. ಆರ್ಯ ಸಂಸ್ಕೃತಿಯ ಬಹುಮುಖವನ್ನು ಸಾಕಷ್ಟು ಸಮಗ್ರವಾಗಿ, ಕಲಾತ್ಮಕವಾಗಿ ಅಭಿವ್ಯಕ್ತಗೊಳಿಸುವ ಮೊದಲ ಗ್ರಂಥ ರಾಮಾಯಣವೇ. ಈ ಕೃತಿಯಿಂದ ನಾವು ರಾಮಾಯಣಕಾಲದ ಜನಜೀವನದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಚಿತ್ರಣವನ್ನು ಕಲ್ಪಿಸಿಕೊಳ್ಳಬಹುದಾಗಿದೆ. ಹೀಗೆ ಆದಿಕಾವ್ಯವೆನಿಸಿದ ರಾಮಾಯಣದಲ್ಲಿ ಕಲಾತ್ಮಕವಾಗಿ ಕಾವ್ಯ–ಇತಿಹಾಸಗಳ ಮಧುರ ಸಂಗಮವಿದೆ.[2] ಫ್ರೆಂಚ್ ಇತಿಹಾಸಕಾರ ಮಿಚ್ಲೆಟ್ (Michelet) ಎಂಬುವನು ರಾಮಾಯಣದ ಕುರಿತು ವ್ಯಕ್ತಪಡಿಸಿದ ಮಾತುಗಳು[3] ಮನನೀಯವಿವೆ.

### ಜೀವನದ ಸಂಕೀರ್ಣತೆಯ ಚಿತ್ರಣ

ರಾಮಾಯಣದಿಂದ ಧ್ವನಿಸುವ ಇತಿಹಾಸವು ಕೇವಲ ರಾಜ, ರಾಕ್ಷಸರುಗಳ ಯುದ್ಧ, ಜಯ–ಅಪಜಯಗಳಷ್ಟಕ್ಕೇ ಸೀಮಿತವಾದುದಲ್ಲ. ಅದರಲ್ಲಿ ಮಾನವನ ಅಂತರಂಗದ ವಿವಿಧ ಸ್ವರೂಪಗಳ ಚಿತ್ರಣವೂ ಇದೆ. ಅಸಾಧಾರಣ,

---

1. ವಾ. ರಾ. I ೨-೪೩.
2. ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್-ಗಮನಿಸಿರಿ. ವಾ. ರಾ. I ೪-೭.
3. Michelet- "There lies my great poem, as vast as the Indian Ocean, blessed, gilded with the sun, the book of divine harmony wherein no dissonance. A serene peace reigns there, and in the midst of conflict an infinite sweetness, a boundless fraternity, which spreads over all living things, an ocean of love, of pity, of clemency "-Quoted in Jawaharlal Nehru's The Discovery of India- p. 95.

ಅಮಾನುಷ ಶಕ್ತಿಗಳಿಂದ ಕೂಡಿದ ರಾಮ, ರಾವಣರಂತಹ ಪಾತ್ರಗಳನ್ನು ನಮ್ಮ ಮುಂದಿರಿಸಿದ ಕವಿ ಅಷ್ಟೇ ಸಹಜವಾಗಿ ಸುಖ-ದುಃಖ, ಸೋಲು–ಗೆಲುವು, ಬದುಕು–ಸಾವು, ಮಿಲನ-ವಿಯೋಗ ಮೊದಲಾದ ಮಾನುಷ ಜೀವನದ ದ್ವಂದ್ವಗಳನ್ನೂ ನಿರೂಪಿಸಿದ್ದಾನೆ. ಅಲ್ಲಿನ ಪಾತ್ರಗಳು ಮಾನವತೆಯ ದೌರ್ಬಲ್ಯಗಳಾದ ಆಗ್ರಹ, ಮಾತ್ಸರ್ಯ, ಕ್ರೋಧ, ವ್ಯಾಮೋಹಗಳಿಂದ ಹೊರಗಾದುವುಗಳಲ್ಲ. ಮಂಥರೆ, ಕೈಕೇಯಿ, ದಶರಥ, ಲಕ್ಷ್ಮಣ, ಭರತ–ಈ ಪಾತ್ರಗಳು ಸಹೃದಯಪ್ರಿಯವಾಗಿರುವುದು ಈ ಕಾರಣದಿಂದಲೇ.

## ಆದರ್ಶದ ಮಾನಸ್ತಂಭ

ಮಾನವತೆಯ ದೌರ್ಬಲ್ಯ, ಸಂಘರ್ಷಗಳೊಂದಿಗೆ, ಉನ್ನತ ಆದರ್ಶಗಳ ಅಭಿವ್ಯಕ್ತಿಯ ಕಾರಣದಿಂದಲೂ ರಾಮಾಯಣವು ಲೋಕಹೃದಯವನ್ನು ಆಕರ್ಷಿಸುತ್ತಾ ಬಂದಿದೆ. ಧರ್ಮ–ಅಧರ್ಮ, ಸತ್ಯ–ಅಸತ್ಯ, ನಿಸ್ವಾರ್ಥ–ಸ್ವಾರ್ಥ, ದೈವಿಕ–ದಾನವ, ಮೊದಲಾದವುಗಳ ಹೋರಾಟವನ್ನು ಚಿತ್ರಿಸುವುದರೊಂದಿಗೆ, ಕೊನೆಯಲ್ಲಿ ಧರ್ಮ, ಸತ್ಯ, ನಿಸ್ವಾರ್ಥ, ದೈವಿಕ ಅಂಶಗಳಿಗೆ ಜಯವೆನ್ನುವ ಆದರ್ಶವನ್ನು ವಾಲ್ಮೀಕಿಯು ನಮ್ಮ ಮುಂದಿರಿಸಿದ್ದಾನೆ. ಬಾಳಿನಲ್ಲಿ ಹೋರಾಟವು ಅನಿವಾರ್ಯವೆಂಬ ವಸ್ತುಸ್ಥಿತಿಯೊಂದಿಗೆ, ಸಂಘರ್ಷದ ಕೊನೆಯಲ್ಲಿ ಒಳ್ಳೆಯತನಕ್ಕೆ ಕೇಡಾಗದು ಎಂಬ ಸತ್ಯ ಕಾವ್ಯದ ಧ್ವನಿ. ಇದನ್ನರಿತಾಗ 'ಹೋರಾಟದ ಸುಳಿಯಲ್ಲಿ' ಸಿಕ್ಕ ಸಾಮಾನ್ಯನಿಗೂ ಸಾಂತ್ವನ.

ರಾಮಾಯಣದ ಆದರ್ಶವು ಕೇವಲ ಭಾವುಕವಲ್ಲ; ಅನುಸರಣೆಗೆ ಮೀರಿದ್ದಲ್ಲ; ಸಾಧನೆಗೆ ಸಿಕ್ಕದ್ದಲ್ಲ. ಇಂದಿನ ಕುಟುಂಬ ಜೀವನದಲ್ಲೂ ರಾಮನ ಸತ್ಯವ್ರತ, ಭರತನ ಭ್ರಾತೃಪ್ರೇಮ, ಲಕ್ಷ್ಮಣ–ಹನುಮರ ಸೇವಾಮನೋಧರ್ಮ, ಸುಗ್ರೀವನ ಸ್ನೇಹ; ವಿಭೀಷಣನ ನಿರ್ಧಾರ; ಸೀತೆಯ ಸಹನೆ–ಮೊದಲಾದುವುಗಳು ಅನುಕರಣೀಯಗಳಾಗಿವೆ. ಹೀಗೆ ಕವಲು ದಾರಿಯಲ್ಲಿ ಸರಿಯಾದ ಮಾರ್ಗದರ್ಶನ ಮಾಡುವ ಕೈಮರದಂತಿದೆ–ರಾಮಾಯಣ.

## ಆದಿಕಾವ್ಯದ ಹೆಸರುಗಳು

ವಾಲ್ಮೀಕಿಯು ತನ್ನ ಕೃತಿಯನ್ನು 'ರಘುವರ ಚರಿತೆ,'[1] 'ಸೀತಾ ಚರಿತೆ,'[2] 'ಪುಲಸ್ತ್ಯವಧೆ'[3] ಎಂದೆಲ್ಲ ಕರೆದಿದ್ದಾನೆ. ಕೊನೆಗೆ 'ರಾಮಾಯಣ' ಎನ್ನುವ ಹೆಸರನ್ನೇಕೆ ಅವನು ಆರಿಸಿಕೊಂಡನೋ ತಿಳಿಯದಾದರೂ, ಪ್ರತಿ ಸರ್ಗದ ಅಂತ್ಯದಲ್ಲೂ 'ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ....' ಎಂಬ ಉಲ್ಲೇಖವೇ ಇದ್ದು ಆ ಹೆಸರು ಇತರವುಗಳಿಗಿಂತ ಹೆಚ್ಚು ರೂಢವಾದಂತೆ ತೋರುತ್ತದೆ.

ಹೀಗೆ ಕಾಲದ ದೃಷ್ಟಿಯಿಂದ ಮಾತ್ರವೇ ಅಲ್ಲದೆ, ತನ್ನ ಯೋಗ್ಯತೆಯ ಕಾರಣದಿಂದಲೂ ಆದಿಕಾವ್ಯವೆನಿಸಿದ ರಾಮಾಯಣವು ದೇಶ–ವಿದೇಶಗಳ ಸಾಹಿತ್ಯಜ್ಞರನ್ನು ಆಕರ್ಷಿಸಿದೆ, ಇನ್ನೂ ಆಕರ್ಷಿಸುತ್ತಿದೆ. ಅದು ಕೆರಳಿಸಿದ ಕುತೂಹಲವನ್ನೂ, ಅರಳಿಸಿದ ವಿಚಾರ ವ್ಯಾಪ್ತಿಯನ್ನೂ ಸ್ಥೂಲವಾಗಿ ಗಮನಿಸಿದರೂ ಅದರ ಪ್ರಭಾವದ ನಿತ್ಯನೂತನತೆಯ ಅರಿವಾದೀತು.

## ರಾಮಾಯಣದ ಕಾಲ

ರಾಮಾಯಣ ರಚನೆಯ ಕಾಲದ ಕುರಿತು ಸಾಕಷ್ಟು ಚರ್ಚೆ ನಡೆದಿದೆ; ಭಿನ್ನಾಭಿಪ್ರಾಯಗಳು ಬೆಳೆದಿವೆ. ಈ ಕುರಿತು ಚರ್ಚಿಸುವ ಉದ್ದೇಶ ನಮಗಿಲ್ಲವಾದರೂ, ಆ ವಿಚಾರಕ್ಕೆ ಸಂಬಂಧಿಸಿದ ಕೆಲವಂಶಗಳನ್ನು ಪ್ರಸ್ತುತಪಡಿಸುವುದು ಅನುಚಿತವಾಗಲಾರದು.

---

1. ವಾ. ರಾ. I ೨-೪೩.
2. ಇದೇ ೪-೭.
3. ಇದೇ ೨-೪೩, I ೪-೭.

ಶ್ರೀರಾಮಾವತಾರವಾದುದು ತ್ರೇತಾಯುಗದಲ್ಲಿ, ರಾಮಾಯಣದ ಕವಿಯು ರಾಮನ ಕಾಲದವನೆಂದು ಆ ಕಾವ್ಯದಿಂದ ತಿಳಿಯುತ್ತದೆ.[1] ಸಾಂಪ್ರದಾಯಿಕವಾದ ಲೆಕ್ಕದಂತೆ ರಾಮಾವತಾರವಾಗಿ ಕ್ರಿ. ಶ. ೧೯೭೩ರವರೆಗೆ ಎಂಟುಲಕ್ಷದ ತೊಂಬತ್ತೊಂಬತ್ತು ಸಾವಿರದ ಎಪ್ಪತ್ತುಮೂರು ವರ್ಷಗಳಾದವು. ಅದು ಹೀಗೆ :

| | | |
|---|---|---|
| ತ್ರೇತಾಯುಗದ ಅವಶಿಷ್ಟ | ೩೦,೦೦೦ | ವರ್ಷ. |
| ದ್ವಾಪರಯುಗ | ೮,೬೪,೦೦೦ | ವರ್ಷ. |
| ಕಲಿಯುಗ | ೫,೦೭೩ | ವರ್ಷ. |
| ಒಟ್ಟು | ೮,೯೯,೦೭೩ | ವರ್ಷಗಳು.[2] |

ಈ ಲೆಕ್ಕವನ್ನು ಒಪ್ಪಿಕೊಂಡಲ್ಲಿ ಯಾವ ಸಮಸ್ಯೆಯೂ ಇರುವುದಿಲ್ಲ. ಆದರೆ ಹಾಗಾಗಲಿಲ್ಲ. ಮೇಲಿನ ಲೆಕ್ಕವನ್ನು ಒತ್ತಟ್ಟಿಗಿರಿಸಿ, ಬಾಹ್ಯ, ಆಂತರಿಕ ಪ್ರಮಾಣಗಳನ್ನವಲಂಬಿಸಿ, ವಿದ್ವಾಂಸರು ರಾಮಾಯಣದ ರಚನಾ ಕಾಲವನ್ನು ಗೊತ್ತು ಮಾಡಲು ಪ್ರಯತ್ನಿಸಿದ್ದುಂಟು. ಇದರ ಫಲವಾಗಿ ಆದಿಕಾವ್ಯದ ಕಾಲವು "ಕ್ರಿ. ಪೂ. ೨೦೦೦ ವರ್ಷಗಳಿಂದ ಕ್ರಿ. ಶ. ೨ನೆಯ ಶತಮಾನದವರೆಗೆ ತೂಗಾಡುತ್ತದೆ."[3] ವಿಂಟರ್ನಿಟ್ಸ್, ವೆಬರ್, ಎ. ಎ. ಮೆಕ್ಡೊನೆಲ್, ಎ. ಬಿ. ಕೀಥ್, ಯಾಕೋಬಿ, ಮೋನಿಯರ್ ವಿಲಿಯಮ್ಸ್, ಸಿ. ವಿ. ವೈದ್ಯ, ಕೆ. ಯಸ್. ರಾಮಸ್ವಾಮಿ, ರಾಂಗೇಯ ರಾಘವ, ಬುಲ್ಕೆ–ಮೊದಲಾದವರು ಭಿನ್ನ ಭಿನ್ನವಾಗಿ ತರ್ಕಿಸಿದ್ದಾರೆ.[4] ಇತ್ತೀಚೆಗೆ ಡಾ. ಸಂಕಾಲಿಯರವರು ರಾಮಾಯಣವು ಪ್ರಾರಂಭದ ಕಬ್ಬಿಣಯುಗಕ್ಕೆ ಸಂಬಂಧಿಸಿರಬೇಕೆಂದು ಹೇಳಿದ್ದಾರೆ.[5]

### ಮೂಲರಾಮಾಯಣದ ಸ್ವರೂಪ

ಆದಿಕಾವ್ಯದ ಮೂಲಸ್ವರೂಪ[6] ಪ್ರಚಲಿತ ರಾಮಾಯಣದಂತೆ ಇರಲಿಲ್ಲವೆಂದೂ, ಕಾಲಾಂತರದಲ್ಲಿ ಹಲವಾರು ಪ್ರಕ್ಷೇಪಗಳಿಂದಾಗಿ ಇಂದಿನ ಗಾತ್ರ ರೂಪ ಅದಕ್ಕೆ ಬಂದಿದೆಯೆಂದೂ ವಿವೇಚನೆ ನಡೆದಿದೆ.[7] ದೇಶದಲ್ಲೆಲ್ಲಾ ದೊರೆಯುವ ಪಾಠಾಂತರಗಳ ತುಲನೆಯಿಂದಲೂ, ಪುನರುಕ್ತಿ, ಪೂರ್ವಾಪರ ವಿರೋಧ, ಶೈಲಿ–ಮೊದಲಾದ ಆಂತರಿಕ ಆಧಾರಗಳಿಂದಲೂ ಪ್ರಕ್ಷಿಪ್ತವಾದ ಅಂಶಗಳನ್ನು ಗುರುತಿಸುವ ಪ್ರಯತ್ನ ಸಾಗಿದೆ. ಇದರಿಂದಾಗಿ ಪ್ರಚಲಿತ ರಾಮಾಯಣದ ಬಾಲಕಾಂಡದ ೧೫–೧೭ ಸರ್ಗಗಳು, ಹಾಗೆಯೇ ೩೨–೬೫, ೭೪–೭೬ ಸರ್ಗಗಳು, ಮತ್ತು ರಾಮನು ಅವತಾರವೆಂಬ ಕಲ್ಪನೆ ಮತ್ತು ಅದಕ್ಕೆ ಸಂಬಂಧಿಸಿದ ಉಲ್ಲೇಖಗಳು,[8] ಉತ್ತರ ಕಾಂಡ–ಇವೆಲ್ಲ-ಆದಿಕವಿ ರಚಿತವಲ್ಲ ಎನ್ನಲಾಗಿದೆ.

---

1. ವಾ. ರಾ. I. ೪-೧, ೬, ೨೯ ಮತ್ತು ವಾ. ರಾ. II ೫೬-೧೬ (ದಾಕ್ಷಿಣಾತ್ಯ ಪಾಠ)
2. ಡಿ. ವಿ. ಜಿ. 'ಬಾಲಕಾಂಡ'ಕ್ಕೆ ಮುನ್ನುಡಿ. ಪು. ೧೬.
3. ದೇ. ಜ. ಗೌ. ಶ್ರೀರಾಮಾಯಣದರ್ಶನಂ ವಚನ ಚಂದ್ರಿಕೆ. ಪು. ೯.
4. ಈ ವಿಚಾರಗಳು ೧. ಡಾ. ಬುಲ್ಕೆಯವರ 'ರಾಮಕಥಾ' ಪು. ೩೨-೩೪. ೨. ಕೆ. ಎಸ್. ರಾಮಸ್ವಾಮಿ, 'Studies in Ramayana' p. 23-29. 3. Monier Williams, 'Indian Wisdom' p. 310-330. ರಾಮಶ್ರಮಶರ್ಮ 'A Socio-Political Study of V. R. p. 4-5. ೫. ಸಿ. ವಿ. ವೈದ್ಯ. The Riddle of the Ramayana-ಈ ಗ್ರಂಥಗಳಲ್ಲಿ ವಿವರವಾಗಿ ಬಂದಿವೆ.
5. The Hindu of. 4-10-1971.
6. ವಿಷ್ಣುತತ್ತ್ವನಿರ್ಣಯದಲ್ಲಿ (೧-೩) ಮಧ್ವಾಚಾರ್ಯರು 'ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್' ಎಂಬುದನ್ನು ಗಮನಿಸಬಹುದು.
7. E. W. Hopkins-Epic Mythology p. 211—Bulche, Ramakatha p. 126-137 ಕೆ. ಕೃಷ್ಣಮೂರ್ತಿ, ಸಂಸ್ಕೃತಕಾವ್ಯ ಪು. ೪೫-೫೧.—ಮಾಸ್ತಿ, ಆದಿಕವಿ ವಾಲ್ಮೀಕಿ ಪು. ೧೨-೧೮.
8. ವಾ. ರಾ. ಅಯೋಧ್ಯಾಕಾಂಡದ ಮೊದಲ ೩೫ ಶ್ಲೋಕಗಳು, ಅರಣ್ಯಕಾಂಡ ೭೪/೧೧,೧೪ ಸುಂದರಕಾಂಡ ೫೧/೨೯-೪೫. ಯುದ್ಧಕಾಂಡ ೫೯ನೇ ಸರ್ಗ-ಇತ್ಯಾದಿ.

## ಮೂರು ಮುಖ್ಯ ಪಾಠಗಳು

ರಾಮಾಯಣವು ದೇಶದಲ್ಲೆಲ್ಲ ಹರಡುತ್ತಿದ್ದಂತೆ ಕಾಲಾಂತರದಲ್ಲಿ ವಿವಿಧ ಕವಲುಗಳ ರೂಪ ತಾಳಿದ್ದು ಕೆಲವಂಶಗಳಲ್ಲಿ ಪ್ರತ್ಯೇಕತೆ ಮತ್ತು ವಿಶಿಷ್ಟತೆಗಳನ್ನು ಅವು ಹೊಂದಿರುತ್ತವೆ. ದೊರೆತ ಪ್ರತಿಗಳ ಪರಿಶೀಲನೆ ನಡೆಸಿ ವಿದ್ವಾಂಸರು ಮೂರು ಮುಖ್ಯ ಪಾಠಗಳನ್ನು ಗೊತ್ತು ಮಾಡಿರುತ್ತಾರೆ.

ಅವು : ೧. ದಾಕ್ಷಿಣಾತ್ಯ ಪಾಠ
೨. ಗೌಡೀಯ ಪಾಠ
೩. ಪಶ್ಚಿಮೋತ್ತರೀಯ ಪಾಠ

ಇವುಗಳಲ್ಲಿ ದಾಕ್ಷಿಣಾತ್ಯ ಪಾಠವೇ ಹೆಚ್ಚು ಪ್ರಚಲಿತ, ನಮಗೆ ಪರಿಚಿತ. ಉಳಿದೆರಡು ಪಾಠಗಳಲ್ಲಿ ಬಾರದೆ ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ಸಿಗುವ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು :

(೧) ರಾಮಾದಿಗಳ ಜನ್ಮತಿಥಿ (ಚೈತ್ರೇ ನಾವಮಿಕೇ ತಿಥೌ....), ಗ್ರಹಸ್ಥಿತಿ ಇತ್ಯಾದಿ[1].

(೨) ಬಾಲಕಾಂಡದಲ್ಲಿರುವ ಅನೇಕ ಕಥೆಗಳು : ಕಶ್ಯಪನ ತಪಸ್ಸು, ಅದರ ಫಲರೂಪವಾಗಿ ವಾಮನಾವತಾರ.[2] ಜಹ್ನುವಿನಿಂದ ಗಂಗಾ ಪಾನ;[3] ಅಮೃತ ವಿತರಣೆಗಾಗಿ ವಿಷ್ಣುವಿನಿಂದ ಮೋಹಿನಿ ರೂಪಧಾರಣೆ.[4] ಹರಿಯ ಕೂರ್ಮಾವತಾರ.[5] ಇಂದ್ರನು ವಿಪ್ರವೇಷ ಧರಿಸಿ ವಿಶ್ವಾಮಿತ್ರನಿಂದ ಅನ್ನಯಾಚನೆ ಮಾಡುವುದು.[6] ಸಗರನ ಜನ್ಮ ವೃತ್ತಾಂತ.[7]

(೩) ಕೇಕಯರಾಜನು ತನ್ನ ಪತ್ನಿಯನ್ನು (ಕೈಕೇಯಿಯ ತಾಯಿಯನ್ನು) ತ್ಯಜಿಸಿದ ಕಥೆ.[8]

(೪) ಸೀತೆಯಿಂದ ಯಮುನೆಯ ಪ್ರಾರ್ಥನೆ.[9]

(೫) ರಾಮ, ಲಕ್ಷ್ಮಣ, ಸೀತೆಯರಿಂದ ಚಿತ್ರಕೂಟದಲ್ಲಿ ವಾಲ್ಮೀಕಿಯ ಸಂದರ್ಶನ.[10]

(೬) ರಾವಣನಿಗೆ ಅಕಂಪನನು ಜನಸ್ಥಾನದ ಸುದ್ದಿ ತಿಳಿಸುವುದು, ರಾವಣನು ಮಾರೀಚನಲ್ಲಿಗೆ ಬರುವುದು.[11]

(೭) ಅಯೋಮುಖಿಯೆಂಬ ರಕ್ಕಸಿಯ ವೃತ್ತಾಂತ.[12]

(೮) ಲಕ್ಷ್ಮಣನ ಕೋಪವನ್ನು ಇಳಿಸಲು ಸುಗ್ರೀವನು ತಾರೆಯನ್ನು ಕಳುಹಿಸುವುದು.[13]

(೯) ಹನುಮಂತನಿಗೂ ಲಂಕಾಭಿಮಾನಿದೇವತೆಗೂ ಯುದ್ಧ.[14]

(೧೦) ಸುಗ್ರೀವ–ರಾವಣ ಯುದ್ಧ.[15]

---

1. ವಾ. ರಾ. I. ೧೮/೮-೧೫.
2. ಇದೇ ೨೯/೧೦-೧೭.
3. ಇದೇ ೪೩/೩೬-೩೭.
4. ಇದೇ ೪೫/೪೨.
5. ಇದೇ ೪೫/೨೭-೩೦.
6. ಇದೇ ೬೫/೫-೧೦.
7. ಇದೇ ೭೦/೨೨-೩೭.
8. ವಾ. ರಾ. II ೩೫/೧೬-೨೫.
9. ಇದೇ ೫೫/೧೩-೨೧.
10. ಇದೇ ೫೬/೧೬-೧೭.
11. ವಾ. ರಾ. III ೩೧, (ಸರ್ಗ).
12. ಇದೇ ೬೯/೧೧-೧೮.
13. ವಾ. ರಾ. IV ೩೩/೩೦-೬೨.
14. ವಾ. ರಾ. V ೩/೨೦
15. ವಾ. ರಾ. VI ಸರ್ಗ ೪೦ ಮತ್ತು ೪೧/೧-೧೦

(೧೧) ಅಗಸ್ತ್ಯನು ರಾಮನಿಗೆ ಆದಿತ್ಯಹೃದಯವನ್ನು ಉಪದೇಶಿಸುವುದು.[1]

(೧೨) ಸೀತೆಯು ತಾರೆ ಮುಂತಾದ ವಾನರ ಸ್ತ್ರೀಯರನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆಂದು ರಾಮನಲ್ಲಿ ಪ್ರಾರ್ಥಿಸುವುದು....[2]

ಇದರಂತೆಯೇ ಗೌಡೀಯ, ಪಶ್ಚಿಮೋತ್ತರೀಯ ಪಾಠಗಳಲ್ಲಿನ ವಿಶಿಷ್ಟಾಂಶಗಳನ್ನು ಗುರುತಿಸಲಾಗಿದೆ.[3]

## ವಸ್ತುವಿನ ಮೂಲ : ಕೆಲವು ತರ್ಕಗಳು

ವಾಲ್ಮೀಕಿಯು ರಚಿಸಿದ ಕಾವ್ಯದ ವಸ್ತುವಿನ ಮೂಲದ ಕುರಿತೂ ವಿಶ್ಲೇಷಣೆ ಮುಂದುವರಿದಿದೆ. ಇಕ್ಷ್ವಾಕು, ದಶರಥ, ರಾಮ, ಅಶ್ವಪತಿ, ಜನಕ, ಸೀತಾ ಸಾವಿತ್ರಿ–ಮೊದಲಾದ ಹೆಸರುಗಳು ವೈದಿಕ ಸಾಹಿತ್ಯದಲ್ಲಿ ದೊರೆಯುತ್ತವೆ.[4] ಇದರಿಂದ ಆದಿಕಾವ್ಯದ ವಸ್ತುವಿನ ಮೊದಲ ಎಳೆಗಳನ್ನು ಅಲ್ಲಿ ಗುರುತಿಸುವ ಪ್ರಯತ್ನ ನಡೆದಿದೆ. "ಸೀತಾ ಎನ್ನುವ ಹೆಸರು ತೈತ್ತಿರೀಯ ಬ್ರಾಹ್ಮಣದಲ್ಲಿ ಪ್ರಜಾಪತಿಯ ಮಗಳದು ಎಂದು ಬರುತ್ತದೆ. ಸೀತೆ ಚಂದ್ರನನ್ನು ಪ್ರೀತಿಸುತ್ತಿದ್ದಳು; ಅವನು ಅವಳ ಸೋದರಿ ಶ್ರದ್ಧೆಯನ್ನು ಪ್ರೀತಿಸುತ್ತಿದ್ದನು; ಕೊನೆಗೆ ಸೀತೆಯನ್ನು ಪ್ರೀತಿಸಿದನು. ಆದ್ದರಿಂದ ಸೀತೆಯು ಕಥೆ ಎಂಬ ಈ ರಾಮಾಯಣವು ಚಂದ್ರ, ಮಂಜು ಮುಂತಾದ ತತ್ವಗಳನ್ನು ಕುರಿತ ಸಂಕೇತ ಕಥೆ ಎಂದೂ ಕೆಲವರು ಹೇಳುವರು".[5]

ಮಹಾಭಾರತದಲ್ಲೂ 'ರಾಮೋಪಾಖ್ಯಾನ" ಇದೆ. ಆದರೆ ಈ ರಾಮೋಪಾಖ್ಯಾನವು ರಾಮಾಯಣಕ್ಕೆ ಮೂಲವೆನ್ನುವಂತಿಲ್ಲ, ಬದಲಾಗಿ ರಾಮಾಯಣವೇ 'ರಾಮೋಪಾಖ್ಯಾನ'ಕ್ಕೆ ಮೂಲ ಎನ್ನಲಾಗಿದೆ. ಈ ವಿಚಾರವೂ ಸರ್ವಸಮ್ಮತವಾಗಿಲ್ಲ. ರಾಮಾಯಣಕ್ಕೆ ಮೊದಲೇ ಮೂಲ ಭಾರತವು ಇದ್ದಿರಬಹುದಾದರೂ ಅದು ಪೂರ್ಣ ರೂಪವನ್ನು ತಳೆಯುವುದಕ್ಕೆ ಮೊದಲಾಗಿಯೇ ರಾಮಾಯಣವು ಈಗಿನ ರೂಪವನ್ನು ತಾಳಿರಬೇಕೆಂದು ಹೇಳಿ, ಈ ಎರಡು ಗ್ರಂಥಗಳಲ್ಲೂ ಸಾಮ್ಯ, ಸಾದೃಶ್ಯಗಳು ಬಹಳ ಇವೆಯೆಂಬ ವಿವೇಚನೆಯೂ ಇದೆ.[6]

ಕೆಲವು ಪಾಶ್ಚಾತ್ಯ ವಿದ್ವಾಂಸರು ಗ್ರೀಕ್ ಕಾವ್ಯ ಪ್ರಭಾವದಿಂದ ರಾಮಾಯಣವು ಸೃಷ್ಟಿಯಾಯಿತೆಂದು ಹೇಳಲೂ ಹಿಂಜರಿಯಲಿಲ್ಲ. ಹಾಗೆಲ್ಲ ಹೇಳಿರುವುದು ಹಾಸ್ಯಾಸ್ಪದವಾಗಿದೆ...." ಎರಡು ದೇಶಗಳ ಮಹಾಕಾವ್ಯಗಳಲ್ಲಿ ಕಂಡುಬರುವ ಸಾಮ್ಯ ಸಾದೃಶ್ಯಗಳಿಂದ ಪ್ರಪಂಚದ ಮಾನವರೆಲ್ಲ ಒಂದೇ ರೀತಿಯಾಗಿ ಆಲೋಚಿಸುತ್ತಾರೆಂದೂ, ಎಲ್ಲರ ಆಶೆ ಆಕಾಂಕ್ಷೆಗಳೂ ಮೂಲಭಾವನೆಗಳೂ ಒಂದೇ ಎಂದೂ ಧಾರಾಳವಾಗಿ ಹೇಳಬಹುದೇ ಹೊರತು ಮತ್ತಾವ ಊಹೆಗೂ ಅವಕಾಶವಿಲ್ಲ".[7]

ನಮಗಿಂದು ಲಿಖಿತ ಆಧಾರಗಳು ದೊರೆಯುವುದಿಲ್ಲವಾದರೂ,. ಆದಿಕಾವ್ಯಕ್ಕಿಂತ ಮೊದಲೇ ರಾಮಕಥಾಪ್ರಸಂಗಗಳು ನಾನಾ ರೀತಿಯಾಗಿ ಸಾಮಾನ್ಯ ಜನತೆಯಲ್ಲಿ ಹರಡಿದ್ದಿರಬೇಕೆಂದು ತರ್ಕಿಸುವುದು ಅವಾಸ್ತವಿಕವಲ್ಲ. ನಾಡಿನಲ್ಲಿ "ಶ್ರುತಿ" ರೂಪವಾಗಿ ವ್ಯಾಪಿಸಿದ್ದ ರಾಮ ಕಥಾನಕದ ಎಳೆಗಳೆಲ್ಲವನ್ನೂ ಒಟ್ಟುಗೂಡಿಸಿಕೊಂಡು ರಾಮಾಯಣವು ಜನ್ಮ ತಾಳಿರಬೇಕೆಂಬ ರಾಮಕಥೆಯ ಉತ್ಪತ್ತಿ ಮತ್ತು ವಿಕಾಸಗಳ ಕುರಿತು ಆಳವಾಗಿ ಸಂಶೋಧನೆಮಾಡಿದ ಬುಲ್ಕೆಯವರ ಅಭಿಮತವು ಇಲ್ಲಿ ಸ್ಮರಣೀಯ.[8]

---

1. ವಾ. ರಾ. VI ೧೦೭ನೇ ಸರ್ಗ.
2. ಇದೇ IV ೧೨೬/೨೬-೨೯
3. ಬುಲ್ಕೆ, 'ರಾಮಕಥಾ' ಪು. ೨೭-೩೨ ನೋಡಬಹುದು. (ಅದನ್ನನುಸರಿಸಿದ ಕೆ. ಕೃಷ್ಣಮೂರ್ತಿ 'ಸಂಸ್ಕೃತ ಕಾವ್ಯ' ಪು. ೪೦-೪೫ ಓದಬಹುದು).
4. ಬುಲ್ಕೆ, 'ರಾಮಕಥಾ' ಪು. ೧-೨೬.
5. ವಹಾಸ್ತಿ, ಆದಿಕವಿ ವಾಲ್ಮೀಕಿ, ಪು. ೨೩೦-೨೩೧.
6. Hopkins E. W., The Great Epic of Indiaದ Interrelation of the two epics ಪ್ರಕರಣ ಪು. ೫೮-೮೪.
7. ದೇ. ಜ. ಗೌ. ಶ್ರೀ ರಾ. ದ. ವಚನ ಚಂದ್ರಿಕೆ, ಪು. ೮.
8. ಬುಲ್ಕೆ, ರಾಮಕಥಾ, ಪು. ೧-೫೮.

## ಕಥಾ ವಿಕಾಸದ ಹಂತಗಳು

ಪಾಶ್ಚಾತ್ಯ ವಿದ್ವಾಂಸ ಲಾಸ್ಸೆನ್‌ರು "ರಾಮಕಥೆ"ಯ ಬೆಳವಣಿಗೆಯನ್ನು ನಾಲ್ಕು ಹಂತಗಳಾಗಿ ಪ್ರತ್ಯೇಕಿಸಿದ್ದಾರೆ.[1]

(೧) ಮೊದಲನೆ ಹಂತದಲ್ಲಿ ರಾಮನನ್ನು ರಾಜ್ಯದಿಂದ ಹಿಮಾಲಯಕ್ಕೆ ಅಟ್ಟುವವರೆಗಿನ ಕಥೆ ಮಾತ್ರವಿದ್ದು, ಆ ಸನ್ನಿವೇಶದಲ್ಲಿ ಸೀತೆ, ಲಕ್ಷ್ಮಣರು ರಾಮನೊಂದಿಗೆ ರಾಜ್ಯತ್ಯಾಗಮಾಡಿದ ಪ್ರಸಂಗ ಮಾತ್ರ ಇರುತ್ತದೆ.

(೨) ರಾಮನು ಮುನಿಗಳ ಯಾಗರಕ್ಷಣೆಗಾಗಿ ಹಿಮಾಲಯದಿಂದ ಗೋದಾವರಿತೀರಕ್ಕೆ ಬರುತ್ತಾನೆ.

(೩) ರಾಮನು ತನ್ನ ವನವಾಸ ಕಾಲದಲ್ಲಿ ದಕ್ಷಿಣಕ್ಕೂ ಕಾಲಿರಿಸಿ ಅಲ್ಲಿನ ನಿವಾಸಿಗಳನ್ನು ತನ್ನ ಹಿಡಿತದಲ್ಲಿರಿಸಿಕೊಳ್ಳುವ ಕಥೆ ಸೇರಿಕೊಳ್ಳುತ್ತದೆ.

(೪) ಕೊನೆಯ ಘಟ್ಟದಲ್ಲಿ ರಾಮನು ಲಂಕಾ ಪ್ರವೇಶಮಾಡಿದ ವರ್ಣನೆಯೂ ಕೂಡಿಕೊಳ್ಳುತ್ತದೆ.

ಕಾವ್ಯವನ್ನು ಚಾರಿತ್ರಿಕ ಘಟನೆಗಳೊಂದಿಗೆ ಏಕೀಕರಿಸಿ ವಿಶ್ಲೇಷಿಸುವ ಈ ವಿಚಾರ ಪ್ರಣಾಲಿಯಲ್ಲಿ ಕಾವ್ಯಪ್ರಜ್ಞೆಗಿಂತಲೂ, ಇತಿಹಾಸ ಪ್ರಜ್ಞೆಯೇ ಅಧಿಕವಾಗಿರುವಂತೆ ತೋರುತ್ತದೆ. ರಾಮಾಯಣದ ಏಕಸೂತ್ರತೆಯನ್ನೂ ಸಮಗ್ರತೆಯನ್ನೂ, ಅದರ ಹಿನ್ನೆಲೆಯಲ್ಲಿರುವ ಕವಿಹೃದಯವನ್ನೂ ಗಮನಿಸಿದಾಗ ಮೇಲಿನ 'ಹಂತಗಳು' ನಮಗೆ ಸಮ್ಮತವೆನಿಸುವುದಿಲ್ಲ.

ರಾಮಾಯಣಕಾವ್ಯದ ವಸ್ತುವಿನ ಆಂತರಿಕವಾದ ವಿನ್ಯಾಸಕ್ರಮದಲ್ಲಿ ನಾಲ್ಕು ಪ್ರಮುಖವಾದ ಪ್ರಸಂಗಗಳನ್ನು ನಾವು ಹೀಗೆ ಗುರುತಿಸಬಹುದು :

೧. ರಾಮನ ಜನನ, ಬಾಲ್ಯ, ವಿವಾಹ.
೨. ರಾಮನ ವನವಾಸ.
೩. ಸೀತಾಪಹಾರ, ರಾವಣ ವಧೆ.
೪. ಅಯೋಧ್ಯೆಯಲ್ಲಿ ರಾಮ ರಾಜ್ಯಭಾರ.

## ಲಂಕಾ–ವಿಚಾರ–ಮತ್ತು ಇತರ ಊಹೆ ತರ್ಕಗಳು

ಕಾವ್ಯವೊಂದನ್ನು ಕೇವಲ ಇತಿಹಾಸದ ದೃಷ್ಟಿಯಿಂದ ಪರಿಶೀಲಿಸತೊಡಗಿದವರಿಗೆ ರಾಮನ ಕುಲಗೋತ್ರ, ವಾನರ ದಾನವ ವಿಚಾರ, ಲಂಕೆಯಸ್ಥಾನ[2]–ಮೊದಲಾದುವುಗಳಲ್ಲಿ ಚರಿತ್ರೆಯ ಪುಟಗಳನ್ನೇ ಓದುವ ಪ್ರವೃತ್ತಿ ಹುಟ್ಟಿಕೊಂಡದ್ದು ಗಮನಕ್ಕೆ ಬರುತ್ತದೆ.

ರಾವಣನ ನೆಲೆಯಾದ ಲಂಕೆಯ ಕುರಿತಾಗಿರುವ ವಿವೇಚನೆ ನಡೆಸಿದವರ ಪಟ್ಟಿಯೇ ಸುದೀರ್ಘವಿದೆ.[3]

---

1. 'According to Professor Lassen, the development of the story of Rama may be divided into four stages...

ಈ ಅಂಶಗಳನ್ನು Monier Williams ತಮ್ಮ Indian Wisdom ಗ್ರಂಥದ ಪು. ೩೪೧ರಲ್ಲಿ ಅಡಿಟಿಪ್ಪಣಿಯಾಗಿ ಸೂಚಿಸಿದ್ದಾರೆ.

ದೇ. ಜ. ಗೌ. 'ಶ್ರೀ. ರಾ. ದ. ವಚನಚಂದ್ರಿಕೆ'ಯಲ್ಲೂ ಪು. ೭ ನೋಡಬಹುದು.

2. H. D. ಸಂಕಾಲಿಯಾ ಇವರು, ಇತ್ತೀಚೆಗೆ The Hindu (೧೭-೧೦-೭೧) ವಿನಲ್ಲಿ Age of Ramayana–A claim' ಎಂಬ ವಿಚಾರವಾಗಿ ನವೀನ ಅಭಿಮತವನ್ನು ಪ್ರಕಟಿಸಿದ್ದೂ, ಅದಕ್ಕೆ ಪ್ರತಿಕ್ರಿಯೆಯಾಗಿ The Hindu ವಿನ ೧೭-೧೦-೭೧, ೨೩-೧೦-೭೧, ೨೫-೧೦-೭೧, ೧-೧೧-೭೧, ೨-೧೧-೭೧ ಸಂಚಿಕೆಗಳಲ್ಲೂ The Indian Express (Bangalore) ೨೭-೧೦-೭೧, ೧೪-೧೧-೭೧ ಸಂಚಿಕೆಗಳಲ್ಲೂ ಬಂದ ಪತ್ರಗಳನ್ನು ಇಲ್ಲಿ ಸ್ಮರಿಸಬಹುದು.

3. ಎಂ. ವಿ. ಕೈಬ್, ಜೆ. ಸಿ. ಘೋಷ್, ಅಧಿಕಾರಿ, ಡಿ. ಪಿ. ಮಿಶ್ರಾ, ಜಾಕೋಬಿ, ಸಿ. ವಿ. ವೈದ್ಯ, ಕೆ. ಎಸ್. ರಾಮಸ್ವಾಮಿ, ದೀಕ್ಷಿತ್...

ವಾಲ್ಮೀಕಿರಾಮಾಯಣದಲ್ಲಿ ಆರ್ಯ–ದ್ರಾವಿಡ, ವೈದಿಕ–ಬೌದ್ಧ, ಬ್ರಾಹ್ಮಣ–ಕ್ಷತ್ರಿಯ ಘರ್ಷಣೆ ಚಿತ್ರಿತವಾಗಿದೆ, ಬೇರೇನೂ ಇಲ್ಲ ಎಂಬವರೂ ಇದ್ದಾರೆ.[1] ಆದರೆ ಇವರೆಲ್ಲರೂ–“ರಾಮಾಯಣವು ಚರಿತ್ರೆಯಲ್ಲ, ಆದರೆ ಚರಿತ್ರಾತ್ಮಕವಾದ ಕಾವ್ಯ....ನಮಗೆ ಅದು ಚಾರಿತ್ರಿಕ ಸಾಮಗ್ರಿ ಹೌದು; ಅದಕ್ಕಿಂತ ಹೆಚ್ಚಾಗಿ ಅದು ಹೃದಯ ಸಂಸ್ಕಾರ ಸಾಮಗ್ರಿ.”[2] “ವ್ಯವಹಾರದ ಸತ್ಯಕ್ಕಿಂತ ಕಾವ್ಯದ ಸತ್ಯ ಮುಖ್ಯವಾದುದು, ಶ್ರೇಷ್ಠವಾದುದು. ಇದನ್ನು ಗ್ರಹಿಸಿದವರು ಸೀತಾರಾಮರು ಇದ್ದರೇ ಇಲ್ಲವೇ ಎಂಬ ವಿಷಯದಲ್ಲಿ ಅನ್ವೇಷಕರು ಒಡ್ಡುವ ಸಂದೇಹದಿಂದ ನಡುಗುವುದಿಲ್ಲ.”[3] “ಲೋಕ ಚರಿತ್ರೆಯನ್ನು ವಾಲ್ಮೀಕಿರಾಮಾಯಣದಲ್ಲಿ ಅರಸಿ ಕಾಣಲೆಳಸುವ ಸಂಶೋಧನೆಯ ವಿದ್ವತ್ತು, ಕಬ್ಬಿನಲ್ಲಿ ದೊಣ್ಣೆಯನ್ನು ಮಾತ್ರ ಕಾಣುವ ಗಾಂಪನಂತೆ, ಮುಖ್ಯ ಪ್ರಯೋಜನದಿಂದ ಸಂಪೂರ್ಣ ವಂಚಿತವಾಗಿ, ತಾನೂ ದಾರಿತಪ್ಪಿ ದಿಕ್ಕುಗೆಡುವುದಲ್ಲದೆ, ಇತರರನ್ನೂ ಕಂಗೆಡಿಸಿ ಹಾನಿಗೀಡುಮಾಡುತ್ತದೆ”[4]–ಎಂಬ ಸಹೃದಯ ವಿಮರ್ಶಕರ ಕಾವ್ಯೋಚಿತ ದೃಷ್ಟಿಯನ್ನು ಅಲಕ್ಷಿಸಿದಂತೆ ತೋರುತ್ತದೆ.

## ಮೂರು ಪರಂಪರೆಗಳು

ಆದಿಕಾವ್ಯವೆಂದು ಪರಿಗಣಿತವಾದ ವಾಲ್ಮೀಕಿರಾಮಾಯಣವೊಂದೇ ಅಲ್ಲದೆ, ಸಂಸ್ಕೃತ–ಸಾಹಿತ್ಯದಲ್ಲಿ ಇನ್ನೂ ಹಲವು ಹೆಸರಿನ ರಾಮಾಯಣಗಳಿವೆ. ಅಧ್ಯಾತ್ಮ ರಾಮಾಯಣ, ವಾಸಿಷ್ಠ ರಾಮಾಯಣ, ಅದ್ಭುತರಾಮಾಯಣ, ಆನಂದರಾಮಾಯಣ, ತತ್ವಸಂಗ್ರಹ ರಾಮಾಯಣ, ಮಹಾ ರಾಮಾಯಣ–ಇವುಗಳನ್ನು ಮುಖ್ಯವಾಗಿ ಹೆಸರಿಸಬಹುದು. ಇವುಗಳಲ್ಲಿ ಹೆಚ್ಚಿನವು ‘ಆದಿಕವಿ ವಾಲ್ಮೀಕಿ ವಿರಚಿತ’ ಎಂದೇ ಕರೆಸಿಕೊಳ್ಳುತ್ತಿವೆ. ಇದರೊಂದಿಗೆ ಬೌದ್ಧ, ಜೈನರಾಮಾಯಣಗಳನ್ನೂ ಉಲ್ಲೇಖಿಸಬಹುದು. ರಾಮಕಥೆಯು ಪ್ರಚಾರಕ್ಕೆ ಬಂದ ಕಾಲಾಂತರದಲ್ಲಿ ಅದು ವಿವಿಧ ಕವಲುಗಳಾಗಿ, ಪರಂಪರೆಗಳಾಗಿ ಹರಡಿರುವ ಸಾಧ್ಯತೆಯನ್ನು ಊಹಿಸಬಹುದು. ಇಷ್ಟು ಬಗೆಯಾಗಿ ರಾಮಾಯಣವು ವಿನ್ಯಾಸಗೊಳ್ಳುವುದಕ್ಕೆ ಬಹುಶಃ ‘ಮತ’ವೇ ಮುಖ್ಯ ಕಾರಣವಾಗಿರಬೇಕೆಂದು ತೋರುತ್ತದೆ. ವಾಲ್ಮೀಕಿರಚಿತವೆಂದು ಕರೆಸಿಕೊಳ್ಳಲ್ಪಡುತ್ತಿರುವ ಅಧ್ಯಾತ್ಮ ರಾಮಾಯಣ, ಆನಂದರಾಮಾಯಣಗಳಲ್ಲಿ ಭಕ್ತಿ ಪಂಥದ ಹಿರಿಮೆಯೂ, ಅದ್ಭುತ ರಾಮಾಯಣದಲ್ಲಿ ಶಾಕ್ತೇಯ ಪಂಥದ ಪ್ರಭಾವವೂ ಎದ್ದು ಕಾಣುತ್ತವೆ. ಹಾಗೆಯೇ ಯೋಗವಾಸಿಷ್ಠ (ವಾಸಿಷ್ಠ ರಾಮಾಯಣ) ದಲ್ಲಿ ಕಥೆಗಿಂತ ಮೋಕ್ಷ ಸಂಬಂಧವಾದ ತತ್ವಗಳೇ ತುಂಬಿಕೊಂಡಿವೆ.[5]

ಅದರಂತೆಯೇ ಬೌದ್ಧ ರಾಮಾಯಣದಲ್ಲಿಯೂ; ಜೈನ ರಾಮಾಯಣಗಳಲ್ಲಿಯೂ ಆಯಾ ಮತಗಳ ದೃಷ್ಟಿಗನುಗುಣವಾಗಿ ವಸ್ತುವಿನ್ಯಾಸಗೊಂಡಿರುವುದನ್ನು ಗಮನಿಸಬಹುದು.

ವಾಲ್ಮೀಕಿರಾಮಾಯಣ (ವೈದಿಕ ಅಥವಾ ಬ್ರಾಹ್ಮಣ) ಪರಂಪರೆಯನ್ನು ಹೀಗೆ ರೇಖಿಸಬಹುದು.[6]

---

1. ಬುಲ್ಕೆ ‘ರಾಮಕಥಾ’, M. Williams: Indian Wisdom (311-346) K. S. Ramaswamy: ‘Studies in Ramayana’ ನೋಡಬಹುದು. (೨೩-೪೯).
2. ಡಿ. ವಿ. ಜಿ. ಬಾಲಕಾಂಡಕ್ಕೆ ಮುನ್ನುಡಿ, ಪು. ೮-೯.
3. ಮಾಸ್ತಿ, ‘ಆದಿಕವಿ ವಾಲ್ಮೀಕಿ’ ಪು. ೨೩೮.
4. ಕುವೆಂಪು ‘ಶ್ರೀ ರಾಮಾಯಣದ ದಿವ್ಯಶಿಲ್ಪಿ’ ದೇ. ಜ. ಗೌ. ‘ಶ್ರೀ. ರಾ. ದ. ವಚನಚಂದ್ರಿಕೆ’ (ಉದ್ಧೃತ), ಪು. ೧೧.
5. ೧. ಶ್ರೀ ಮಧ್ವಾಚಾರ್ಯರು ‘ಮೂಲರಾಮಾಯಣ’ ವನ್ನು ಆಗಮವೆಂದು ಸ್ವೀಕರಿಸಿ, ಅದಕ್ಕೆ ದ್ವೈತ ಸಿದ್ಧಾಂತ ರೀತ್ಯಾ ವ್ಯಾಖ್ಯಾನ ಮಾಡಿರುವುದನ್ನು ಇಲ್ಲಿ ಉಲ್ಲೇಖಿಸಬಹುದು, ಮಧ್ವಾಚಾರ್ಯ ಭಾರತ ತಾತ್ಪರ್ಯನಿರ್ಣಯ. ೨. ಈ ಶತಮಾನದ ಮಹಾಕಾವ್ಯವೆನಿಸಿರುವ ‘ಶ್ರೀ ರಾಮಾಯಣದರ್ಶನಂ’ ದಲ್ಲೂ ಸಮಕಾಲೀನ ‘ಅರವಿಂದದರ್ಶನ’ ಧ್ವನಿಸುತ್ತಿರುವುದನ್ನು ಇಲ್ಲಿ ಸ್ಮರಿಸಬಹುದು.
6. ಅನುಬಂಧ ೬ ನೋಡಿರಿ.

ವೈದಿಕ ಸಾಹಿತ್ಯ (ಶ್ರುತಿರೂಪವಾಗಿದ್ದ ರಾಮವಿಷಯಕ ಕಥಾನಕಗಳು)
|
ವಾಲ್ಮೀಕಿ ರಾಮಾಯಣ.
|
ಸಂಸ್ಕೃತ ಲಲಿತಸಾಹಿತ್ಯ | ಸಂಸ್ಕೃತ ಧಾರ್ಮಿಕ ಸಾಹಿತ್ಯ | ಭಾರತೀಯ ಇತರಭಾಷೆಗಳಲ್ಲಿ ರಾಮಕಥಾಸಾಹಿತ್ಯ

**ಬೌದ್ಧ ರಾಮಾಯಣ ಪರಂಪರೆ**

ಬೌದ್ಧ 'ದಶರಥ ಜಾತಕ' ಕಥೆಗಳಲ್ಲಿ ರಾವಣನ ಪ್ರಸ್ತಾಪವೇ ಇರುವುದಿಲ್ಲ. ಸೀತಾಪಹರಣವೂ ಅದರ ಮುಂದಿನ ಕಥೆಯೂ ಕಂಡುಬರುವುದಿಲ್ಲ....." ಈ ಕಥೆಯಲ್ಲಿ ಬರುವ ರಾಮಪಂಡಿತನು ಸತ್ವಗುಣಪ್ರಧಾನನಾಗಿ ಬುದ್ಧನಿಗೆ ಸಾಟಿಯಾಗಿರುವ ವ್ಯಕ್ತಿ. ಅವನು ಪರಮ ಸಾಧು, ವೈರಾಗ್ಯನಿಧಿ. ಬೌದ್ಧರಿಗೆ ಬೇಕಾದದ್ದು ಧರ್ಮಮೂರ್ತಿಯಾದ ರಾಮಭದ್ರನ ಪಾತ್ರ. ಅವನನ್ನು ತಮ್ಮವನನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲದೆ ಬುದ್ಧನ ಹಿಂದಿನ ಜನ್ಮಾವಳಿಗಳಲ್ಲಿ ರಾಮನ ಅವತಾರವೂ ಒಂದೆಂದು ಅವರು ಪರಿಗಣಿಸಿದ್ದಾರೆ. ಇದರಿಂದ ಬೌದ್ಧಮತದ ಕಡೆಗೆ ಜನತೆಯ ಒಲವು ಕೊಂಚಮಟ್ಟಿಗಾದರೂ ಹರಿಯಲು ಅವಕಾಶವಾಗಿರಬೇಕು."[1]

ಬೌದ್ಧರಾಮಾಯಣ ಪರಂಪರೆಯ ಮುಖ್ಯ ಆಕರಗಳು ಇವು :

೧. ದಶರಥ ಜಾತಕ.
೨. ಅನಾಮಕವಮ್ ಜಾತಕವಮ್.
೩. ದಶರಥ ಕಥಾನಮ್.
೪. ದಶರಥ ಜಾತಕ ಗದ್ಯ.[2]

**ಜೈನ ರಾಮಾಯಣ ಪರಂಪರೆ**

ವಾಲ್ಮೀಕಿರಾಮಾಯಣಕ್ಕೂ ಜೈನ ರಾಮಾಯಣ ಸಂಪ್ರದಾಯಕ್ಕೂ ಇರುವ ವ್ಯತ್ಯಾಸಗಳನ್ನು 'ಕರ್ಣಾಟಕ ಕವಿಚರಿತಕಾರರೂ, 'ಪಂಪರಾಮಾಯಣ'ದ ಸಂಪಾದಕರೂ, 'ಪಂಪರಾಮಾಯಣ–ಸಂಗ್ರಹ'ದ ಸಂಪಾದಕರೂ ಸಂಗ್ರಹಿಸಿಕೊಟ್ಟಿರುತ್ತಾರೆ.[3]

ಈಗ ಇರುವ ಜೈನ ರಾಮಾಯಣಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದದ್ದು ವಿಮಲಸೂರಿಯ 'ರಾಮಚರಿಯ' ಇದರಲ್ಲಿನ ದುರಂತ ರಾವಣನಪಾತ್ರವು ಹೃದಯಸ್ಪರ್ಶಿಯಾದುದು.[4]

"ಜೈನ ರಾಮಾಯಣಗಳಲ್ಲಿ ಎರಡು ಸಂಪ್ರದಾಯಗಳಿರುವಂತೆ ಕಂಡುಬರುತ್ತದೆ. ಎರಡಕ್ಕೂ ಕಥೆಯಲ್ಲಿ ವ್ಯತ್ಯಾಸಗಳುಂಟು. ಮೊದಲನೆಯದು ವಿಮಲಸೂರಿಯ ರೀತಿ; ಎರಡನೆಯದು ಗುಣಭದ್ರಾಚಾರ್ಯರ ಪದ್ಧತಿ. ದೇವಚಂದ್ರನು ಇವೆರಡಕ್ಕೂ ಸಮನ್ವಯಮಾಡಲು ಪ್ರಯತ್ನಪಟ್ಟಂತೆ ಹೇಳಿಕೊಂಡಿದ್ದಾನೆ."[5]

---

1. ಡಿ. ಎಲ್. ಎನ್., ಪಂಪರಾಮಾಯಣ ಸಂಗ್ರಹ, ಪೀಠಿಕೆ, xvii-xviii.
2. ಬುಲ್ಕೆ 'ರಾಮಕಥಾ' ದ 'ಬೌದ್ಧರಾಮಕಥಾ' ಪ್ರಕರಣ, ಪು. ೫೮-೬೪.
3. ಆರ್. ನರಸಿಂಹಾಚಾರ್, ಕ. ಕ. ಚ. I ಪು. ೭, ಪಂಪರಾಮಾಯಣ ಸಂಗ್ರಹ ಪೀಠಿಕೆ, xxiv.
4. ೧. ಡಿ. ಎಲ್. ಎನ್. ಪಂ. ರಾ. ಸಂಗ್ರಹ ಪೀಠಿಕೆ, xxix-iii. ೨. ಬಿ. ಎಂ. ಶ್ರೀ Tragic Ravana. M. U. M. Vol vii. ೩. ಉ. ಕಾ. ಸು. ನಾಗಚಂದ್ರ ಚಿತ್ರಿಸಿದ ರಾವಣ, ಸಹೃದಯ ಸ್ಪಂದನ ಪು. ೧೨೭.
5. ಡಿ. ಎಲ್. ಎನ್., ಪಂ. ರಾ. ಸಂ. ಪೀಠಿಕೆ xxi-xxii ಮತ್ತು ಮಿರ್ಜಿ ಅಣ್ಣಾರಾಯ, ರವಿಶೇಣ ರಾಮಾಯಣ ಪೀಠಿಕೆ, ಪು. ೧೫.

ವಿಮಲಸೂರಿಯ ‘ಪಉಮ ಚರಿಯ’ ಮತ್ತು ಗುಣಭದ್ರಾಚಾರ್ಯನ ‘ಉತ್ತರ ಪುರಾಣ’ಗಳು ಎರಡು ಸಂಪ್ರದಾಯಗಳ ಜೈನ ರಾಮಾಯಣಗಳಿಗೆ ಮೂಲ ಆಕರಗಳಾಗಿರುವಂತೆ ತೋರುತ್ತದೆ. ಇವೆರಡು ಶಾಖೆಗಳನ್ನು ಡಿ. ಎಲ್. ಎನ್. ಕೋಷ್ಟಕರೂಪವಾಗಿ ಕೊಟ್ಟಿರುತ್ತಾರೆ.[1]

‘ಪಉಮಚರಿಯ’
(ವಿಮಲಸೂರಿ)

| ಪ್ರಾಕೃತ | ಸಂಸ್ಕೃತ | ಕನ್ನಡ |
|---|---|---|
| ‘ಪಉಮಚರಿಯ’ (ಜಾಮುಹ) | ಪದ್ಮಪುರಾಣಮ್ (ರವಿಷೇಣ) | ಪಂಪರಾಮಾಯಣ (ಚಂಪು–ನಾಗಚಂದ್ರ) |
| ‘ಪಉಮಚರಿಯ’ (ಸ್ವಯಂಭುದೇವ) | ಜೈನರಾಮಾಯಣ (ಹೇಮಚಂದ್ರ) | ಕುಮುದೇಂದು ರಾಮಾಯಣ (ಷಟ್ಪದಿ–ಕುಮುದೇಂದು) |
| ತ್ರಿಭುವನ ಸ್ವಯಂಭು (ಜಸಕಿತ್ತಿ ಭಟ್ಟಾರಕ) | ರಾಮಚರಿತ (ದೇವ ವಿಜಯಗಣಿ) | ರಾಮ ವಿಜಯ ಚರಿತೆ (ಸಾಂಗತ್ಯ–ದೇವಪ್ಪ) |
| | | ರಾಮ ಕಥಾವತಾರ (ಚಂಪು–ದೇವಚಂದ್ರ) |
| | | ಜಿನರಾಮಾಯಣ (ಷಟ್ಪದಿ–ಚಂದ್ರಸಾಗರವರ್ಣಿ) |

---

‘ಉತ್ತರ ಪುರಾಣ’ದ ರಾಮಕಥೆ
(ಗುಣಭದ್ರ)

| ಪ್ರಾಕೃತ | ಸಂಸ್ಕೃತ | ಕನ್ನಡ |
|---|---|---|
| ತಿಸಟ್ಠಿಮಹಾಪುರಿಸ ‘ಗುಣಾಲಂಕಾರ’ದಲ್ಲಿರುವ ರಾಮಕಥೆ (ಪುಷ್ಪದಂತ) | ಪುಣ್ಯಾಸ್ರವ ? (ರಾಮಚಂದ್ರ ಮುಮುಕ್ಷು) | ಚಾವುಂಡರಾಯಪುರಾಣದ ರಾಮಕಥೆ |
| | ಪುಣ್ಯಚಂದ್ರೋದಯ ಪುರಾಣ (ಕೃಷ್ಣ ಕವಿ) | ‘ಪುಣ್ಯಾಸ್ರವ’ದಲ್ಲಿರುವ ಕಥೆ (ನಾಗರಾಜ) |

ಬಂಧುವರ್ಮನ ‘ಜೀವಸಂಬೋಧನೆ’ ಯಲ್ಲಿರುವ ರಾವಣನ ಕಥೆ ಯಾವ ಪಂಗಡದ್ದೋ ಗೊತ್ತಾಗುವುದಿಲ್ಲ. ‘ರಾಮಕಥಾವತಾರ’ ವನ್ನು ಬರೆದ ದೇವಚಂದ್ರನ “ಸಕಲ ಜಿನ ಶಾಸ್ತ್ರಕಥೆಗಳಂ ಸಂಬಂಧಿಸಿ” ಎಂಬ ಹೇಳಿಕೆಯು ಮೇಲಿನ ಎರಡೂ ಸಂಪ್ರದಾಯಗಳಿಗೂ ಸೇರದ ಇನ್ನೂ ಕೆಲವು ಜೈನರಾಮಾಯಣಗಳಿರಬೇಕೆಂಬ ಊಹೆಗೆ ಅವಕಾಶ ಕೊಟ್ಟಿದೆ. ಬುಲ್ಕೆಯವರು ವಿಮಲಸೂರಿ ಪರಂಪರೆಗೆ ಸೇರಿದ ಅಪಭ್ರಂಶ ಸಾಹಿತ್ಯದ ‘ರಾಮಾಯಣ ಪುರಾಣ’ ಮತ್ತು ‘ಬಲಭದ್ರಪುರಾಣ’ ಗಳನ್ನು ಹೆಸರಿಸಿದ್ದಾರೆ. ಅಲ್ಲದೆ; ಬಂಧುವರ್ಮನ ‘ಜೀವಸಂಬೋಧನೆ’ ಯನ್ನು ಗುಣಭದ್ರನ ಶಾಖೆಗೆ ಸೇರಿಸಿದ್ದಾರೆ.[2] ಭಾರತೀಯ ಭಾಷೆಗಳಲ್ಲಿ ಕನ್ನಡವು ಜೈನರಾಮಾಯಣಗಳ ದೃಷ್ಟಿಯಿಂದ ಹೆಚ್ಚು ಸಮೃದ್ಧವಾಗಿದೆ ಎನ್ನಬಹುದು.

---

1. ಡಿ. ಎಲ್. ಎನ್., ಪಂ. ರಾ. ಸಂಗ್ರಹ ಪೀಠಿಕೆ, ೨೩,೨೮.
2. ಬುಲ್ಕೆ, ರಾಮಕಥಾ, ಪು. ೬೯, ೭೮.

## ವಿದೇಶಗಳಲ್ಲಿ ರಾಮಾಯಣ ಸಾಹಿತ್ಯ

ಇಂಡೋನೇಸಿಯಾ, ಇಂಡೋಚೈನಾ, ಕಾಂಬೋಡಿಯಾ, ಬರ್ಮಾ, ಸಯಾಮ್, ಟಿಬೆಟ್, ಜಾವಾ—ಮೊದಲಾದ ವಿದೇಶಗಳಲ್ಲೂ ರಾಮಕಥಾಸಾಹಿತ್ಯ ಹರಡಿ, ಪ್ರಭಾವ ಬೀರಿದ ಅಂಶವು ಅಲ್ಲಿನ ಶಿಲ್ಪ, ಶಿಲಾಲೇಖಗಳು, ಸಾಹಿತ್ಯ, ಬಳಕೆಯಲ್ಲಿರುವ ನಾಮರೂಢಿ–ಇತ್ಯಾದಿಗಳಿಂದ ಖಚಿತವಾಗುತ್ತದೆ.[1] ಈ ಸಂಬಂಧವಾಗಿ—

ಶಿಬತ್ತೀ ರಾಮಾಯಣ (ಟಿಬೆಟ್)
ರಾಮಕ್ಲಿಂಗ್, ರಾಮಾಯಣ ಕಕವಿನ (ಜಾವಾ)
ಖೋತಾನಿ ರಾಮಾಯಣ (ಖೋತಾನ್)
ರಾಮಕಥಾ (ಸಿಂಹಲೀ)
ಸೇರೀರಾಮ್ (ಮಲಯ)
ಸೆರತ್ ಕಾಂಡ (ಕಾಂಬೋಡಿಯಾ)
ರಾಮಕಿಯೇನ (ಸಯಾಮ್)[2]

ಇವುಗಳನ್ನು ಹೆಸರಿಸಬಹುದು.[3]

## ಕನ್ನಡದಲ್ಲಿ ರಾಮಾಯಣ ಪ್ರಜ್ಞೆ

ಕನ್ನಡ ಜನಕ್ಕಂತೂ ರಾಮಾಯಣವು ಪರಮ ಪ್ರಿಯವಾದ ಗ್ರಂಥ. "ಸೀತಾರಾಮ–ಸ್ಪರ್ಶದಿಂದ ಪವಿತ್ರವಾದ ಪಂಪಾ ಸರೋವರವೂ, ಸುಗ್ರೀವಾಂಜನೇಯರ ಸ್ವಸ್ಥಲವಾದ ಕಿಷ್ಕಿಂಧೆಯೂ ಕರ್ಣಾಟಕದ ಕ್ಷೇತ್ರ ಸಂಪತ್ತು."[4] ನಾಡಿನ ಉದ್ದಗಲಗಳಲ್ಲಿರುವ ಶ್ರೀರಾಮ ದೇವಾಲಯಗಳು, ಹನುಮಂತ ಗುಡಿಗಳು ಕನ್ನಡಿಗರು ಕಂಡುಕೊಂಡ ರಾಮಾಯಣದ ದಿವ್ಯತೆಯನ್ನು ಸಾರಿಹೇಳುತ್ತವೆ.

ಕನ್ನಡ ಜಾನಪದದಲ್ಲೂ, ಆಡುಮಾತಿನ ಗಾದೆ, ನುಡಿಗಟ್ಟುಗಳಲ್ಲೂ ರಾಮಾಯಣವು ಧ್ವನಿಸುತ್ತಿರುವುದನ್ನು ನಾವು ಗಮನಿಸಬಹುದು. "ಕಣ್ಣಾಮುಚ್ಚೇ ಕಾಡೇ–ಗೂಡೇ ಉದ್ದಿನ ಮೂಟೆ ಉರುಳೇ ಹೋಯ್ತು" ಈ 'ಮಕ್ಕಳಾಟದ' ಹೇಳಿಕೆಯಲ್ಲೂ ಶ್ರೀರಾಮಕಥೆಯ ಹೆಗ್ಗುರುತುಗಳನ್ನು ತುಂಬಿದವರು ಕನ್ನಡಿಗರು.[5] ಅಳಿಲ ಸೇವೆ–ಮಳಲ ಭಕ್ತಿ; ಶಬರಿಯ ಬುಗರಿ,[6] ಲಕ್ಷ್ಮಣರೇಖೆ, ರಾವಣ ಸನ್ಯಾಸಿ, ಕುಂಭಕರ್ಣನಿದ್ದೆ, ಹನುಮಂತನ ಬಾಲ ಮೊದಲಾದ ನುಡಿಗಟ್ಟುಗಳು ಕನ್ನಡವನ್ನು ಶ್ರೀಮಂತಗೊಳಿಸಿವೆ.

---

1. ಎಸ್. ಕೆ. ರಾಮಚಂದ್ರರಾವ್ ಇವರ 'ರಾಮಾಯಣ ಸಮೀಕ್ಷೆ'ಯ ಬೃಹದ್ಭಾರತದಲ್ಲಿ ರಾಮಾಯಣ ಮತ್ತು ಪೂರ್ವಇರಾನಿನ ರಾಮಾಯಣ (ಪು. ೩೮-೫೭) ಪ್ರಕರಣಗಳನ್ನು ನೋಡಬಹುದು.

2. ಬುಲ್ಕೆಯ 'ರಾಮಕಥಾ'ದ 'ವಿದೇಶ್‌ಮೇ ರಾಮಕಥಾ' ಪ್ರಕರಣದಲ್ಲಿ ವಿವರಣೆಗಳಿವೆ. ಪು. ೨೬೧-೨೮೭.

3. ಈ ವಿಚಾರದ ಇನ್ನಷ್ಟು ಅಂಶಗಳಿಗೆ-

(a) K. A. Nilakanta Shastri: The Ramayana in Greater India, Journal of Oriental Research Vol. vi (1932) ನೋಡಬಹುದು.

(b) K. S. R. Sastri: Riddles of the Ramayana, Appendix xvii, Ramayana Beyond India p. 231-233.

4. ಡಿ. ವಿ. ಜಿ. 'ಬಾಲಕಾಂಡ'ಕ್ಕೆ ಮುನ್ನುಡಿ, ಪು. ೧

5. '"ರಾಮ ಪಟ್ಟಾಭಿಷೇಕದ ಹಿಂದಿನ ರಾತ್ರಿ ಆತುರದಿಂದ ಕಣ್ಣು ಮುಚ್ಚದೇ ಕಳೆದದ್ದು, (ಅಥವಾ ದಶರಥನು ಕಣ್ಣು ಮುಚ್ಚಿದುದು), ರಾಮನಿಗೆ ವನವಾಸವಾಗಿ ಕಾಡೇ ಗೂಡಾದದ್ದು, 'ಮಾಷರಾಶಿಪ್ರತೀಕಾಶಂ' ಎಂದು ವಾಲ್ಮೀಕಿ ವರ್ಣಿಸಿದ" ಉದ್ದಿನ ಮೂಟೆಯಂತಹ ರಾವಣನ ಮರಣ...ಹೀಗೆ ಗಾದೆಯನ್ನು ಅರ್ಥೈಸಬಹುದು. ದೇವಶಿಖಾಮಣಿ ಅಳಸಿಂಗರಾಚಾರ್ಯ, ರಾಷ್ಟ್ರಬಂಧು, ಯುಗಾದಿ ಸಂಚಿಕೆ (೧೯೨೨) ಪು. ೨೬–೨೯.

6. ವಾ. ರಾ. ದಲ್ಲಿಲ್ಲವಾದರೂ ಅಳಿಲ ಸೇವೆ, ಶಬರಿಯ ಬುಗರಿ ಜನಜನಿತವಾಗಿವೆ.

ಪ್ರಾಚೀನ ಕನ್ನಡ ಶಾಸನಗಳಲ್ಲೂ ರಾಮನ ಕಥೆಗೆ ಸಂಬಂಧಿಸಿದ ಉಲ್ಲೇಖಗಳು ಸಿಗುತ್ತವೆ.[1] ಜೈನರಾಮಾಯಣ ಸಾಹಿತ್ಯ. ಪರಂಪರೆ ಕನ್ನಡದಲ್ಲಿ ಸಾಕಷ್ಟು ಸತ್ತ್ವಶಾಲಿಯಾಗಿದೆ. ಕುಮಾರವ್ಯಾಸನು 'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ'[2] ಎಂದು ಉದ್ಗರಿಸಿ ಕನ್ನಡನುಡಿಯಲ್ಲಿ ರಾಮಾಯಣ ಸಾಹಿತ್ಯದ ವಿಪುಲತೆಯನ್ನು ಸೂಚಿಸಿದ್ದಾನೆ.

ಸುಸಂಸ್ಕೃತ ಜೀವನದ ಮಹತ್ವದ ಮೌಲ್ಯಗಳಾದ ನನ್ನಿ, ಸೇವೆ, ಪ್ರೇಮ, ಸಹನೆ–ಈ ಗುಣಗಳು ಕನ್ನಡದ ಜನತೆಯ ಅಂತರಂಗದಲ್ಲಿ ಪ್ರತಿಸ್ಥಾಪನೆಗೊಳ್ಳುವಲ್ಲಿ ರಾಮಕಥೆಯು ಗಣನೀಯ ಪಾತ್ರವಹಿಸಿದೆ. ಕನ್ನಡ ಕವಿಗಳ ಹೃದಯ ಸಿಂಹಾಸನವನ್ನೇರಿದ ಆದಿಕಾವ್ಯವು ನಿತ್ಯನವೀನವಾದ ಕಾವ್ಯಸೃಷ್ಟಿ, ದರ್ಶನ ದೃಷ್ಟಿಗಳಿಗೆ ಸ್ಫೂರ್ತಿನೀಡುತ್ತಿರುವುದು ಸಹೃದಯರ ಭಾಗ್ಯವೆನ್ನಬೇಕು.

## ಆದಿಕಾವ್ಯ ರಾಮಾಯಣದಿಂದ ಕನ್ನಡದ ತೊರವೆ ರಾಮಾಯಣದೆಡೆಗೆ

ರಾಮಾಯಣದ ಪುಣ್ಯಪಥದಲ್ಲಿ ಬಹುದೂರ ಸಾಗಿದ ಕನ್ನಡದ ಕವಿ–ಕುಮಾರ ವಾಲ್ಮೀಕಿ. ಆದಿಕಾವ್ಯವನ್ನು ಮೊತ್ತಮೊದಲಾಗಿ ಕನ್ನಡಿಸಿದ ಧನ್ಯತೆ ಇವನದು.[3] 'ತೊರವೆ ರಾಮಾಯಣ' ವೆಂದು ಜನಜನಿತವಾದ ಕನ್ನಡದ ಈ ವಾಲ್ಮೀಕಿ ರಾಮಾಯಣವು ಜನಸಾಮಾನ್ಯದ 'ಜೀವಂತ ಕೃತಿಯಾಗಿ' ಬಾಳುತ್ತಿದೆ. ಪ್ರಾರಂಭದಲ್ಲಿ ಈ ಕೃತಿಯ ಪರಿಚಯ ಮಾಡಿಕೊಂಡು, ಆ ಮೇಲೆ ಕವಿ ವಿಚಾರ, ಕಾವ್ಯ ಸೃಷ್ಟಿಯ ಕಾಲ–ಪರಿಸರ, ಕಾವ್ಯದ ತುಲನಾತ್ಮಕ ಅಧ್ಯಯನ, ವಿಶ್ಲೇಷಣೆ–ಮೊದಲಾದ ಅಂಶಗಳಿಗೆ ಗಮನಕೊಡುವುದು ಸೂಕ್ತವೆನಿಸುತ್ತದೆ.

ಕುಮಾರವಾಲ್ಮೀಕಿಯ ತೊರವೆ ರಾಮಾಯಣವು ಭಾಮಿನಿ ಷಟ್ಪದಿ ಛಂದಸ್ಸಿನಲ್ಲಿದೆ. ಒಟ್ಟು ೬ ಕಾಂಡಗಳಿರುವ ಈ ಕೃತಿಯಲ್ಲಿ ಸಂಧಿಗಳು ೧೧೨. ಒಟ್ಟು ಷಟ್ಪದಿಗಳ ಸಂಖ್ಯೆ ೫೧೦೩.[4] ಕುಮಾರ ವಾಲ್ಮೀಕಿಯು ಬಿಜಾಪುರದ ಬಳಿಯ ತೊರವೆ (ತೊರವಿ) ಯ ನರಹರಿಯ ಭಕ್ತ. ತನ್ನ ಕಾವ್ಯಕ್ಕೆ ತೊರವೆಯಧಿಪತಿ ನರಹರಿಯೇ ಕಥಾನಾಯಕನೆಂದು ಅವನು ಹೇಳಿಕೊಂಡಿದ್ದಾನೆ.[5] ಸಾಮಾನ್ಯವಾಗಿ ಕೃತಿಯ ಪ್ರತಿ ಸಂಧಿಯ ಕೊನೆಯಲ್ಲೂ 'ತೊರವೆಯ ನರಹರಿ' ಎಂಬ ಅಂಕಿತವನ್ನು ಬಳಸಿದ್ದಾನೆ. ಗದುಗಿನ ವೀರನಾರಾಯಣನ ಕಿಂಕರನಾದ ಕುಮಾರವ್ಯಾಸನ 'ಕರ್ಣಾಟಕ ಭಾರತ ಕಥಾಮಂಜರಿ'ಯು 'ಗದುಗಿನ ಭಾರತ' ವೆಂದು ಪ್ರಸಿದ್ಧಿಗೊಂಡಂತೆ, ತೊರವೆ ನರಹರಿಯ ಭಕ್ತ ಕುಮಾರ ವಾಲ್ಮೀಕಿಯ 'ಕರ್ಣಾಟಕ ರಾಮಾಯಣ'ವು 'ತೊರವೆ ರಾಮಾಯಣ'ವೆಂದು ಜನಪ್ರಿಯವಾಗಿದೆ. ಹಾಗೆಯೇ ಯಾವ ಆಧಾರಗಳು ಇಲ್ಲವಾದರೂ ಕವಿಯ ಹೆಸರು 'ನರಹರಿ' ಎಂದಿರಬೇಕು ಎನ್ನುವ ಕಲ್ಪನೆ ಉಂಟಾಗಿದೆ.[6] ಕವಿಯು ತನ್ನ ಕೃತಿಯಲ್ಲೆಲ್ಲೂ ತನ್ನ ಕಾಲ, ಹೆಸರು, ಯಾವ ಕುರಿತೂ ಏನನ್ನೂ ಹೇಳಿಲ್ಲ.

ಶ್ರೀರಾಮಪಟ್ಟಾಭಿಷೇಕದವರೆಗೆ ಮಾತ್ರ ಕುಮಾರ ವಾಲ್ಮೀಕಿಯ ರಾಮಾಯಣದ ಕಥೆ ಇದೆ. ಸೀತಾ ಪರಿತ್ಯಾಗ ಮೊದಲಾದ 'ಉತ್ತರಕಾಂಡದ' ಕಥೆಯನ್ನು ಇವನು ವರ್ಣಿಸಿಲ್ಲ. 'ಉತ್ತರಕಾಂಡ'ವು ಆದಿಕವಿ ವಾಲ್ಮೀಕಿರಚಿತವಲ್ಲ ಎಂಬ ಭಾವನೆ ಕುಮಾರ ವಾಲ್ಮೀಕಿಗೂ ಇದ್ದಿರಬಹದು. ಅಷ್ಟಲ್ಲದೆ, ತನಗೆ ಅನುಸರಣೀಯನಾದ ಕುಮಾರವ್ಯಾಸನು ಧರ್ಮರಾಯಪಟ್ಟಾಭಿಷೇಕದೊಂದಿಗೆ ತನ್ನ ಕಾವ್ಯಕ್ಕೆ ಮಂಗಳ ಹಾಡಿದ ಆದರ್ಶವೂ ಕುಮಾರ ವಾಲ್ಮೀಕಿಯ ಕಣ್ಣ ಮುಂದು ಇದ್ದಿರಬಹುದು.

---

1. ಅಧ್ಯಾಯ ೨—'ಕನ್ನಡ ಶಾಸನಗಳಲ್ಲಿ ರಾಮಕಥೆ' ನೋಡಿ.
2. ಕುಮಾರವ್ಯಾಸ ಭಾರತ, I ೧-೧೬.
3. ಅಧ್ಯಾಯ. ೨, '೧೪ನೆ ಶತಮಾನದವರೆಗಿನ ಕನ್ನಡ ಸಾಹಿತ್ಯದಲ್ಲಿ ರಾಮಕಥೆ' ನೋಡಿ.
4. ಈ ಸಂಖ್ಯೆಗಳು ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿದ ತೊ. ರಾ. ಸಂ. I (೧೯೫೬) ಮತ್ತು ತೊ. ರಾ. ಸಂಪುಟ II (೧೯೫೮) ಗಳಿಗನುಸಾರವಾಗಿ ಇವೆ.
5. ತೊ. ರಾ. I ೧-೯.
6. ಈ ಕಲ್ಪನೆಯ ವಿಶ್ಲೇಷಣೆ ಈ ಪ್ರಬಂಧದ ೨ನೇ ಅಧ್ಯಾಯದಲ್ಲಿದೆ.

## ತೊರವೆ ರಾಮಾಯಣದ ವಸ್ತು ಪರಿಚಯ–ಕವಿವಾಣಿಯ ಉಲ್ಲೇಖಗಳೊಂದಿಗೆ

ಶ್ರೀ ಜನಕಜಾರಮಣ ವಿಮಲ ಸ
ರೋಜಸಂಭವ ಜನಕನನುಪಮ
ರಾಜಶೇಖರವಿನುತ ನಿಖಿಳಾಮರ ಕಿರೀಟಚಯ
ರಾಜಿತಾಮಲ ಲಲಿತ ಪದಪಂ
ಕೇಜನಾನತಜನ ದಯಾ ಸುರ
ಭೂಜ ತೊರವೆಯರಾಯ ನರಹರಿ ಪಾಲಿಸುಗೆ ಜಗವ.[1]

ಎಂದು ತೊರವೆಯ ರಾಯ ನರಹರಿಯ ಸ್ತುತಿಯೊಂದಿಗೆ ಕುಮಾರ ವಾಲ್ಮೀಕಿಯು ಕಾವ್ಯಾರಂಭ ಮಾಡುತ್ತಾನೆ. ನಂತರ 'ಪರಮ ಮಂಗಳಮೂರ್ತಿ ತ್ರಿಯಂಬಕ,' 'ವಿಶ್ವಜಗತೀಜನಕ ವಿರಿಂಚಿ,' 'ರಾಘವ ಪದ ಸರೋಜ ಭ್ರಮರ ಭುವನ ಪ್ರಾಣಜ', 'ಅನುಪಮದ ಬಂಧುರದ ಭಾರತಿ', 'ಕಮನೀಯ ಪ್ರಭಾ ವಿಸ್ತರ ವಿನಾಯಕ', 'ನಿರುಪಮತತ್ವ ವಿದ್ಯಾಶರಧಿ ಮಧ್ವಾಚಾರ್ಯ', 'ಆದಿಕವಿ ವಾಲ್ಮೀಕಿ'–ಇವರನ್ನೆಲ್ಲ ವಂದಿಸಿ ಕವಿಯು ತನ್ನ ಬಗ್ಗೆ ಹೇಳಿದ್ದು ಹೀಗಿದೆ:

ಚಾರುತರ ಕರ್ಣಾಟಕದ ವಿ–
ಸ್ತಾರರಾಮಾಯಣಕೆ ಕರ್ತೃ ಕು
ಮಾರವಾಲ್ಮೀಕಿಯೆ ಕಥಾಪತಿ ತೊರವೆಯಧಿನಾಥ
ವೀರ ನರಹರಿಯೆನಲು ಮೆಚ್ಚದ
ರಾರು ಸತ್ಕವಿತಾ ವಿಲಾಸದ
ಸೂರಿಗಳ ಹೃದಯಾಕರುಷಣ ಕಥಾಕುತೂಹಲವ.[2]

ಕವಿಗೆ 'ಪದಸಂಚರಣೆಯಲಿ ಲಿಪಿ ತಿರುಗಿ ನೋಡದ ಬಿರುದು' ಒಂದು ಅಗ್ಗಳಿಕೆ. ತನ್ನ ಕಾವ್ಯವು ಸಿರಿಹರಿಭಕು ತರುಮ್ಮಹದಚ್ಚು' ಆಗಿರುವಂತೆಯೇ 'ಶಿವ ಸೇವಕರ ಮೆಚ್ಚು' ಆಗುವುದೆಂದು ಕವಿಗೆ ಆತ್ಮವಿಶ್ವಾಸ.

'ರಾಘವೇಂದ್ರನ ಚರಿತ ಶತಕೋಟಿ ಪ್ರವಿಸ್ತರವಾದುದು' 'ಶ್ರೀ ರಾಮನಾಮದಲ್ಲಿನಿಗಮದ ರಹಸ್ಯವೇ' ಅಡಗಿದೆ ಎಂದು ರಾಮಾಯಣ ಮತ್ತು ರಾಮನಾಮಗಳ ಅಗಾಧ ಮಹಿಮೆಯನ್ನು ಸಾರಿ ಹೇಳಿ ಕುಮಾರವಾಲ್ಮೀಕಿಯು ಮೊದಲ ಸಂಧಿಯನ್ನು ಮುಗಿಸುತ್ತಾನೆ.

ಎರಡನೆಯ ಸಂಧಿಯು ಕೈಲಾಸದ ದೃಶ್ಯದೊಂದಿಗೆ ಮೊದಲಾಗುತ್ತದೆ; 'ವಾಸುದೇವ ಸ್ತುತಿ ಪರಾಯಣೆ' ಯಾದ ಗೌರಿಯು ತನ್ನ ಪತಿಯೊಡನೆ "ಕೇಶವಾದಿ ಸಹಸ್ರನಾಮವಿಲಾಸದೊಳಗಧಿನಾಮಧೇಯದ ಭಾಸುರಾನುಗ್ರಹ ರಹಸ್ಯವನರುಹಬೇಕು" ಎಂದು ಬಿನ್ನೈಸುತ್ತಾಳೆ. ಸತಿಗೆ ರಾಮನಾಮವೆಂಬ 'ಬೀಜಾಕ್ಷರ'ವನ್ನು ಅನುಗ್ರಹಿಸಿದ ಶಿವನು, ಮತ್ತೆ ಆಕೆಯ ಅಪೇಕ್ಷೆಯಂತೆ ರಾಮಾಯಣವನ್ನೇ ಅರುಹುತ್ತಾನೆ.

### ವಾಲ್ಮೀಕಿಯ ಪೂರ್ವಕಥೆ

ತ್ರೇತಾಯುಗದ ಆದಿಯಲ್ಲಿ ಕ್ರೌಂಚಾಟವಿಯಲ್ಲಿದ್ದ 'ದುರಾತ್ಮ, ಚೋರವೃತ್ತಿ'ಯ ವ್ಯಾಧಂಗೆ 'ಭಾರದ್ವಾಜಾದಿ ಮುನಿಗಳ ಅನುಗ್ರಹದಿಂದ ತಪ ಸಂಭವಿಸಿತು.' 'ವಾರಿಜಭವನ ದೆಸೆಯಿಂದಾಯ್ತು ಪರಮ ಮುನಿತ್ವ'. ಬಳಿಕ ಆ ಮುನಿಪುಂಗವನು "ವಲ್ಮೀಕದಲಿ ಅವತರಿಸಿದನು, ಅವನಿಯಲಿ ಅವನಿಗೆ ಮುಂದೆ ವಾಲ್ಮೀಕಿ ಮುನಿ ಎಂದೇ ಹೆಸರಾ ದುದು."

1. ತೊ. ರಾ. I ೧-೧.
2. ಇದೇ ೧-೯.

ಆ ತಪೋಧನನು ಬಳಿಕ 'ಸುಜನಖ್ಯಾತ'ನಾದನು. ಅವನ ತಪೋಭೂಮಿಯಲ್ಲೊಮ್ಮೆ 'ಕ್ರೌಂಚ ಯುಗಳ ಅವನ ಕಣ್ಮುಂದೆ ಸುಳಿದುದು. "ದುಷ್ಟ ಕಿರಾತನೊಬ್ಬನು ಆ ಹಕ್ಕಿಗಳನ್ನು ಕಂಡೆಸೆಯಲು, ವಿಹಗ ಪತಿ ನೆಲಕೆ ಕೆಡೆದುದು."

## ರಾಮಾಯಣ ಸೃಷ್ಟಿ

ಅರೆಮುಗಿದ ಲೋಚನದ, ಸಂಪುಟ
ನರಳಿ ಚಲಿಸುವ ಚಂಚು ಪುಟದು–
ಪ್ಪರಿಸಿದಂಘ್ರಿಯ, ಕೆದರಿದೆರಕೆಯ, ಬಿರಿತ ತುಪ್ಪಳಿನ
ಕೊರಳ ಮಿಡುಕಿನ ಮುಸೆಯ ಮುಖದಲಿ
ಸುರಿವ ನೆತ್ತರ ಪತಿಯಸುತ್ತಲು
ತಿರುಗಿ ಚೀರುವ ವಿಹಗಸತಿಯನು ಕಂಡನಾ ಮುನಿಪ.[1]

ಆ ಹೆಣ್ಣು ಹಕ್ಕಿಯ ಆಕ್ರಂದನವು ಮುನಿ ಹೃದಯವನ್ನು ತೋಯಿಸಿತು; ಅವನು ಶೋಕಿಸಿ 'ಹಳವಿಸಲಿಕಂದು ತಾ ಶ್ಲೋಕ ಪದ್ಧತಿಯಾಗಲು', 'ನಾಕದಿಂ ನಾರದನು ವಾಲ್ಮೀಕಿಯಿದ್ದಲ್ಲಿಗೆ ಆಗಮಿಸಿದನು.' "ನಿನ್ನ ಕವಿತೆಯ ನಹಣಿ ಬಹಳ ಲೇಸಾಗಿದೆ–ಶೋಕ ಮುಖ ಸನ್ನಿಹಿತವಾದ ಈ ಶ್ಲೋಕಬಂಧವು ಕಾವ್ಯ ರಚನೆಯಲ್ಲಿ ಮುಂದಾಗಲಿ ನೀನು ಪ್ರಥಮ ಕವಿಯಾಗಿರುವಿ" ಎಂದು ನುಡಿದು, "ರಘುನಂದನೋಪಾಖ್ಯಾನವನು ಸಂಕ್ಷೇಪದಲಿ ಅನುಗ್ರಹವಿತ್ತು" ದೇವಮುನಿ ಅತ್ತ ತೆರಳಿದನು. ಇತ್ತ ವಾಲ್ಮೀಕಿಯು 'ರಾಮಾಯಣ–ಕಥಾಮೃತ'ರಚನೆಗೆ ತೊಡಗಿದನು.

## ಕುಶಲವ ಪ್ರಶ್ನೆ

"ಜಾತರಹಿತನಾದ ವಿಷ್ಣುವು ರಾಮನಾಗಿ ಜನಿಸಿ, ಅಯೋಧ್ಯೆಯಲ್ಲಿ ಬೆಳೆದು, ರಾಕ್ಷಸ ವಧೆಗೈದು ಮತ್ತೆ ರಾಜ್ಯ ವಾಳುತ್ತಿದ್ದನು. ಆ ಮೇಲೆ ಸೀತಾ ಪರಿತ್ಯಾಗ, ವಾಲ್ಮೀಕಿ ಆಶ್ರಮದಲ್ಲಿ ಲವಕುಶ ಜನನ, ಆ ಮಕ್ಕಳ ವಿದ್ಯಾಭ್ಯಾಸ–ಎಲ್ಲವೂ ನಡೆದವು. ಒಂದು ದಿನ ಆ ಬಾಲಕರು ಮುನಿಗೆ ವಂದಿಸಿ 'ನಮ್ಮನ್ನು ಪಡೆದ ತಂದೆಯಾರು? ಅನ್ವಯವೇನು? ತಿಳಿಸಿ ಅನುಗ್ರಹಿಸಬೇಕು' ಎಂದು ಬಿನ್ನಹ ಮಾಡಲು, ವಾಲ್ಮೀಕಿಯು "ಆನಂದದಲಿ ಹೇಳಲ್ಕೆ ತೊಡಗಿದನೀ ಮಹಾ ಕಥೆಯ."

## ದಶರಥ ಪ್ರತಾಪ ದರ್ಪಣದ ನೋಟ

ಅಯೋಧ್ಯೆಯಲ್ಲಿ ಇಕ್ಷ್ವಾಕು ವಂಶದ ಅಜ ನೃಪಾಲ ಸುಕುಮಾರ ದಶರಥ ಮಹೀಪತಿಯು ಕೋಸಲದ ನೃಪ ಸುತೆ, ಮಗಧ ಮಹೀಶತನುಜೆ, ಕೈಕಯಕ್ಷ್ಮಾಪಾಲ ನಂದನೆಯರನ್ನು ಮದುವೆಯಾಗಿ ಅಧಿಕ ವೈಭವದಿಂದ ರಾಜ್ಯ ವಾಳುತ್ತಿದ್ದನು.

ಹಗಲು ಸಂಧ್ಯಾರಾಗದೆಸಕದ
ಬಗೆಯ ವಿಭ್ರಾಂತಿಯಲಿ ನೀರಜ
ಮುಗಿವವಾಶಾಜನಿತ ದಾವಜ್ವಾಲೆ ಯೆಂದಳುಕಿ
ದಿಗಿಭವಂಜುವವರಿನೃಪರು ಮೈ
ದೆಗೆವರುಲ್ಕಾಪಾತ ಭೀತಿಯ
ಬಿಗುಹಿನಲಿ ಬಹಳ ಪ್ರತಾಪವದೆಂತೊ ದಶರಥನ.[2]

1. ತೊ. ರಾ. I ೨–೧೪
2. ತೊ. ರಾ. I ೩–೨೩

ಹೀಗೆ ಅಸದೃಶವಾದ ಪ್ರತಾಪ ವೈಭವದಿಂದ ಮೆರೆಯುತ್ತಿದ್ದ ದಶರಥನು ಒಂದಾನೊಂದು ದಿನ "ದರ್ಪಣವ ನೋಟದಲಿ" ತಾನು ವೃದ್ಧನಾದುದನ್ನರಿತು ತನ್ನ ಸಂತತಿಹೀನತೆಗಾಗಿ ಬಹಳ ಮರುಗಿದನು. ವಸಿಷ್ಠ, ಸುಮಂತ್ರರು ನಿರುಪಮ ಪುತ್ರಕಾಮೇಷ್ಟಿಯನ್ನು ಕೈಗೊಳ್ಳಬೇಕೆಂದೂ, ಆ ಯಾಗಕ್ಕೆ ವರಮುನಿ ಋಷ್ಯಶೃಂಗನನ್ನು ಕರೆಸಬೇಕೆಂದೂ, "ವರಪಿಂಡ ಪ್ರಸಾದೋತ್ಕರದಲಹರು ಆತ್ಮಜರು, ಸಂದೇಹ ಬೇಡ" ಎಂದೂ ತಿಳಿಸಿದರು.

## ಋಷ್ಯಶೃಂಗೋಪಾಖ್ಯಾನ

ದಶರಥನ ಅಪೇಕ್ಷೆಯಂತೆ ಸುಮಂತ್ರನು ವಿಭಾಂಡು ಸುಕುಮಾರನಾದ ಆ ಮುನಿಯ ಕಥೆಯನ್ನು ತಿಳಿಸಿದನು: ಬರಗಾಲ ಪೀಡೆಗೊಳಗಾದ ರೋಮಾಂಘ್ರಿ ಭೂಪನು ನಾರದನ ಸೂಚನೆಯಂತೆ ಕಾಮಿನಿಯರನ್ನು ಮುನಿಯ ಆಶ್ರಮಕ್ಕೆ ಕಳುಹಿಸಿ ಋಷ್ಯಶೃಂಗನನ್ನು ತನ್ನ ರಾಜ್ಯಕ್ಕೆ ಬರಿಸಿ ಮಳೆ ಬರಿಸಿದ ಕಥೆಯನ್ನು ಹೇಳಿದನು. ಬರಡು ಹಯನಹುದು, ಉಡಿದ ನೀರಸ ತರು ಚಿಗುರ್ವವು, ಬಂಜೆ ಗರ್ಭವ ಧರಿಸುವಳು, ಧನಧಾನ್ಯ ಗೋಧನಸಂಪದಾದಿಗಳು ಆ ಮುನಿಪನಿಹ ಧರಣಿಯಲಿ ಭರಿತವಾಗಿಹವು" ಎಂದೂ ಹೇಳಿ "ನೀನು ಆ ಮುನೀಂದ್ರನ ಕರೆಸಿ ಕ್ರತುವನು ನಡೆಸು, ಸುತರಹರು" ಎಂದೂ ವಿವರಿಸಿದನು.

## ಪುತ್ರ ಕಾಮ್ಯಾಧ್ವರ

ದಶರಥನು ತಾನೇ ಕಾಣಿಕೆ ಸಹಿತ ಸಪರಿವಾರನಾಗಿ ಆ ಮುನಿಯಲ್ಲಿಗೆ ತೆರಳಿ ಆಮಂತ್ರಣವಿತ್ತು ಬಂದನು. ತುರಗಮೇಧ ಮತ್ತು ಅಶ್ವಮೇಧ ಎರಡೂ ಆ ಮುನಿಯ ಸಮ್ಮುಖದಲ್ಲಿ ನಡೆದುವು. ಯಜ್ಞದ ಪೂರ್ಣಾಹುತಿಯ ವೇಳೆ 'ವಿಶ್ರುತ ಸುತೇಜೋ ಮೂರ್ತಿ ಹೊಳೆದುದು ಯಜ್ಞಕುಂಡದಲಿ.' ಮಿಸುಪಕಾಂಚನ ಪಾತ್ರೆಯಲಿ ಪೂರಿಸಿದ ಪರ ಮಾನ್ನವನು–ಸತ್ವರಜೋಸ್ತಮುಗುಣದ ಏಸಕವಭಿಗತ ಪೂರ್ಣವನು–ದಶರಥನ ಕೈಗೆ ಒಲಿದಿತ್ತು, ಕುಂಡದಲ್ಲಿಯೇ ಮರೆ ಯಾದುದು. ಆ ಪಾಯಸವನ್ನು ಮುನಿಕುಲ ಮೃಡ ವಸಿಷ್ಠನ ನೇಮದಲಿ ಮಡದಿಯರು ಮೂವರಿಗೆ ನರಪತಿ ವಿಂಗ ಡಿಸಿ ಕೊಟ್ಟನು. ಇದರಿಂದ ಆ ರಾಣಿಯರು ಗರ್ಭಧಾರಣೆಮಾಡಿದರು 'ಶುಕ್ತಿಯ ತೋರಿಕೆಯ ಮೌಕ್ತಿಕದವೊಲು ಅಂಗನಾತ್ರಯದ ಅಂಗಾಂಗಗಳಲ್ಲಿ ಚಿಹ್ನೆಗಳು ಮೈದೋರಿದುವು".

## ಶ್ರೀರಾಮ ಜನನ

"ತರಣಿಯೇಕಾದಶದ ದಾನವ ಗುರು ನಿರೀಕ್ಷೆಯಲಿ, ಇಂದುವಿನ ಶುಭಕರದ ದೃಷ್ಟಿಯಲಿ ಅಂಗಿರಸ ಸೌಮ್ಯರ ಸುಕೇಂದ್ರದಲಿ, ಪರಮ ಚೈತ್ರದ ಶುದ್ಧನವಮಿಯಲಿ, ಪುನರ್ವಸು ತಾರೆಯಲಿ, ಹಿರಿಯರಸಿ ಭವಸ್ಥಿತಿಲಯವಿವರ್ಜಿತನ ಬೆಸಲಾದಳು."[1] ಶ್ರೀರಾಮಜನನದ ಮರುದಿನ, ಪುಷ್ಯದಲಿ ಕೈಕೇಯಿಯು ಭರತನನ್ನೂ, ಮಘಾ ನಕ್ಷತ್ರದುದಯದಲಿ ಸೌಮಿತ್ರಿಯು ಮಕ್ಕಳಿಬ್ಬರನ್ನೂ ಪಡೆದರು.[2]

ಆಗ ಲವಕುಶರು ವಾಲ್ಮೀಕಿಯೊಡನೆ "ಶ್ರೀರಾಮನನ್ನು ಸರ್ವೇಶನೆಂದೇ ತಿಳಿಸಿದೆಯಷ್ಟೆ, ಹಾಗಾದರೆ, ಪರಮಾತ್ಮ ನಿಗೆ ಗರ್ಭವಾಸ, ಈ ಪ್ರಪಂಚದಲ್ಲಿ ಜನನ–ಎಲ್ಲಾ ಏಕಾಗಿ?" ಎಂದು ಪ್ರಶ್ನಿಸಿದರು. ಅದಕ್ಕುತ್ತರವಾಗಿ ವಾಲ್ಮೀಕಿಯು ರಾವಣಾದಿಗಳ ಜನನ, ಅವರಿಂದ ಲೋಕಕ್ಕೆಲ್ಲ ಒದಗಿದ ಪೀಡೆ, ದೇವತೆಗಳಿಂದ ಶ್ರೀಮನ್ನಾರಾಯಣನಲ್ಲಿ ಮೊರೆ, 'ನರರ ರೂಪಿಂದಾವು ವಿಶ್ವಂಭರೆಯೊಳು ಅವತರಿಸುವೆವು'–'ನೀವು ವಾನರರೂಪಿಂದುದಿಸುವುದು' ಎಂಬ ಅಭಯ, ಸೂಚನೆ, ಮೊದಲಾದ ಕಥೆಯನ್ನೆಲ್ಲಾ ,ಹೇಳಿ, ಶ್ರೀರಾಮನ ಜನನ, ಬಾಲ್ಯ,–ಎಲ್ಲವೂ "ಮಾಯಾ ಚರಿತ"ವಲ್ಲದೆ ಮತ್ತೇನೂ ಅಲ್ಲ ಎಂದು ತಿಳಿಸಿದನು.

---

1 ತೊ. ರಾ I ೮-೬
2. ಅದೇ I ೮-೭

## ವಿಶ್ವಾಮಿತ್ರ ಗುರುತ್ವ, ಯಜ್ಞ ರಕ್ಷಣೆ

ವಿಶ್ವಾಮಿತ್ರನು ತನ್ನ ಯಜ್ಞಕ್ಕೆ ರಾಕ್ಷಸರಿಂದೊದಗಿದ ಬಾಧೆಯ ನಿವಾರಣೆಗಾಗಿ ಬ್ರಹ್ಮನನ್ನು ಪ್ರಾರ್ಥಿಸಲು, 'ಇದಕೇಕೆ ಭಯ? ಲೀಲಾವತಾರಿಯಾದ ರಾಮನನ್ನು, –ವಿಬುಧರಿಪುವೇತಂಡ ಪಂಚಾನನನನ್ನು–ಕರೆದೊಯ್ಯು' ಎಂದನು. ಅದರಂತೆ ಮುನಿವರನು "ಹೊಕ್ಕನು ದಶರಥ ನೃಪ ಸಭಾಸ್ಥಳವ"; ಆ ಮುನಿಯ ಕೇಳಿಕೆಯ 'ಅಲಗು ನೃಪತಿಯ ಬೆನ್ನಲಿ ನೂಡಿದುದು', ಅವನು ಮುಂದುಗಾಣದೆ ಹಲವೆಣಿಸುತ್ತಿರಲು, ವಸಿಷ್ಠನು ರಾಮಾವತಾರದ ರಹಸ್ಯವನ್ನು ಅರುಹಿ, ದಶರಥನ ವ್ಯಾಮೋಹವನ್ನು ಅಲ್ಲಗಳೆದನು. ಶ್ರೀರಾಮನು ಸೌಮಿತ್ರಿ ಸಹಿತ ವಿಶ್ವಾಮಿತ್ರನನ್ನು ಹಿಂಬಾಲಿಸಿದನು.

ಸರಯೂ ತರಂಗಿಣಿಯನ್ನು ದಾಟಿದ ಮೇಲೆ ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ಹರಿಹರಬ್ರಹ್ಮ–ಇಂದ್ರಾದ್ಯರ ಹೆಸರ ದಿವ್ಯಾಸ್ತ್ರ ಮಂತ್ರಗಳನ್ನು ಉಪದೇಶಿಸಿ, ಉಪಸಂಹಾರ ವಿಧಾನವನ್ನೂ ಅರುಹಿ, ತನು ರಕ್ಷಣೆಯ ದಿವ್ಯಕವಚ ಮಂತ್ರವನ್ನೂ ಅನುಗ್ರಹಿಸಿದನು.[1]

ಮುಂದೆ ಕಲುಷಕಾನನದಲ್ಲಿ ಎದುರಾದ ತಾಟಕಿಯ ವಧೆ ರಾಮನಿಂದಾಯಿತು. ಪುನಃ ಯಜ್ಞಭಂಗಕ್ಕೆ ತೊಡಗಿದ ಸುಬಾಹುವಿನ ಮಸ್ತಕವನ್ನು ಶ್ರೀರಾಮನ ಅಸ್ತ್ರವು ಕತ್ತರಿಸಿ ಅಂಬರಕ್ಕಡರಿಸಿತು. ವೇಷ ಮರೆಯಿಸಿಕೊಂಡು ಸುಳಿದ ಮಾರೀಚನನ್ನು "ಬ್ರಹ್ಮವನು ಮರೆಗೊಂಡೈದಿದವರ ವಧಿಸುವುದು ಲೌಕಿಕ ಮತವಲ್ಲ, ಮನುಕುಲದವರ ಪಥವಲ್ಲ' ಎಂದು ಯೋಚಿಸಿ, 'ಹೋದ ಪ್ಪೈಯಲಿ ಹೋಗೆನುತ ಕೃಪೋದಯನು ಅನಿಲಶರದಿಂದ ಆ ಖಳನನ್ನು ಜಲಧಿಯ ತೆಂಕಣ ತೀರಕ್ಕೆ ಊದಿದನು.' ಅಂತೂ 'ಮುನಿತಿಲಕನಧ್ವರವು ಸಾಂಗವಾದುದು.'

## ಅಹಲ್ಯೋದ್ಧಾರ

'ರಘು ನೃಪರ ಕೋಲಗುರುವಾದ ಕುಶಿಕನಂದನನು ಭಾಳ ನೇತ್ರನ ವರದ ಗರುಡಿಯ ಚಾಳಿಯೆನಿತುಂಟನಿತನವರಲಿ ಮೇಳವಿಸಿದನು'. ತಿಂಗಳು ಕಳೆಯುತ್ತಿರಲು, ವಿಶ್ವಾಮಿತ್ರನಲ್ಲಿಗೆ ಜನಕ ಭೂಪನ ಮಣಿಹಾರರು 'ಮಹಾ ಮಂಗಳೆಯ ವಿಮಲ ವಿವಾಹ ಪತ್ರಿಕೆ ಸಹಿತ' ಬಂದರು. 'ಜಾನಕಿಯ ನರಚರಿತ್ರದ ರಾಮಭದ್ರಗೆ ಪರಿಣಯನ ಮಾಳ್ಪುಜ್ಜುಗವ ನಿರ್ಧರಿಸಿ' ವಿಶ್ವಾಮಿತ್ರನು ಮಿಥಿಳೆಯತ್ತ 'ಪ್ರಯಾಣೋದ್ಯೋಗ ಮನನಾದನು'.

ಸಾಗುತ್ತಿರಲು 'ಮೂಡದಬುಜದ ಸರಸಿಯಂತೆ, ಇನನಾಡದ ಅಂಬರದಂತೆ, ಜೋಕೆಯ ಜೋಡೆಯ ವ್ರತದಂತೆ' ಇದ್ದ ಗೌತಮಾಶ್ರಮವು ಎದುರಾದುದು. ಅಹಲ್ಯೆ–ಇಂದ್ರರ ಕಥೆಯನ್ನು ಕೇಳುತ್ತಾ ಶ್ರೀರಾಮನು ಸಾಗುತ್ತಿದ್ದಂತೆ 'ಶಿಲೆಯಾಗಿದ್ದ ಅಹಲ್ಯೆಗೆ ರಾಮಾಂಘ್ರಿ ರಜವಾವರಿಸಿತು' ಒಡನೆ, 'ಗುರು ಕಟಾಕ್ಷ ನಿರೀಕ್ಷೆಯಲಿ ದುಸ್ತರಭವಾಂಬುಧಿ ಬರುವವೊಲು' 'ಪರಮಪುರುಷನ ದೃಷ್ಟಿಪಾತದಿ ಆಕೆಯ ಸಂಚಿತ ದುಷ್ಕೃತ ಹರೆದು ಶಿಲೆಯ ಮಧ್ಯದೊಳುದಿಸಿದಳು' ಅಹಲ್ಯೆ. ಆ ಸಮಯದಲ್ಲಿ ಅಲ್ಲಿಗೆ ಗೌತಮನು ಆಗಮಿಸಿ, "ಇಂದಿರೇಶನ ಮನುಜ ವೇಷವನು ಸಮ್ಯಕ್ ಜ್ಞಾನ ಮುಖದಿಂದರಿತು" ನಮಿಸಿದನು. ಆ ಸತಿ ಪತಿಯರನ್ನು ಒಂದುಗೂಡಿಸಿ ಈ ಮೂವರು ಮಿಥಿಲೆಯತ್ತ ಸಾಗಿದರು.

## ಸೀತಾ ಕಲ್ಯಾಣ

ಮಿಥಿಲೆಯಲ್ಲಿ ವಿವಾಹ ಮಂಟಪ ಸಿದ್ಧವಾಗಿತ್ತು. ಭೂರಿ ಭುವನದ ಭೂವರರು ಅಲ್ಲಿ ನೆರೆದಿದ್ದರಷ್ಟಲ್ಲದೆ, ಪಶುಪತಿ, ಬ್ರಹ್ಮೇಂದ್ರ ಶಿಖಿ ಮೊದಲಾದವರೂ ಕನ್ಯಾರ್ಥಿಗಳಾಗಿ ಅಲ್ಲಿಗೆ ಆಗಮಿಸಿದ್ದರು. ಸೀತಾ ದೇವಿಯನು ವರಿಸುವರೆ 'ಈಶದತ್ತ ಮಹೋಗ್ರತರ ಬಾಣಾಸನವ ತೆಗೆದೇರಿಸುವ ಬಲು ಸಾಸಿಗರು ಬಹುದೆಂದು' ಸೂರ್ಯಾಸ್ತದಲಿ ಜನಕನು ಡಂಗುರ ಹೊಯ್ಸಿದನು.

ಮರುದಿನ ಸ್ವಯಂವರ ಮಂಟಪದಲ್ಲಿ ನೆರೆದ ರಾಜರೆಲ್ಲ ಆ ಬಿಲ್ಲ ಬವರದಲಿ ತಲ್ಲಣಗೊಂಡರು. ಅಷ್ಟರಲ್ಲಿ

---

1. ತೊ. ರಾ. I ೯–೪೫.

'ಗಂಡುಗಲಿ ರಾವಣನು ರಾಕ್ಷಸ ತಂಡಸಹಿತ' ಅಲ್ಲಿ ಬಂದಿಳಿದನು. ಒಡನೆ ಅಲ್ಲಿದ್ದ ಅಸುರಗಣವೆಲ್ಲ ಎದ್ದು ನಿಂತು ಭಯ, ಭಕ್ತಿಯನ್ನು ವ್ಯಕ್ತಪಡಿಸಿದರು. ಜನಕನು ಕಳವಳಗೊಂಡನು.

ಲಂಕಾಧಿಪನು ನೇರವಾಗಿ ಬಿಲ್ಲಿನೆಡೆಗೆ ಬಂದನು. ಆ ವಿಬುಧ ವಂಶ ವಿಭಾಡನು ಕಾಳಸರ್ಪ ಕೂಡಿಕೊಂಡಿಹ ನಿಧಿಯನು ತುಡುಕುವಂದದಲಿ ಧನುವನಲ್ಲಾಡಿಸಿದನು. ಬಾಹಪ್ಪಳಿಸಿ ಬೊಬ್ಬಿರಿದನು.

ಬಲಿದು ಮಕುಟಾವಳಿಯ ಶೋಣಿತ
ಸಳಿಯ ರಕ್ಕಸದೇಸಿಯಲಿ ಬಿಗಿ
ದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ
ಅಳುಕದಂದು ಹರಾದ್ರಿಯನು ಕಿ-
ತ್ತಿಳೆಯನಗಲಿಸುವಂತೆ ಬಾಹಾ-
ಲುಳಿತಬಲಸತ್ತಿದನು ನೆಲನೊಲದಾಡಲೆಡಬಲಕೆ.[1]

ರಾವಣನು ತನ್ನ ಸಾಹಸದಲ್ಲಿ ವಿಫಲನಾಗಿ ನೆಲಕ್ಕೆ ಕೆಡೆದನು. ಅವನ ಸ್ಥಿತಿ ಆ ಬಿಲ್ಲಡಿಯಲ್ಲಿ 'ರಸದ ಲಂಪಟಕಿಕ್ಕ್ನಿವನು ಖಂಡಿಸಲು ಸಿಲುಕಿದ ನಾಲಗೆಯ ಗಸಗಸದ ಸಿರಿಯವೊಲಾದುದು.' ಆ ಅಸುರನು 'ಸೀತೆಯನು ಕಳವಿನಲಿ ಕೊಂಡೊಯ್ವೆ' ಎಂದು ಮನದಲೇ ನಿರ್ಧರಿಸಿ ಲಂಕಾಪುರವನ್ನೈದಿದನು.

ವಿಶ್ವಾಮಿತ್ರನ ಸೂಚನೆಯಂತೆ, 'ವರ ಪಯೋನಿಧಿ ಮಧ್ಯದಿಂದ ಅವತರಿಸುವ ಅಮೃತಾಂಶುವಿನವೊಲು ಮುನಿವರರ ಮಧ್ಯದೊಳಿದ್ದನಾ ರಾಮ'. ಮುಂದೆ ಬಂದು, 'ಎಳೆಯ ಕಬ್ಬಿನ ಕೋಲ ವನಕರಿ ಕಳಭ ಕರದಲಿ ಮುರಿವವೊಲು' 'ಭಾರ್ಗವನ ಹೃದಯ ಬೆದರುವವೊಲು' ಆ ಹರಧನುಸ್ಸನ್ನು ಇಕ್ಕಡಿ ಮಾಡಿದನು. 'ಒಡನೆ ಸಿರಿ ಮೊಗದ ಲಜ್ಜಾ ರಸದ ಸೊಬಗಿನ ಸೀತೆ ಸುರಕುಜಕುಸುಮ ಮಾಲೆಯನು ರಘುರಾಮಚಂದ್ರಂಗಿಕ್ಕಿದಳು.'

ಅಯೋಧ್ಯೆಗೆ ಮಣಿಹಾರರ ಮೂಲಕ ಸಂದೇಶವನ್ನು ಕಳುಹಿಸಲಾಯಿತು. ದಶರಥನು ಸಪರಿವಾರ ಮಿಥಿಲೆಗೆ ಬಂದು, ಅವನ ನಾಲ್ವರು ಪುತ್ರರಿಗೂ ಸಂಭ್ರಮದಿಂದ ವಿವಾಹ ನಡೆದುದು.

### ಭಾರ್ಗವ ರಾಮ

ಅಯೋಧ್ಯೆಗೆ ಹೊರಟ ದಶರಥನ ದಳದ ಸಂಭ್ರಮದ ಉಬ್ಬರವು-'ಇಳೆಯ ಪಾರ್ಥಿವರದಟು ಕೊಡಲಿಯ ಕೊಳೆಗಡಿಕಗೆ' ಸೊಗಸದಾಯಿತು. ಆ ಪರಶುರಾಮನು 'ವಿಲಯರುದ್ರನ ಕುಪಿತ ರೌದ್ರಾವೇಶರೋಷದಲಿ' ಸುಳಿದನಿದಿರಿನಲಿ. ದಶರಥನು ತತ್ತರಿಸಿದನು. ಶ್ರೀರಾಮನು ಸಾಕಷ್ಟು ಎಚ್ಚರಿಕೆ ನೀಡಿದರೂ, ಹಿಂದಾಗದ ಪರಶುರಾಮನ 'ಕೊರಳ ಸರಿಸದಲಿ ಅಸ್ತ್ರವನು ಸುಳಿಸಿದನು.' ಪರಶುರಾಮನು ಏರಿಸಿದ ವೈಷ್ಣವ ಧನುವನ್ನು ಸೋಲ್ವಾಯ್ದು-ಗಿದು ಕೊಂಡನು. ಭಾರ್ಗವ ರಾಮನು 'ಅಯಿತೆಮ್ಮವತಾರವೀ ರಾಮಾಯಣದ ನಾಟಕಕ್ಕೆ ದೀಪ್ತಿನ್ಯಾಯದವೊಲು ಎನುತಪ್ಪಿ ಅಕ್ಷಯ ನಿಷಂಗಮದ ಸಾಯಕವನು ರಘುರಾಮಂಗೊಲಿದಿತ್ತು ಆಶ್ರಮಕೆ ತೆರಳಿದನು.' ಅಷ್ಟರಲ್ಲಿ ಸುರಪನಾಜ್ಞೆಯಂತೆ ವರುಣನು ಬಂದು ರಾಮನಿಂದ ಆ ವೈಷ್ಣವ ಚಾಪವನು ಬೇಡಿದನು, ಒಯ್ದು ಇಂದ್ರಂಗಿತ್ತನು.

ದಶರಥನು ಸಪರಿವಾರನಾಗಿ ಅಯೋಧ್ಯೆಯ ರಾಜಭವನವನು ಸಾರಿದನು.

## ಅಯೋಧ್ಯಾಕಾಂಡ

### ಶ್ರೀರಾಮಪಟ್ಟಾಭಿಷೇಕ ಸಿದ್ಧತೆ

ರಾಮ ವಿವಾಹದ ನಂತರ 'ಹನ್ನೆರಡಬುದ ಪರಿಯಂತ' ದಶರಥನೇ ಆಳ್ವಿಕೆ ನಡೆಸಿದನು. 'ಬಳಿಕೊಂದು ದಿನ

1. ತೊ. ರಾ. I ೧೫-೯.

ಕೈಕೇಯ ಮಹೀಪತಿಯ ಬಾಲಕನು ಬಂದು ಐದುದಿನವಿದ್ದು, ತನ್ನ ಸೋದರಳಿಯಂದಿರನ್ನು ಶಸ್ತ್ರಾಸ್ತ್ರ ಕೌಶಲವನಭ್ಯಾಸಿಸಲು ನಿಜಪುರಿಗೊಯ್ದನು'. ದಶರಥನು ತನಗೆ ಜರೆ ತೋರಿದುದು ಎಂದು, ಆಪ್ತ ಅಧಿಕಾರಿಗಳ ಮತದಿಂದ ಏಳು ದಿವಸದಲಿ ಶ್ರೀರಾಮಚಂದ್ರನಿಗೆ ಯೌವರಾಜ್ಯದ ಪಟ್ಟವನು ಕಟ್ಟಿದನು. ನಂತರ ರಾಮನಿಗೆ 'ಅಧಿರಾಜೇಂದ್ರ ಪಟ್ಟವ ಕಟ್ಟಲು ನಿಶ್ಚಯಿಸಿ, ವಸಿಯೋಗಿ, ಪ್ರಧಾನಿಗಳ ಸಲಹೆ ಪಡೆದು, 'ವೈಶಾಖಮಾಸ ಧವಳ ಪಕ್ಷದ ಪಂಚಮಿಯ ಶುಭ ದಿವಸದಭಿಜಿಲ್ಲಗ್ನದಲಿ ಮೂರ್ಧಾಭಿಷೇಚನವೆಂದು ಸಕಲ ಸಿದ್ಧತೆಗಳೂ ನಡೆದವು.

## ಪೂರ್ವಮಾಯಾತರುಣಿ ಮಂಥರೆ

ಪಟ್ಟಾಭಿಷೇಕದ ಸುದ್ದಿ ಅರಿತು, 'ಪೂರ್ವಮಾಯಾ ತರುಣಿ ಮಂಥರೆಯು ಮನದಲಿ ಮಥಿಸಿ, ಮನು ನಂದನನ ನೆಬ್ಬಟ್ಟುವೆನು ರಾವಣನ ವಧೆಗೆನುತ ಕೈಕೆಯ ಭವನವನು ಸಾರಿದಳು. ಮಾಯೆಯ ಕಟ್ಟಿಗೊಳಗಾಗದವರು ಯಾರು? ಆಕೆಯು ಕೈಕೇಯಿಯ ಮನವನ್ನೂದಿ ರಾಮನಿಗೆ ಭೂದೇವಿ ಸೇರದಂತೆ ಮಾಡಿದಳು.' ದಶರಥನು ಕೈಕೇಯಿಯೊಡನೆ ಆಕೆಯ ಮುಗುಡ ಕಾರಣ ಕೇಳಿದಾಗ, "ಒಂದು ವರದಲಿ ಧರೆಯ ಭರತಂಗೆ, ಇನ್ನೊಂದರಲಿ ರಾಮಂಗಡವಿಯೊಡೆತನವ' ಆಕೆ ಬೇಡಿದಳು. "ವನಿತೆಯುತ್ತರದಲಗು ಜನವನುಮನನು ಬಗಿದು ಬೆನ್ನಲಿ ನಾಟಿತು, ಅವನು ಮನದ ಮರುಕದಲಿ ಹಾ ಎನುತ ಹಮ್ಮೈಸಿ ಒರಗಿದನು."

## ರಾಮ ಕಂಡ ಸ್ವಪ್ನ

ಇತ್ತ, ವಸಿಷ್ಠನು ರಘುನಂದನನಲ್ಲಿಗೆ ಬಂದಾಗ, 'ಕಂಡೆನಿದೊಂದು ಕನಸನು–ಕಾನನದೊಳರವಿಂದಮುಖಿ ಸಹಿತೆನಗೆ ಸಂಭವಿಸಿತೆನಗೆ ಪರಿಭ್ರಮಣ' ಎಂದು ರಾಮನು ತಿಳಿಸಿದನು. ಇಬ್ಬರೂ ಕೂಡಿ ಸುಮಂತ್ರನೊಂದಿಗೆ ದಶರಥನಿದ್ದ ಕೈಕೆಯ ಭವನದತ್ತ ನಡೆದರು. ಅಲ್ಲಿ ತಂದೆಯ ಸ್ಥಿತಿ ಕಂಡು, ನಿಜ ಸ್ಥಿತಿಯನ್ನರಿತ ರಾಮನು, ಸುಮಂತ್ರ, ವಸಿಷ್ಠರು ತಡೆಯುತಿದ್ದರೂ, ಕೈಕೇಯಿಯೊಡನೆ, 'ನೀವು ಬೇಡಿದುದು ತಾನೇಸು ದೊಡ್ಡಿತು, ತಂದೆಯಾಡಿದ ಭಾಷೆಗಿದಕೋ ಭಾಷೆ-ಭರತನಾಳಲಿ ಧರೆಯ, ನೀವು ನರಪತಿಯ ಚರಣಾರವಿಂದ ಪರಮ ಸೇವಾನಿರತರಾಗಿರಿ, ನಿಮ್ಮನುಜ್ಞೆಯಲಿ ವನಕೆ ತೆರಳುವೆನು' ಎನ್ನಲು ಅಮರೇಂದ್ರಾದಿಗಳು ನಲಿದಾಡಿದರು.

ಕೌಸಲೆಗೆ ಈ ಸುದ್ದಿ ತಿಳಿದು, 'ಹರಸಿ ಹಡೆದೆನೆ ಮಗನನಡವಿಯ ಸಿರಿಯ ಸೂರೆಗೆ' ಎಂದು ಗೋಳಿಟ್ಟಾಗ ರಾಮನು ಅವಳನ್ನು ಸಂತೈಸಬೇಕಾಯಿತು.

## ಸೌಮಿತ್ರಿಯ ಕ್ರೋಧ

"ರಾಮಂಗೆ ಕೈಕೆಯಿಂದಾಗಿ ಒದಗಿದ ಅವಸ್ಥೆಯ ಸುದ್ದಿ ತಿಳಿದು–ಹಸಿದ ಹುಲಿಯೋ ಹರೆಗಳೆದ ನಿಟ್ಟುಸಿರಿನುರಗನೋ–ಎಂಬಂತೆ ಸೌಮಿತ್ರಿಯು ಗುಡು ಗುಡಿಸುತ್ತಾ," "ಅವನಿಪನ ಮುಪ್ಪಿನಲಿ ಮುದುಗರವವಚಿತು, ಈಚೆಯ ತಲೆಯ ಪಿತ್ತದ ಬವಣೆ ಬಲಿದುದು" ಎನ್ನುತ್ತಾ, ರಾಮನೊಡನೆ, "ಜರಡು ಮನವೇಕರಸ? ನೊಸಲಲಿ ಧರಿಸು ಪಟ್ಟವನು,ಮೂರ್ಧಾಭಿಷೇಚನಕೆ ಹರಾದ್ಯರ ಬರಿಸುವೆನು" ಎಂದು ಮುಂದಾಗುತ್ತಿರಲು, "ತಮ್ಮ, ಪಿತೃವಚನವನು ಶೋಧಿಸ್ವೆಲೇಸಾಗಿ, ನಿನ್ನ ಮಹಾದುರಾಗ್ರಹ ಅಪಯಶವ ನಮಗೆ ತಾರದಿರದು–ನಮಗೆ ಪಿತನನುಜ್ಞೆಯೆ ರಾಜ್ಯಪದವು" ಎಂದು ರಾಮನು ಅವನನ್ನು ಧರ್ಮಪದ್ಧತಿಯಿಂದ ತಣಿಸಿದನು.

ಕೈಕೇಯಿಯು ರಾಮನಿಗೆ 'ವನದುರುವ ಪಟ್ಟಕೆ ಉಡುತೊರೆಯ ಕೊಳ್ಳೆನುತ' ವಲ್ಕಲವ ಕೊಟ್ಟಳು. ಇದನ್ನು ಕಂಡು ಲಕ್ಷ್ಮಣನೂ 'ವಲ್ಕಲವನೆನಗಿತ್ತು ಳುಹಬೇಕೆಂದ.' "ಅರಸಿಯು ಇಬ್ಬರಿಗೆ ವನವಾಯ್ತೆಂದು ಮನದಲಿ ಹರ್ಷಿಸಿದಳು."

**ವನಗಮನ**

ಅಷ್ಟರಲ್ಲಿ ಸೀತೆಯು ಸಭೆಗೆ ಧಾವಿಸಿಬಂದು ರಾಮನ ಚರಣದಲಿ ಭಕ್ತಿಭಾವದಲಿ ಭಾಳವನು ಚಾಚಿದಳು.

ಹೂವ ಸುರಭಿ, ಸುಧಾಂಶುಬಿಂಬವ
ನಾ ವಿಮಲರುಚಿ, ಕೀರ್ತಿ ಸದ್ಧ–
ರ್ಮಾವಳಿಯಬಿಟ್ಟಿರಲು ಬಲ್ಲವೆಯೆಂದಳಾ ಸೀತೆ.[1]

"ನಿಮ್ಮ ದೇಹದ ಪ್ರೈವಳಿಯ ನೆಳಲಾನು, ನನಗೆ ಅನ್ಯತ್ರ ಗತಿಯುಂಟೆ ? ಶ್ರುತಿಯ ಕೊರತೆಗೆ ಕಾರಣವಾಗದಂತೆ ಕರುಣಿಸುವುದು" ಎಂದು ಬೇಡಿಕೊಂಡು, 'ಪತಿಭಜನಾನುಭಾವದಲಿ' ಅಚ್ಯುತನನು ಒಡಬಡಿಸಿದಳು.

"ಹರಿ ಜಗದ್ರಕ್ಷೆಗೆ ಸುಧಾಸಾಗರವ ಹೊರವಡುವಂತೆ, ವೈಶಾಖ ಸಿತ ಪಂಚಮಿಯ ದಿನಸದಲಿ ಘಳಿಗೆ ಹದಿನಾರರಲಿ, ಪುಷ್ಯದ ಸುಳಿವಿನಲಿ ಉಚ್ಚದೃಷ್ಟಿಯಲಿ ಇಳೆಯಮಗಳು, ಊರ್ಮಿಳಾ–ವಲ್ಲಭ ಸಹಿತ ಅಬುಧಿಪರಿವಳಯವನನೀ ತಳದರಾಯರ ರಾಜವೈಭವನಿಳಯವನು ವನವಾಸಕ್ಕೆ ಹೊರವಂಟ." ತನಗೆ ನಮಿಸಿದ ರಾಮನಿಗೆ ದಶರಥನು, "ಕಂದ ಈರೇಳುವರುಷವು ಸಂದ ಬಳಿಕೀ ನಗರವಿದು ನಿನ್ನಿಂದ ಪಾಲಿಸಿಕೊಳಲಿ" ಎನ್ನುತ್ತಾ ಮುದ್ರಿಕೆಯ ಉಂಗುರವನ್ನು ಮಗನ ಕಿರುವೆರಳಿಗಿಟ್ಟನು. ರಾಮನನ್ನು ನಗರ ದ್ವಾರದಲ್ಲಿ ಬೀಳ್ಕೊಟ್ಟು, ದ್ಯುಮಣಿ ಪಾರ್ಥಿವಸರೋಜದ್ಯುಮಣಿ ಪಶ್ಚಿಮದ ತರಣಿಯ ತೇಜದಲಿ ಪಟ್ಟಣಕೆ ತಿರುಗಿದನು. "ಅಮೆಯಲಿನನೊಡನಿದ್ದು ತೊಲಗಿದ ಹಿಮಕರನವೊಲು ರಘುಕುಲಾಂಬರ ಹಿಮಕಿರಣನಗಲಿದನು ವಿಪಿನವಿಯದ್ವಿಭಾಗದಲಿ."[2]

**ಕಾನನಭ್ರಮಣ**

ದಶರಥನ ಆಜ್ಞೆಯಂತೆ ಸುಮಂತ್ರನು ಸೀತಾರಾಮಲಕ್ಷ್ಮಣರನ್ನು ರಥವೇರಿಸಿ, ಜತೆಯಲ್ಲಿ ಸಾಗಿದನು. ಸರಯುವ ದಾಟಿ, ತಮಸೆಯಲಿ ತಂಗಿ, ಜಲಾಹಾರದಲಿ ತಮಿಯನು ಕಳೆದು, ಗಂಗಾನದಿಯನ್ನು ದಾಂಟಿದರೂ ತಮ್ಮ ಬೆನ್ನುಬಿಡದ ಸುಮಂತ್ರನನ್ನು "ನೀನು ನೃಪಾಲನ ಜೀವಶರಧಿಗೆ ವಡಬನೋ ? ಚಂದ್ರಮನೋ ? ಸಾಕಿನ್ನು, ಅಡಿಗಡಿಗೆ ಹೇಳುವಡೆ ನೀನು ಅಜ್ಞನೇ ?" ಎಂದು ಒತ್ತಾಯಿಸಿ ರಾಮನು ಮಂತ್ರಿಯನ್ನು ಮರಳಿಸಬೇಕಾಯಿತು. ಮುಂದೆ ಶ್ರೀರಾಮನಿಗೆ ಕಾನನದ ಪಥದಲ್ಲಿ ಗುಹ ಸಮಾಗಮ, ಭಾರದ್ವಾಜಾಶ್ರಮ ಪ್ರವೇಶ, ಚಿತ್ರಕೂಟಗಮನ, ವಾಲ್ಮೀಕಿ ತಪೋವನ ದರ್ಶನ–ಇವೆಲ್ಲಾ ಸಂಘಟಿಸುತ್ತವೆ.

**ದಶರಥನ ಮರಣ**

ಸುಮಂತ್ರನು ಅಯೋಧ್ಯೆಗೆ ಮರಳಿ, ಎಲ್ಲವನ್ನೂ 'ದುಗುಡದಲಿ' ಅರುಹಿದನು. ದಶರಥನು ಪುತ್ರ ವಿಯೋಗ ವ್ಯಥೆಯಲ್ಲಿ ಹಲುಬುತ್ತಾ ಕೌಸಲೆಯ ವಕ್ಷದಲಿ ನಿಜಕಾಯವನಿಳುಹಿ ತನ್ನ ಯೌವನಕಾಲದಲ್ಲಿ ತನಗೊದಗಿದ ವೈಶ್ಯ ಮುನಿವರನ ಶಾಪ ವೃತ್ತಾಂತವನ್ನು ಹೇಳುತ್ತಾ, 'ಬಹಿರಂಗದ ಮನಸ್ಸಂಜನಿತ ಭವಮಾಯಾ ಪ್ರಪಂಚವನೊಸದು, ವಿನುತ ಯೋಗಜ್ಞಾನ ತತ್ವದ ನೆನೆಹಿನಲಿ' ಅಳಿದನು. ಅವನ ಕಾಯವನು 'ನವ ತಪ್ತತೈಲದಲಾಯಸಂಬಡಿಸಿದರು,' 'ಜಾಡ್ಯ ಸ್ಪರ್ಶನೆಂದೂರೊಳಗೆ ಹರಹಿದರುದಯಕಾಲದಲಿ.' 'ರಾಯನಾಯುಷ್ಯಾವಸಾನದ ರಾಯಸದ ಲೇಖವಾಹಕರು ಇರುಳು ಹಗಲೆನ್ನದೆ ಸಾಗಿ, ಭರತ ಕುಮಾರನನ್ನು ಕಂಡು ಓಲೆಯನ್ನಿತ್ತರು. ಒಡನೆ ಅವನು ಸಹೋದರಸಹಿತನಾಗಿ ಚತುರಂಗಬಲವನ್ನೂ ಕೂಡಿಕೊಂಡು ಕೋಸಲಾನಗರವನ್ನು ನಾಸರತ್ರಯಕ್ಕೈದಿದನು; ಸುತವಿರಹದ ಅವನೀ–ಪಾಲ ಮರಣವನ್ನರಿತೂ, ಅಗ್ರಜನ್ಮ ವಿಯೋಗವಿಚಾರವನ್ನರಿತೂ ಆಲಿಯಲಿ ಕಿಡಿಗೆದರಿ, ಜನನಿಯ ಮೇಲೆ ಮುಳಿದು ಅಳಿವಿಂಗೆ ಬಾಳ ಜಡಿದನು. ವಸಿಷ್ಠನು ಕಂಡು ತಡೆದು ಧರ್ಮರಹಸ್ಯವನ್ನು ಅರುಹಿದನು. ದಶರಥನ ಚಿತಾಗ್ನಿಯಲಿ

1. ತೊ. ರಾ II ೩-೨೨
2. ತೊ. ರಾ. II ೪-೭

'ಐನೂರರಸಿಯರು ಒರಗಿದರು.' ಅವರೆಲ್ಲರಿಗೂ ನೃಪನೊಂದಿಗೇ ಸಂಸ್ಕಾರ ನಡೆಯಿತು. ದಿವಸ ಹದಿನೂರರಲಿ ಭರತ ನೊಡನೆ ಪಟ್ಟಾಭಿಷೇಕದ ವಿಚಾರವೆತ್ತಿದಾಗ, 'ಅನನಿ ತಾಯಿ, ರಘೂದ್ವಹ ಪಿತ'ನೆಂದು ಅವರ ಒಡಂಬಡಿಸಿ, ಶ್ರೀರಾಮ ದರ್ಶನಕ್ಕೆ ಸಪರಿವಾರ ಹೊರಟೇಬಿಟ್ಟನು.

### ಪಾದುಕಾ ಕಿರೀಟ

ವನಕ್ಕೆ ಹೊರಟ ಭರತನು ದಾರಿಯಲ್ಲಿ ಸಿಕ್ಕ ಗುಹನ ಸಂದೇಹವನ್ನು ನಿವಾರಿಸಿ, ಭಾರದ್ವಾಜಾತಿಥ್ಯವನ್ನು ಹೊಂದಿ, ಚಿತ್ರಕೂಟಾಚಲವನ್ನು ಸಮೀಪಿಸಿದನು. ಭರತ ಸೇನಾನಿಸರಪದಹತ ಧೂಳಿಯನ್ನೂ, ಭರತ ಸ್ಯಂದನವನ್ನೂ ದೂರ ದಿಂದಲೇ ಕಂಡ ಲಕ್ಷ್ಮಣನು "ವೈರೋದ್ಯೋಗ ಗಮನಗತಿ" ಎಂದೇ ನಿರ್ಧರಿಸಿ, 'ಧರೆಯ ದೂಷಿಸಿಕೊಂಡುದಲ್ಲದೆ ಧುರಕೆ ಬಹುದಿದು ಗುಣವೇ ?' ಎಂದು ಗರ್ಜಿಸಿ, ಅಣ್ಣನೊಡನೆ ವೈರಿನಾಶಕ್ಕೆ ಅಪ್ಪಣೆ ಬೇಡಿದನು.

### ಪಾದಭಕ್ತಿ ಪರಮಾನಂದರಸಮಯ

ಲಕ್ಷ್ಮಣನ ಕ್ರೋಧಾವೇಶವನ್ನು ಕಂಡು ರಾಮನು, "ಮರುಳೆಲಾ ತಮ್ಮ, ತರಣಿ ತಪ್ಪಿಸಿ ತಲೆದೋರಿದರೂ ಭರತನು ವೈರವ ಧರಿಸಬಲ್ಲನೆ ?" ಎಂದು ಸಂತೈಸುವಷ್ಟರಲ್ಲಿ, ಭರತನು ವರೂಥದಿಂದಿಳಿದು ವೈಯಿಕ್ಕುತ್ತೈತಂದ.

ದೇವತಾಟಕಿಯಸುವಿಜಯ ಜಯ
ದೇವ ವೀರಸುಬಾಹು ಜಯಜಯ
ದೇವಮಾರೀಚಪ್ರತಾಪಪ್ರಕಟವಿಜಯ ಜಯ
ದೇವ ಮುನಿಮುಖಪಾಲನಾವಿ
ರ್ಭಾವಿತಾಮಲ ಕೀರ್ತಿಕಾಂತಾ
ಜೀವಿತೇಶ್ವರ ಜಯೆಜಯೆಂದಡಗೆಡೆದನಾ ಭರತ.[1]

ರಾಮನು ತನ್ನ ತಾಯಂದಿರಿದ್ದ ಹದನವನ್ನು ಕಂಡು, ಕಂಗಳಲಿ ಜಲವನುಗಿಸಿ, "ಪಿತನು ಇಂದ್ರನ ಗದ್ದುಗೆಯ ನಡರಿದನೆ ? ಭವದೀಯ ಕರ್ಣದ ಹೊದ್ದಿಗೆಯ ಸೌಭಾಗ್ಯ ತೀರಿದುದೆ ?" ಎಂದು ಅವರ ಪದಕೆರಗಿ, ಬಳಿಕಲನಿಬರು "ಸಲಿಲಾಂಜಲಿ ಮೃತ ಸ್ನಾನಾದಿ ಕರ್ಮಾವಳಿಯ ನಡೆಸಿದರು." ಮರುದಿನ ಭರತನು ರಾಮನೊಡನೆ

ತಂದೆಯಡಗಿದ ಬಳಿಕನೀನೇ
ತಂದೆ, ತಾಯ್ ಅನನಿ ತಾಯಲಿ
ಸಂಧಿಸುವರೆ ಮನವ ಮಕ್ಕಳು ಮರೆಯ ಮಾತೇನು
ಇಂದು ನೀವರಸಾಗದಿರೆ ತ
ಮ್ಮಂದಿರಲಿ ತಾನೊಬ್ಬ ನಿಮಗಿ
ಲ್ಲೆಂದು ಚಿತ್ತೈಸೆನುತ ಬಿನ್ನಹ ಮಾಡಿದನು ಭರತ.[2]

ಎಂದು ಹೇಳಿಕೊಂಡರೂ, ಕೈಕಾ ದೇವಿ ಕಂಬನಿ ತುಂಬಿ "ಹಿಂದೆ ನೆನೆದಪಕೃತವ ನೆರೆ ಮರೆದು ಪಾಲಿಸು ಧರೆಯ" ಎಂದು ವಿನಂತಿಸಿಕೊಂಡರೂ, ವಸಿಷ್ಠ ಸುಮಂತ್ರಾದಿಗಳು ಪ್ರಾರ್ಥಿಸುತ್ತಿದ್ದರೂ, ರಾಮನು ಅಧಿಕಾರಗ್ರಹಣಕ್ಕೆ ಒಲ್ಲದೆ "ಅನುಪಮ ನೀತಿ ಶಾಸ್ತ್ರದ ಸತ್ಯಪ್ರತಾಗಮದ ಅನುನಯೋಕ್ತಿಯಲಿ" ಅವರ ಮನದ ತೊಡಕನು ಬಿಡಿಸಿದನು. ಆಗ ಭರತನು ಶ್ರೀರಾಮನ ಪಾದುಕೆಯನ್ನು ನೀಡೆಂದು ಕೇಳಿ, "ಅವಧಿ ಕೊನೆಯಲಿ ನೀವು ಬಾರದಿರೆ ಈ ತನುವನನಲಂಗೆ

1. ತೊ. ರಾ. II ೬-೨೩
2. ತೊ. ರಾ. II ೬-೨೮

ನಿವೇದಿಸುವೆನು" ಎಂದು ತಿಳಿಸಿ, ಹಿಂದೆ ಸಾಗಿ, ನಗರವ ಹೊಗದೆ, ನಂದಿಗ್ರಾಮದಲಿ 'ಇಂದಿರೇಶನ ಪದಭಕ್ತಿ ಪರಮಾನಂದರಸಮಯನಾಗಿ ಧರಾತಳವ ಪಾಲಿಸಿದನು.'

## ಜಯಂತ ಶಾಪ ಮೋಕ್ಷ

ರಾಮನು ವನದೊಳಗೆ ಸಂಚರಿಸುತ್ತಿರಲು, ಅತ್ರಿ ವಚನದಂತೆ ತನಗೊದಗಿದ್ದ ಕಾಕರೂಪ ನಿವಾರಣೆಗೆಂದು ಜಯಂತನು ಸೀತೆಯ ಪದಸೋಂಕಿಗಾಗಿ ಆಕೆಯನು ಸಮಿಾಪಿಸಿದನು. ಸೀತೆಯು ವಾಯಸದ ಕ್ರೂರ ರೂಪಕ್ಕಂಜಿ ರಾಮನನ್ನು ತಬ್ಬಿಕೊಂಡಾಗ ಆ ಕಾಕಾಸುರನ ಪದನಖಧಾರೆ ಅವಳ ಭುಜದಲಿ ಬೀಳೆ, ರಾಮನು ತೃಣಾಸ್ತ್ರದಲಿ ಘಾತಿಸಿದನು. ಅಸ್ತ್ರವು ಬೆನ್ನಟ್ಟಿ ಬರುತ್ತಿರಲು, ಕಾಕಾಸುರನು (ಜಯಂತನು) ಬ್ರಹ್ಮ, ಇಂದ್ರ, ರುದ್ರರನ್ನು ಮರೆಹೊಕ್ಕರೂ 'ಆವ ದೇವರ ಮರೆಯ ಹೊಕ್ಕರು ಕಾವ ದೇವರ ಕಾಣೆ'[1] ಎಂದರಿತು ರಾಮನಿಗೇ ಶರಣಾಗಲು, ಆತನ ಒಂದಕ್ಷಿಯನು ಕೊಂಡು, ಎರಡು ಕಡೆಗೊಂದಾಲಿಯನು ವಿಸ್ತರಿಸಿ ಕಾಯ್ದನು. ಜಯಂತನು ಶಾಪಮುಕ್ತನಾಗಿ ಅಮರ ನಗರಿಯನು ಸೇರಿದನು.

### ಅರಣ್ಯಕಾಂಡ

## ಪಂಚವಟೀ ಪ್ರವೇಶ

ಅತ್ರಿಮುನಿಯ ಆಶ್ರಮದಲ್ಲಿ ಅನಸೂಯೆಯು ಸೀತೆಗೆ ಹೊಂದೊಡವುಗಳನ್ನಿತ್ತು ಉಪಚರಿಸಿದಳು. ಮುಂದೆ ರೌದ್ರರೂಪದ ವಿರಾಧನು ಮಾಯಾನರನ ಬಳಿಗೈದಲು, ರಾಮನು ಹೊಂಬರಹದಸ್ತ್ರದಲಿ ರಕ್ಕಸನ ಮಸ್ತಕವನಿಳುಹಿದನು. ಒಡನೆ ಶ್ರೀಪತಿಯ ದಯೆಯಿಂದ ವಿಶಾಪ ಹೊಂದಿ, ಅವನು ತುಂಬುರನೆಂಬ ರೂಪದಲಿ ಅಜಪುರಿಗೆ ಹಾಯ್ದನು.

ಶರಭಂಗ, ಸುತೀಕ್ಷ್ಣರ ಆಶ್ರಮಗಳನ್ನು ಸಂದರ್ಶಿಸಿ, ಮೂವರೂ ಅಗಸ್ತ್ಯನ ಆಶ್ರಮಕ್ಕೆ ಬಂದರು. ಆ ಮುನಿಯು ಇಂದ್ರನು ತನ್ನಲ್ಲಿರಿಸಿದ ಆಯುಧಗಳನ್ನು ರಾಮನಿಗಿತ್ತನು.[2] ಮುಂದೆ ಪಂಚವಟಿಯ ದಾರಿಯಲ್ಲಿ ಜಟಾಯು ಸಂದರ್ಶನ, ಅವನ ಸ್ನೇಹಲಾಭಗಳಾದವು.

ಗೋದಾವರಿ ತೀರದ ಪಂಚವಟಿಯಲ್ಲಿ ಪರ್ಣಮಂದಿರದಲ್ಲಿ ಮೂವರೂ ಇರತೊಡಗಿದರು. ಕ್ರೂರವಾದ ಹಿಮಸಮಯವು ಬಳಿಸಾರುತ್ತಿರಲು, ಅತ್ತ ನಂದಿಗ್ರಾಮದಲ್ಲಿದ್ದ ಭರತನಿಗೆ, "ಬಿಸಿಲು ಮಳೆಗಾಲವಿವು ರಘುಪತಿಗೆ ಸಂಭವಿಸಿತಲ್ಲ" ಎಂದು ಚಿಂತಿಸುತ್ತಿರಲು, ಜಾಬಾಲಿ ಮುನಿಯು 'ನಾನು ಹೋಗಿ ರಾಮನನ್ನು ಕಂಡುಬರುವುದಾಗಿ' ಹೊರಟು ರಾಮನ ಎಲೆಮನೆಯನ್ನು ಸೇರಿದನು. "ತನಗೆ ಜನನಿಯಂಘ್ರಿ ಸರೋಜ ಸೇವೆ ತಪ್ಪಿತಲ್ಲ ಎಂದು ಬಿಸುಸುಯ್ಯುತಿದ್ದ ರಾಮನಿಗೆ ನಳ ಚರಿತ್ರೆಯನ್ನೂ[3] ಹರಿಶ್ಚಂದ್ರೋಪಾಖ್ಯಾನವನ್ನೂ[4] ನಿರೂಪಿಸಿ, ಧೈರ್ಯ ಹೇಳಿ ಮುನಿಯು ಭರತನಿದ್ದಲ್ಲಿಗೆ ಮರಳಿದನು.

## ಶಂಬುಕ ವೃತ್ತಾಂತ

ಶೂರ್ಪನಖಿಯ ಮಗನಾದ ಶಂಬುಕನೆಂಬವನು ದಂಡಕಾರಣ್ಯದಲಿ ಸುರಪತಿತ್ವವ ಬಯಸಿ ಬಹಳ ಉಗ್ರ ತಪಶ್ಚರ್ಯೆಯಲ್ಲಿದ್ದನು. ಇದನ್ನರಿತ ಇಂದ್ರನು ನಾರದ, ಬೃಹಸ್ಪತಿಯರ ಮತದಂತೆ ಶಂಬುಕನ ಹರಣದಂತ್ಯಕ್ಕಾಗಿ ಇತರ ದೇವತೆಗಳೊಂದಿಗೆ ಕಿರಾತ ವೇಷ ಧಾರಣೆ ಮಾಡಿಕೊಂಡು, ರಾಮಾಶ್ರಮಕ್ಕೆ ಬಂದನು. ದುಷ್ಟ ಮೃಗಗಳ ಬಾಧೆಯನ್ನು ನಿವಾರಿಸಿಕೊಡಬೇಕೆಂದು ಮೊರೆಯಿಟ್ಟನು. "ವನವಾಸದ ತುದಿ ಪರ್ಯಂತ ಮೃಗ ಹಿಂಸೆಯಲಿ ಮನವ ಮಾಡೆವು," ಎಂದು ತಿಳಿಸಿದ ರಾಮನು ಬೇಟೆಗಾಗಿ ಲಕ್ಷ್ಮಣನನ್ನು ಕಳುಹಿಸಿದನು. ಇಂದ್ರನು ಉಪಾಯಾಂತರದಿಂದ ಹಂದಿಯ ಬೇಟೆಯ ನೆವನದಲ್ಲಿ ಲಕ್ಷ್ಮಣನಿಂದ ಶಂಬುಕ ವಧೆಯಾಯಿತು. ತನ್ನಿಂದ ಮುನಿವಧೆಯಾಯಿತು ಎಂದು

---

1. ತೊ. ರಾ. II ೭-೧೨
2. ತೊ. ರಾ. III ೧-೨೪
3. ತೊ. ರಾ. III ೨/೧೭-೨೫
4. ತೊ. ರಾ III ೨/೨೬-೩೦

ತಿಳಿದ ಲಕ್ಷ್ಮಣನು ದೇಹತ್ಯಾಗವೇ ತಕ್ಕ ಪ್ರಾಯಶ್ಚಿತ್ತವೆಂದು ನಿರ್ಧರಿಸಿ ತನ್ನ ಸುರಗಿಯಿಂದಲೇ ಎದೆಯನ್ನು ತಿವಿದು ಕೊಳ್ಳಲು ಮುಂದಾದಾಗ ನಾರದನು ಪ್ರತ್ಯಕ್ಷನಾಗಿ, ರಾಕ್ಷಸವಧೆಯಾಯಿತಲ್ಲದೆ ಮುನಿವಧೆ ನಡೆಯಲಿಲ್ಲ ಎಂದು ಎಲ್ಲ ವನ್ನೂ ವಿವರಿಸಿದನು.

## ಶೂರ್ಪನಖಾ ಪ್ರಕರಣ

ತನ್ನಮಗ ಶಂಬುಕನು ಹತನಾದುದನ್ನು ಕಂಡು ಶೂರ್ಪನಖಿಯು ಹಲ್ಲುಗಳ ಮಸೆಯುತ ರಾಮನ ಪರ್ಣಮಂದಿರ ವನ್ನೈದಿದಳು. ಆಗ ರಾಮನು ನಿಜನಾರಿ ಸಹಿತ ದ್ಯೂತ ಕೇಳಿಯಲ್ಲಿದ್ದನು. ರಾಮನ ಕಾಯಕಾಂತಿ ರಕ್ಕಸಿಯ ವೈರಭಾವವನ್ನು ಕರಗಿಸಿ ಕಾಮಭಾವವನ್ನು ಮೂಡಿಸಿದುದು. ಒಡನೆಯೆ ಅವಳು ರಾಕ್ಷಸರೂಪವನ್ನು ಕಳೆದು, ಮಾನವ ವಿಲಸಿತಾಂಗದ ರೂಪ ಕೈಗೊಂಡು, ಸುಳಿದಳೆದುರಿನಲಿ. ರಾಮನು ಆಕೆಯ ಅಪೇಕ್ಷೆಯನ್ನರಿತು, ತನ್ನ ಏಕಪತ್ನೀವ್ರತದ ಕಾರಣವನ್ನು ಹೇಳಿ, ತಮ್ಮನಿದ್ದಲ್ಲಿಗೆ ಅವಳನ್ನು ಕಳುಹಿಸಿದನು.

ಲಕ್ಷ್ಮಣನೆದುರು ಅವಳು ಮನೋಜ ಜನ್ಯ ವಿಲಾಸ ವೈಖರಿಯನ್ನೆಲ್ಲ ಪ್ರದರ್ಶಿಸಿದಳು.

ನೇಮವಾಯ್ತೆನಗಸಿತಕುಮುದ
ಶ್ಯಾಮನಿಂ ಕಗ್ಗೊಲೆಯ ಕಾಮನ
ಕೈಮೆಯನು ಕಳಲಿಸು ಕಟಾಕ್ಷದ ಕರುಣಭಾವದಲಿ[1]—ಎಂದರೂ ಎಲ್ಲವೂ ವ್ಯರ್ಥವಾದುದು.

ಕೆರಳಿದ ರಕ್ಕಸಿಯು "ತಿಂಬೆನಿವದಿರ ನೀ ಅಂಬುಜಾಕ್ಷಿಯ ಕೊಂಡೊಯ್ದು ರಾವಣನಿಗೆ ಕೊಡುವೆ" ಎಂದು ಮುಂದಾ ಗಲು, ಲಕ್ಷ್ಮಣನು ಅವಳ ಗಂಟಲು ಕತ್ತರಿಸಲು ಮುನ್ನುಗ್ಗಿದಾಗ, ರಾಮನು ತಡೆದು, "ಚೆಲುವತನವನು ತೋರಿ ನಿನ್ನನು ಒಲಿಸಬಂದವಳನು ವಿರೂಪಮಾಡು, ಕೊಲುವುದು ಅನುಚಿತ" ಎನಲು ಲಕ್ಷ್ಮಣನು ಅವಳ ನಾಸಿಕವನುದ್ದ ಕೆ ಬಳಚಿದನು. ಕರ್ಣದ್ವಯದ ಬೆಸುಗೆಗಳ ಕಳಚಿದನು.

ರಕ್ಕಸಿಯ ನಾಸಾಚ್ಛೇದವೇ ಭೂಭಾರ ವಿಚ್ಛೇದನ ಪ್ರಾರಂಭವೆಂಬಂತೆ, ನಂತರ ಖರ, ದೂಷಣ, ತ್ರಿಶಿರ ಮತ್ತು ಅಸಂಖ್ಯ ದಾನವರ ವಧೆ ಶ್ರೀರಾಮನಿಂದ ನಡೆಯಿತು. ಶೂರ್ಪನಖಿಯು ಖರಾಸುರನ 'ಹೇಸಿಕೆ ಹೊನಲಿಡುವ ಹಂದಲೆಯನ್ನು' ಹಿಡಿದುಕೊಂಡು ಲಂಕೆಗೆ ನುಗ್ಗಿದಳು. ಅಲ್ಲಿ, "ನಿನ್ನ ಅಂತಃಪುರದ ಹದಿನಾಲ್ಕು ಲಕ್ಷಸಂಖ್ಯೆಯ ಹೆಣ್ಣುಗಳೆಲ್ಲ ಸೀತಾರತ್ನದಮುಂದೆ ಗಾಜಿನ ಮಣಿಗಳಂತೆ ಎಂದಳು." ರಾವಣನಿಗೆ ಜಾನಕಿಯನೆನಹಿಗೆ ಸ್ಮರಶರಗಳು ಒಳತೋಟಿಯಲಿ ನಾಟಿದುವು. ಘೋಟಕದ ಹೊಂದೇರಿನಲಿ ಅರಮನೆಯನು ಹೊರವಂಟ. ಆಗ ಶೂರ್ಪನಖಿಯು "ಅಳಿ ಬಲರು-ನರರೆಂದು ಸಮ್ಮುಖಕೆ ಸಮೀಪಕೆ ಸಾಗದಿರು, ಕೈತವದಿಂದ ಕೈಕೊಳಿಸಿ ಕಮಲಾನನೆಯ ಕಳವಿನಲಿ ಸೆಳೆ ವುದು, ಮಾತುಳನಲಿ ಮತವರಿಯುವುದು" ಎಂದು ಅಣ್ಣನನ್ನು ಎಚ್ಚರಿಸಿದಳು.

## ಮಾರೀಚ—ಮೃಗ

ಜಪ ಸಮಾಧಿಯಲ್ಲಿದ್ದ ಮಾರೀಚನಿಗೆ ತನ್ನಲ್ಲಿಗೆ ಬಂದ ರಾವಣನ ಉದ್ದೇಶ ತಿಳಿಯಿತು. "ನಿಶಾಟ ಪ್ರಕಟ ವಂಶಾರಣ್ಯದಲಿ ಪಾವಕನ ಪಸರಿಸಬೇಡ, ಪೌಲಸ್ತ್ಯ ವಂಶದ ಮೆರೆವ ಜಸ್ವನ ಜಾಣವನಿತೆಯ ತುರುಬ ಬೋಳಿಸಬೇಡ, ರಾಮನಲಿ ವೈರ ಬೇಡ," ಎಂದು ಹಿತನುಡಿದಾಗ, ಕತ್ತಿಹಿರಿದು ಕೊಲ್ಲುವುದಾಗಿ ರಾವಣನು ಬೆದರಿಸಿದನು. ಆಗ ಮಾರೀಚನು ಉಪಾಯಗಾಣದೆ "ಅಸುರಾರಿಗೆ ಅಸುವನು ಸಮರ್ಪಿಸುವೆನೆಂದು ನಿಶ್ಚಯಿಸಿಕೊಂಡನು. ಇಬ್ಬರೂ ರಾಮಾಶ್ರಮವನ್ನು ಸಮೀಪಿಸಿದಾಗ," ನಳಿನಮುಖಿ ಕೈಸಾರುವ ಮತವನರುಹಬೇಕೆಂದು ರಾವಣನು ತನ್ನ ಮಾವ ನಂಘ್ರಿಯಲ್ಲಿ ಬಿದ್ದನು. ಮಾರೀಚನು ರಾವಣನಿಗೆ ತಾಪಸ ವೇಷವನು ತಾಳುವಂತೆ ಸೂಚಿಸಿ ತಾನು ಹೊಮ್ಮರಿಯ ರೂಪವನು ಹೊಂದಿದನು.

---

1. ತೊ. ರಾ. III ೪-೧೭

ಇಳಿದುದೋ ಚಂದ್ರಮನ ಸಾಂದ್ರೋ
ಜ್ಜ್ವಲ ಸುಚಂದ್ರಿಕೆಯನು ನಭೋಮಂ
ಡಲದೊಳಗೆ ಕದ್ದಮಮ ಪೂರ್ಣ ಸುಧಾಂಶು ಮೃಗವೆನಲು
ಸುಳಿದುದಾ ಮೃಗ ಪೋತ ಪರಿಮಳ
ಮಿಳಿತ ತೇಜೋಲತೆಯ ತರಿತರಿ
ದಿಳುಹುತವನೀನಂದನೆಯ ಪೂಗೊಳನ ಹೊರೆಗಾಗಿ.[1]

ಆ ಹೊನ್ನ ಜಿಂಕೆಯನ್ನು ಕಂಡ ಸೀತೆ ಅದನ್ನು ಬಯಸಲು ಮಾಯಾನರನು ತನ್ನಲ್ಲೀ "ಈ ಸತಿಯು ಮಾಯೆಯಲ್ಲಿ ಉದಿಸಿ ರಕ್ಕಸರ ಮತಿಗೆಡಿಸಿ ಕೆಡಿಸಿದಳು, ಇನ್ನು ಅಸುರ ಕುಲ ಮಾಯವಹುದು" ಎಂದು ತರ್ಕಿಸಿದನು. ಸೀತೆಯ ಬಯಕೆಯನ್ನು ಅಲ್ಲಗಳೆಯಲಾರದೆ, ಲಕ್ಷ್ಮಣನು "ಕಪಟವಿದು" ಎಂದು ಎಚ್ಚರಿಸಿದರೂ ಕೇಳದೆ ಮಾಯಾ ಮೃಗವನ್ನು ಹಿಡಿಯಲು ಹೊರಟ ಶ್ರೀರಾಮನು ಅದನ್ನು ಬಹಳವಾಗಿ ಹಿಂಬಾಲಿಸಿ, ಬಳಲಿ, ಕೊನೆಗೆ, ಬಾಣವೆಸೆಯಲು, ರಾವಣನಿಗೆ ಸನ್ನೆಯೆಂಬಂತೆ 'ಹಾ, ಸುಮಿತ್ರಾಸೂನು, ಹಾ! ಸೀತಾ, ಸರೋರುಹಾನನೆ' ಎಂದು ಕೂಗುತ್ತ ಮಾರೀಚನು ಇಳೆಗೊರಗಿದನು.

### ಧರಣಿಜೆಯ ಬಿರುನುಡಿ

ಮಾರೀಚನ ಆರ್ತ ನಾದವನ್ನು ಕೇಳಿ ಸೀತೆಯು ಲಕ್ಷ್ಮಣನೊಡನೆ, "ಭೂಪಾಲನೇನಾದನೊ ಓಲೆಗಸ್ಥಿರವಾಗದಲೆ? ಮಹಾಗ್ನಿ ಜಠರದೊಳೇಳುತಿದೆ" ಎನ್ನಲು ಲಕ್ಷ್ಮಣನು ಅತ್ತಿಗೆಯ ನಿಷ್ಕಾರಣವಾದ ಸಂಶಯಗಳಿಗೆ "ಉತ್ತರಗೊಡಲರಿಯದೆ ಬಾಗಿದನು ಶಿರವ". ಆಗ, ಸೀತೆಯು ರಾಮಾನುಜನ ಮೌನವನ್ನು ಅಪಾರ್ಥಮಾಡಿಕೊಂಡು, "ರಾಘವನ ಮರಣದ ನುಡಿ ನಿನಗೆ ರಂಜಕವೇ?....ವಿಷವ ಕೊಂಬೆನು ಅಥವಾ ಈ ವಸತಿಗುರಿಯನು ಚಾಚಿ ಬಿಸುಡುವೆನು ಜೀವನನು, ಘಾತೋದಕದ ಕೂಪದಲಿ ಬೀಳುವೆನು ನಿನ್ನ ಚಿತ್ತವನರಿದೆನು, ಅನ್ಯರಿಗೆ ಸಿಲುಕುವೆನೆಂದು ಬಗೆಯದಿರು, ರಸನೆಯನು ಕಿತ್ತು ಅಸುವನು ನಿನಗೊಪ್ಪಿಸುವೆನು,...." ಎಂದೆಲ್ಲಾ ನುಡಿಯಲು, ಅವುಗಳನ್ನು ತಾನು ಕೇಳಲಾರದೆ, ಅವನು 'ರಾಮರಾಮ' ಎನುತ ಕರಯುಗದಲಿ ಕಿವಿಯನು ಮುಚ್ಚಿದನು. "ರಾಮನಳಿದರೆ ಕಮಲಭವಸುತ್ರಾಮರುಳಿವರೆ? ಕೈರವ ತಾಮರಸಬಾಂಧವರು ನಭವ ಬೆಳಗುವರೆ? ಆ ಆದಿಪುರುಷನ ಬಗ್ಗೆ ನಿನಗೆ ಸಂದೇಹಸಲ್ಲದು", ಎಂದರೂ, ಸೀತೆಯ ಸಂಶಯ, ಚುಚ್ಚುನುಡಿಗಳು ನಿಲ್ಲದಿರಲು, "ತಾಯೆ ಕೇಳು, ಅರೆಘಳಿಗೆಯಲಿ ರಾಯನನು ತಹೆ. ತಾರದಿರ್ದಡೆ ರಾಮನಂಘ್ರಿಗಳಾಣೆ, ಪುಸಿದಡೆ ನಿಮ್ಮ ಪದದಾಣೆ" ಎನ್ನುತ್ತಾ, "ಮೇದಿನೀಶಬಹನ್ನವರ ಮೇದಿನೀ ನಂದಿನಿಯ ಕಾದು ಕೊಂಡಿರಿ" ಎಂದು ಮಹೀಜಲವಾದಿ ಭೂತಂಗಳಿಗೂ, ಮಿಕ್ಕಿನ ದೇವ ಸಂತತಿಗೂ ಅಭಿವಾದನಂಗೈದು. ಆಯುಧಪಾಣಿಯಾಗಿ ಲಕ್ಷ್ಮಣನು ಆಶ್ರಮವ ಹೊರವಂಟನು.

### ರಾವಣ ಸನ್ಯಾಸಿ

ಈ ಸಂದರ್ಭವನ್ನೇ ಕಾಯುತಿದ್ದ ರಾವಣನು ಕಪಟ ರೂಪಿನ ಯತಿಯಾದನಾಕ್ಷಣದಿ.

ಶಿರದಮುಂಡನದಕ್ಷಮಾಲೆಯ
ಕರದ ದಂಡು ಕಮಂಡಲದ ಬಂ
ಧುರದ ಕಾಷಾಂಬರದ ಕೌಪೀನದ ಕಳೇವರದ
ಜರೆಯ ಜರುಗಿದ ಬೆನ್ನಿನಲುಗುವ
ಶಿರದ, ಶೂಲಿಯ ಸಟೆಯ ನಾಮ
ಸ್ಮರಣೆಯಲಿ ನೈದೋರಿದನು ಮಹಿಳಾ ಶಿರೋಮಣಿಗೆ.[2]

---

1. ತೊ. ರಾ. III ೮-೧೮
2. ತೊ. ರಾ. III ೯-೧೭

ಆದರೆ ಆ ಪಾತಕನ ಭೂಜಾತೆ ಯತಿಯೆಂದೇ ಬಗೆದಳು. "ನೀವೆಲ್ಲಿಂದ ಬಂದಿರಿ ? ಬಿಜಯಮಾಡಿರಿ" ಎಂದು ಸ್ವಾಗತಿಸಿದಳು. "ಯಜಮಾನನಿಲ್ಲದ ಗೃಹವು ನಮಗೆ ಅಸ್ವಾಪ್ಯವು, ಸಂಧ್ಯಾಹಿತಕೃತ್ಯಕೆ ಠಾವು ಸಾಕು"–ಎಂದನು ಕಪಟಯತಿ. "ನಮ್ಮಯ ಜನಕಬಂದವೊಲಾಯ್ತು, ಬಿಜಯಮಾಡಿ ·ಗೃಹಾಂತರಾಳಕೆ. ಭಾವಿಸಲು ಭವದಾತ್ಮ ಜೆಯಲಾ. ಕುಳ್ಳಿರಿ, ವಿಜಯರಾಮನನಗಲ್ದ ಚಿಂತಾ ರಜನಿಗೆ ತಮ್ಮ ಪದ ಪಂಕಜ ಪತಂಗೋದಯದ ಬೆಳಗಾದುದು." ಎಂದಳು ಸರೋಜಮುಖಿ.

### ಸೀತಾಪಹಾರ

ಪರ್ಣಮಂದಿರದ ಒಳಹೊಕ್ಕ ಕಪಟಸನ್ಯಾಸಿಯೊಡನೆ, ಕುಶಲ ಪ್ರಶ್ನೆ ನಡೆಯುವಷ್ಟರಲ್ಲಿ, ಯತಿಯ ಯೋಗದ ಜಿನುಗು ಜಾರಿತು. ಅಡಗಿತಾಕ್ಷಣ ದಂಡು. ಸಡಿಲಿಹೋಯಿತು ಕರಮುಂಡಲ, ಬೆರಳನಾಮ–ಸ್ಮರಣೆಗಳ ಮಿಡುಕು ನಿಂದುದು. ಜರೆಯ ಜಾಡ್ಯದ ತೊಡಹು ಸಿಡಿದು ಹಾರಿತು. ಅರ್ಧವಯೋವಿಲಾಸದ ಜಡೆಯ ತಾಪಸಿಯಾಗೆ ಮನದಲಿ ಹೆದರಿದಳು ಸೀತೆ. ಆಕೆಯ ಸೌಂದರ್ಯಸುಧಾಪಾನ ಮಾಡುತ್ತಾ, ರಕ್ಕಸನು

> ಎಲೆ ಪಯೋಧರಭಾರೆ, ಶಶಿಮಂ
> ಡಲನಿಭಾನನೆ, ಪೀನ ಜಘನ–
> ಸ್ಥಳೆ, ಸರೋರುಹನಯನೆ, ಸಿಂಧುರಗಮನೆ, ಶುಕವಚನೆ,
> ಲಲಿತಚಂದನಗಂಧಿ, ಕೇಳೀ
> ಗಳು ಮಹಾಮಾರೀಚನೆಂಬ
> ಗ್ಗಳದ ಮಾಯಾಮೃಗದಲಲೆದನು ರಾಮನೆಂಬ ನೃಪ.[1]

"ರಾಮನನು ಶಾತಕುಂಭ ಕುರಂಗದೆಡೆಗೇಕೆ ಕಳುಹಿದೆ ?....ಅಂತೂ ನಾವಿನ್ನು ಹೋಗಿಬಹೆವೇ ?" ಎನ್ನುತ್ತಾ ಅನು ರಾಗದಲಿ ನಿಂದಿರಲು, ಇವನು ಕಾಮುಕನಾಗದಿರನು ಎನುತ ಸೀತೆ ಕಳವಳಿಸಿದಳು. ಅಷ್ಟರಲ್ಲಿ ರಾವಣನು "ದಶಮೌಳಿ ಗಳ, ಉಬ್ಬುಗೊಬ್ಬಿನ ಬಾಹುದಂಡಗಳ, ನೀಲಮೇಘನಿಭಾಂಗದ, ಉರುದಂಷ್ಟ್ರಾಳಿಗಳ, ಮಣಿಕಾಂಚನದ ಮಕುಟಾವಳಿ ಗಳ, ವಿವಿಧ ಆಭರಣದಭಿನವ ರೂಪಕವ" ತೋರಿದನು. ಸುರರ ಬಿರುದಿನ ಹಾಹೆಗಳ, ಸುರುಚಿರ ಶೋಣಾಂಬರದ, ರಾಕ್ಷಸನು ಜವ್ವನ ಹೊರೆ ಹೊಗರಿನ ಸ್ಮರವಿಕಾರದ ನೋಟವನ್ನು ಬೀರಿ ತಾನಾರೆಂದು ತಿಳಿಸಿದನು. "ಎಲವೊ ಪಾತಕಿ, ಹೊಲೆಮ ಹೊರವಡು" ಎಂದು ನಳಿನಮುಖಿ ಬೈದು ಒಳಗುಗೊಡದಿರೆ, ರಾವಣನು ಕಾಂತೆಯ ಕಬರಿಯನು ಹಿಡಿದು ಅಂಗಳಕೆ ಎಳೆದನು.

"ಬೇಡ ಬೇಡ ಎಂಬಂತೆ ಮರನಲ್ಲಾಡುತಿರ್ದುದು, ಖಳನ ಮಸ್ತಕವ ಖಗ ಮೃಗವೀಡಿರಿದು ಹೊಯ್ದವು. ಅಪ ಶಕುನಗಳು ತೋರುತ್ತಿದ್ದರೂ, ಲೆಕ್ಕಿಸದೆ ರಕ್ಕಸನು ಸೀತೆಯನು ಎಳೆದೊಯ್ದು ರಥದಲಿ ಜೋಡಿಸಿದನು. ನಾರಿಯ ಹಾಹಾಕ್ರಂದನ ಅಂಬರವ ತುಂಬಿತು.

### ಜಟಾಯು–ಮರ್ಮ–ವಂಚನೆ

ಸೀತೆಯ ಮೊರೆಯು "ವಿಹಂಗಮ ಭಾಳನೇತ್ರನಾದ ಜಟಾಯುವಿಗೆ ಕೇಳಿಸಿ, ಅವನು ರಕ್ಕಸನನ್ನು ಎದುರಿಸಿದನು. "ಆರೆಲವೊ ಜಗದಂಬಿಕೆಯನು ಜೋರತ್ವದಲಿ ಕೊಂಡು ಹೋಹನು ?" ಎನ್ನುತ್ತಾ ರಥದ ಮೇಲೆ ಲಂಘಿಸಲು, "ಕಡಲ ಸುಳಿಯಲಿ ಸಿಕ್ಕ ತಿರುಗುವ ಹಡಗಿನಂತಾಯಿತು ಆ ಅಸುರನ ತೇರಿನ ಪರಿ. ಹಕ್ಕಿಯ ಹೊಡೆತಕ್ಕೆ ರಕ್ಕಸನು ತತ್ತರಿಸಿ, ಕೊನೆಗೆ "ಮಾಯೆಯನ್ನಾಶ್ರಯಿಸಿ, ಪಕ್ಷಿಯ ಮರ್ಮವನ್ನರಿತು ಕೊಂಡು, ತನ್ನ ಮರ್ಮವು ಚರಣತಳ ಎಂದು ವಂಚಿಸಿ ನಿಸ್ತ್ರಿಂಶಕದಲಿ ರೆಕ್ಕೆಗೆ ಹೊಡೆಯಲು, "ರಾಮ ನೀನೇ ಗತಿ" ಎನ್ನುತ್ತಾ ಜಟಾಯುವು "ಮಥನದಗ್ರದ ಪೃಥುಳ ಗಿರಿ ಯಂತೆ ಬಿದ್ದನು."

---

1. ತೊ. ರಾ. III ೯–೩೨

**ತಾಪವನು ಹಿಂಗಿಸುವ ಅಶೋಕವನದತ್ತ....**

ರಾಕ್ಷಸ ರಥ ಮುಂದೆ ಸಾಗುತ್ತಿತ್ತು. ಋಷ್ಯಮೂಕಗಿರಿಯಲ್ಲಿ ಕೆಲವು ಕಪಿಗಳನ್ನು ಕಂಡು "ತನ್ನಾಭರಣ ಗಳನ್ನು ಸಡಿಲಿಸಿ, ಸೀರೆಯಗ್ರವ ಸೀಳ್ದು ಕಟ್ಟಿ ಸುಗ್ರೀವನಿದ್ದೆಡೆಗೆ ಸೀತೆಯು ಎಸೆದಳು. "ಬಳಿಕಾ ರವಿಜಂಗೆ ಖಳನಂಜಿ, ಅವರ ವಂಚಿಸಿ, ಅಭ್ರಕೆ ಹಾಯ್ದನು–ರಾವಣ. ಮುಂದೆ ಸುಪಾರ್ಶ್ವನು ಅಡ್ಡೈಸೆ ಮಾಯೆಯನಾಶ್ರಯಿಸಿ ಕಾಲಡಿಯ ನುಸುಳಿ ಹಾಯ್ದು, ಉದಧಿಯ ದಾಂಟಿ ನಿಜಪುರವ ಸೇರಲು ಅಲ್ಲಿ ಹಲವು ಅಪಶಕುನಗಳಾದುವು. ಮಯತನುಜೆ ಆಕ್ಷೇಪಿಸಿದಳು. ರಾವಣನು ಲೆಕ್ಕಿಸಲಿಲ್ಲ. ಕೊನೆಗೆ ನಿಶಾಚರ ಗುರು ವಚನದಂತೆ ಸೀತೆಯನು "ತಾಪವನು ಹಿಂಗಿ ಸುವ ಅಶೋಕೆಯ ತೋಪಿನಲಿ, ತ್ರಿಜಟೆ, ಸರಮೆಯರ ಕಾಪಿನಲಿರಿಸಿದನು."

**ಸೀತೆ ! ಸೀತೆ ! ಸಮುದ್ರಸುಮನೋಜಾತೆ !!**

ಇತ್ತ, ತನ್ನೆಡೆಗೆ ಬರುತಿದ್ದ–ಲಕ್ಷ್ಮಣನನ್ನು ಕಂಡು, ರಾಮನು ತನ್ನಲ್ಲೇ "ಮಡದಿಯನು ನಾವಿನ್ನು ಕಾಬುದು ಹುಸಿ" ಎಂದು ಚಿಂತಿಸಿದನು. ಜತೆಯಾಗಿ ಹಿಂದಿರುಗಿ,

ಕಳೆಗಳಳಿದ ಹಿಮಾಂಶುಬಿಂಬದ
ಹೊಳಹಿನವೊಲಳಿಗಬ್ಬಿಗನ ಹೆ
ಕ್ಕಳದ ಕೃತಿಯವೊಲುಬ್ಬರದ ಜವ್ವನದ ಜಾಣುವೆಯ
ಸುಳಿವು ಸಡಿಲಿದ ಸತಿಯ ರತಿಯವೊ
ಲಿಳೆಯನಂದನೆಯಿಲ್ಲದಾ ದಳ
ನಿಳಯವಿರೆ ಕಂಡಿವರು ಕಳವಳಿಸಿದರು ಕರಣದಲಿ.[1]

ಅವರಿಬ್ಬರೂ ಹಲವೆಡೆಗಳಲ್ಲಿ ಸೀತೆಯನ್ನರಸಿದರು. ರಾಮನು "ದೀಧಿತಿಯಿಲ್ಲದ ಇನನುಂಟೇ ? ವನಜವಿಲ್ಲದ ಕೊಳ ನುಂಟೆ ? ವರವಾಹಿನಿಗಳಿಲ್ಲದ ವಾರ್ಧಿಯುಂಟೆ ?....ಹಾಗೆಯೇ ಸೀತಾಮಾನಿನಿಯಿಲ್ಲದ ರಾಮನುಂಟೆ ?" ಎಂದು ಹಲುಬಿ ದನು. "ಈ ನರರಾಯತದ ನುಡಿ ನಿಮಗೇಕೆ ? ನೀ ನಾರಾಯಣನಲಾ ? ಮಾಯದಭಿರಂಜನೆಯ ನುಡಿ ರಮಣೀ ಯವೇ ?" ಎಂದು ಲಕ್ಷ್ಮಣನುನುಡಿಯುತಿದ್ದರೂ ರಾಮವಿಲಾಪ ನಿಲ್ಲಲಿಲ್ಲ. "ವನಜವನು ಕಂಡರಸ ವನಜಾನನೆಯ ಕಂಡಿರೇ ? ಕೈರವವನು ಕಂಡು ಕೈರವಾಕ್ಷಿಯ ಕಂಡಿರೇ ?....ಹಂಸೆಯಕಂಡು ಹಂಸಗಮನೆಯ ಕಂಡಿರೇ ?....ಎಲೆಲೆ ಮಾಲತಿ ಜಾತಿ ಕೇತಕಿ ನೀವು ಅನೋದ ಭಾರಾಕಲಿತ ಲಲಿತಸ್ಮಿತ ಲತಾಂಗಿಯ ಕಂಡಿರೇ ?...."–ಹೀಗೆ ಪ್ರಲಾಪ ಮುಂದುವರಿಯಿತು. "ಮಿಸುಪ ಚಂದ್ರೋಪದಲುರೆ ಬಿಂಬಿಸುವ ತನ್ನಯ ರೂಹನೇ ತನ್ನರಸಿಯೆಂದು ಭ್ರಮಿಸಿ ಅಡಿ ಗಡಿಗೆ ಮಾತನಾಡಿಸುವನು, ಸೀತೆ, ಸೀತೆ, ಸಮುದ್ರಸುಮನೋಜಾತೆ, ಓ ಎಂದೆನಲು ಬಾರದೇ ?...." ಎಂದು ವಿಲಾಪಿ ಸುತ್ತಾ ಕುಸುಮಶರವಿರಹಾಗ್ನಿಯಲಿ ರಾಮನು ಬೆಂದನು, ನೊಂದನು.

**ಪಂಪಾ ಶ್ರೀನಿವಾಸನ ಸನ್ನಿಧಿಗೆ**

ರಾಮ ಲಕ್ಷ್ಮಣರಿಬ್ಬರೂ ಸೀತೆಯನ್ನರಸುತ್ತಾ ಸಾಗುತ್ತಿರುವಂತೆಯೇ, ದಾರಿಯಲ್ಲಿ ಬಿದ್ದಿದ್ದ "ಸತಿಯ ಸೋರ್ಮು ಡಿಯಕಂಡು, ಹೊಲಬುದಪ್ಪದೆನುತ, ಮನದಲಿ ಹಲವನೆಣಿಸುತ, ಬರಬರಲು, ರಘುರಾಮ ಸ್ಮರಣೆಯ ಕಲಿ ಜಟಾಯು ವನ್ನು ನೋಡಿದರು. ಅವನು ರಾವಣನಿಂದ ಸೀತಾಪಹಾರವಾದ ಹದನನ್ನು ಹೇಳಿ ಅಕ್ಷಿಗಳನ್ನು ಮುಗಿಯುವಷ್ಟರಲ್ಲಿ, ರಾಮನು "ಜಟಾಯು ನೀನು ಸ್ವರ್ಗಕ್ಕೆ ಹೋಗಿ ದಶರಥನಿಗೆ ಈ ಸುದ್ದಿಯನ್ನರುಹಬೇಡವೆಂದೂ, ಅಬಲೆಯನೊಯ್ದ ವನೇ ಹತನಾಗಿ ದಿವಿಜಪತಿ ಸಭೆಯಲಿ ಆದನರುಹಲಿ" ಎಂದು ಕೇಳಿಕೊಂಡನು. ಹಕ್ಕಿಯ ಊರ್ಧ್ವಕ್ರಿಯೆ ನೆರ ವೇರಿಸಿ, ಮುಂದೆ ಸಾಗುತ್ತಿರಲು ಎದುರಾದ ಶೂರ್ಪನಖೀ ಕುಮಾರಿ ಅಯೋಮುಖಿಯನ್ನು ಲಕ್ಷ್ಮಣನು ಆಕೆಯ ಜನನಿ ಯಂದನೇ ಮಾಡಿದನು. ಅವರು ಕಬಂಧೋದ್ಧಾರಗೈದು 'ಕುಂತಳದ ಕಮನೀಯ ಮಂಡಲಕೆ' ಬಂದರು.

---

1. ತೊ. ರಾ. III ೧೧-೮

ಕುಂತಲದಲ್ಲಿ ಶಬರಿಯಿಂದ "ಪಂಪಾ ಕ್ಷೇತ್ರಕ್ಕೆ ನಡೆದರೆ ಕಾರ್ಯಸಿದ್ಧಿಯಾಗುವುದು" ಎಂದರಿತರು. ತುಂಗ ಭದ್ರೆಯನ್ನುತ್ತರಿಸಿ, ಪಂಪಾ ಶ್ರೀನಿವಾಸನ ಕಂಡು ಮುನ್ನಡೆಯುತ್ತಿರುವಲ್ಲಿ "ವಿಯೋಗಿಗಳ ಆನನದ ಮೇಲೆ ಅಸಿಯನು ಎಳೆಯುತ ಅನುಪಮ ಕುಸುಮಮಯಸಮಯ ಸುಳಿದುದು. ರಾಮನು 'ಅರಸಿ ಸೀತೆಯ ನೆನೆದು ಹುಟ್ಟಿದ ವಿರಹ ಶಿಖಿಯುಬ್ಬರದ ತಾಪಕೆ ತರಹರಿಕೆ ತೋರದೆ, ಸರೋವರದೊಳಗೆ ಮಂಡಿಸಿದ.' ಲಕ್ಷ್ಮಣನು ತನ್ನಣ್ಣನನ್ನು "ರಘು ಕುಲದರಸುಗಳು ಕಾಮುಕರೇ? ವಿಕಳಮತಿಗಳೆ? ಅವರು ಲಲನಾ ಜನಂಗಳ ವಿಷಯದಲಿ ಯುಕ್ತಿವಿದರು. ನಿನಗೇಕೆ ಈ ಭ್ರಾಮಕಪರಿಗ್ರಹ?" ಎಂದು ಎಚ್ಚರಿಸಿ, ಮೆಲ್ಲನೆ ಕೊಳನ ತೀರಕೆ ತಂದು ನಯಮುಖದಿಂದ ತಾಪವನು ಬಿಡಿಸಿದನು.

## ಕಿಷ್ಕಿಂಧಾಕಾಂಡ

### ಹನುಮ ಮೈದೋರಿದನು ರಘುಪತಿಗೆ

ಸುಗ್ರೀವನು ತಾನು "ಒಡ್ಡೋಲಗದೊಳಿದ್ದು ದೂರದಿಂದಲೇ ಚಂಡಕರಕುಲಕಮಲನನ–ಮಾರ್ತಾಂಡರನು ಕಂಡು, ಪಿನಾಕಧರ ವಿಕ್ರಾಂತನೂ, ಐಂದ್ರ ವ್ಯಾಕರಣ ಕೋವಿದನೂ, ಸಕಲಸ್ಮೃತಿ–ಕಲಾವಿದನೂ, ಜಗದೇಕವೀರನೂ, ಉದಾರ ಗುಣರತ್ನಾಕರನೂ ಆದ ಹನುಮಂತನನ್ನು ಕರೆದು ನೋಡಿ ಬಾ ನರೇಂದ್ರರ ಮನಸ್ಥಿತಿಯನರಿ ಎಂದು ಪ್ರೇಷಿಸ್ಲಿ ದಂತೆ ಆಂಜನೇಯನು ಯತಿರೂಪದಲಿ ನರರೂಪಿನ ಅಚ್ಯುತನ ಸಾರಿದನು.

ರಾಮನು ತನ್ನ ವ್ಯಥೆಯ ಕಥೆಯನ್ನು ತಿಳಿಸಲು, ಹನುಮನು ತನ್ನ ಪರಿಚಯ ಹೇಳಿದನು. ನಂಬಿಕೆ ಮೂಡುವುದ ಕ್ಕಾಗಿ 'ಲಯದಿನದ ವಿರೂಪಾಕ್ಷಂಗೆ ಪಡಿಯೆನೆ ಬಳೆದನು. "ಥಳಥಳಿಸಿತಿನಬಿಂಬ ನಾಭೀ ವಳಯದಲಿ ನಭ ಅವಳ ತಾರಕಿ ತೊಳಗಿದವು ತುದಿಮಸ್ತಕದಲಿ ಉತ್ತಾನ ಪಾದಜನನಿಲಯದಲಿ ಲಾಂಗೂಲ ಲಂಬಿಸಿತು. ಒಲೆದುದು ಇಳೆ, ದಿಗುವಳಯ ಬಂಧದ ಹೊಲಿಗೆಹರಿಯಲು" "ಮೈದೋರಿದನು ಹನುಮ."

### ಇನ್ನೇನೊತ್ತಿ ನೋಡುವುದುಂಟೇ

ರಾಮಲಕ್ಷ್ಮಣರು ಮಾರುತಿಯ ಜತೆಯಲ್ಲಿ ಹೊರಟರು. ಅವರನ್ನು ಸ್ವಾಗತಿಸಿದ ಸುಗ್ರೀವನು, ಸೀತೆಯು ಬಿಸುಟ ಆಭರಣಗಳ ಗಂಟೊಂದನ್ನು ಕಾಣಿಕೆಯಾಗಿ ಅರ್ಪಿಸಿದನು. ಆ ಆಭರಣಗಳನ್ನು ನೋಡುತಿದ್ದಂತೆ ಕಂಬನಿ ದುಂಬಿ, "ಕೊಳುಗುಳದೊಳರಿಭಟನ ಜೀವನ ಸೆಳೆದು ಸೀತೆಯ ತಂದ ಬಳಿಕವೇ ಎನಗೀವುದು" ಎಂದು ರಾಮನು ಆ ಗಂಟನ್ನು ಸುಗ್ರೀವನಿಗೆ ಮರಳಿಸಿದನು.

ಸುಗ್ರೀವನು ತನಗೂ ತನ್ನಣ್ಣ ವಾಲಿಗೂ ಬೆಳೆದ ಹಗೆತನದ ಕಥೆಯನ್ನು ತಿಳಿಸಿದನು. ಆಗ ರಾಮನು "ವಾಸವನ ನಂದನನ ವಾಸವನಕ್ಷಿನಗರದಲಿ ನಿಲಿಸುವೆನು. ಜಯಸಿರಿಯ ಬಳುವಳಿಗೆ ನಿನ್ನ ಸುವಾಸಿನಿಯ ನಿನಗೀವೆನು" ಎಂದೂ, ಸುಗ್ರೀವನು "ಕೆಲಸವಿದು ಸಂಘಟಿಸೆ, ದಶಗಳನನು ದೇವರ ಕಲಹಕೊಪ್ಪಿಸಿ ಕೊಡುವೆ" ಎಂದೂ 'ಅಗ್ನಿ ಸಾಕ್ಷಿಯಲಿ, ಕರತಳದ ನಂಬುಗೆಗಳಲಿ–ನಿರ್ಮಳ ಭಾಷಾ ಸಮಯವನು ಮಾಡಿದರು.' ರಾಮನ ಶಕ್ತಿ ಸಾಮರ್ಥ್ಯಗಳ ಬಗ್ಗೆ ಸುಗ್ರೀ ವನು ವಿಶ್ವಾಸಹೊಂದುವುದಕ್ಕಾಗಿ "ದುಂದುಭಿಯ ಅಸ್ಥಿಪಂಜರವನು ಅಂಗುಟದುದಿಯಲಿ ದಶಯೋಜನ ದೂರ ಹಾರಿಸಿ ದರೂ, ಮರ್ಕಟರಾಯನಿಗೆ ಮನದೊಳಗಾಸೆಬಲಿಯದುದ ಕಂಡು ರಾಮನು ಸಪ್ತತಾಳಕ್ಕೆ ಬಾಣವೆಸೆಯಲು, ಆ ಮರ ಗಳು ಸಿಡಿಲೇಳಿಗೆಯಶಬ್ದದಲಿ ಉರುಳಿದವು. ರಾಮಬಾಣವು ಪಾತಾಳಕ್ಕೂ ನುಗ್ಗಿ ಫಣಿರೂಪಕದ ಖಳನ ಕೊಂದು ರಾಮನ ಮೂಡಿಗೆಯ ಹೊಕ್ಕುದು.–ಸುದರ್ಶನದಂದದಲಿ. ಇದನ್ನು ಕಂಡು ಸುಗ್ರೀವನು ರಾಘವನ ಪಾದಕ್ಕೆ ಬಿದ್ದನು. 'ಎತ್ತಿ ಕಪಿಮಸ್ತಕವನು, ಇನ್ನೇನಾದರೂ ಒತ್ತಿ ನೋಡುವುದುಂಟೆ? ಧೈರ್ಯ ಬಂತೇ?' ಎಂದು ಪ್ರಶ್ನಿಸಲು, ಸುಗ್ರೀವನು, "ದೇವರಿಗಿನ್ನು ಪಡಿಯುತ್ತರಕೆ ಪಾಸಟಿಯೆ? ಪತಿಕರಿಸು" ಎಂದನು.

### ಮಲೆತುದೋ ಕೈಲಾಸ ಕನಕಾಚಲದೊಳು ಎನೆ....

ಶ್ರೀರಾಮವಚನ ಭರವಸೆಯಲಿ ಸುಗ್ರೀವನ ಸೇನೆ ವಾಲಿಯ ದುರ್ಗವನು ಮುತ್ತಿದುದು; ಇದನ್ನರಿತ ವಾಲಿಯು

ಇಂದಿನ ರಣದೊಳಗೆ ಇನಸುತನ ಕುಣಿಹವನು ಕುಂದಿಸುವೆನು, ಸಂಸಾರ ಸುಖವನು ಸಾಕೆನಿಸುವೆನು ಎಂದು ಸುಗ್ರೀವನನ್ನು ಎದುರಾದನು. ವಾಲಿ ಸುಗ್ರೀವರು "ಕೈಲಾಸ–ಕನಕಾಚಲಗಳು ಮಲೆತು ನಿಂತಂತೆ ಹೋರಾಡಿದರು. "ಬಿಲ್ಲ ತಿರುವಿನ ಕೋಲ ತೋಹಿನ ರಾಮನು ಆಹವವ ನೋಡುತ್ತಲೇ ಇದ್ದನು. ವಾಲಿಯು ಕರ ಹತಿಗೆ, ಚರಣತಳದಿಂದೊದೆದ ಸಿಡಿಲಿನ ಭರಕೆ ಸುಗ್ರೀವನು "ಕುಲೋರ್ವಿಧರದವೊಲು" ಋಷ್ಯಮೂಕದಲಿ ಬಿದ್ದೊದೆದು ಕೊಂಡನು. ಬಳಿಗೆ ಬಂದ ರಾಮನನ್ನು ಕಂಡು "ಉತ್ತಮಿಕೆ ಲೇಸಾಯ್ತು! ನಿಮ್ಮ ಕೈಯಲಿ ಹಗೆಸತ್ತನು, ನಿಮ್ಮ ಹೆಸರನ್ನು ಮಕ್ಕಳಿಗಿರಿಸಬೇಕು" ಎಂದು ನೊಂದು ನುಡಿಯಲು; "ನಿಮ್ಮಿಬ್ಬರೊಳಗೆ ಅಂತರವರಿಯದೆ ಅಂಬ ಕಳುಹಿದಡಾರ ಹರಣವನು ಕೊಂಬುದೋ" ಎಂಬಸ್ಥಿತಿಗೊಳಗಾದ್ದರಿಂದ ಹೀಗಾಯಿತು. ಇನ್ನು ನೋಯದಿರು. ನಿನ್ನ ದಾಯಿಗನ ದಿತಿಸಂಭವನ ದಾಯಿಗನ ಸಭೆಯೊಳಗೆ ರಾಯನನು ಮಾಡುವೆನು, ಲಕ್ಷ್ಮಣನಾಣೆ" ಎಂದು ಸುಗ್ರೀವನನ್ನು ನಿರ್ಭಯ ಪಂಜರವ ಹೊಗಿಸಿದನು–ಶ್ರೀರಾಮು.

### ಜೂಜು ಸೊತಡೆ ಸೋಲುವುದೆ ಮರು ಜೂಜು?

ರಾಘವನ ಸೂಚನೆಯಂತೆ ಲಕ್ಷ್ಮಣನು "ಸಂಗರ ಕುರುಹಿಗೆ ಕೊರತೆಬಾರದ ಪರಿ ತುಳಸಿಯ ದಳವನು ಎಡೆಗಿರುಕಿದ ಗಜಪುಷ್ಪಮಾಲಿಕೆಯ" ಸುಗ್ರೀವನ ಕೊರಳಿಗಿಕ್ಕಿದನು. ಎರಡನೇ ಸಾರಿ 'ಗಿರಿ ತರುನಿಕಾಯದ ನೆಗಹುಸ್ಗೆಗಳಲಿ' ಕಪಿವೀರರು ವಾಲಿಯಪುರವನು ಮುತ್ತಿಗೆ ಹಾಕಿದರು.

ವಾಲಿಯು ಇಂದ್ರನು ತನಗಿತ್ತ "ಧುರದೊಳರಿಭಟನರ್ಧ ಬಲವನು ಬೆರೆಸಿಕೊಂಬ ಸಜೀವ ಸ್ಫುರಿತ ಕಾಂಚನ ಮಾಲೆಯನು" ಧರಿಸಿ ಧುರಕ್ಕೆ ಸಿದ್ಧನಾದನು. ಆಗ ತಾರೆಯು ಬಂದು "ಅನುಜನಂಗನೆಗಳುಪಿವೈರವ ಕೊನರಿಸಿಕೊಂಡೆ, ಇನ್ನಾದಡೆಯು ರುಮೆಯ ಇನಸುತಗೆ ಕರೆದಿತ್ತು, ರಘುನಂದನನ ಕಾರ್ಯಕೊದಗುವುದು ಲೇಸು" ಎಂದುದನ್ನು ಲೆಕ್ಕಿಸದೆ ಆನಹಕ್ಕೆ ಬಂದನು. ಭೀಕರ ಕದನ ನಡೆದುದು,

> ಹಳಚಿದವು ಗಿರಿ ಗಿರಿಗಳಭ್ರದ
> ನಳಯದಲಿ ಬಳಿಸಲಿಸಿ ಬೀಳುವ
> ಕುಲಮಹೀಧರನಿಕರದಲಿ ನೆಲನದುರಿತಡಿಗಡಿಗೆ
> ನಿಲುಕಿ ನಿಗುರಿದಗಿರಿಗಳಬುಧಿಯೊ
> ಳಿಳಿಯಬಿದ್ದೆಬ್ಬಿಸಿದವಭ್ರಕೆ
> ಘುಳುಘುಳುಧ್ವಾನವನು ಹೊಗಳುವೇನನದ್ಭುತವ.

ವಾಲಿ ಸುಗ್ರೀವರ ಹೋರಾಟದಲಿ "ಧುರಧುರೀಣ ಜಯಾಂಗನೆಯ ನಿಜ ಕರದ ಕಂತುಕದಾಟವೆನೆ ಧರೆಗುರುಳ್ವನಗಗಳಿಗಂತ್ಯವಿಲ್ಲವಾಯಿತು."

ಆಸನು ಸಮರದಲಿ ಸುಗ್ರೀವನ ಕಳೆ ಕುಂದುತ್ತಿರುವುದನ್ನು ಕಂಡು ರಾಮನು, "ಓರೆಗಣ್ಣಲಿ ನೊಂದು ನೋಡುವ ಸೂರ್ಯಸುತಗೆ ಅಭಯಕರ ಸರಸಿರುಹವ ತೋರುತ, ಶರಣನ ನಾರಿಗಳುಪಿದ ಹೀನಹೃದಯನ ಹೇರುರವನೆಚ್ಚನು; ವಾಲಿಯು "ಈಶ ಶಂಭು ಶರಣು" ಎನುತ ನೆಲಕೊರಗಿದನು. ರಾಮನ 'ಕಳವಿನೆಸುಗೆ' ಯನ್ನು ವಾಲಿಯು ಆಕ್ಷೇಪಿಸಿದನು. "ನಿನಗಿದು ಯೋಗ್ಯವೇ? ಹಿರಿದಹ ಹೇಸಿಕೆಯ ಕೈಕೊಂಡೆ" ಎಂದು ನುಡಿದನು. "ಪರರಂಗನೆಗೆ ಮೈಗೊಟ್ಟವರ ಶಿಕ್ಷಿಸದೆ ಬಿಡೆವು" ಎಂದ ರಾಮನ ವಚನ ವಾಲಿಯ ಕರ್ಣದೊಳಿಂಬುಗೊಂಡುದು. ರಾಮಲಕ್ಷ್ಮಣರು ಅವನಿಗೆ "ಅಂಬುಜಾಕ್ಷ ಫಣೀಂದ್ರರಂತೆ ಕಂಡರು." ವಾಲಿಯು ಮುಕ್ತಿನಿತಂಬಿನಿಯಾಲಿಂಗನಕೆ ಮನ ಮಾಡಿ "ನಿಗಮತತ್ವಾತ್ಮಕನ ಮಂಗಳ ಮೂರ್ತಿಯ ನೆರೆ ನೋಡಿ ಪರಮಾನಂದ ಸುಖಮಯನಾದನು."

ಸುಗ್ರೀವನ ಶೋಕ, ತಾರೆಯ ವಿಲಾಪ ಮತ್ತು ಆಕ್ಷೇಪಗಳನ್ನು ರಾಮನು ಸಯುಕ್ತಿಕವಾಗಿ ತಣಿಸಿದನು. ಸುಗ್ರೀವನಿಗೆ ಪಟ್ಟಾಭಿಷೇಕ, ಅಂಗದನಿಗೆ ಯುವರಾಜ್ಯಾಭಿಷೇಕಗಳನ್ನು ಲಕ್ಷ್ಮಣನು ರಾಮನಾಣತಿಯಂತೆ ನೆರವೇರಿಸಿದನು.

### ನುಡಿಯೆ ನಾಲಗೆಯಿಲ್ಲ

ಪ್ರಸ್ರವಣಶೈಲದಲ್ಲಿ ರಾಮಲಕ್ಷ್ಮಣರು ಇರುತ್ತಿರಲು, ಧಾರುಣಿಗೆ ಮುಂಗಾರು ಮೈದೋರಿದುದು. "ಬಲು ಗವಿಯ ಗೇಹಂಗಳಲಿ, ಜಂಘಾನಿಲನಿವಾರಣದ ವಿವಿಧ ಪುಣ್ಯ ಮೃಗಾಜಿನಂಗಳ ನಿವಸನದಲಿ, ನೀರೇಜ ಕಂದದ ನವ ಫಲಾಹಾರದಲಿ ಅಂಬುದಾಗಮನಮನದೂಡಿದರು. ಮಳೆಗಾಲ ನಿಂತಿತು. ಸುಗ್ರೀವನಿನ್ನೂ ಬರಲಿಲ್ಲ, "ನೀನೆಚ್ಚರಿಸಿ ಬಾ" ಎಂದು ರಾಮನು ತಮ್ಮನಿಗೆ ನೇಮಿಸಿದನು. ಲಕ್ಷ್ಮಣನ ರೋಷಾನಲನ ಮುಂದೆ ಮಹೀರುಹಾಳಿ ಸೀದವು. ಹನುಮಂತ, ತಾರೆ ಮೊದಲಾದವರ ಮರೆಯಲಿ ಐತಂದ ಸುಗ್ರೀವನು, "ನುಡಿಯೆ ನಾಲಿಗೆಯಿಲ್ಲ, ಅವಧಿಗೆ ಸರಿದುವು ಹನ್ನೆರಡು ದಿನ ಪಡೆಯನೆರಹಲು ವಿಳಂಬನಾದುದು" ಎಂದು ಎರಗಿದನು. ಸಕಲ ವಾನರಬಲ ಸಹಿತ ಸುಗ್ರೀವನು ರಾಮನಲ್ಲಿಗೆ ಹೋಗಿ ತನ್ನ ೭೭ ಕೋಟಿ ಸೇನಾನಿವಹದ ಪ್ರಮುಖರ ಪರಿಚಯ ಮಾಡಿಸಿದನು. ಬಳಿಕ, ರಘುನಂದನನ ನೇಮದಲಿ ಸುಗ್ರೀವನು ವಿದೇಹಜೆಯ ಶೋಧಿಸಲು ಒಂದು ಅವಧಿ ನೇಮಿಸಿ, ಸುಷೇಣನನ್ನು ಪಡುವಲಿಗೂ, ಶತಬಲಿಯನ್ನು ಬಡಗಲಿಗೂ, ವಿನತನನ್ನು ಮೂಡಲಿಗೂ ಜಾಂಬವ, ಹನುಮ, ಅಂಗದ ಮೊದಲಾದವರನ್ನು ತೆಂಕಣೆಗೂ ನಿಯಮಿಸಿದನು.

### ಅಟ್ಟೈವಾಪತ್ತಿನ ಸಮುದ್ರಕೆ ಕಟ್ಟೆ

ಸುಗ್ರೀವನು ತನ್ನ ಕರ್ಣದಲಿ 'ಪಾವಮಾನಿ ಅತಿಸಮರ್ಥನು' ಎಂದು ಸೂಚಿಸಲು, ರಾಮನು ಹನುಮಂತನನು ಕರೆದು, "ಅಟ್ಟೈವಾಪತ್ತಿನ ಸಮುದ್ರಕೆ ಕಟ್ಟೆ ನೀನು" ಎಂದು ಒಲುಮೆಯಲಿ ಮನಮುಟ್ಟೆ ನುಡಿದು "ಮಣಿ ಖಚಿತ ಕಿರಣಪ್ರಸರಣದ ಮಹಾ ಮಾಂಗಲ್ಯ ಮುದ್ರಿಕೆಯ" ಇತ್ತನು. ಅರಿವುದರಿನಗರಿಯಲಿ ಸೀತೆಯ ಕುರುಹನು, ಪತಿವ್ರತಾ ಗುಣಮೆರೆದಿರಲು ಈ ರಾಜ ಮುದ್ರಿಕೆಯನೀವುದು, ಕುರುಹುಗಳನಿವ ಹೇಳುವುದು" ಎಂದು 'ಮಾಯಾನರನು ನರನವೊಲು ಅಂಜನಾಸುತನ ಬೀಳುಕೊಟ್ಟನು'.

ಸೀತಾನ್ವೇಷಣೆಗೆ ಹೊರಟ ಕಪಿಗಳ ಮೂರು ಪಂಗಡಗಳು ಮೂರು ದಿಕ್ಕುಗಳಲ್ಲಿ ಅರಸಿ, ಕಾಣದೆ, ಕ್ಷಿತಿಪರನು ಕರೆಕರೆದು ತಮ್ಮಲ್ಲಿ ನಾರೀಚೋರನಿಲ್ಲೆಂದು ಸೀತಾಪತಿಯ ಹೆಸರಲ್ಲಿ "ಆಣೆ, ಲಿಖಿತಾರ್ಥನಾಥನ, ಭಾರದಕಡಯ ಪಡೆದು" ಮರಳಿದವು.

ಹನುಮಂತನ ನಾಯಕತ್ವದಲಿ ಹೊರಟ ದಳವು ತೆಂಕಣ ದೆಸೆಯಲ್ಲಿ ಸಾಗಿ, ಸೂರ್ಯನಂದನೆ ಸ್ವಯಂಪ್ರಭೆಯ ಮಯನಿರ್ಮಿತ ಜನಪದಕ್ಕಿಳಿಯುವಷ್ಟರಲ್ಲಿ ಇಪ್ಪತ್ತೇಳು ದಿನಗಳು ಸಂದವು. ಆ ಮಾಯಾನಗರಿಯಿಂದ ಹೊರಬಂದು, ಮುನಿ ಮೃಕಂಡುವ ಕಂಡು ಆತಿಥ್ಯಪಡೆದು, ಮಲಯಾದ್ರಿಯನ್ನು ಸೇರಿ, "ಜಟಾಯುವಿನ ಸಾರ್ಥಕವಾದ ಸಾವಿನ ಬಗ್ಗೆ ಆಡಿಕೊಳ್ಳುತ್ತಿರಲು, ಸಂಪಾತಿ ಈ ಮಾತುಗಳನ್ನು ಕೇಳಿದನು "ಹರಿಭಕ್ತರ ಸಂದರ್ಶನದಿಂದಾಗಿ ಅವನ ಗರಿಗಳು ಬಳಿಕ ಮೂಡಿದುವು."

### ಹನುಮನಗ್ಗದ ಸಾಹಸವ ಮಾರುವ ಭಟರು ಹುಸಿ

ಸಂಪಾತಿಯು ಆ ಕಪಿವೀರರನ್ನೆಲ್ಲ ತನ್ನ ರೆಕ್ಕೆಗಳ ಮೇಲೆ ಕುಳ್ಳಿರಿಸಿ, ಸಾಗರತೀರಕ್ಕೆ ತಂದಿಳುಹಿ, ತಮ್ಮನಾದ ಜಟಾಯುವಿಗೆ "ಸಲಿಲಾಂಜಲಿ ಮೃತಸ್ನಾನಾದಿ ಕರ್ಮವ ಮಾಡಿ, ವಾನರರಿಗೆ ಲಂಕಾಪುರದ ಸರಣಿಯ ಹೊಲಬ ತೋರಿಸಿ, ಕಲಿ ಸುಪಾರ್ಶ್ವ ಸಮೇತ ತಾನು ಮಾನಸ ಸರೋವರಕೆ ಬೀಳುಕೊಂಡನು."

ಎದುರಿಗಿದ್ದ ಸಮುದ್ರೋಲ್ಲಂಘನ ಮಾಡಬಲ್ಲವರು ತಮ್ಮಲ್ಲಿ ಯಾರು ? 'ಎಂದು ಕಪಿವೀರರು ಯೋಚಿಸತೊಡಗಿದರು. ಅಂಗದನು 'ಹನುಮನೇ ಸಮರ್ಥ, ಹನುಮನ ಮಾರುವಗ್ಗದ ಭಟರು ಹುಸಿ' ಎಂದಾಗ ಎಲ್ಲರೂ ಹೌದೆಂದರು. "ಎನಿತು ಚಿಕ್ಕವನಾದೊಡೆಯು ಕಪಿಜನಪ ಸೂನುವಲಾ"[1] ಎಂದು ಅಂಗದನ ಸಕಾಲಿಕ ಸೂಚನೆಗಾಗಿ ಅವನನ್ನು ಕೊಂಡಾಡಿದರು. ಜಾಂಬವನ ಒತ್ತಾಯದಂತೆ ಮಾರುತಿಯು "ರಾಮನ ರಾಜಕಾರ್ಯದ ಕೀರ್ತಿಗೆ, ಗುರುವಿನಾಜ್ಞೆ" ಎಂದು ವಿನಯದಿಂದಲೇ ಒಪ್ಪಿಕೊಂಡನು.

---

1. ತೊ. ರಾ. IV ೧೨-೧೧.

## ಮಹೇಂದ್ರಗಿರಿಯ ಮೇಲೆ

ಮಾರುತಿಯು ಶ್ರೀರಾಮನನ್ನು ಸ್ಮರಿಸಿ, ವಾನರ ನಾಯಕರೆಲ್ಲರನ್ನೂ ವಂದಿಸಿ, ಮಹೇಂದ್ರಗಿರಿಯನ್ನೇರಿದನು. ಅಲ್ಲಿ ತ್ರಿವಿಕ್ರಮನಂತೆ ಬೆಳೆದನು.

"ಇನಬಿಂಬ ಹನುಮನ ಶಿರದ ಅರುಣಮಣಿಯಂತಿರ್ದುದು." ತಾರಾ ವೃಂದ ಪೂಜೆಯ ಪುಷ್ಪಗಳ ಪರಿಯಲಿ ರ್ದುದು.

> ಬಾಲವಿರ್ದುದು ವಿಮಲ ಸುಮನೋ
> ಶೈಲವಳಯದಲವನಿಗಿಳಿದ ಸು–
> ರಾಲಯದ ಬಾಂದೊರೆಯ ತೆರನವೊಲಂಜನಾಸುತನ
> ಲೋಲಕುಂಡಲ ಚಂದ್ರಸೂರ್ಯರ
> ಸೋಲಿಸುತಲಿರ್ದವು ಬಳಿಕ್ಕೇ
> ಳೇಳುವೆನು ಬಲಿದಂಘ್ರಿಯನು ಭುಜವೊಯ್ದು ಬೊಬ್ಬಿರಿದ.[1]

ಮತ್ತೆ ತನ್ನ ಮುನ್ನಿನ ರೂಪವನೆ ಕೈಗೊಂಡು, ಕೈಗಳ ತತ್ಪರ್ವತಾಗ್ರದ ಮೇಲೆ ಬಲಿದು, ಅಡಿಯೂರಿ ತನುವನು ಒಮ್ಮೆ ತೂಗಲು 'ಇಳೆಯು ಸೆಳೆಮಂಚದವೊಲಾದುದು', ಅಮರರ ಭೇರಿಗಳು ಘೋಷಿಸುತ್ತಿರಲು ತನಿ ಹರುಷದಲಿ ಹನುಮಂತನು ಸಮುದ್ರೋಲ್ಲಂಘನ ಮಾಡಿದನು.

## ಸುಂದರ ಕಾಂಡ

## ಹರಿವುದಿನ್ನು ಅಸುರೇಂದ್ರ ವನಿತೆಯ ಮೆರೆವ ಮಂಗಲಸೂತ್ರ

'ಪವನಜನ ಪರಿಯನು ಪರೀಕ್ಷಿಸಲು ಸುರಪನು ಸುರಸೆಯನು ನಿರ್ಮಿಸಿ, ಮರುತನ ಸರಣಿಯನು ತಡೆ ಎಂದ ವಳ ಕಳುಹಿದನು.' ತನ್ನನ್ನೆದುರಿಸಿದ ರಕ್ಕಸಿಯ ಕಾಲೆರಡ ಹಿಡಿದು ಹನುಮನು ಅಭ್ರ ಮಂಡಲಕಿಡಲು, ಆಕೆಯು ಸುಮನೋನಗರದ ಸೂಳೆಗೇರಿಯ ನಡುವೆ ಬಿದ್ದಳು. ಸುರರಿಗೆಲ್ಲ ಮಾರುತಿಯ ಸತ್ವಾತಿಶಯದ ಬಗೆಗೆ ಸಂತಸ ವಾಯಿತು.

ಕಡಲ ನಡುವಿನಿಂದ ಕಪರ್ದಿಯ ಮನ್ನಣೆಯ ಮೈದುನನಾದ ಮೈನಾಕನು ಮೈದೋರಿದನು. ಹನುಮನ ತಂದೆ ಯಿಂದ ತನಗಾಗಿದ್ದ ಉಪಕೃತಿಯನ್ನು ಸ್ಮರಿಸಿ ತನ್ನ ಆತಿಥ್ಯ ಸ್ವೀಕರಿಸಬೇಕೆಂದು ಕೇಳಿದನು. ಹಿಂದಿರುಗುತ್ತಾ ಬರುವು ದಾಗಿ ಅವನಿಗೆ ತಿಳಿಸಿ, ಮಾರುತಿಯು "ಗರುಡನ ಗರುವಿಕೆಯ ಗಾಡಣೆಯ ಗತಿಯಲಿ ಗಗನಕ್ಕೆ ಉಪ್ಪರಿಸಿದನು. ಛಾಯಾ ಗ್ರಾಹಿಣಿ ಸಿಂಹಿಕೆಯೊಡಲನ್ನು ಹೊಕ್ಕು ಹನುಮಂತನು 'ಬಲಿದ ಮರಿಯು ಪಕ್ಕದಲಿ ತತ್ತಿಯನಳಿದು ಪೊರಮಡುವಂತೆ ಹೊರಬಂದನು. ಆಕೆಯ ಶರೀರದ ಒಂದು ಹೋಳನ್ನು "ದಶಶಿರನ ಊರಿಗಿಟ್ಟನು, ಮಿಕ್ಕ ಹೋಳನು ಜಾಂಬವ ಮೊದಲಾದ ಕಪಿವೀರರಿದ್ದೆಡೆಗೆ ಎಸೆದನು."

ಮುಂದೆ ತೃಣಬಿಂದುವಿನ ಪರೀಕ್ಷೆಯಲಿ ಗೆದ್ದು ಹನುಮನು "ಇನಶಶಿಯ ರುಚಿಯ ಕರಂಡವೆನಿಪ" ದಶಶಿರನ ರಾಜಪುರವರಕೆ ಕಾಲಿರಿಸಿದನು. ಪುರದ್ವಾರದಲ್ಲಿ "ದಿನದಲುಗುಳುವ, ರಾತ್ರಿಯಲಿ ನುಂಗುವ ಮಹಾದ್ಭುತದ ಘೋರ ರಕ್ಕಸಯುವತಿ"ಯು–ಲಂಕಿಣಿಯು–ಮಾರುತಿಯನ್ನು ತಡೆಯಲು, ಆಕೆಯನ್ನು ತೀವ್ರ ಮುಷ್ಟಿಯಲಿ ತಿವಿದುರುಳಿಸಿ ಊರೊಳಗೆ ಹಾಯ್ದನು. ಲಂಕಿಣಿಯು ಪೂರ್ವದ ಕುರುಹನರಿದು, "ಹರಿವುದಿನ್ನು ಅಸುರೇಂದ್ರ ವನಿತೆಯ ಮೆರೆವ ಮಂಗಲಸೂತ್ರ" ಎಂದು ನಿರ್ಣಯಿಸಿ, ತಾನು ಅಜಪುರವನ್ನೈದಿದಳು.

---

1. ತೊ. ರಾ. IV. ೧೨-೨೭

## ಬೆರಸುವಳೆ ಸುರಗಂಗೆ ಕಾದಂಬರಿಯು ಕಡಲನು ?

ಹನುಮಂತನು ಆ ರಾತ್ರಿಯಲ್ಲಿ ಅಂಗಡಿಗಳೊತ್ತಿನಲಿ, ರಕ್ಕಸರಂಗಣಗಳಲಿ, ಕೋಠಾರಮಂಟಪಿಯ ಸಂದಿಗೊಂದಿನಲಿ–ಸೀತೆಯನು "ಮಣಿಮುದ್ರಿಕೆಯುಂಗುರದ ಬೆಳಗಿನಲಿ" ಅರಸಿದನು. ಶುಕ, ಮಹೋದರ; ಇಂದ್ರಜಿತು, ಕುಂಭಕರ್ಣ ಮೊದಲಾದ ರಾಕ್ಷಸರ ಭವನಗಳನ್ನು ಹೊಕ್ಕು ಹೊರಟನು. ಪರಮ ವೈಷ್ಣವ ವಿಭೀಷಣ ಭವನವನು ಕಂಡು, ಹನುಮಂತನು, "ಸೀತೆಯ ಕದ್ದ ಕಳ್ಳನ ಖಳನ ಸೆಜ್ಜೆಯ ಸದನಕ್ಕೈತಂದನು. ಅಲ್ಲಿ ರಾವಣನ ಪಕ್ಕದಲ್ಲಿ ಪವಡಿಸಿದ್ದ ಮಂಡೋದರಿಯು ಸೊಬಗಿನ ಶರಧಿಯ ಮೌಕ್ತಿಕದವೊಲು ಮೆರೆದಿರ್ದಳು. ಆಕೆಯೇ ಸೀತೆಯಿರಬಹುದೇ ? ಎಂಬ ಸಂದೇಹ ಅವನನ್ನು ಬಾಧಿಸಿತು, ಆದರೆ. ಪರೀಕ್ಷಿಸಿ ನೋಡಿದಾಗ; "ಕಕುತ್ಸ್ಥಜ ಪೇಳ್ದ ಕುರುಹಿನ ಸೋಕ ಕಾಣದೆ, ಅಶುಭದ ವೈಧವ್ಯಲಕ್ಷಣದ ಕಾಕರೇಖೆಯನು ಅಂಘ್ರಿಯಲಿ ಕಂಡು, ಮನಸ್ಸಿನ ಸಂದೇಹವು ದೂರವಾದುದು. ಹನುಮನಿಗೆ ತನ್ನ ಸಂದೇಹದ ಬಗ್ಗೆ ತನಗೇ ನೋವೆನಿಸಿತು. ಸೀತಾ ಮಾನಿನಿಯ ಕುರಿತು ಸಲ್ಲದ ಸಂಶಯಕ್ಕೊಳಗಾದೆನಲ್ಲ, ಛೆ ! ಛೆ ! ಎಂದಾದರೂ ಸುರಗಂಗೆಯು ಕಾದಂಬರಿ (ಹೆಂಡದ)ಯ ಕಡಲನ್ನು ಸೇರೀತೇ ? ಜಾನಕೀಮಾತೆ ರಕ್ಕಸನನ್ನು ಎಂದಾದರೂ ಸೇರಿಯಾಳೇ ? ಎಂದು ತನ್ನಲ್ಲೆ ತಾನು ಪ್ರಶ್ನಿಸಿ ಉತ್ತರಿಸಿಕೊಂಡನು.

## ಅಶೋಕವನದಲ್ಲಿ ತೃಣವನುರೆ ಮುರಿದಿಕ್ಕಿ ನುಡಿದಳು

ಸೀತೆಯ ಸುಳಿವೇ ಸಿಕ್ಕದೆ, ಮರುಗಿ, ಮತ್ತೆ ಕನಲಿ, "ಈ ನಗರಿಯನೆ ಬಾಲದಲಿ ಕಿತ್ತೊಯ್ದು ರಘುವರನ ಮುಂದಿಳುಹುವೆನು." ಎಂದು ಆ ಕಾರ್ಯಕ್ಕೆ ತೊಡಗುತ್ತಿರುವಷ್ಟರಲ್ಲಿ, 'ನೀನಿದಿರುಗೊ ಮಾರುತನ ನಿನ್ನಿಷ್ಟಾರ್ಥವಹುದು' ಎಂದು ಆಕಾಶವಾಣಿಯಾದುದು. ಅಷ್ಟರಲ್ಲಿ ಅಶೋಕ ವನದತ್ತಣಿಂದ ಸುಗಂಧಭರಿತ ಪವನನು ನಿಜಸುತನ ಸರಿಸದಲಿ ತಡೆತಡೆದು ಸುಳಿದನು. "ವನವಿದೊಂದಿದೆ, ಗಗನದಗ್ರದ ಧ್ವನಿಯದೊಂದಿದೆ" ಎಂದುಕೊಳ್ಳುತ್ತಾ ಅಶೋಕ ವನದೆಡೆಗೆ ನೆಗೆದನು. ಅಲ್ಲಿ ಶಿಂಶುಪಾತರುವಿದ್ದಲ್ಲಿಗೆ ಬಂದಾಗ, ಆ ಮಹಾದ್ರುಮದಡಿಯ ಕದಳಿ ಸ್ತೋಮ ಮಧ್ಯದ ದಳನಿಳಯದಲಿ, ರಾಮನಾಮಾಮೃತಸಜೀವ ತ್ರಾಣಧಾರಣದ ಸೀತಾ ಮಹಾಲಕ್ಷ್ಮಿಯನು ಕಂಡು ಮಾರುತಿಯು ಹಿಗ್ಗಿದನು. ತನ್ನ ನರಪತಿಯ ದೂತತ್ವ ಸಾಂಗವಾದುದು ಎಂದು ಆನಂದಿಸಿದನು. ಹನುಮನು ಶಿಂಶುಪಾತರುವಿನಗ್ರದಲಿ ಅವನಿಜೆಯ ಸಂದರುಶನದ ಸಂತಸದಲ್ಲಿರುತ್ತಿರಲು, ರಾವಣನು ಸಕಲವೈಭವೋಪೇತನಾಗಿ ಅಲ್ಲಿಗೆ ಬಂದನು. ನಾನಾ ರೀತಿಯಿಂದ ತನ್ನನ್ನು ಹೊಗಳಿಕೊಳ್ಳುತ್ತಾ, ನರನಾದ ರಾಮನನ್ನು ಹೀನೈಸುತ್ತಾ ಇರಲು, ಸೀತೆಯು ಸೈರಿಸದೆ, "ಕಣ್ಣುಗಳಲಿ ಕಿಡಿಸೂಸೆ, ಕೈಯಲಿ ತೃಣವನುರೆ ಮುರಿದಿಕ್ಕಿ ಬಣಗು ರಕ್ಕಸ, ವಾಸುಗಿಯ ನೀರೊಳ್ಳೆ ಜರೆವುದು ಗಡ.... " ದಾಶರಥಿಯನುಚರರ ಲೆಂಕರ ಲೆಂಕರ ದಾಸಿಯರ ಲೆಂಕರಿಗೆ ಇವನು ಸರಿಬರನು, ಸರಮೆ ಈ ನಾಯನ್ನು ಇಲ್ಲಿಂದ ಕಳುಹು" ಎಂದು ಗುಡುಗುಡಿಸಿದಳು. ಸೀತೆಯನ್ನು ಕೊಲ್ಲುವೆನೆಂದು ಕತ್ತಿಯೆತ್ತಿದ ರಾವಣನನ್ನು ಮಯತನುಜೆ ತಡೆದು ಅರಮನೆಗೆ ಕರೆದೊಯ್ದಳು.

## ಅಮಲ ಚೂಡಾಮಣಿಯನಿತ್ತಳು

ಸೀತೆಯು ತನ್ನ ದುಸ್ಥಿತಿಗಾಗಿ ಮರುಗಿ ಸಾವೇ ಮೇಲೆಂದು ಖಡ್ಗಕ್ಕೆ ಕೈಯಿಕ್ಕಿದಳು. ಆಗ ತ್ರಿಜಟೆಯು ತಡೆದು ತಾನು ಕಂಡ ಸ್ವಪ್ನವಿಚಾರವನ್ನು ಅರುಹಿ ಸೀತೆಗೆ ರಾಮದರ್ಶನ ನಿಶ್ಚಯವೆಂದು ಧೈರ್ಯ ಹೇಳಿದಳು. ಅಷ್ಟರಲ್ಲಿ ಹನುಮನು ಮರದ ಕೊಂಬಿನಿಂದ ಕೆಳಗಿಳಿದು (ಮರದಲ್ಲೇ ರಾಮಲಕ್ಷ್ಮಣರ ಕುಶಲ ಸಮಾಚಾರವನ್ನು ನುಡಿದಿದ್ದನು) ಸೀತೆಗೆ ನಂಬಿಕೆ ಮೂಡುವಂತೆ ಎಲ್ಲ ಕುರುಹುಗಳನ್ನೂ ಹೇಳಿದನು, ತನ್ನ ತ್ರಿವಿಕ್ರಮ ರೂಪವನ್ನು ತೋರಿದನು. ಕೊನೆಗೆ ಮುದ್ರಿಕೆಯುಂಗುರವನ್ನು ಕೊಟ್ಟಾಗ ಸೀತೆಯ ಹೃದಯ ಹೆರೆಕಂಡ ಕಡಲಿನಂತೆ ಹಿಗ್ಗಿತು. ತಾನು ಹನುಮನಿಗೆ ಅಮಲ ಚೂಡಾಮಣಿಯನು ಕುರುಹಾಗಿ ಕೊಟ್ಟಳು. ಮಾರುತಿಗೆ ಮಾಯಾವಿ ರಕ್ಕಸರ ಕುರಿತು ಎಚ್ಚರಿಕೆ ಹೇಳಿದಳು. ಆಂಜನೇಯನು "ನಿಮ್ಮ ಅರಸನನು ಇಲ್ಲಿಗೆ ತಿಂಗಳಿಗೆ ತರುವೆ ಚಿಂತೆಬೇಡ" ಎಂದು ಹೊರಟನು.

**ಲಂಕಾ ವೀತಿಹೋತ್ರ**

"ಮೌಳಿಹತ್ತರ ರಕ್ಕಸಗೆ ಯಶೋವಿಲಾಸ ವಿನೋದವಿಭ್ರಮದ ತನ್ನೂಳಿಗವನೆಚ್ಚರಿಸದಿರೆ ಹೆಚ್ಚಾಳುತನತತಿ ಕುಂದೆನುತ" ಹನುಮಂತನು ಅಶೋಕವನವನ್ನು ಮುರಿಯತೊಡಗಿದನು. ಅವನು "ಚಿಗುಳಿಮಳಿವ ಅಸುರನ ರಮ್ಯೋದ್ಯಾನವು ಪತಿಯ ಮರಣದಲಗಲಿ ಬದುಕಿದ ಸತಿಯ ಶಿರದವೊಲು ರಂಜಿಸಿತು". ಮಾರುತಿಯ ವನಭಂಗದ ನಾಟ್ಯವನ್ನು ಕಂಡು ಆ ವನದ ಕಾಪಿನ ನಿಶಾಚರರು ಕಪಿವರನ ಕೆಣಕಿದರು. 'ಅಂಬುಗಳ ಮಳೆಗರೆದಸುರನಿಕುರುಂಬವನು ಬಲು ಹೆಮ್ಮರನ ಹೆಗ್ಗೊಂಬುಗಳಲೇ ಹೊಯ್ದು, ವನಪತಿ ಜಂಬುಮಾಲಿಗೆ ಮನೆ ಕೃತಾಂತನ ಪುರದೊಳಾದುದು'.

ಆಮೇಲೆ ರಾವಣನ ಅಪ್ಪಣೆ ಪಡೆದುಬಂದ "ಅಕ್ಷಕುಮಾರನ ಶಿರವನ್ನು ಕಡಿದು ಲಂಕೇಶ್ವರನ ಸಭೆಗೆಸೆದನು ಹನುಮ". ಮುಂದೆ ಇಂದ್ರಜಿತುವು ಎಸೆದ ಬ್ರಹ್ಮಾಸ್ತ್ರಕ್ಕೆ –ಬ್ರಹ್ಮನೇ ಬಂದು ಕೇಳಿಕೊಂಡಂತೆ–ಕಪಿವೀರನು ಕಟ್ಟು ಬೀಳಬೇಕಾಯಿತು. ಅವನನ್ನು ರಾವಣನ ಸಭೆಗೆ ಅತಿಪ್ರಯಾಸದಿಂದ ತರಲಾಯಿತು. ರಕ್ಕಸನನ್ನು ಕಂಡು "ಹೆಂಗಸು ಗಳ್ಳ, ಹೊಲೆಯ ಸುಡು ಸುಡು ನಿನ್ನಮೋರೆಯನು" ಎಂದು ಹಂಗಿಸಿದ ಹನುಮನನ್ನು 'ನಿಕುಂಭಿನಿಯ ನಿಜಭವನದಿ ದಿರಿನ ಶೂಲದಲಿ ಸೇಳಿಸು" ಎಂದು ರಕ್ಕಸು ಆಜ್ಞಾಪಿಸಲು ಪುಣ್ಯಶ್ರವಣನಾದ ವಿಭೀಷಣನು "ಅರಿ ವಿರೋಧಕೆ ದೂತಹಿಂಸ್ರಾಚರಣೆ ಚದುರಾಗದು, ರಾಜರಿಗೆ ತರುಚರರವಧೆ ಪರಿಹಾಸ್ಯಕರವಲ್ಲವೇ?" ಎಂದು ವಿನಂತಿಸಿದನು. ಆದಡಿ, ಕಪಿಯ ಕಿವಿಗಳ ಕೊಯ್ದು ಬಿಡಿ ಎಂಬ ಆಜ್ಞೆಯಾದುದು. ದೂತರು ವಾನರನ ಕಿವಿಗೊಯ್ದ ಖಡ್ಗ ವಿಕ್ಕಡಿಯಾದುದಲ್ಲದೇ 'ಹನುಮನ ರೋಮಚಯವೂ ಹರಿದುದಿಲ್ಲ'.

"ನಮ್ಮಾ ವನವನೇತಕೆ ಕೆಡಿಸಿದೆ?" ಎಂಬ ಪ್ರಹಸ್ತನ ಪ್ರಶ್ನೆಗೆ, "ನಾವಿದನರಿಯೆವು, ಹುಲುಬಾಲವೆಸಗಿದ ಕೆಲಸವಿದು" ಎಂದುತ್ತರಿಸಲು, 'ಇವನ ಬಾಲವನ್ನು ಸುಡುವುದೇ ಸುನೀತಿ' ಎಂಬ ನಿರ್ಣಯವಾಯಿತು. ಒಡನೆ ಅರುವತ್ತುಸಾವಿರ ದಡಿಗರಕ್ಕಸರು "ಲಯದಹಿಯನುಗಿನಂತೆ, ಹನುಮನ ಬಾಲವನ್ನು ಸುಡಲುದ್ಯೋಗಿಸಿದರು. ಹನುಮಂತನ ಬಾಲವು" ಹತ್ತು, ನೂರಿನ್ನೂರ, ತದ್ವಿಗುಣೋತ್ತರ ಪರಿವಿಡಿಯ ಪರಿವೃದ್ಧಿಯಲಿ ಬೆಳುವುತಿರ್ದುದು "ತರತರದ ಕೊಪ್ಪರಿಕೆ ಸಾಸಿರದ ಸಂಖ್ಯೆಯಲಿಳುಹಿದವು, ಅಪರಿಮಿತ ವಸನವೆಲ್ಲವೂ ಹರಿಪದಾಬ್ಜ ಪರಾಗಮಧುಕರನ ಮಹಿಮೋನ್ನತದ ಬಾಲದ ಹರಹಿನಲಿ ಹಿಂಗಿದವು."....ದಶಕಂಠನು ಕಾಳ್ಗೆಡೆಯದೆ 'ಊರನು ಸುಲೆಯಿರಿ' ಎಂದು ಆಜ್ಞಾಪಿಸಿದುದನು ಕೇಳಿ 'ರಾಮ, ರಾಮ, ಕಂಡವರನಿನನು ಸುಲಿಯದಿರನು, ಬಾಲವೇ ಸಾಕಿನ್ನು ಬೆಳೆಯದಿರು' ಎಂದು ಸೂಚಿಸಲು, ಬಾಲದ ಬೆಳೆ ನಿಂದುದು.

ಅಸುರನು, 'ಬಾಲಕ್ಕೆ ಉರಿಯಿಕ್ಕಿ, ಹಣೆಗೆ ಮಸಿಯನು ಬರೆದು, ಕೊರಳಿಗೆ ದಾಸಣದ ದಂಡೆಯಹಾಯ್ಕಿ, ಊರೊಳಗೆ ಮೆರೆಸಿರಿ' ಎಂದಪ್ಪಣೆಮಾಡಿದನು. ಉರಿಯೇರಿದ ಬಾಲವನ್ನು ಮೊದಲಲ್ಲಿ ಹನುಮನು ಅಸುರನ ಆನನಕ್ಕೇರಿಸಲು, ರಕ್ಕಸನು ಬೆದರಿ, "ಗಡ್ಡವನದುರಿಸುತ, ಅಬಲಾಜನನ ಪುಷ್ಪಕದೊಳೇರಿಸಿ ಗಗನಕ್ಕೆ ಹಾಯ್ದನು".... ವಿಭೀಷಣಭವನವೊಂದನ್ನುಳಿದು ಸಂಪೂರ್ಣ ಲಂಕಾದಹನ ನಡೆದುದು.

ಹನುಮನು ನಡೆಸಿದ ಈ ಯಜ್ಞದಲ್ಲಿ ಅವನಿಜೆಯ ವಿಪ್ರಲಶೋಕವೆ ಶಿಖಿ, ಲಂಕಾಪುರವೇ ಅಗ್ನಿ ಕುಂಡ, ರಾಮಕೀರ್ತಿ ಸ್ತಂಭವೇ ಯೂಪ, ಅಸುರರೇ ಬಲಿಪಶುಗಳು, ಹನುಮಂತನೇ ಯಜ್ಞದೀಕ್ಷಿತನು. "ಉರಿನಾಲಗೆಗಳ ಎಸಳುಗಳಿಂದ, ವಿಸ್ಫುಲಿಂಗಗಳ ಪರಾಗಗಳಿಂದ, ಧೂಮರಾಶಿಯ ಭ್ರಮರಮಾಲಿಕೆಯಿಂದ, ಸಾಗರವೆನ್ನುವ ಸರೋವರದಿಂದ –ಪುರದಹನವು ಸುರಕದಂಬದಕಣ್ಗೆ (ಲಂಕಾಪುರವು) ಸರಸಿಜದಂತೆ ತೋರಿದುದು.

ಅಶೋಕವನದಲ್ಲಿದ್ದ ಸೀತಾಮಾತೆಯನ್ನು ಕಂಡು, ಇನ್ನೊಮ್ಮೆ ಹಿಂಬಾಲಿಸಿದ ಇಂದ್ರಾರಿಗೆ "ಕಡಲಿನಲ್ಲಿ ಹುಡುಕು ನೀರದ್ದಿಸಿ, ಸಮುದ್ರ ತರಣ ಮಾಡಿ ಹನುಮನು ತನ್ನ ಬಳಗದವರನ್ನು ಕೂಡಿಕೊಂಡನು. ಮಧುವನಪ್ರವೇಶಮಾಡಿ ಕುಣಿದು, ತಣಿದು ಶ್ರೀರಾಮನಲ್ಲಿಗೆ ಎಲ್ಲರೂ ಮರಳಿದರು. ರಾಮನು ಚೂಡಾಮಣಿಯನ್ನು ಕಂಡು, ಹರುಷ ಪುಳಕಗೊಂಡು, ಮಾರುತಿಯನ್ನು ಕೊಂಡಾಡುತ್ತಾ, "ಬೊಮ್ಮನ ಪರಮ ಪದವಿಯನ್ನಿತ್ತು ಮನದಣಿಯೆ ಮನ್ನಿಸಿದನು."

## ಯುದ್ಧಕಾಂಡ

### ನೂಕಲೇತಕೆ? ನಮ್ಮನು ನಾವೇ ನೂಕಿಕೊಂಬೆವು

ಸುಗ್ರೀವನ ಕಪಿಸೇನೆಗೆ ನೀಲನನ್ನು ನಾಯಕನನ್ನಾಗಿ ಮಾಡಿ, "ಉತ್ತರ ಫಲ್ಗುಣೀ ಸಮ್ಮಿಳಿತ ಮಾರ್ಗಶಿರದ ಶುದ್ಧಾಷ್ಟಮಿಯಲಿ ಅಭ್ರದ್ಯೋತನು ಅಂಬರದ ಮಧ್ಯದಲ್ಲಿರಲು, ತಾರಾಬಲದುಸುರಿನಲಿ ವಿಜಯಾಭಿಯೋಗದಲಿ" ನೀಲೋತ್ಪಲಾಂಗನು ನೀಲನಾಯಕತ್ವದ ಸೇನಾಸಹಿತನಾಗಿ ಲಂಕೆಯತ್ತ ಹೊರಟು, 'ಪಯಣನಾಲ್ಕಕೆ' ಶರಧಿ ತೀರವನ್ನು ಸೇರಿದನು. ಕಡಲದಡದಲ್ಲಿ ಕಪಿಸೇನೆ "ನಾಯಕವಾಡಿಗಳ ಗುಡಿಹೊಯ್ದು ಬೀಡುಬಿಟ್ಟುದು. ಅಲ್ಲಿದ್ದ ಅಸುರಠಾಣೆಯು ಗೂಳಿಯತೆಗೆದು, ಲಂಕಾಪುರಕ್ಕೋಡಿ ಈ ಸುದ್ದಿಯನ್ನರುಹಿತು.

ಮರುದಿನ ಅಸುರೇಶ್ವರನು ಒಡ್ಡೋಲಗಕೊಟ್ಟು, "ರಾಮನು ಸೇನಾಸಹಿತನಾಗಿ ಬರುತ್ತಿರುವ ಬಗ್ಗೆ ಸಭಾಸದರ ಅಭಿಮತ ಕೇಳಿದನು. ಎಲ್ಲರೂ "ಹುಲು ಮಾನವನ ಕದನದ ಕುರಿತು ಸಂದೇಹವೇಕೆ?" ಎಂದವರೇ. ವಿಭೀಷಣನು ಮಾತ್ರ ಶ್ರೀರಾಮನ ಅಮಾನುಷತೆಯನ್ನು ವಿವರಿಸಿ, "ಲೋಕ ಮಾತೆಯನು ಇನಕುಲೇಂದ್ರಂಗೆ ಒಪ್ಪಿಸುವುದು ಲೇಸು, ನಿನಗೆ ನಾಚಿಕೆಯಾದಡೆ ನಾನು ಒಪ್ಪಿಸಿಬಹೆನು" ಎನ್ನಲು, ರಾವಣನು ಕಿಡಿಕಿಡಿಯಾಗಿ, "ಕೊಲುವೆನೆ ಕೈಕಸೆಯ ಬಸಿರಿಂದಿಳಿದು ಬಂದವನೆಂಬ ಬಿಡೆಯ, ಹೊಳಲ ಹೊರವಡಿಸುವುದೇ ಲೇಸು, ಇವನನ್ನು ನೂಕಿರಿ! ಎನ್ನುತ್ತಿರಲು, ವಿಭೀಷಣನು 'ನೂಕಲೇತಕೆ'? ನಮ್ಮ ನಾವೇ ನೂಕಿ ಕೊಂಬೆವು" ಎಂದು ಸಭೆಯಿಂದ ಹೊರವಂಟು, ತಾಯಿಯನ್ನು ವಂದಿಸಿ, ನಾಲ್ವರು ಮಂತ್ರಿಗಳಸಹಿತ ಶರಣಜನ ಚೂಡಾಮಣಿಯಿದ್ದಲ್ಲಿಗೆ ಬಂದನು. ಅವನ ಚಾರಿತ್ರ್ಯದ ಬಗ್ಗೆ ಸುಗ್ರೀವನು ಸಂದೇಹಿಸುತ್ತಿರಲು, ಹನುಮನು ಆ ವೈಷ್ಣವನ ಸದ್ಗುಣವನ್ನು ವಿವರಿಸುತ್ತಿರಲು, "ತನ್ನತನುವನಿತ್ತಾದರೆಯು ಮರೆಹೊಕ್ಕವರ ಮನ್ನಿಸುವುದೆ ನೃಪನೀತಿ" ಎಂದು ರಾಮನು ನಿರ್ಣಯಿಸಿ, ಅವನಿಗೆ ಅಲ್ಲೇ ಲಂಕೆಯೊಡೆತನದ ಪಟ್ಟವನು ಕಟ್ಟಿದನು.

### ಹೇನನೊರಸುವಡೇಕೆ ಶರಸಂಧಾನ?

ರಾಘವನು ನಡೆಸಿದ ಪ್ರಾಯೋಪವೇಶವನ್ನು ಲೆಕ್ಕಿಸದೆ ಇದ್ದ ಸಮುದ್ರವನ್ನು ಕಂಡು "ನಮ್ಮನು ಬಗೆಯದಾದನೆ? ಇವನಾವ ಸದರವೊ?" ಎಂದು ರಾಮನು ರೌದ್ರಾವೇಶಮನನಾಗಿ, "ಚಟುಳ ವಿಲಯಾನಲಶಿಖಾ ಸಂಘಟಿತ ಸತ್ಕ್ರೋಧ ಪ್ರಭಾ ಧೂರ್ಜಟಿ ವಿಡಂಬನನೆದ್ದು ಅನುಜನೊಡನೆ ಧನುವನು ಬೇಡಿದನು."

ಉರಿಹುಟ್ಟಿದೊಡನೆ, 'ಎಡದಕಯ್ಯಲಿ ಕರ್ಣಪತ್ರವ ಹಿಡಿದು, ಬಲಗಯ್ಯಂಗುಲಿಯ ಬಾಯ್ಗಡಸಿ ಬಳಲುವ ಬಾಯ್ದೆರೆಯ ನಿಜದೈನ್ಯಭಾವದಲಿ 'ಜಾಹ್ನವಿಯು ಶ್ರೀರಾಮನಿಗೆ' "ಸೋಮ್ಮುಡಿಯಚಾಚಿ, ಸೌಭಾಗ್ಯದ ವಿಭವವ ನುಡುಗಿಸಲು ಬೇಡ, ನಾನು ಮಗಳಲಾ" ಎಂದು ಮೊರೆಯಿಟ್ಟಳು. ಸಮುದ್ರನೂ "ನಾನು ಜಡಾತ್ಮ ನನ್ನನು ಕಾಯಬೇಕು. ಹೇನನೊರಸುವಡೇಕೆ ಶರಸಂಧಾನ? ನಳನ ಕಯ್ಯಿಂದ ಕಟ್ಟಿಕೊಂಬೆನು." ಎಂದಾಗ ರಾಮನು ಶಾಂತನಾಗಿ, ಹೂಡಿದ ಅಸ್ತ್ರವನ್ನು ಎಂಬತ್ತೇಳು ಕೋಟಿ ನಿಶಾಚರರಿಗೆ ಎಸೆದು, ಆ ಪ್ರದೇಶವು ಮರುವಾದುದು ನಿಮಿಷದಲಿ.

### ಕೀಶಬಲದೋರ್ವಲಶಿಲಾ ಪರಿಶಾಸನ, ರಘುಪತಿಯಕೀರ್ತಿ ಶ್ರೀಸತಿಯ ಸೀಮಂತ

ನಳನ ವಿಶ್ವಕರ್ಮತ್ವದಲ್ಲಿ ಸೇತುರಚನಾಕಾರ್ಯವು ಪುಷ್ಯಶುದ್ಧದ ದಶಮಿಯಲಿ ಪ್ರಾರಂಭವಾಗಿ ದಿನ ನಾಲ್ಕರಲಿ ಮುಗಿದುದು. "ಅರಿದಶಾಸ್ಯನ ಕರೆದು ಮೋದುವ ಮೃತ್ಯುನೀಡಿದ ಕರದಂತೆಯೂ, ಕೀಶಬಲದೋರ್ವಲಶಿಲಾ ಪರಿಶಾಸನದಂತೆಯೂ, ರಘುಪತಿಯ ಕೀರ್ತಿ ಶ್ರೀಸತಿಯ ಸೀಮಂತದಂತೆಯೂ, ಪಾಶಧರನುದಿತ ಪ್ರತಾಪ ವಿಲಾಸ ವಿಜಯ ಸ್ತಂಭದಂತೆಯೂ, ಆ ಸೇತು ಶೋಭಿಸಿತು.

ವಿಜಯರಾಘವಸಹಿತ ವಿಜಯಕೆ
ಬಿಜಯಮಾಡುವನೆಂದು ಬಂದಜ
ರಜಕ ರಚಿಸಿದ ಮೆಲ್ಲಡಿಯ ಮಡಿವಾಸಿನತಿಶಯವೊ–
ತ್ರಿಜಗದಧಿದೇವತೆಯನಂಬುಧಿ
ಭಜಿಸಿ ಭಾಳದೊಳಿಟ್ಟ ತಿಲಕವೊ
ಗಜಗಲಿಸಿತಿದಿರಿನಲಿ ಸೇತು ಭವಾಬ್ಧಿ ಸೇತುವಿನ.

ಅಹಿತಜಯ ಸಂಕ್ರಮಿತಲಗ್ನದಲಿ ಉದಧಿಕ್ರಮನುರುಸ್ಕಂಧಾವಲಂಬನನಾದನೊಲವಿನಲಿ–ಶ್ರೀರಾಮ. ಕಪಿಸೇನಾ ಸಮುದ್ರವು ಸಮುದ್ರದ ಮೇಲೆ ಸಾಗುತ್ತಿರಲು, ಕಡಲಿನ ಕಟ್ಟೆಯು ಅಬುಧಿಯ ಹಡಗಿನಂತೊಲೆದಾಡುತಿರ್ದುದು.... ರಾಮನ ಸಮುದ್ರತರಣವಾರ್ತೆಯು ಬೇಹಿನವರ ಮೂಲಕ ರಾವಣನ ಕಿವಿಮುಟ್ಟಿದುದು.

## ರೋಗಿಗೌಷಧಿ ಸೊಗಸುವುದೆ?

ದಶಕಂಠನಿಗೆ ಶುಕಸಾರಣರು "ರಿಪುನಳಿನವನ ವಾರಣನಾದ ರಾಘವನ ಸೇನಾಸುಭಟರ ಪರಾಕ್ರಮಾತಿಶಯ ವನ್ನು ವರ್ಣಿಸುತಿದ್ದಂತೆ, ರಾಕ್ಷಸೇಂದ್ರನು ಕಣ್ಣುಗಳಲ್ಲಿ ಕಿಡಿಗೆದರಿ ಜಗನಡುಗುವಂತೆ ಹೂಂಕರಿಸಿದನು. ಅವನು ಬೀಸಿದ ಬಾಳ ಬೆಳಗು ಅಖಿಳ ದಿಶಾಳಿಯನು ಅಳ್ಳಿರಿದುದು." ಇದನ್ನು ಕಂಡು ರಾಮನು ವಿಭೀಷಣನಿಂದ ವಿಚಾರ ತಿಳಿಯಲಾಶಿಸಿ ದಾಗ, ಆ ಹರಿಶರಣನು, ಲಂಕಾವೀರನ ಸತ್ವಾತಿಶಯವನ್ನೂ, ಲಂಕೇಶನಲ್ಲಿ ಸೀತೆಯನ್ನು ಕದ್ದೊಯ್ದ ಕೊರತೆಯೊಂದಲ್ಲ ದಿದ್ದರೆ ಅವನನ್ನು ಗೆಲ್ಲುವವರು ಇರರು ಎನ್ನುವುದನ್ನೂ ಹೇಳಿದಾಗ, ಶ್ರೀರಾಮನು "ನಗೆಮೊಗದಲಿ ಒಂದಂಬನು ಅಸುರ್ರ ನಿದ್ದೆಡೆ ಕಳುಹಿದನು. ಆ ಅಸ್ತ್ರವು ಸುರತ್ನ ಪ್ರಸರ ಮುಕ್ತಾಫಲ ವಿಕೀರ್ಣಪ್ರಭೆಯ ಪಲ್ಲವದ ಮಿಸುಪ ಧವಳಚ್ಛತ ಪಂಕ್ತಿಯ ಪಸರಿಕೆಯ ಪಂಟಿಸಿತು." ಅಷ್ಟರೊಳಗೆ ಸುಗ್ರೀವನು ಲಂಘಿಸಿ "ದಶಶಿರನ ಮಸ್ತಕವ ಹೊಯ್ದು, ಅವನ ಅನುಪಮದ ರಾಜಚಿಹ್ನದ ರತ್ನಬದ್ಧರದ ಹತ್ತುಮುಕುಟವನು ಕಿತ್ತು" ತಂದು ರಾಮುಪದಕ್ಕೊಪ್ಪಿಸಿದನು.

ರಾಮನು ಸುಗ್ರೀವನಿಂದ ರಾಜನೀತಿಗೆ ಭಂಗಬಂದಿತೆಂದು ಚಿಂತಿಸಿ, ಅವನನ್ನು ಎಚ್ಚರಿಸಿದನು. "ಹಗೆಯಲಿ ಸೆರೆಸಿಕ್ಕಿದ ವಸ್ತುವಿಗೆ ಸಂಧಾನವೆನ್ನುವ ನೀತಿಯುಂಟು" ಅದಕ್ಕಾಗಿ ಅಂಗದನನ್ನು ರಾವಣನಲ್ಲಿಗೆ ಸಂಧಿಗೆ ಕಳುಹಿದನು– ಉಚಿತ ನುಡಿಗಳೊಡನೆ.

ಅಂಗದನನ್ನು ಕಂಡ ಲಂಕಾನಿವಾಸಿಗಳು 'ಲಂಕಾನಿರ್ದಹನನಾದ ಹನುಮನೇ ಇನ್ನೊಮ್ಮೆ ಬಂದನೆಂದು ಬೆದರಿ ದರು. "ನಿಳಯ ನಿಳಯದಲಿಕ್ಕಿದವು ಮುಚ್ಚಳ, ಸತಿಯರು ಅಟ್ಟಂಬೊಲೆಗಳನು ನಂದಿಸಿದರು ಉಡುವ ಸೀರೆಗಳ ಹೊಕ್ಕರಣೆಗಳ ಬಾವಿಗಳೊಳಗೆ ಅವುಚಿದರು". ಅಂಗದನು ಅವರ ಭೀತಿಯನ್ನು 'ನುಡಿದು' ನಿವಾರಿಸಿದನು. ಲಂಕೇ ಶನ ಆಸ್ಥಾನವನ್ನು ಹೊಕ್ಕು, "ಲಾಂಗೂಲದ ವರಾಸನದಲಿ ಕುಳಿತು" ಇಲ್ಲಿ ಒಂದರಿಂದ ಹಿಡಿದು ಹತ್ತು ಸಂಖ್ಯೆಯ ವರೆಗಿನ ತಲೆಗಳಿದ್ದವರಲ್ಲಿ–ನಾರೀಚೋರ ದಶಕಂಠನಾರು ಎಂದು ತೋರಿ ಸಹಕರಿಸಬೇಕೆಂದು ಕೇಳಿಕೊಳ್ಳಲು ಪ್ರಹ ಸ್ತನು "ವಿಲಸನದಪ್ರತಿಮಪ್ರತಾಪಾನಿಲನ, ರಾಕ್ಷಸ ರಾಜಮೌಳಿಯ, ಮಲೆವರಿಪುನೃಪಸೂರೆಕಾರನ, ದಶಕಂಠರಾವ ಣೇಶ್ವರನನ್ನು ನೋಡು" ಎಂದು ತೋರಿಸಿದನು.

ಅಂಗದನು ರಾವಣನನ್ನು ಕಂಡು ನುಡಿದನು :

ಜನಕಜೆಯ ಮದುವೆಯಲಿ ಶೂಲಿಯ
ಧನುವಿನಲಿ ನರಿಸಿಕ್ಕಿಸಿಕ್ಕಿದ
ಶುನಕ ತಾನಿವನಲ್ಲಲೇ ? ಶಿರಹತ್ತ ಮೈಮರೆಸಿ
ಜನಪನಿಲ್ಲದ ಹಿಂದೆ ಜನಕನ
ತನುಜೆಯನು ಕದ್ದೊಯ್ದ ಕಾಮುಕ
ರನುಚರರಿಗೆಡೆ ಬಂಟನಲ್ಲಲೇ ?–ಹೇಳಿ ತನಗೆಂದ.

ಎಂದು ರಾವಣನ ಕುಪ್ರಸಿದ್ಧಿಯ ಪುರಾಣವನ್ನೇ ಹೇಳಿ ಗೇಲಿಮಾಡಿ, ಚುಚ್ಚಿ ನುಡಿದನು.

"ರೋಗಿಗೆ ಔಷಧಿ ಹಿಡಿಸುವುದಿಲ್ಲ, ಆದರೆ ನೀನು ಅಂತಾಗಬಾರದು, ಸೀತೆಯನ್ನು ಕೊಟ್ಟು ರಾಮಪದ ಶರಣನಾಗಿ ಬಾಳುವುದು ಲೇಸು" ಎಂದು ಅಂಗದನಾಡಿದ ನುಡಿಗಳು ರಾವಣನಿಗೆ ಹಿಡಿಸದೆ "ರಾಘವ ರವಿಸುತಾದ್ಯರು" ತನುಜರನು ಹೆಸರಿಟ್ಟಡೆಯು ಜಾನಕಿಯ ಬಿಡೆ ಎಂದು ಗರ್ಜಿಸಿ, 'ಉತ್ತರದ ನಾಯವೊಲು ಕೆಲಸಾರು' ಎನ್ನಲು ಅಂಗದನು ಕೋಪದಲಿ ಉಬ್ಬೇರಿ ಕಾಳಗಕೆ ನಡೆ ಎನುತ ಖಳನ ಕೈದುಡುಕಿ, 'ಹಗೆಯ ಕೈದುವ' ಸೆಳೆದುಕೊಂಡು—ತನ್ನನ್ನು ಕೂಡಿಕೊಂಡ ಹನುಮನೊಡನೆ ಹಿಂದಿರುಗಿ—ರಾಮನಿಗೊಪ್ಪಿಸಿದನು.

## ಲಗ್ಗೆಯೇರಿತು ರಿಪುದುರ್ಗವನು ಕಪಿಸೇನೆ

"ಅಧಿಕ ಕ್ರೋಧ ಶಿಖಿ ಹೊಗೆಹೊಗೆದು, ಬಲಿಮುಖ ಚಕ್ರಿಯು ಕಾಳಗಕೆ ಕೈವೀಸಲು ಕಪಿ ವೀರರೆಲ್ಲ ನಗ ಮಹೀರುಹ ಹಸ್ತರಾಗಿ ಲಂಕೆಯ ಕೋಟೆಗೆ ಲಗ್ಗೆ ಹತ್ತಲು ಮುನ್ನುಗ್ಗಿದರು, ಅಗಳನು ಶಿಲಾಳಿಯಲಿ ಹೂಳಿದರು. ಆ ಕೋಟೆಯನು ಕ್ಷಣದಲ್ಲೆ ಧೂಳಿಗೋಂಟೆಯಕೊಂಡರು, ಅಸುರ ಭಟರು ಮಕರಬ್ಬಿಯನ್ನಾಡಿಸಿದರೂ, ಡೆಂಕಣಿಗಳನ್ನು ಹೂಡಿದರೂ, ಶತಘ್ನಿಗಳ ಮೂಲಕ ಕಲ್ಗುಂಡುಗಳನುರುಕೆಡೆದರೂ....ವಾನರವೀರರು ಕೋಟೆಯನ್ನಡರಿದರು. ಅಸುರ—ವಾನರರೊಳಗೆ ಕಾಳಗ ನಡೆದುದು, "ಲಂಕಾದುರ್ಗವು ಅನುವರದ ಪ್ರಾರಂಭಕದ ರಣವನಿತೆಗೆ ಉಣಬಡಿಸಿರ್ದ ರುಧಿರೋದನದ ಬುತ್ತಿಯಂತೆ ಮೆರೆದುದು".

## ಬಿಸುಡು ಬಿಸುಡೆಲೆ, ಇದು ವಸುಮತೀಶನ ಶಿರವಲ್ಲ

ದುರ್ಗದ ವಿಷಮರಣವಾರ್ತೆಯನು ಕೇಳಿ, ಕೈಕಸೆ ಮತ್ತು ಮಾಲ್ಯವಂತರು ರಾವಣನಿಗೆ ರಾಮನೊಡನೆ ರಣ ಬೇಡವೆಂದು ನೀಡಿದ ಸಲಹೆಯು ವ್ಯರ್ಥವಾಯಿತು. "ಹಲವನೆಣಿಸಿದ ರಾವಣನು ಸೀತೆಯನೊಳಗುಮಾಡುವ ಉಪಾಯ ಕುಶಲನ ತರ್ಕಿಸಿ ವಿದ್ಯುಜ್ಜಿಹ್ವನನ್ನು ಕರೆದು, ಮಾಯೆಯಲಿ ರಾಮನಂದದ ಶಿರವ ರಚಿಸಿ, ಸೀತೆಯ ಮುಂದೆ ಹಾಯ್ಕಿ ವೈವಳಿಯ ಮಾಯೆಯಲಿ ಮಾತಾಡಿ ಆಕೆಯು ರಾಯನಾಸೆಯನ್ನು ಬಿಡುವಂತೆ ಮಾಡುವುದೆಂದು ನೇಮಿಸಿದನು. ಮಾಯಾವಿಯು ಅಂತೆಯೇ ಗೈಯಲು, ಆ ಅಸುರದ ಶಿರವ ಕಂಡು ಸೀತೆ ಮೂರ್ಛೆಹೋದಳು, ಅಲ್ಲಿಗೆ ಬಂದ ಸರಮೆ, ತ್ರಿಜಟೆಯರು ವಿವರ್ಣಹೊಂದುತಿದ್ದ ಆ ಕೃತಕ ಶಿರವನ್ನು ಕಂಡು "ಬಿಸುಡು ಬಿಸುಡೆಲೆ, ತಾಯಿ, ಇದು ವಸುಮತೀಶನ ಶಿರವಲ್ಲ. ರಕ್ಕಸನ ಮಾಯೆಯಿದು" ಎಂದು ಸೀತೆಯನ್ನು ಸಂತೈಸಿದರು.

## ನಿಗಮದ ಗರಿಯು ಗರುಡ

ಕಾಳಗವು ಮುಂದುವರಿದುದು. ಇಂದ್ರಜಿತು ಪ್ರಯೋಗಿಸಿದ ನಾಗಾಸ್ತ್ರಕ್ಕೆ ಕಟ್ಟುಬಿದ್ದು ರಾಮ ರಾಮಾನುಜರೂ ಮೈಮರೆದಾಗ ವಿಹಗೇಂದ್ರ ಗರುಡನು ಅಲ್ಲಿಗೆ ಬಂದನು. ಆ ನಿಗಮದ ಗರಿಯ ಗರುಡನ ಗಾಳಿಗೆ ವಾಸುಕಿಯು, ತಕ್ಷಕನನಂತನ ಮೈಸಿರಿಗಳಡಗಿದವು, ಶ್ರೀರಾಮನು ಗರುಡನನ್ನು ಹೊಗಳಹೊರಟಾಗ, 'ಮಾಯಾಮರೆಯ ನಾಟಕ ಸಾಕು' ಎಂದು ಗರುಡನು ವಂದಿಸಿ ತೆರಳಿದನು.

## ದಿಗಂಬರನಾದ ಸುರೇಂದ್ರ

ಧೂಮ್ರಾಕ್ಷನನ್ನು ಹನುಮಂತನೂ, ವಜ್ರದಂಷ್ಟ್ರನನ್ನು ಅಂಗದನೂ ಕೆಡಹಿದರು. ಅಂಗದನ ವಿಜಯವಾರ್ತೆಯನ್ನು ಕೇಳಿ ದಿವಿಜೇಂದ್ರನು ದಿವದಿಂದಿಳಿದು ತನ್ನ ಮೊಮ್ಮಗನಾದ ವಾಲಿಜನಿಗೆ "ಸುರಕುಜದ ದಂಡೆಯ ಹಾಯ್ಕಿ, ಏಕಾವಳಿ, ಮಣಿಕುಂಡಲಗಳನ್ನಿತ್ತು, ತಬ್ಬಿ, ಹರಸಿ, ಮರಳಿದನು. ಆಂಜನೇಯನಿಂದ ರಣಭಯಂಕರ ಅಕಂಪನನ ವಧೆಯಾಯಿತು." ಅಪ್ರತಿಮ ರಣರಂಗ ಭುಜಪ್ರತಾಪಾತಿಶಯದ ಪ್ರಹಸ್ತನನ್ನು ನೀಲನು ರಣದಲಿ ಕೆಡಹಿದನು. ಪ್ರಹಸ್ತನ ಮರಣವಾರ್ತೆಯನ್ನು ಕೇಳಿ ಲಂಕೇಶ್ವರನು ತಾನೇ ರಾಮಸಮರಕ್ಕನುವಾದನು. ಸಮರವೇಷಭೂಷಣನಾಗಿ ರಾವಣನು ರಣಕಣಕ್ಕೆ ಪ್ರಸ್ಥಾನ ಮಾಡಿದೊಡನೆ,

ಮಲಿನ ಸುಭಟರಗಂಡ, ಸುರಕರಿ
ಕಳಭ ಕುಲ ಭೇರುಂಡ, ಕಂಪಿತ
ಕುಲಿಶ ಸದೃಶ ಮಹೋಗ್ರ ಕೌಂಕ್ಷೇಯಕ ಭುಜಾದಂಡ,
ವಿಲಸದಭಿನವ ರುದ್ರ ರೌದ್ರಾ–
ಕಲಿತ ಶೌರ್ಯಸಮುದ್ರ, ಮುದ್ರಿತ
ಫಲ ಸುಭೋಗ ಸುಭದ್ರ ಜೀಯೆಂದೊದರಿತಮರಗಣ.

ಕಪಿವೀರರೆಲ್ಲರೂ, "ಸಿಡಿಲಿನ ಪಾಳಯವು ಪಡಿಮುಖದ ಗಿರಿಗಳ ಮೇಲೆ ಮುಳಿದೇಳುವಂತೆ ಶೈಲ, ತಾಳ, ತಮಾಲ ತರುಗಳ ತೋಳುಗಳ ನೆಗಹಿನಲಿ" ರಕ್ಕಸನ ಮೇಲೆ ಬಿದ್ದರು. ರಾವಣನು ನೀಲನನ್ನು ಮೂರ್ಛೆಗೊಳಿಸಿದನು, ಸುಗ್ರೀವನೂ ಕಾಳಗದಲ್ಲಿ ನೊಂದನು. ಆದರೆ ಹನುಮನೊಡನೆ ಮುಷ್ಟಿಯುದ್ಧಕ್ಕೆ ತೊಡಗಿದ ದಶಕಂಠನು "ತಿವಿದ ತಿವಿಗಳನಾಂತು, ಪುನರಪಿತಿವಿದ ತಿವಿಗಳನಾನಲಾರದೆ, ಪವನಜನ ಮರವೆಯಲಿ" ಓಡಿದನು. ಕಾಳಗದಲ್ಲಿ ರಾಮನನ್ನು ಎದುರಿಸಿದ ಅಸುರದಲ್ಲಣನು, ಸಾರಥಿ, ರಥ, ಆಯುಧ, ಪರಿಧಾನ–ಎಲ್ಲವನ್ನೂ ಕಳೆದುಕೊಂಡು "ಎಲ್ಲವನ್ನೂ ತ್ಯಾಗಮಾಡಿದ ಜಿನಮುನಿವರನ ದಿಗಂಬರತ್ವ"ವನ್ನು ತಳೆಯಬೇಕಾಯಿತು. "ನಿರಾಯುಧನ, ಲಜ್ಜಿತನ ಕೊಲಲಾರೆವು" ಎಂದು ರಾಮನು ನುಡಿಯಲು, ನಾಚಿ ಅರಮನೆಗೆ ಮರಳಿದನು.

## ಕುಂಭಕರ್ಣನ ಸಮರೋದ್ಯಮ–ಬಿದ್ದುದು ಮಣಿಮಕುಟ ಸಿಂಗಣದರಸುಭೂಮಿಯಲಿ

ಚಿಂತೆಗೊಳಗಾದ ರಾವಣನು "ಎಬ್ಬಿಸುವೆನು ಅನುಜನನು ಮನುಜನ ಜಬ್ಬುದುಳಿಸುವೆನು"–ಎಂದು ನಿರ್ಧರಿಸಿ, ಕುಂಭಕರ್ಣನನ್ನು ನಿದ್ದೆಯಿಂದೆಬ್ಬಿಸಲು ಆಜ್ಞಾಪಿಸಿದನು. ಆ ರಕ್ಕಸನನ್ನು ಎಬ್ಬಿಸಲು ಮಾಡಿದ ಅಸಾಧಾರಣ ಪ್ರಯತ್ನಗಳೆಲ್ಲಾ ವ್ಯರ್ಥವಾಗಲು, ಅವನಿಗೆ ನಿದ್ರಾ ವರವನ್ನು ಕೊಟ್ಟ ಬೊಮ್ಮನೇ ಬರಬೇಕಾಯಿತು. ಅವನು ಎದ್ದೊಡನೆ ಉರಿದೆದ್ದ ಜಠರಾಗ್ನಿಯನ್ನು ನಂದಿಸಲು ಅಸುರಗುರುವು ಸಿದ್ಧ ಗುಳಿಗೆಯನ್ನು ಕೊಡಬೇಕಾಯಿತು.

ಅಣ್ಣನ ಆಸ್ಥಾನಕ್ಕೆ ತೆರಳಿದ ಕುಂಭಕರ್ಣನು, ಎಲ್ಲವನ್ನೂ ಅರಿತು, "ನೃಪಾಲ ತಳೋದರಿಯ ಮರಳಿಸುವುದು ಲೇಸು, ಧರ್ಮವಿಹಿತ" ಎಂದರೂ ರಾವಣನು ಒಪ್ಪದಿರಲು, ರಣವೀಳ್ಯವನ್ನು ಪಡೆದು ಯುದ್ಧಕ್ಕೆ ಹೊರಟಾಗ ಕಾಲ ನಡುಗಿದನು. ಎರಡು ಕೋಟಿ ಬೊಮ್ಮ ರಕ್ಕಸರು ಅವನನ್ನು ಹಿಂಬಾಲಿಸಿದರು ಕುಂಭಕರ್ಣನು ಕಾಳಗದ ಕಣಕ್ಕೆ—

ಹೊಕ್ಕ ನೈಯಲಿ ಕೋಟಿ ಸಂಖ್ಯೆಯ
ನಿಕ್ಕಿದನು ನಾಲಗೆಯ ನಿಗುರಲಿ
ನೆಕ್ಕಿದನು ಶತಕೋಟಿ ಸಂಖ್ಯೆಯನೊರಸಿ ಕೈಗಳಲಿ
ಮುಕ್ಕಿದನು ನಿರ್ಬುದ ಮಹಾರ್ಬುದ
ಲೆಕ್ಕದತಿಬಲ ವಾನರರ ಬಿ–
ದ್ದಿಕ್ಕಿದವೊಲಾಯ್ತನುವು ವಿಲಯದ ಮೃತ್ಯುದೇವತೆಗೆ.

ಒಂದನೆ ದಿನದಕೊನೆಯಲ್ಲಿ ಸುಗ್ರೀವನನ್ನು ಕುಂಭಕರ್ಣನು ಕಂಕುಳಲಿ ಔಕಿ "ಬಲಿಮುಖ ರಾಜನನ್ನು ಗೆಲಿದೆ" ಎಂದು ಹಿಗ್ಗುವಷ್ಟರಲ್ಲಿ ಕಪೀಂದ್ರನು ಜಾರಿಕೊಂಡು ರಕ್ಕಸನ ನಾಸ, ಕರ್ಣಗಳನ್ನು ಕಚ್ಚಿ ಕತ್ತರಿಸಿಕೊಂಡು ಹಿಂದೆ ಹಾರಿದನು. ಕಂಕುಳಲಿದ್ದ ಕಪೀಶ್ವರನನ್ನೂ, ಅದರೊಂದಿಗೆ ತನ್ನ ಮೂಗು ಕಿವಿಗಳನ್ನೂ ಕಳೆದುಕೊಂಡ ಕುಂಭಕರ್ಣನ ಸ್ಥಿತಿ ರಕ್ಕಸನಾರಿಯರ ಮುಸುಕಿನ ನಗೆಗೆ ಕಾರಣವಾದುದು.

ಮತ್ತೆ ಕಾಳಗಕ್ಕೆ ನುಗ್ಗಿದ ಅವನನ್ನು ರಾಮನೇ ಎದುರಿಸಿದನು. ವಿಭೀಷಣನ ಸೂಚನೆಯನ್ನು ಗಮನಿಸಿ, ಕುಂಭಕರ್ಣನ ನೆತ್ತಿಯಲ್ಲಿದ್ದ ಜೀವರತ್ನಕ್ಕೆ ಅಸ್ತ್ರಪ್ರಯೋಗ ಮಾಡಲು, ಆ ಸರಳ ತೀವ್ರತೆಗೆ ಆ ದೈತ್ಯನ ಮಣಿಮಕುಟ "ಸಿಂಗಣದರಸುಭೂಮಿಯಲಿ ಬಿದ್ದುದು, ಶಿರ ರಸಾತಳಕಾಳೆ ಕೆಡೆದುದು." ಜೀವ ರತ್ನವು ರಾಮನನ್ನು ಸೇರಿಕೊಳ್ಳುತ್ತಿರಲು, ಅದನ್ನು ಅವನು ವಿಭೀಷಣನಿಗಿತ್ತನು.

### ಬನ್ನಿರೈ ಸಂಸಾರ ಶರಧಿಯೆಂನು ದಾಟುವರು-ಅತಿಕಾಯಂ

ಕುಂಭಕರ್ಣನು ಹತನಾದ ಕರಾಳ ವಾರ್ತೆ ಕೇಳಿ ರಾವಣನು ಕೆರಳಿ ರಣರಂಗಕ್ಕೆ ತಾನೇ ಸಿದ್ಧನಾಗುತ್ತಿರಲು, ಅತಿಕಾಯನು ತಂದೆಗೆ ನಮಿಸಿ, "ಇಕ್ಷ್ವಾಕು ಕುಲ ಪಾಲಕನು ಜಗದೇಕನಾಥನಲ್ಲದೆ ಬೇರಲ್ಲ, ಅವನೊಡನೆ ಅತಿಮಥನ ಲೇಸಲ್ಲ, ಶರಣಾಗಿ ಹರಿಯ ಅನುಗ್ರಹ ಹೊಂದುವುದು ಉಚಿತ...." ಎಂದು ವಿಧವಿಧವಾಗಿ ಹೇಳಿದರೂ, ರಾವಣನು ತನ್ನ ಛಲವನ್ನು ಬಿಡದಿರಲು, "ಅಹುದು, ಮತ್ತೇನಾರಚಿತ್ತದಲಿಹುದವನರೇ ಬಲ್ಲರು" ಎಂದು ರಣಕ್ಕೆ ಸಿದ್ಧನಾದನು.

ಅತಿಕಾಯನ ಪಾಲಿಗೆ ರಣಭೂಮಿಯು ಪೌರುಷ ಪ್ರದರ್ಶನದ ರಂಗವಾಗಿರಲಿಲ್ಲ, ಆದಿ ಪುರುಷನನ್ನು ಕೂಡಿಕೊಳ್ಳುವ ಮುಕ್ತಿರಂಗವಾಗಿತ್ತು, ತನ್ನ ಜತೆಯಲ್ಲಿ ಮೋಕ್ಷ ಕಾಮಿಗಳೆಲ್ಲ ಬರಬಹುದು ಎಂದು ಡಂಗುರ ಸಾರುತ್ತಾ, ಕಾಳಗದ ಕಣದಲ್ಲಿ, ಲಕ್ಷ್ಮಣನೊಡನೆ "ಸರಳ ಭಕ್ತಿಯ ಮೂಲಕ ಸಿರಿನಾರಾಯಣಧ್ಯಾನದಲಿ" ಹೋರಾಡಿ ಮುಕ್ತಿಸಾಮ್ರಾಜ್ಯಕ್ಕೊಡೆಯನಾದನು.

### ಪರಸತಿದ್ರೋಹಾನುಕೂಲತೆ ನರಕಕೊಯ್ಯದೆ ಬಿಡುವುದೆ?-ಇಂದ್ರಜಿತುವಧೆ

ಇಂದ್ರಜಿತುವು ತಾನು ವಿಜಯಭಾಮಿನಿಯನ್ನೆಳೆದು ತರದಿದ್ದರೆ "ನಿನಗೆ ಜನಿಸಿದವನಲ್ಲ" ಎಂದು ತಂದೆಗೆ ಭಾಷೆ ಕೊಟ್ಟು, ನಿಕುಂಭಿಳೆಗೆ ನಡೆದು ಆಸುರದ ಅಭಿಚಾರಾಧ್ವರವ ಕೈಗೊಂಡನು. ರಾತ್ರಿಯೆಲ್ಲ ಯಜ್ಞ ನಡೆಸಿ, ಉದಯ ಮುಖದಲಿ ರಣರಂಗಕ್ಕೆ ನಡೆದನು. ಅಂದಿನ ಅವನ ಯುದ್ಧ ಅಪೂರ್ವವಾಗಿತ್ತು. ಅವನು ಬಳಸಿದ ಮಂತ್ರಾಸುರಕ್ಕೆ ಮನುಜವಲ್ಲಭರೂ ಒಳಗಾದರು. ಇದರಿಂದ "ದುರ್ಜನಗೆ ಸಂಧಿಸಿದ ಸಿರಿಯವೊಲು" ರಕ್ಕಸನು ಉಬ್ಬಿದನು.

ಹನುಮಂತನು ತನ್ನ ಅಸಾಧಾರಣ ಸಾಹಸದಿಂದ ತಂದ ಮರುಜೇವಣಿಯಿಂದ ಬಿದ್ದವರೆಲ್ಲ ಎದ್ದರು. ಇನ್ನೊಮ್ಮೆ 'ಲಂಕಾದಹನ' ನಡೆದುದು. ಇಂದ್ರಜಿತುವಿನ ಸಂಚಿನ 'ಮಾಯಾ ಸೀತೆ'ಯ ಶಿರವು ವಿಭೀಷಣಸ್ಪರ್ಶದಿಂದ ಬಟ್ಟಬಯಲಾದುದು. ಹೀಗೆ ವಿಫಲನಾದ ರಾವಣಿಯು 'ಮಾರಣಹೋಮಕ್ಕೆ' ತೊಡಗಿದನು. ಲಕ್ಷ್ಮಣನು ಆ "ಪರಸತಿದ್ರೋಹಾನುಕೂಲತೆಯ ಬೇಳುವೆಯಬೇಳಂಬವನು ಕೆಡಿಸಿದನು. "ವತ್ಸರಗಳೀರೇಳುಪವಾಸದ, ಸುನಿದ್ರಾ, ಭಾಮಿನೀವರ್ಜಿತನಾದ ಲಕ್ಷ್ಮಣನು ಬ್ರಹ್ಮಾಸ್ತ್ರವನ್ನು ಇಂದ್ರಾರಿಗೆ ಪ್ರಯೋಗಿಸಿದಾಗ-"ವೀರ ಲಂಕಾಪಾಲಕನ ಭುಜವಿಜಯ ಲಕ್ಷ್ಮಿಯ ತೋಳ ಕನ್ನಡಿ ನಭದಿಂದ ಕಳಚಿ ಬೀಳ್ವಂತೆ-ಡಾಳಿಸುವ ದಾಡೆಗಳ, ಹೊಗರೊಗುವಾಲಿಗಳ, ನಗೆಮೊಗದ, ಕರ್ಣವಿಲೋಲ ಕುಂಡಲದ, ಅಸುರ ಶಿರವು ಮಹೀತಳಕ್ಕೆ ಬಿದ್ದುದು.

### ಶರಣುವೊಗುವವನಲ್ಲ-ತೊಡು ಮಹಾಸ್ತ್ರವ

'ಸುತಶೋಕ ಶಿಖಿಯನು ಮುರಿದು, ಲಂಕೇಶನ ರೋಷಪಾವಕವು ಬಾಹು ಪ್ರತಾಪಾನಲನ ನಾಲಗೆಯನುಬ್ಬರಿಸಿತು.' ರಾಮನಿಂದ ಇನ್ನೊಮ್ಮೆ ಪರಾಜಿತನಾದ ರಾವಣನು ರಣವಿಜಯಕ್ಕಾಗಿ ಮಹಾ ಮಾರಣಯಜ್ಞವನ್ನುಪಕ್ರಮಿಸಿದನು.

ಕರಿಯ ಚರ್ಮದ ಹೊದಕೆಗಳ ನಿಡು
ಗರುಳ ಸವ್ಯ ಪವಿತ್ರಸೂತ್ರದ
ನರರುಧಿರದನುಲೇಪನದ ದಾಸಣದ ದಂಡೆಗಳ
ಶಿರದ ಬಿಡುಗೂದಲಿನ ದಕ್ಷಿಣ
ಕರದ ಕತ್ತಿಯಲಾಭಿಚಾರಾ
ಧ್ವರದ ದೀಕ್ಷಿತತನವ ಕೈಕೊಂಡನು ದಶಗ್ರೀವ.[1]

ವಿಭೀಷಣನಿಂದ ರಾವಣ ಯಜ್ಞವಾರ್ತೆಯನ್ನರಿತ ಕಪಿವೀರರು ಆ ಕಡೆಗೆ ದಾಳಿಯಿಟ್ಟರು, ರಕ್ಕಸನ ಮುಂದೆ

1. ತೊ. ರಾ. VI ೬೮-೧೩.

* 3

ಮಂಡೋದರಿಯೆನ್ನೆಳೆದು ತಂದು ಉಟ್ಟಸೀರೆಯ ಸೆಳೆಯಲು 'ನೀನು ಲೋಗರ ಹೆಂಡತಿಯನಪ್ರಕಟದಲಿ ತಂದೆ ಈಗ ಪ್ರಕಟದಲಿ ನಿನ್ನಂಗನೆಯ ನಿನ್ನ ಸಮುಕ್ಷದಲಿ ಮಾನಭಂಗಗೊಳಿಸುತ್ತಿರಲು ನೀನು ಸಮರ್ಥನಾದರೆ ರಕ್ಷಿಸು'[1] ಎಂದು ಆಕೆಯು ಮೊರೆಯಿಟ್ಟಳು. ಈ ನುಡಿಗಳನ್ನು ಕೇಳಿ ಕನಲಿದ ರಾವಣನು ಯಜ್ಞ ದೀಕ್ಷೆಯನ್ನುಳಿದು ಹಿಮಕರಹಾಸವನ್ನು ಜಡಿದು ರಣಕಣಕ್ಕೆ ಬಂದನು. ಶ್ರೀರಾಮನು ಇಂದ್ರನು ಕಳುಹಿಸಿಕೊಟ್ಟ ರಥವೇರಿ ಮಾತಳಿಯ ಸಾರಥಿತ್ವದಲ್ಲಿ ರಾವಣ ನೊಡನೆ ಹದಿನಾರುದಿನ ಹೋರಾಡಿದನು. ಜಯ ಸಿಗದಿರಲು ರಾಮನು ವಿಷಾದಕ್ಕೊಳಗಾಗಲು, ಅಗಸ್ತ್ಯನು ಬಂದು ಮಂತ್ರ, ಶಕ್ತಿಗಳನ್ನು ನೀಡಿದನು.

ರಣದಲ್ಲಿ ಕಾಳಗ ಮುಂದುವರಿಯುತ್ತಿರಲು ರಾವಣನಿಗೆ "ವಿಶ್ವರೂಪ" ದರ್ಶನ ಭಾಗ್ಯ[2] ಲಭಿಸಿತು. ರಾವಣ ನಿಗೆ "ಮಾಹಾತ್ಮ್ಯಜ್ಞಾನವುಂಟಾಯಿತು," ಇನ್ನೆಲ್ಲವೂ ತನ್ನಪಾಲಿಗೆ ಮುಕ್ತಿಯ ಸೂರೆ ಎಂದು ಹಿಗ್ಗುತ್ತಾ, ರಾಮ ನೊಡನೆ 'ಹೂಡು ಅಸ್ತ್ರವನು, ಮರಣಕಂಜುವವನಲ್ಲ' ಎಂದನು. ವಿಭೀಷಣನ ಸೂಚನೆಯಂತೆ ಅಸುರನ ಮರ್ಮ ಸ್ಥಾನವಾದ ವಕ್ಷಸ್ಥಳಕ್ಕೆ ರಾಮನು ಬಾಣ ಹೂಡಲು, 'ಅಚ್ಯುತನನ್ನೇ ಏಕದೃಷ್ಟಿಯಿಂದ ನೋಡುತಿದ್ದಂತೆ' ದಶ ಕಂಠನು ಅಸುವಳಿದುರುಳಿದನು.

### ಜನಕಜೆ ಆದಿಲಕ್ಷ್ಮಿ ಕಣಾ ಪರಿಗ್ರಹಿಸು : ಸೀತಾ–ರಾಮ ಸಮಾಗಮ

ಪತಿವಿಯೋಗದಿಂದ ಗತಿಗಾಣದ ಮಂಡೋದರಿಯನ್ನು ರಾವಣನು "ಕರುಣೋದಯದ ಮಾಧುರ್ಯ ವಚನದಲಿ" ಸಂತವಿಟ್ಟನು. ಹನುಮನನ್ನು ಕಳುಹಿ ಪುರಜನರ ಭೀತಿಯನು ನೀಗಿದನು. ವಿಭೀಷಣನಿಂದ ರಾವಣನ ಸಂಸ್ಕಾರ ನಡೆಯುವಂತೆ ಏರ್ಪಡಿಸಿದನು. ವಿಭೀಷಣನಿಗೆ ರಾಜ್ಯಾಭಿಷೇಚನವಾಯಿತು.

ರಾವಣವಧೆಯಾದರೂ, ಪರರ ಮನೆಯಲಿದ್ದ ಸೀತೆಯನ್ನು ಸ್ವೀಕರಿಸಲು ರಾಮನು ಒಮ್ಮೆಯೇ ಒಪ್ಪಲಿಲ್ಲ, ಆಕೆ ಯನ್ನು ಚುಚ್ಚುನುಡಿದು 'ವಿಡಂಬನೆ'ಮಾಡಿದನು. ನೊಂದ ಸೀತಾಮಾತೆ ಅಗ್ನಿಪ್ರವೇಶಮಾಡಲು, ಅಗ್ನಿ ದೇವನು ಆಕೆಯನ್ನು–ಪುಟವಿಟ್ಟ ಹೊನ್ನಿನಂತೆ ಹೊಳೆಯುತಿದ್ದ–ಸೀತೆಯನ್ನು ಎತ್ತಿ ಹೊರತಂದನು.[3] ಸ್ವರ್ಗದಿಂದ ದಶರಥನೂ ಬಂದು ರಾಮನನ್ನು ಕೇಳಿಕೊಂಡಮೇಲೆ ಅವನು ಸೀತೆಯನ್ನು ಸ್ವೀಕರಿಸಿದನು. ಸಂತೋಷಿತನಾದ ಪರಿಶರಣನು ಲಂಕೆ ಯಲ್ಲಿ 'ಬಿದ್ದೂಟ'ವನ್ನೇರ್ಪಡಿಸಿದನು.

### ರಾಮ–ರಾಜ್ಯದ ಸಿರಿಗೆ ಸರಿಯದಾವುದು ?

ಪುಷ್ಪಕವನ್ನೇರಿ ರಾಮ ಸಕಲ ಬಲಸಹಿತ ಅಯೋಧ್ಯೆಗೆ ಹೊರಟನು. ಭಾರದ್ವಾಜಾಶ್ರಮದಲ್ಲಿ ಆತಿಥ್ಯ ಪಡೆದು, ಹನುಮನ ಮೂಲಕ ಭರತನಿಗೆ ಸಂದೇಶ ಕಳುಹಿ ಅವನ ಅಗ್ನಿ ಪ್ರವೇಶದ ಅಪಾಯವನ್ನು ತಡೆದು ನಗರವನೇರಿ ತಾಯಿ ತಮ್ಮಂದಿರ ಸಂತಸದ ಸ್ವಾಗತವನ್ನು ರಾಮನು ಕಂಡು ನಲಿದನು. ಶ್ರೀರಾಮಪಟ್ಟಾಭಿಷೇಕ ಅಲೌಕಿಕ ರೀತಿಯಿಂದ ನೆರವೇರಿತು. ಸುಗ್ರೀವಾದಿಗಳು ಮೂಲ ರೂಪವತಳೆದು ರಾಮನು ಕೊಟ್ಟ ಕಾಣಿಕೆಗಳನ್ನು ಸ್ವೀಕರಿಸಿದರು. ಹನು ಮನಿಗೆ 'ಸಹಭೋಜನ ಭಾಗ್ಯ' ದೊರೆಯಿತು, ಭರತನಿಗೆ ಯುವರಾಜ ಪಟ್ಟವನ್ನೂ, ಶತ್ರುಘ್ನನಿಗೆ ಸೇನಾಪಟ್ಟವನ್ನೂ ರಾಮನು ಕಟ್ಟಿದನು.

ಎಲ್ಲೆಲ್ಲೂ ಕೀರ್ತಿರುಚಿ ಪಸರಿಸುವಂತೆ ರಾಮನು ರಾಜ್ಯವಾಳಿದನು. "ರಾಮರಾಜ್ಯದ ಸಿರಿಗೆ ಸರಿಯದಾವುದು ? ಎನ್ನುವ ಅಸಮಾನ ರೀತಿಯಲಿ ರಘುರಾಮಚಂದ್ರಮನು ಪಾಲಿಸಿದನುರ್ವರೆಯ"

ತೊರವೆಯ ಮಂಗಳ ಶ್ರೀಮೂರ್ತಿ ನರಕೇಸರಿಯ ಕಾವ್ಯದಲಿ ಮಂಗಳವು ಜಗಕಾಯ್ತು, ಸರಾಗದಿ ಸಂಗಡಿಸಿದುದು ಸಮಸ್ತ ಸನ್ಮಂಗಲ ಸಕಲ ಸಜ್ಜನಕೆ.

---

1. ತೊ. ರಾ. VI ೪೮-೨೬.
2. ಇದೇ. ೫೧-೪೪.
3. ಇದೇ. ೫೩-೧೦೦.

## ಕೃತಿನಿಷ್ಠ–ವಿಮರ್ಶೆ

### ಪಾತ್ರ ಪರಿಶೀಲನೆ

ವಸ್ತು ವಿಚಾರದಲ್ಲಿ ಆದಿಕಾವ್ಯದ ನೆಳಲು ಹಿಡಿದು ಅನುಸರಿಸಿದವನು ಕುಮಾರ ವಾಲ್ಮೀಕಿ. ಹಾಗೆಂದು ತೊರವೆ ರಾಮಾಯಣವು ವಾಲ್ಮೀಕಿ ರಾಮಾಯಣದ ತದ್ವತ್ ಅನುವಾದನಾಗಿಲ್ಲ ಎನ್ನುವ ಅಂಶ ಎರಡು ಕಾವ್ಯಗಳ ತುಲನಾತ್ಮಕ ಅಭ್ಯಾಸದಿಂದ ಖಚಿತವಾಗುತ್ತದೆ.[1] ಕನ್ನಡದ ಕವಿ ಕುಮಾರವಾಲ್ಮೀಕಿಯ 'ಸತ್ವ'ವನ್ನೂ 'ಸ್ವೋಪಜ್ಞತೆ'ಯನ್ನೂ ಹುಡುಕ ಹೊರಟ ನಾವು ಆದಿಕವಿಯ ಪಾತ್ರಗಳ ಪ್ರತಿರೂಪಗಳ ಪರಿಚಯ ಮಾಡಹೊರಟರೆ ಗುರಿಯನ್ನೇ ಮರೆತಂತಾದೀತು. ಹಾಗಾಗಿ, ಕುಮಾರ ವಾಲ್ಮೀಕಿಯು ಕನ್ನಡಿಸಿದ 'ರಾಮನ ಪಾತ್ರ'ವೊಂದನ್ನು ಮಾದರಿಗಾಗಿ ಸೂಚಿಸಿ, ಆದಿಕಾವ್ಯಕ್ಕೆ ಹೊರತಾದ ವೈಶಿಷ್ಟ್ಯಗಳಿಂದ ಕೂಡಿದ ರಾವಣ, ಅತಿಕಾಯ ಪಾತ್ರಗಳನ್ನು ಪ್ರತ್ಯೇಕವಾಗಿ ಪರಿಶೀಲಿಸುವುದು ಉಚಿತವೆನಿಸುತ್ತದೆ.

### ಕಥಾಧಿಪತಿ ಶ್ರೀ ರಾಮ

ತನ್ನ ಕೃತಿಯ ಕಥಾಧಿಪತಿ 'ತೊರವೆಯ ನರಹರಿ' ಎಂದೇ ಸ್ಪಷ್ಟಪಡಿಸಿದ[2] ಕುಮಾರ ವಾಲ್ಮೀಕಿಗೆ ದೇವೋತ್ತಮನಾದ ನಾರಾಯಣನೇ ಶ್ರೀರಾಮನಾಗಿ ಅವತರಿಸಿದ್ದಾನೆ ಎನ್ನುವುದರಲ್ಲಿ ಸಂದೇಹವಿಲ್ಲ! ರಾಮನು ಜನಿಸಿದನು ಎನ್ನುವಲ್ಲಿ 'ಜಾತರಹಿತನು ಜನಿಸಿದನು ಖದ್ಯೋತ ಕುಲದಲಿ' ಎಂದೇ ಕವಿಯ ಹೇಳಿಕೆ.[3] 'ಹಿರಿಯರಸಿ ಬೆಸಲಾದಳು ಭವಸ್ಥಿತಿ ಲಯ ವಿವರ್ಜಿತನ'[4], 'ತುದಿಮೊದಲು ನಡುವೆಂಬ ಲಯದಭ್ಯುದಯವೆಂಬ ವಿಕಾರಗಳು ಸೋಂಕದ ಸನಾತನನಿಗಾಯ್ತು ಲೀಲೆ ಮನುಷ್ಯರೂಪಿನಲಿ'[5] ಹೀಗೆ ರಾಮನ ದಿವ್ಯತೆಯನ್ನು ಕೈವಾರಿಸುವ ನುಡಿಗಳು ಈ ಕೃತಿಯಲ್ಲಿ ಹೇರಳ ದೊರೆಯುತ್ತವೆ[6]. ನರಚರಿತ್ರನಾದ ರಾಮನ ಜೀವನವೆಲ್ಲ ಈ ಭಕ್ತ ಕವಿಗೆ ಲೀಲಾ ವಿಡಂಬನೆಯಲ್ಲದೆ ಇನ್ನೇನೂ ಅಲ್ಲ. ಇಂತಹ ಲೀಲಾ ವಿನೋದನಾದ ರಾಮನು ತನ್ನ (ಜೀವನವನ್ನು) ಅವತಾರ ನಾಟಕವನ್ನು ಕಲಾತ್ಮಕವಾಗಿ ನಿರ್ವಹಿಸುವಂತೆ ಚಿತ್ರಿಸಿದ್ದರಲ್ಲಿಯೇ ಕುಮಾರ ವಾಲ್ಮೀಕಿಯ ವೈಶಿಷ್ಟ್ಯವಿದೆ.

### ಅಸಮಾನನಾದ ಬಿಲ್ಲಾಳು

ಬಾಲ್ಯದಲ್ಲಿಯೇ ಗಜತುರಗದೇರಾಟದಲಿ, ಗದೆ ಮುದ್ಗರ ಕೃಪಾಣ ಶರಾಸನಾದಿ ಸಮಸ್ತ ಶಸ್ತ್ರದಲಿ[7] ಶ್ರೀ ರಾಮನ ಅಸಮಾನ ಬಿಲ್ಲಾಳುತನವು ವಿಶ್ವಾಮಿತ್ರ ಮಹರ್ಷಿಯನ್ನು ತನ್ನೆಡೆಗೆ ಆಕರ್ಷಿಸುತ್ತದೆ. ವಿಶ್ವಾಮಿತ್ರನಿಂದ ದಿವ್ಯಾಸ್ತ್ರ ಮಂತ್ರೋಪದೇಶಹೊಂದಿ[8] ಘೋರ ತಾಟಕಿ, ಸುಬಾಹುಗಳನ್ನು ಕೆಡಹಿದುದು ರಾಮನ ಶಸ್ತ್ರ ಪಾಂಡಿತ್ಯಕ್ಕೆ ಅಸಾಧಾರಣ ಪ್ರಕಾಶವನ್ನು ನೀಡುತ್ತದೆ.

ಸೀತಾಕಲ್ಯಾಣ ಮಂಟಪದಲ್ಲಿ ರಾಜಾಧಿರಾಜರೆದುರು ಹರಧನುಸ್ಸನ್ನು "ಎಳೆಯ ಕಬ್ಬಿನ ಕೋಲನನ ಕರಿ ಕಳಭ ಕರದಲಿ ಮುರಿವವೊಲು" ಇಕ್ಕಡಿಗಳೆದದ್ದು,[9] ತನ್ನ ಧ್ವನಿಗೆ ಭೂಭುಜವರ್ಗದಬಲಾಜ್ಞನರ ಗರ್ಭಕಳಲುವಂತಿದ್ದ ಭಾರ್ಗವರಾಮನ ಗರ್ವಾಪಹಾರ ಮಾಡಿದುದು[10] ಬಾಲಕಾಂಡದಲ್ಲಿ ರಾಮನ ಅದ್ವಿತೀಯಸಾಧನೆಗಳು.

---

1. ಇದರ ವಿವೇಚನೆ ಮುಂದಿನ ಪ್ರಕರಣದಲ್ಲಿದೆ.
2. ತೊ. ರಾ. II ೯.
3. ತೊ. ರಾ. I ೨-೧೯.
4. ಇದೇ. ೮-೬.
5. ಇದೇ. ೮-೭೨.
6. ಕೆಲವು ಉಲ್ಲೇಖಗಳು : ತೊ. ರಾ. I ೧೪/೩೨, ೧೫/೩೩' II ೨-೧೭....
7. ತೊ. ರಾ. I ೮-೮೩.
8. ಇದೇ. ೯-೪೫.
9. ಇದೇ. ೧೫-೪೧.
10. ಇದೇ. ೧೭-೧೮.

ಮುಂದೆ ಖರದೂಷಣಾದಿ ಹದಿನಾಲ್ಕು ಸಹಸ್ರ ರಕ್ಕಸರೊಡನೆ ಏಕಾಂಗಿಯಾಗಿ ಕಾದಾಡಿ ಅವರನ್ನು ಸಂಹರಿಸಿದ ಶ್ರೇಯಸ್ಸು ರಾಮನದು.[1] ಸುಗ್ರೀವನಿಗೆ ವಿಶ್ವಾಸ ಮೂಡಿಸುವುದಕ್ಕಾಗಿ ದುಂದುಭಿಯ ಅಸ್ಥಿ ಪಂಜರವನ್ನು ಅಂಗುಟದ ತುದಿಯಿಂದ ದಶಯೋಜನ ದೂರ ಚೆಲ್ಲಿ,[2] ಸಪ್ತತಾಳಭೇದನದೊಂದಿಗೆ ಉರಗ ರೂಪಿನ ದೈತ್ಯನನ್ನು ಸಂಹರಿಸಿದ್ದು,[3] ಸಮುದ್ರವನ್ನೇ ಉರಿಸಿ ಬತ್ತಿಸಹೊರಟದ್ದು[4], ಸರ್ವಬಲ ಸಹಿತನಾದ ದಶಕಂಠ ರಾವಣನನ್ನು ಸಂಹಾರಮಾಡಿದ್ದು– ಇವೆಲ್ಲ ಕೋದಂಡಪಾಣಿ ರಾಮನ ಬಿಲ್ಲಾಳುತನದ ಹಿರಿಮೆಗೆ ಸಾಕ್ಷಿಗಳು.

## ಧರ್ಮಚರಿತ

ಅತುಲ ಪರಾಕ್ರಮಿಯಾದರೂ ಧರ್ಮಚರಿತನಾಗಿ, ಸತ್ಯನಿಷ್ಠನಾಗಿ ಬಾಳಿದವನು ರಾಮ. "ಹೆಂಗುಸಿನಳ ನುಚ್ಚುವುದು ಅಂದವೇ ಕ್ಷತ್ರಿಯರಿಗೆ ? ಎಮ್ಮ ಪತಂಗ ಕುಲದರಸುಗಳು ನಗದಿಹರೇ !"[5]–ಎಂದು ತಾಟಕಿಯನ್ನೆದುರಿಸಿದ ರಾಘವನು ವಿವೇಚಿಸುವಲ್ಲಿ ಅವನ ಯುಕ್ತಾಯುಕ್ತ ಧಾರ್ಮಿಕ ಪ್ರಜ್ಞೆ ಮೊತ್ತಮೊದಲು ವ್ಯಕ್ತವಾಗುತ್ತದೆ.

ಕೈಕೇಯಿಯು ತನ್ನತಂದೆಯಲ್ಲಿ ಕೇಳಿದ ವರಗಳೆರಡರ ವಿಚಾರ ತಿಳಿದ ರಾಮನು 'ಇಸಲೇ ನೀವ್ ಬೇಡಿದುದು ತಾನೇಸು ದೊಡ್ಡಿತು, ತಂದೆಯಾಡಿದ ಭಾಷೆಗಿದಕೋ ಭಾಷೆ.[6] ಎಂದು ನಗುನಗುತ್ತಾ ವನಕ್ಕೆ ಹೊರಟು ಸತ್ಯನಿಷ್ಠೆ ಯನ್ನೇ ಮೆರೆಯುತ್ತಾನೆ. ಇದನ್ನು ಕಂಡ ವಸಿಷ್ಠಮುನಿ 'ರಾಮ ನಿನ್ನಲಿ ಫಲಿಸಿತಗ್ಗದ ಸತ್ಯತರು'[7]–ಎಂದು ಉದ್ಗರಿಸು ವಂತಾಗುತ್ತದೆ.

ಆದರೆ ಇದೇ ಸನ್ನಿವೇಶದಲ್ಲಿ ಸಹನೆ ತಪ್ಪಿದ ಲಕ್ಷ್ಮಣನು :

ಅವನಿಪನಮುಪ್ಪಿನಮುದುಗರ
ವನಚೀಜೆಯತಲೆಯ ಪಿತ್ತದ ಬವಣೆ ಬಲಿದುದು.[8]

ಎಂದು ತಂದೆ, ತಾಯಿಯರ ಬಗ್ಗೆ ಕೆರಳಿ, 'ಜರಡು ಮುನಿವೇಕರಸ ನೊಸಲಲಿ ಧರಿಸು ಪಟ್ಟವ, ಲಗ್ನವಿದೆ, ಹರಾದ್ಯರ ಬರಿಸುವೆನು ಮೂರ್ಧಾಭಿಷೇಚನಕೆ'[9] ಎಂದು ಭರವಸೆಯ ನುಡಿಗಳನ್ನಾಡುತ್ತಾನೆ. ರಾಮನು ಮಾತ್ರ ಧರ್ಮವಿರುದ್ಧವಾದ ಅಧಿಕಾರದಾಹಕ್ಕೆ ಒಳಗಾದವನಲ್ಲ ತಾಳ್ಮೆ ತಪ್ಪಿದವನಲ್ಲ, ಆದುದರಿಂದಲೇ "ತಮ್ಮ ಸೈರಿಸು, ಈ ಮಾತೆಮ್ಮ ವಂಶಕೆ ಸಲ್ಲದು, ಅಸುರ–ಕರ್ಮವಿದು–ಸತ್ಯಪ್ರತಿಜ್ಞರಿಗುಚಿತವೇ ?"[10] ಎಂದು ಸಂತೈಸಿ ತಮ್ಮನ ವಿವೇ ಕೋದಯಕ್ಕೆ ಕಾರಣನಾಗುತ್ತಾನೆ.

ಇದರಂತೆಯೇ, ಚಿತ್ರಕೂಟಕ್ಕೆ ಭರತಾಗಮನ ಕಾಲದಲಿ ಅವನ ಉದ್ದೇಶದ ಕುರಿತು ಲಕ್ಷ್ಮಣನು ಸಂದೇಹತಾಳಿ, ಗರ್ಜಿಸಿದಾಗಲೂ, ರಾಮನು 'ತಪ್ಪಿಸಿ ತರಣಿ ತಲೆದೋರಿದರೆ ವೈರವ ಧರಿಸಬಲ್ಲನೆ ಭರತನು ?'[11] ಎಂದು ತಮ್ಮನ ಕಟ್ಟು ಗ್ರತೆಯನ್ನು ತಣಿಸಿ, ಭರತನನ್ನು ವಾತ್ಸಲ್ಯದಿಂದ ಎದುರುಗೊಳ್ಳುವಲ್ಲಿಯೂ ಅವನ ವಿವೇಕ, ಪರಗುಣಗ್ರಹಣಗುಣಗಳು ವ್ಯಕ್ತವಾಗುತ್ತವೆ.

---

1. ತೊ. ರಾ. III ಸಂಧಿ ೬.
2. ಇದೇ. IV ೨-೪೪.
3. ಇದೇ. ೨-೪೬.
4. ಇದೇ. VI ೪-೨೦.
5. ಇದೇ. I ೧೦-೯.
6. ಇದೇ. II ೨/೫೦.
7. ಇದೇ. ೩/೨೪.
8. ಇದೇ ೩-೧೨.
9. ಇದೇ. ೩-೧೩.
10. ಇದೇ. ೩-೧೪.
11. ಇದೇ. ೬-೨೧.

### ಪ್ರೇಮ ಮೂರ್ತಿ

ಸೀತಾಪಹಾರವಾದಾಗ, ವಿರಹವೇದನೆಯಿಂದ ಉನ್ಮತ್ತನಂತೆ ವರ್ತಿಸುವಲ್ಲಿಯೂ, ಹಲುಬುವಲ್ಲಿಯೂ, ಮುಂದೆ ಮಾಯಾಸೀತೆಯ ಶಿರವನ್ನು ಕಂಡು ಪರಿತಪಿಸುವಲ್ಲಿಯೂ,–ಶ್ರೀರಾಮನ ನಿಷ್ಕಲಂಕ ಪತ್ನೀಪ್ರೇಮದ ಅರಿವಾಗುತ್ತದೆ. ಸೀತಾ ಕಲ್ಯಾಣದ ನಂತರ ಅಯೋಧ್ಯೆಯಲ್ಲಿ ಕಳೆದ ಹನ್ನೆರಡು ವರ್ಷಗಳು, ಅಪಹರಣದ ಮೊದಲು ವನದಲ್ಲಿ ಅನುಭವಿಸಿದ ಆನಂದಮಯಕಾಲದಂತೆಯೇ ಸೀತಾರಾಮ ದಾಂಪತ್ಯ ಯೋಗದ ರಸನಿಮಿಷಗಳಾಗಿದ್ದಿರಬೇಕು.

ಲಕ್ಷ್ಮಣ, ಭರತ, ಸುಗ್ರೀವ, ಹನುಮಂತ, ವಿಭೀಷಣ–ಇವರ ಕುರಿತು ತೋರುವ ರಾಮನ ವಾತ್ಸಲ್ಯಪೂರಿತ ವರ್ತನೆ ಮಾನವನಿಗೊಂದು ಆದರ್ಶವಾಗಿದೆ. ರಾಮನ ಶರಣಾಗತರಕ್ಷಕ ಧರ್ಮವು ಕಾಕಾಸುರ ಮತ್ತು ವಿಭೀಷಣ ಶರಣಾಗತಿಗಳ ಸಂದರ್ಭಗಳಲ್ಲಿ ಲೋಕ ವಿದಿತವಾಗಿದೆ. ಸೀತಾನ್ವೇಷಣೆ ಮಾಡಿಬಂದ ಆಂಜನೇಯನನ್ನು ಮೆಚ್ಚಿ ನುಡಿಯುವಲ್ಲಿ, ಸುಗ್ರೀವ ಮೊದಲಾದವರು ತನಗಾಗಿ ಹೋರಾಡಿ ಬಳಲಿದರಲ್ಲ ಎಂದು ನೆನೆದುಕೊಳ್ಳುವಲ್ಲಿ ರಾಮನ ಕೃತಜ್ಞತಾಭಾವನೆ ಅತ್ಯುನ್ನತವಾದುದು.

### ರಾಜನೀತಿ ನಿಪುಣ

ಕಡಲ ತಡಿಯಲ್ಲಿ ರಾಕ್ಷಸ ಗುಪ್ತಚಾರರನ್ನು ಕಪಿವೀರರು ಸೆರೆಹಿಡಿದು ರಾಮನ ಮುಂದೆ ತಂದು ನಿಲ್ಲಿಸುತ್ತಾರೆ.[1] ಬಂಧಿತರಾದ ದಾನವಚರರು ರಾವಣೇಶ್ವರನ ಪ್ರತಾಪವನ್ನು ಹೊಗಳಿ, ಅವನೊಂದಿಗೆ ಹೋರಾಟ ಸಲ್ಲದು ಎಂದು ಎಚ್ಚರಿಸಿದಾಗ, ಆ ನುಡಿಗಳನ್ನು ಕೇಳಿಸಹಿಸದ ವಾನರವೀರರು, "ಬಾಯ ಹೊಯ್ ಬಗುಳುವ ನಿಶಾಚರ ನಾಯಿಗಳನು"[2] ಎಂದು ಬೇಹಿನವರನ್ನು ಭಂಗಿಸಲು ಮುಂದಾಗುತ್ತಾರೆ. ಆಗ ರಾಮನು 'ದೂತರ ನೋಯಿಸುವುದಪಕೀರ್ತಿ[3] ಎಂದು ರಾಜಧರ್ಮವನ್ನೂ, 'ಚರರು ತಮ್ಮತಮ್ಮರಸುಗಳ ಭುಜಸಿರಿಯನಾಹವದುಬ್ಬುಗೊಬ್ಬಿನ....ಸುಪ್ರತಾಪವ ವೈರಿರಾಯರ ಲೊರೆವುದೇ ಭೂಷಣವಲಾ,'[4] ಎಂದು ದೂತಧರ್ಮವನ್ನೂ ವ್ಯಾಖ್ಯಾನಿಸುತ್ತಾನೆ. ಅಷ್ಟಲ್ಲದೆ, ತನಗೆ ಶರಧಿ ಕೊಟ್ಟ ರತ್ನಾಭರಣಗಳನ್ನು ವಿರೋಧಿ ಪಕ್ಷದ ಚರರಿಗಿತ್ತು, ಮನ್ನಿಸುತ್ತಾನೆ; ಆ ಬೇಹಿನವರು ನಿರ್ಭೀತಿಯಿಂದ ಇಲ್ಲಿನ ಸೇನಾ ಶಿಬಿರವನ್ನು ನೋಡಿಕೊಂಡು ದಶಕಂಠನಿಗೆ ವರದಿ ಒಪ್ಪಿಸುವಂತೆ ಅನುವುಮಾಡೆಂದು ಹನುಮಂತನಿಗೆ ನಿಯಮಿಸುತ್ತಾನೆ.[5]

ರಾಜಧರ್ಮಕ್ಕನುಗುಣವಾದ ಸಂಧಾನದ ಪ್ರಯತ್ನಕ್ಕೆ ಮುನ್ನವೇ ಸುಗ್ರೀವನು ರಾವಣನನ್ನು ಭಂಗಿಸಿದ್ದು ರಾಮನಿಗೆ ಸರಿಕಾಣಲಿಲ್ಲ. "ರಾಜನೀತಿಯನೊದೆದೆ, ನಾವಿನ್ನೆಂಬುದೇನು"[6] ಎಂದು ಕಪಿರಾಜನನ್ನು ಆಕ್ಷೇಪಿಸುತ್ತಾನೆ. ಸಂಧಿಕಾರ್ಯಕ್ಕಾಗಿ ರಾವಣಮಿತ್ರನಾಗಿದ್ದ ವಾಲಿಯಪುತ್ರ ಅಂಗದನನ್ನೇ ರಾವಣನ ಆಸ್ಥಾನಕ್ಕೆ ಕಳುಹಿಸಲು ಆರಿಸಿದ್ದರಲ್ಲಿ ರಾಮನ ಅಸಾಧಾರಣ ರಾಜನೀತಿ ನೈಪುಣ್ಯವು ಪ್ರಕಟವಾಗುತ್ತದೆ.

ಯೋಧಧರ್ಮಕ್ಕನುಗುಣವಾಗಿ, ವಿರಥನನ್ನು ನೋಯಿಸೆನೆಂದು ನುಡಿದು, ರಾವಣನನ್ನು ಮರಳಿಸಿದ್ದರಲ್ಲಿಯೂ[7] ರಾಮನ ರಾಜನೈತಿಕಧರ್ಮಪ್ರಜ್ಞೆಗೆ ಉತ್ತಮ ಉದಾಹರಣೆ ದೊರೆಯುತ್ತದೆ.

### ಎರಡು ಪ್ರಸಂಗಗಳು

ವಾಲಿ ವಧೆ ಮತ್ತು ಸೀತೆಯ ಅಗ್ನಿ ಪರೀಕ್ಷೆಗಳ ಸಂದರ್ಭಗಳಲ್ಲಿ ರಾಮನ ವರ್ತನೆ ಕುರಿತು ವಿಭಿನ್ನ ತರ್ಕಗಳಿವೆ,

---

1. ತೊ. ರಾ. VI ೬-೨೮.
2. ಇದೇ. ೬-೪೩.
3. ಇದೇ. ೬-೪೩.
4. ಇದೇ. ೬-೪೪.
5. ಇದೇ. ೬-೪೬.
6. ಇದೇ. ೯-೨೧.
7. ಇದೇ. ೨೫-೨೯.

ವಿಚಾರಗಳಿವೆ;[1] ರಾಮನ ಚಾರಿತ್ರ್ಯವನ್ನೇ 'ಅಗ್ನಿ ಪರೀಕ್ಷೆ'ಗೆ ಒಳಪಡಿಸಿದ್ದೂ ಉಂಟು. ಆದರೆ, ಕುಮಾರ ವಾಲ್ಮೀಕಿಗಂತೂ ಶ್ರೀರಾಮನು ಅವತಾರ ಪುರುಷ, ನಿರ್ದೋಷ, ಸಕಲಗುಣಭರಿತ. ಆದುದರಿಂದ ರಾಮನ ಪ್ರತಿಯೊಂದು ವರ್ತನೆಯಲ್ಲೂ ಅಮಾನುಷವಾದ ದಿವ್ಯತೆಯನ್ನೇ ಗುರುತಿಸಿದವನು ಕವಿ.

ತನ್ನನ್ನು ಮರೆಯ ಎಸುಗೆಯಿಂದುರುಳಿಸಿದ ರಾಮನನ್ನು ತೀವ್ರವಾಗಿ ಆಕ್ಷೇಪಿಸಿದ ವಾಲಿಯೇ 'ದಶರಥನಂದನನಲ್ಲಿ' ದಿವ್ಯತೆಯ 'ದರ್ಶನ' ಪಡೆಯುವಂತೆ ಏರ್ಪಡಿಸಿದ್ದು ಕುಮಾರವಾಲ್ಮೀಕಿಯ ಭಕ್ತದೃಷ್ಟಿಗೊಂದು ಉದಾಹರಣೆ.

ಇದು ಮಹೀಮಂಡಲದ ಭಾರವ
ನೊಡೆಯಲಾದ ವಿಲಾಸ ವಿಭವಾ
ಸ್ಪದವಲಾ ಮನುಜಾಂಗವಿದುತಾನಪ್ರಸಿದ್ಧವಲಾ,
ಸುದತಿಯೆಂಬುದು ನೆವನು ತಾನಿಂ
ತಿದರ ಮೇಲೀ ಪರಮದೈವದ
ಪದವ ಭಜಿಸಲು ಬೇಕೆನುತ ಕೈ ಮುಗಿದನಾ ವಾಲಿ.[2]

ಈ ಮಾತಿನಿಂದ, ಸುಗ್ರೀವನನ್ನು ಸಂತೈಸುತ್ತಾ ರಾಮನು, "ಸೋಕದಪರಾಧಿಯನು ನಾವವಿವೇಕಮುಖದಲಿ ಕೊಂದೆವೆಮ್ಮುವ ನೌಕಿಕೊಂಡಿಹ ಕಾರ್ಯಕೋಸುಗ"[3] ಎಂದು ನುಡಿದದ್ದರಲ್ಲಿ ಭೂಭಾರ ಹರಣಾರ್ಥವಾದ ರಾವಣ ವಧೆಯ ಕಾರ್ಯವನ್ನೇ ಕವಿ ಧ್ವನಿಸಿದಂತೆ ತೋರುತ್ತದೆ.

ಸೀತಾಪರೀಕ್ಷೆಯ ಸನ್ನಿವೇಶದಲ್ಲಿ 'ಸೀತೆಯು ಅಂಜದಿರ್ದಡೆ ಹುತವಹನ ಹೊಗಲಿ',[4] ಎಂದು ರಾಮನೇ ಸೂಚಿಸಲು ಅಗ್ನಿಪ್ರವೇಶಮಾಡಿದ ಸೀತೆಯು ಪುಟವಿಟ್ಟ ಮಿಸುನಿಯಂತೆ ಪರಿಶುದ್ಧಳಾಗಿ ಹೊರಬಂದರೂ,

ಒಪ್ಪೆವಾವಾಮಾತ ಸೀತೆಯನೊಪ್ಪುಗೊಳಿಸುವ ಬುದ್ಧಿ ಚಿತ್ತದೊ–
ಳಿಪ್ಪುದಾದಡೆ ಕರೆದು ಕೊಡಿ ನಮ್ಮನ್ವಯದ ನೃಪರ
ತಪ್ಪದವರೆಮ್ಮನ್ವಯಕೆ ಹಳಿವೊಪ್ಪುಗೈಯದುಯೆಂದುನಿಮ್ಮೊಡ
ನಿಪ್ಪವರ ಸರಿಸದಲಿ ನುಡಿದಡೆ ಕೇಳ್ವೆವಾವೆಂದ.[5]

ಹೀಗೆ ರಾಮನು ಛಲತೋರಿಸುವುದೂ ರಾಮ ದಿವ್ಯತೆಗೆ ಒಪ್ಪುವ ಅಂಶಗಳೇ? ಎಂದು ಸಂದೇಹಕ್ಕೊಳಗಾದರೂ, ಕವಿಯು ಆ ಕುರಿತು ತಲೆ ಕೆಡಿಸಿಕೊಂಡಂತೆ ತೋರುವುದಿಲ್ಲ, ರಾಮನ ವಂಶ ಗೌರವ, ಪ್ರಜ್ಞೆಗಳು ಲೋಕಮುಖಕ್ಕೆ ಪ್ರಕಟವಾಗಲಿ, ಅಥವಾ ಸೀತೆಯ ಪಾವಿತ್ರ್ಯದ ಬಗ್ಗೆ ತನ್ನ ಹಿರಿಯರೂ ತಿಳಿದು ಹೇಳಲಿ, ಲೋಕ ಮಾತೆಯ ನಿಷ್ಕಲಂಕತೆ ಇನ್ನಷ್ಟು ಸ್ಫುಟವಾಗಲಿ–ಎನ್ನುವ ಆಶಯ ಕವಿಗಿದ್ದಿರಬೇಕು.

## ದಿವ್ಯ ಲೀಲೆಯಲ್ಲಿ ಮಾನವ ಸ್ವಭಾವ ಚಿತ್ರಣ

ಆದಿಕವಿ ವಾಲ್ಮೀಕಿಯು ಚಿತ್ರಿಸಿದ ಆದರ್ಶಮಾನವ ರಾಮನು ಕುಮಾರ ವಾಲ್ಮೀಕಿಯ ಕೃತಿಯಲ್ಲಿ ದೇವೋತ್ತಮ

---

1. (1) V. S. Sreenivasa Sastri—Lectures on the Ramayana.
   (2) ಮಾಸ್ತಿ–ಆದಿಕವಿ ವಾಲ್ಮೀಕಿ. ೧೨೧-೧೩೨.
   (3) K. S. R. Sastri-Riddles of the Ramayana. 112–142.
2. ತೊ. ರಾ. IV ೪-೫೪
3. ಇದೇ. ೪-೬೯
4. ಇದೇ. VI ೫೩-೮೬
5. ಇದೇ. ೫೩-೧೦೯

ನಾಗಿ ವರ್ಣಿತನಾದುದರಿಂದ ರಸಿಕ ಲೋಕದ ವಿಮರ್ಶಕ ದೃಷ್ಟಿಗೆ ಸ್ವಲ್ಪ ಆತಂಕ ಎನಿಸಿದರೂ, ದಿವ್ಯಪುರುಷನಾದ ಶ್ರೀರಾಮನು ಮಾನವನಾಗಿ ನಡೆಸಿದ ಅವತಾರಲೀಲೆಯನ್ನು ಅದಷ್ಟು ಪರಿಷ್ಕಾರವಾಗಿ, ಲೋಕ ಸಹಜವಾಗಿ ಮೂಡಿಸಬೇಕೆನ್ನುವುದು ಕುಮಾರ ವಾಲ್ಮೀಕಿಯ ಉದ್ದೇಶವಿದ್ದಂತೆ ತೋರುತ್ತದೆ. ಅಭಿನಯಕಲೆಯಲ್ಲಿ ತನ್ಮಯನಾದ ನಟನು ತಾನು ಮರೆಯಬಾರದ ರಂಗಪ್ರಜ್ಞೆಯಂತೆ, ಇಲ್ಲಿ ರಾಮನ ಲೀಲೆಯಲ್ಲಿ ಮಾನವತೆ, ಲೌಕಿಕತೆಗಳ ಸುಳಿವು ಮೂಡಿಸುವ ಪ್ರಯತ್ನ ನಡೆದಿದೆ.

ಕಥೆಯನ್ನು ಕೇಳುವ ಲವಕುಶರು, ವಾಲ್ಮೀಕಿಯೊಡನೆ, "ಸರ್ವೇಶನಾದ ರಾಮನಿಗೇಕೆ ಗರ್ಭಾವಾಸದ ಆಯಾಸ?" ಎಂದು ಪ್ರಶ್ನಿಸುತ್ತಾರೆ, ಅದಕ್ಕುತ್ತರವಾಗಿ ಮುನಿಯು, "ಈ ವಿಶೇಷ ವ್ಯವಹರಣೆ ಲೋಕಾವಳಿಯ ಸುಜನರನು ಸಲಹಲಿಕೆ, ದುಷ್ಟಶಿಕ್ಷೆಗೆ,-ಅಲ್ಲದೆ ಅವನಿಗೆ ಜನನವಿಲ್ಲ" ಎನ್ನುತ್ತಾನೆ. ಹೀಗೆಂದಮೇಲೂ, ರಾಮನ ಮಗುವುತನ, ತೊಟ್ಟಿಲ ಜೋಗುಳ, ಉಪನಯನ, ಶಾಸ್ತ್ರ-ಶಸ್ತ್ರಾಭ್ಯಾಸ-ಇತ್ಯಾದಿಗಳನ್ನು ಕವಿಯು ಮಾನವ ಸಹಜವಾಗಿಯೇ ವರ್ಣಿಸಿದ್ದಾನೆ.

ವಿಶ್ವಾಮಿತ್ರನು ರಾಮಲಕ್ಷ್ಮಣರನು ಕರೆದುಕೊಂಡು ನಡೆದಾಗ, ಅಯೋಧ್ಯೆಯ ಪೌರರು 'ಜಾಳಿಸುವ ಕಂಬನಿಗಳಲಿ, ಬಿರುನಾಲಗೆಗಳಲಿ' ಆ ಮುನಿಯನ್ನು ನಿಂದಿಸಲು ಹೆದರುವುದಿಲ್ಲ. ಮುಂದೆ, "ಘೋರಕಾನನವು ರಘುರಾಜಪುತ್ರರಿಗೆ ಭಯವ ಬೀರುತ್ತದೆ." ಹೆಂಗುಸನ್ನು ಕೊಲ್ಲುವುದು ಸರಿಯೆ?-ಎಂದು ರಾಮನು ಮಾನವಸಹಜ ಸಂದೇಹ, ಯೋಚನೆಗಳಿಗೆ ಒಳಗಾಗುತ್ತಾನೆ-ತಾಟಕಿಯನ್ನು ಎದುರಿಸಿದಾಗ. ಶಿಲೆಯ ಮಧ್ಯದೊಳವತರಿಸಿದ ಅಹಲ್ಯೆಯನ್ನು ಕಂಡು ಮುಗ್ಧನಂತೆ 'ಲಲನೆಯಾಕೆಯದಾರು?" ಎಂದೂ ಪ್ರಶ್ನಿಸುತ್ತಾನೆ. ಹೀಗೆ, ಮಾನವ ಸಹಜವಾದ ಭಯ, ಸಂದೇಹ, ಯೋಚನೆ, ಕುತೂಹಲ-ಎಲ್ಲವೂ ರಾಮನಲ್ಲಿ ಇವೆ.

ಆದಿಪುರುಷ, ಆದಿಲಕ್ಷ್ಮಿಯರಾದ ರಾಮ, ಸೀತೆಯರ ವಿವಾಹದಲ್ಲಿ ಕವಿಯು, ಮಧುಪರ್ಕ, ಮೆಟ್ಟಕ್ಕಿ, ಗುಡಜೀರಿಗೆ, ಓಕುಳಿ, ಬಳುವಳಿ ಮಾಮನೆ-ಮೊದಲಾದ ಲೋಕಾಚರಣೆಗಳನ್ನೂ ವಿವರಿಸಲು ಕವಿಯು ಮರೆಯುವುದಿಲ್ಲ.

ವನವಾಸಕ್ಕೆ ಹೊರಟ ರಾಮನು ತನ್ನನ್ನು ಅನುಸರಿಸಲು ಮನಮಾಡಿದ ಮಡದಿಗೆ, "ಹಸಿದಡಿಲ್ಲ ಮೃಷ್ಟಾನ್ನಚಯ, ಮೃದು ಸ್ತರಣದಿಂದೆಸೆವ ಮಣಿ ಪರ್ಯಂಕವಿಲ್ಲ....ಬಿಸಿಲು ಮಳೆಚಳಿಗಳಿಗೆ ಸಲೆ ಸೈರಿಸುವ ದೇಹವೆ ನಿನ್ನದು?"-ಎಂದೆಲ್ಲ ಕಾಡಿನ ಸಂಕಟಗಳನ್ನು ಪಟ್ಟಮಾಡಿ ತಿಳಿಸುತ್ತಾನೆ. ಕಾಡಿಗೆ ಹೊರಟ ತನ್ನವರನ್ನು ಕಂಡು ದಶರಥನು-

> ತೆರಳುತಿದೆ ಮಜ್ಜೀವ ರತ್ನಾ
> ಭರಣ ತನ್ನ ಮನೋರಥದ ಸಿರಿ
> ಸರಿವುತಿದೆ ರಘುರಾಜ ವಂಶದ ಬಹಳ ಭಾಗ್ಯ ನಿಧಿ.[10]

ಎಂದೆಲ್ಲ ಹಲುಬುವಲ್ಲಿ ಮಾನವ ಲೋಕದ ಸಹಜತೆಯಿದೆ.

ಸುಮಂತ್ರನಿಂದೊಡಗೂಡಿದ ರಾಮಲಕ್ಷ್ಮಣ ಸೀತೆಯರು ತಮಸೆಯಲಿ ಜಲದಾಹಾರದಲಿ ತಮಿಯನು ಕಳೆಯು

1. ವಾ. ರಾ. I ೧-೧.
2. ತೊ. ರಾ. I ೮-೧೨.
3. ಇದೇ. ೮-೧೩, ೧೪.
4. ಇದೇ. ೮-೭೩-೮೩.
5. ಇದೇ. ೯-೪೩.
6. ಇದೇ. ೧೦-೧.
7. ಇದೇ. ೧೦-೯.
8. ಇದೇ. ೧೨-೧೨.
9. ಇದೇ. ಸಂಧಿ ೧೬, ೪೬-೫೫.
10. ತೊ. ರಾ. II ೩-೫೪.

ತ್ತಾರೆ.[1] ಸುಮಂತ್ರನನ್ನು ಬೀಳ್ಕೊಂಡ ಮೇಲೆ "ತೆರಳಿದರಿವರು ಮೂವರು ಕಾಲು ನಡೆಗಳಲಿ"[2] ಬಿಸಿಲ ಬೇಗೆಗೆ ಅವರ "ಮುಸುಡುಗಳು ಕುಂದಿದವು, ಎಸೆವ ತನುಕಾಂತಿಗಳು ಕಂದಿದವು, ಪದಸಾರಸದ ಸೊಂಪಡಗಿದವು, ಕಸರಿಕೆಯ ಕಾಪಥದ ಕಟ್ಟಾಯಸವು ರಾಮನ ಶಶಿಮುಖಿಯನು ತಡೆದುವು[3]" ಸಾಮಾನ್ಯರಂತೆಯೇ ಸೀತೆಯು "ಅಡಿಗಡಿಗೆ ನಿಲುವಳು, ಕುಳ್ಳಿರುವಳು,...ಅಡಿಗಡಿಗೆ.ಸುಯ್ವಳು",[4] ಹಾಗೆ ಬಳಲಿ ಕಂಗೆಟ್ಟ ಸೀತೆಯನ್ನು ರಾಮನು "ಇದ ಸಾರೆ ನೋಡು, ಕಾಂತಾರ, ಅಲ್ಲಿ ಅಂಬುಜಾಕರ, ಅಲ್ಲಿ ಫಲನಿಕುರುಂಬ, ಅಲ್ಲಿ ರವಿಬಿಂಬದ ಉಗ್ರಾಟೋಪದ ಬಿಗಿಯಿರದು"–ಎಂದು ಸಂತೈಸಿ, ನಂಬಿಕೆ ಮೂಡಿಸುತ್ತಾನೆ. "ತಳಿರ ಪರಿಪರಿದಗಲಿಸುತ, ಪದಕಂಟಕವ ಪಂಟಿಸುತ, ಮೊಗಕೆ ಮುತ್ತುಗದೆಲೆ ಯಮರೆವಿಡಿದು[5]" ರಾಮಲಕ್ಷ್ಮಣರು ಸೀತೆಯನ್ನು ಸರೋವರದೆಡೆಗೆ ಕರೆದೊಯ್ಯುತ್ತಾರೆ.

"ಝಳದ ಥಗೆ ಡಾವರಿಸೆ ಕೊಳನ ಹೊಕ್ಕರು, ಕರಚರಣಾನನಗಳ ತೊಳೆದು, ನಿರ್ಮಳ–ಹಿಮೋದಕದ ಕುಡಿತೆ ಯಲೀಂಟಿದರು. ತಿಳಿಗೊಳನ ತೀರದ ತಳಿರುದೋರಿದ ನಳನಳಿಪ ಮಾಮರನ ನೆಳಲಲಿ ಅಧ್ವಶ್ರಮನ ಕಳೆದರು.[6]"–ಇಲ್ಲಿನ ವಾಸ್ತವತೆ ಕಣ್ಣು ಕಟ್ಟುವಂತಿದೆ.

ಮುಂದೊಮ್ಮೆ ರಾಮಸೀತೆಯರೂ "ತನಿಪರಿಮಳದ ತಂಗಾಳಿಯ ಬಳಿವಿಡಿದು ಒಂದು ಸರೋವರಕ್ಕೆ ಬಂದರು. ಅಲ್ಲಿ ತಮ್ಮೊಳೊಬ್ಬೊಬ್ಬರ ಈಕ್ಷಿಸಿ ವಾರಿಕೇಳಿಗೆ ಮನವ ಮಾಡಿದರು.[7]"ಜಲಕೇಳಿಯಲ್ಲಿ "ಸೋತರರಸರೆನುತ್ತ ಧರಣೀ ಜಾತೆ ತಡಿಗಡರಿದಳು..."

ವಿಮಲಶ್ವೇತ ವಸನವನುಟ್ಟಳು, ಮಣಿಶಿಲೆಯಬೊಟ್ಟು ಇಟ್ಟಳು.[8] ....'' ಕೇತಕೀ ಪ್ರಮುಖಾದಿ ಕುಸುಮ ವ್ರಾತದಾಭರಣದಲಿ ರಘು ಸಂಜಾತನೇ ಜಾನಕಿಯನಲಂಕರಿಸಿದನು." ವನಾಂತರದಲ್ಲಿ ಸಂಚರಿಸುತಿದ್ದಂತೆ ರಾಮನು ಸೀತೆಗೆ 'ಕರಡಿ ನೋಡಿವು, ಮುಸುಗಳಿವು, ಮುಂಗುಲಿಗಳಿವು, ಗೌಜುಗೆಗಳಿವು–ಗಜಗಮನೆ ನೋಡು.[9] ಎಂದು ತೋರುತ್ತಾ ಸಂತಸಗೊಳಿಸುತ್ತಾನೆ. ಹೀಗೆ ಕಟ್ಟಡವಿಯಲ್ಲೂ ಸೀತಾ ರಾಮರ ಸರಸ ದಾಂಪತ್ಯ ಸೊಗಯಿಸುವುದು ಮಾನವ ಸಹಜವಾದ ರೀತಿಯಲ್ಲೆ ಚಿತ್ರಿತವಾಗಿದೆ.

ಜಟಾಯುನನ್ನು ಕಂಡು, ಅವನ ಪರಿಚಯವಾದ ಮೇಲೆ, ಶ್ರೀರಾಮನು ಅವನೊಡನೆ,

> ಅಯ್ಯನಸ್ಥಿರವಾದ ಬಳಿಕೆನ
> ಗಯ್ಯ ನೀ ನಾಕದಲಿ ನೆಲೆ ಗೊಂ
> ಡಯ್ಯನೀಗ ಜಟಾಯು ನೀನೆಮಗೀಗ ದಶರಥನೆ[10]–

ಎಂದು ಹಕ್ಕಿಯ ಜತೆಯಲ್ಲಿ ಮಾನವ ಸಂಬಂಧವನ್ನು ಬೆಸೆಯುತ್ತಾನೆ.

ಚಳಿಗಾಲವನ್ನು ಚಂಡಾಂಶು ವಂಶೋದ್ಭವರು "ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಿಕೆಯಲಿ ಕಳೆ ಯುತ್ತಿರುವಲ್ಲಿ,[11] ನಂದಿಗ್ರಾಮವಾಸಿ ಭರತನು "ಬಿಸಿಲು ಮಳೆಚಳಿಗಾಲವಿವು ರಘುಪತಿಯ ಸಂಧಿಸಿದವೇ" ಎಂದು

---

1. ತೊ. ರಾ. ೪-೮
2. ಇದೇ. ೪-೧೪.
3. ಇದೇ. ೪-೧೬.
4. ಇದೇ. ೪-೧೭.
5. ಇದೇ. ೪-೧೯.
6. ಇದೇ. ೪-೨೨.
7. ಇದೇ. ೭-೪.
8. ಇದೇ. II ೭-೮.
9. ಇದೇ. III ೧-೩೦.
10. ಇದೇ. ೧-೪೫.
11. ಇದೇ. ೨-೫.

ಹಲುಬುತ್ತಾನೆ.[1]–ಇಂತಹ ಮಾನವ ಲೋಕದ ಸುಖದುಃಖಗಳ ಚಿತ್ರಣ ಕುಮಾರ ವಾಲ್ಮೀಕಿಯ ದಿವ್ಯ ಕಥೆಯಲ್ಲಿ ಸಾಲುಗಟ್ಟಿ ಸಿಗುತ್ತವೆ.

ಸೀತಾಪಹಾರದ ನಂತರ ಸಾಮಾನ್ಯ ಮಾನವನಾಗಿಯೇ ಅವರ್ಣನೀಯ ವಿರಹ ವೇದನೆಗೆ ಒಳಗಾದುದನ್ನು ವರ್ಣಿಸಲಾಗಿದೆ. ಸೀತಾ ಶೂನ್ಯ ದಳನಿಳಯಕ್ಕೆ ಬಂದು "ಸೀತೆಯನು ತೋರ್ರೈ ತಮ್ಮ, ಸೀತೆಯನೆಲ್ಲಿರಿಸಿ ನೀ ಬಂದೆ ಹೇಳ್ವೈ ತಮ್ಮ" ಎಂದು ಹುಚ್ಚು ಹುಚ್ಚಾಗಿ ಪ್ರಶ್ನಿಸುವ ರಾಮನು 'ಕನಕ ಮೃಗವನು ತಾರನೆಂಬೀ ಮುನಿಸದೊದಿಂದೆ, ತಮ್ಮ, ಹೊಗು ಗೃಹಾಂತರಕೆ, ಕನಕ ಮೃಗವನು ತಂದನೆಂದೇ ವನಿತೆಗನ್ನತವ ನುಡಿದು, ಮಡದಿಯನೆನಗೆ ತೋರಿಸು' ಎಂದೂ ಸೂಚಿಸುತ್ತಾನೆ. ಲಕ್ಷ್ಮಣನು ಪರ್ಣಶಾಲೆಯ ಒಳಹೊಕ್ಕು ಹುಡುಕಿ ಹೊರವಂಟು ಕೈಸನ್ನೆಯಲಿ 'ಇಲ್ಲ' ಎಂದಾಗ ರಾಘವನ ವಿವೇಕದ ಸಮತೆ ಸಡಿಲುತ್ತದೆ....[2]

ವಿರಹದಿಂದ ಕಂಗೆಟ್ಟು ಮರುಳನಂತೆ–ನೀತಿಳಿದುಕೋ ಮನೆಯಲ್ಲವಿದು; ನಾವು ತಪ್ಪಿಬಾರವೆಲೆ? ನೀನು ಲಕ್ಷ್ಮಣನೇ?, ನಾವು ಪುರದಿಂದ ಸೀತೆಯನ್ನು ಕರೆದುಕೊಂಡು ಬಂದಿರುವುದು ನಿಜವೇ– ಅಥವಾ ಬಿಟ್ಟು ಬಂದಿರು ವುದು ನಿಜವೇ? ಭೂವರನ ಮೇಲಾಣೆಯಿದೆ ಹೇಳು– ಎಂದೆಲ್ಲಾ ವಿಚಿತ್ರವಾಗಿ ತರ್ಕಿಸುವುದು ಪ್ರಶ್ನಿಸುವುದು ರಾಮನ ಅಸಹನೀಯ ವ್ಯಥೆಯನ್ನು ಸೂಚಿಸುತ್ತದೆ.

ಮುಂದೆ,–

> ಮುನಿಮುನಿಗಳಾಶ್ರಮದ ವಿಮಳಾಂ
> ಗನೆಯರಲಿ, ವನವೀಥಿಯಲಿ ಕುಮು
> ದಿನಿ ಕುಶೇಶಯದುರು ತಟಾಕಂಗಳ ತಟಂಗಳಲಿ
> ಧ್ವನಿಗಳಿದ್ದೆಡೆಗಳಲಿ ತನು ಸಂ
> ಜನಿತ ಖೇದದ ಘನನಿಷಾದದ
> ಮನದ ಮನುಕುಲ ರಾಜ ಸೂನುಗಳರಸಿದರು ಸತಿಯ.[3]

ಸೀತೆಯ ಹುಡುಕಾಟದ ಇಂತಹ ವರ್ಣನೆ ದೀರ್ಘ, ಅಸಂಬದ್ಧ ಎನಿಸಿದರೂ, ರಾಮಲಕ್ಷ್ಮಣರ ಮಾನುಷತೆಯ ವಿಡಂಬನೆಯ ದೃಷ್ಟಿಯಿಂದ– ಕವಿಯ ಉದ್ದೇಶಕ್ಕನುಗುಣವಾಗಿ–ಸಾರ್ಥಕವಾಗಿದೆ.

ಪ್ರಸ್ರವಣಪರ್ವತದಮೇಲೆ ಎದುರಾದ ಅಂಬುದಾಗಮ (ಮಳೆಗಾಲ) ವನ್ನು ರಾಮಲಕ್ಷ್ಮಣರು 'ಬಲು ಗವಿಯ ಗೇಹಂಗಳಲಿ, ಜಂಘಾನಿಲ ನಿವಾರಣದ ವಿವಿಧ ಪುಣ್ಯ ಮೃಗಾಜಿನಂಗಳ ನಿವಸನದಲಿ, ನೀರೇಜ ಕಂದದ ನವಫಲಾಹಾರ ದಲಿ'[4] ಕಳೆಯಬೇಕಾಗುತ್ತದೆ.

ನಿರಶನ ವ್ರತ ಕೈಗೊಂಡು ಪ್ರಾರ್ಥಿಸಿದರೂ, ಸಮುದ್ರರಾಜನು ಒಲಿಯದಿರಲು, ಅವನ ಸದರವನ್ನು ಕಂಡು 'ಚಟುಳ ವಿಲಯಾನಲ ಸಂಘಟಿತ ಸತ್ಕ್ರೋಧ ಪ್ರಭಾ ಧೂರ್ಜಟಿ' ಯಾಗುತ್ತಾನೆ–ಶ್ರೀರಾಮ.[5] ಇದೇ ರಾಮನು ಮಾಯಾ ಸೀತೆಯನ್ನು ಇಂದ್ರಜಿತುವು ಕತ್ತರಿಸಿದಾಗ, ನಿಜವರಿಯದೆ, 'ಇನ್ನು ಹಗೆಯನು ಕೊಂದು ಕಾಬ ಮಹೋ ನ್ನತಿಕೆಯೆನಗಾವುದಕಟ?'[6]–ಎಂದು ವಿಷಾದಕ್ಕೊಳಗಾಗುವುದೂ ರಣರಂಗದಲ್ಲಿ ಲಕ್ಷ್ಮಣನು ನಿಶ್ಚೇಷ್ಟಿತನಾಗಿ ಬಿದ್ದಿ ದ್ದಾಗ, ತಮ್ಮನು ಹತನಾದನೆಂದೇ ಭ್ರಮಿಸಿ, 'ನಿನ್ನನ್ನು ನನಗೆ ಕೈಯೆಡೆಯ ಶಿಶುವೆಂದಿತ್ತ ಸುಮಿತ್ರಾ ದೇವಿಗೆ ಇನ್ನೇ ನೆನ್ನಲಿ?'[7]–ಎಂದು ಅಳಲುವುದೂ ಮಾನವ ಸಹಜವಾಗಿವೆ.

---

1. ತೊ. ರಾ. ೨-೬.
2. ಇದೇ. ೧೧-೧೭.
3. ಇದೇ. III ೧೧-೩೩.
4. ಇದೇ. IV ೬-೮.
5. ಇದೇ. VI ೪-೩೦.
6. ಇದೇ. ೪೧-೯.
7. ಇದೇ. ೪೭-೩೯.

ಕಾಳಗದಲ್ಲಿ ದಶಕಂಠನ ಶಿರಗಳನ್ನು ಕಡಿಕಡಿದು ಸೋತು ಬಳಲಿದಾಗ–'ಸಾಕು ಮಾತಳಿ, ನಾವು ಸಮಿಾಕ ಬಾಹಿರರು ; ಅರಿ ಶಿರಂಗಳ ನೂಕಿ ಬೇಸತ್ತೆವು ಶರಂಗಳ, ಸೋಲವೆಮಗಾಯ್ತು. ತೆರಳು ನೀನು,'[1] ಎಂದು ಸಾರಥಿ ಮಾತಳಿಗೆ ನುಡಿಯುವುದು, ತಮ್ಮನೊಡನೆ ಇದೇ ಸಂದರ್ಭದಲ್ಲಿ 'ನೀನು ನನ್ನೊಡನೆ ಬಹಳ ಬಳಲಿದೆ, ನೀ ಪುರಕೆ ತೆರಳು, ಸೀತೆಯನು ಹೋಗಾಡಿ ನೃಪನಜ್ಞಾತನಾದನು ನಾ ಕಾಣೆ ಎಂದು ಮಾತ್ರ ನುಡಿ'[2]–ಎಂದು ಶಸ್ತ್ರತ್ಯಾಗ ಮಾಡುವುದು–ಎಲ್ಲವೂ 'ರಾಮನೂ ಹೀಗಾಡಬೇಕಾಯಿತಲ್ಲ' ಅಥವಾ 'ಇಂತಹ ರಾಮನು ದೇವನೆಂದರೆ ಹೇಗೆ?'– ಎಂಬ ಉದ್ಗಾರ ಮೂಡಿಸುವಂತಿವೆ. ಇಂತಹ ರಾಮನಲ್ಲಿ ಮತ್ತೆ ಮಾತಳಿಯು ಪೌರುಷವನ್ನು ಉದ್ರೇಕಿಸಬೇಕಾಗು ತ್ತದೆಯೆಂದರೆ–ಇದನ್ನು 'ನರನಾಟಕ' ಎಂದು ನಂಬುವುದೂ ಕಷ್ಟವಾಗುತ್ತದೆ.

ಸೀತೆಯನ್ನು ಅಗ್ನಿ ಪ್ರವೇಶ ಮಾಡಿಸಿದ್ದೂ ಸಾಲದೆ, ಸ್ವರ್ಗದಲ್ಲಿದ್ದ ಹಿರಿಯರೇ ಬಂದು "ಒಕ್ಕಣೆ" ಹೇಳಬೇಕು ಎಂದು ಹಟ ಹಿಡಿದ ರಾಮನಿಂದ ಕುಮಾರ ವಾಲ್ಮೀಕಿಯು 'ಅವತಾರಾಭಿನಯವನ್ನು' ಚೆನ್ನಾಗಿಯೇ ಮಾಡಿಸಿದ್ದಾ ನೆನ್ನಬೇಕು.

ಹೀಗೆ ದಿವ್ಯಲೀಲೆಯನ್ನು ಹೇಳ ಹೊರಟವನಾದರೂ, "ಮನುಜಾವತಾರದ ಸೊಗಸನ್ನು" ತನ್ನಿಂದ ಸಾಧ್ಯ ವಿದ್ದಷ್ಟು ಕಲಾತ್ಮಕವಾಗಿ ನಿರೂಪಿಸಿದ್ದರಲ್ಲಿ ಕುಮಾರವಾಲ್ಮೀಕಿಯ ಸಾರ್ಥಕತೆ ಇದೆ.

## ಪಾತ್ರ ಪರಿಶೀಲನೆ–೨

### ರಾವಣ

ರಾವಣ ಪಾತ್ರ ವಿನ್ಯಾಸದಲ್ಲಿ ಕುಮಾರವಾಲ್ಮೀಕಿಯು ಆದಿಕಾವ್ಯದಲ್ಲಿಲ್ಲದ ಕೆಲವು ಅಂಶಗಳನ್ನು ಹೊಸೆದಿದ್ದಾನೆ. ಇಲ್ಲಿ ನಮಗೆ ಸೀತಾಸ್ವಯಂವರ ಮಂಟಪದಲ್ಲೇ ದಶಗ್ರೀವನ ಪ್ರಥಮ ದರ್ಶನವಾಗುತ್ತದೆ. ನೆರೆದ ದೇವತೆಗಳು ಮತ್ತು ನೃಪಾಲರ ಮುಂದೆ ಅಟ್ಟಹಾಸದಿಂದ, 'ಅಸುರ ವಿಕಾರದಲಿ ನಿಧಿಯನು ಕೂಡಿಕೊಂಡಿಹ ಕಾಳಸರ್ಪನ ತುಡುಕುವಂದ ದಲಿ'[3] ಶಿವಧನುಸ್ಸನ್ನು ಭಂಗಿಸಲು ಮುಂದಾದ ಅವನ ಸಾಹಸವು ವಿಫಲವಾಗಿ, ಅವನ ಸ್ಥಿತಿಯು 'ರಸದ ಲಂಪಟಕಿಕ್ಷು ವನು ಖಂಡಿಸಲು ಹೋದ ನರಿಯು ಗರಗಸದಲಿ ಸಿಲುಕಿದಂತಾಗುತ್ತದೆ.[4] ಕಿರೀಟವು ದೆಸೆದೆಸೆಗೆ ಸಿಡಿದು, ಹಾರಗಳೆಲ್ಲ ಹರಿದು, ಮುಖದಲಿ ನೆತ್ತರು ಹೊರವುಕ್ಕಿ ಬಸವಳಿದ ಈ ರಕ್ಕಸನು "ನಳಿನಭವ, ಶಂಕರರು ಪೂರ್ವದಲಿ ಒಲಿದು ಕೊಟ್ಟ ವರಬಲದಿಂದ ಮಾತ್ರ ಅಸುವಳಿಯದೆ ಉಳಿಯುತ್ತಾನೆ."[5] ಆ ಸನ್ನಿವೇಶದಲ್ಲಿ ಅವನು ತನ್ನೊಳಗೇ–ಮುಂದೆ ಎಂದಾ ದರೂ ಸೀತೆಯ ಕಳವಿನಲಿ ಕೊಂಡೊಯ್ವೆ, ಎಂದು ಸಂಕಲ್ಪಿಸಿ ಅಲ್ಲಿಂದ ಹೊರಟು ಲಂಕೆಯನ್ನು ಸೇರಿಕೊಳ್ಳುತ್ತಾನೆ. ಹೀಗೆ ರಾವಣನು ಹರಧನುವನ್ನು ಭಂಗಿಸಹೋಗಿ ತಾನೇ ಭಂಗಿತನಾಗುವುದೂ, ಅದೇ ಸಂದರ್ಭದಲ್ಲಿ ಸೀತಾಪಹಾರದ ನಿರ್ಧಾರ ಮಾಡಿದುದೂ–ವಾಲ್ಮೀಕಿ ರಾಮಾಯಣದಲ್ಲಿಲ್ಲದ ಅಂಶಗಳು.

ಮುಂದೆ ರಾವಣನು ಕೈಕೊಂಡ ಸೀತಾಪಹರಣಕ್ಕೆ ಶೂರ್ಪನಖಿಯು ಕಾರಣಳೆನ್ನುವಂತೆ ಚಿತ್ರಿಸಲಾಗಿದೆ. ಮೊದಲು ಸೂಚಿಸಿದ ಅಂಶವನ್ನು ಆ ಮೇಲೆ ಸಮರ್ಥಿಸುವುದಕ್ಕೆ ಅಥವಾ ಪೋಷಿಸುವುದಕ್ಕೆ ಕವಿಯು ಗಮನವೀಯದಿ ದ್ದರೂ, ಅದು ನಮ್ಮ ಲಕ್ಷ್ಯವನ್ನು ಸೆಳೆಯದೆ ಬಿಡುವುದಿಲ್ಲ. ಹೀಗೆ, ಮೊದಲು ಒಂದು ಚಿಂತನೆಯನ್ನು ನಮ್ಮಲ್ಲೆ ಬ್ಬಿಸಿ, ಆ ಮೇಲೆ ಅದನ್ನು ಕೆಳಕ್ಕೆ ತಳ್ಳಿಬಿಡುವ ರೀತಿಯಲ್ಲಿ ಕುಮಾರ ವಾಲ್ಮೀಕಿಯು ರಾವಣ ಪಾತ್ರಯೋಜನೆ ಮಾಡಿ ದಂತೆ ತೋರುತ್ತದೆ. ಇದರಿಂದ ದಶಕಂಠ ಪಾತ್ರವು ಒಂದು ಒಗಟಿನಂತೆ–ಸೂಕ್ಷ್ಮ ರಹಸ್ಯವಾಗಿಯೇ–ಉಳಿಯುತ್ತದೆ, ಈ ರಹಸ್ಯವನ್ನು ಭೇದಿಸುವುದಕ್ಕೆ ಯಾವ ಲೌಕಿಕ ಉಪಕರಣಗಳೂ ಸಾಕಾಗುವಂತಿಲ್ಲ. ಅಲೌಕಿಕವಾದ ದೃಷ್ಟಿ ಕೋನದಿಂದ ಕಂಡಾಗ ಮಾತ್ರ ಅದರ ಅಂತರ್ಯದ ಸುಳಹು–ಹೊಳವು ತಿಳಿದೀತು.

---

1. ತೊ.ರಾ. VI ೫೦-೨೭,೨೮.
2. ಇದೇ. ೫೦-೩೩.
3. ತೊ. ರಾ. I ೧೫-೧೫
4. ಇದೇ. ೧೫-೨೬.
5. ಇದೇ. ೧೫-೨೮.

ಪ್ರಾರಂಭದಿಂದಲೂ, ಆಸುರ ವಿಕಾರದ ಮೂರ್ತಿಯಾಗಿ, ದೈವ ವಿರೋಧಿಯಾಗಿ ಚಿತ್ರಿತನಾದ ರಾವಣನು ಕೊನೆಯಲ್ಲಿ ಅನಿರೀಕ್ಷಿತವೆಂಬಂತೆ 'ದೈವದ ಅಂತರಂಗ–ಭಕ್ತನಾಗಿ, ದೈವಾನುಗ್ರಹ ರೂಪವಾದ ವಿಶ್ವರೂಪದರ್ಶನಭಾಗ್ಯವನ್ನು ಹೊಂದಿ ಧನ್ಯನಾಗುತ್ತಾನೆ. ದ್ವೇಷವು ಭಕ್ತಿಯಾಗಿ ಪರಿವರ್ತಿತವಾದ ಸ್ಥಿತಿಯಲ್ಲಿ ರಾವಣನಿಗೆ ಮುಕ್ತಿಯ ಗತಿ ಕಾಣಿಸಿಕೊಳ್ಳುತ್ತದೆ. ಆ ಪರಿವರ್ತನೆ ಬಾಹ್ಯವಲ್ಲ, ಆಂತರಿಕ. ಕಾಯಿಯು ಒಳಗೊಳಗೆ ಮಾಗಿ ಪಕ್ವವಾಗುವಂತೆ ಅದರ ಪ್ರಗತಿ. ವ್ಯಕ್ತಿಯಲ್ಲಿ ಅಸುರ ಅಂಶ ಸ್ಫುಟವಾಗಿದ್ದುದು, ಅಸ್ಫುಟವಾಗುತ್ತಾ ಕರಗಿ, ಆ ಸ್ಥಾನದಲ್ಲಿ ದೈವದ ಮಾಹಾತ್ಮ್ಯ ಜ್ಞಾನವು ಮೂಡಿ 'ಅನುಗ್ರಹ'ಕ್ಕೆ ಪಾತ್ರನಾಗುತ್ತಾನೆ. 'ಜೀವದ್ವಯಸಮಾವೇಶ'–ಎಂಬ ಮಧ್ವಾಚಾರ್ಯರ ತಾತ್ವಿಕ ದರ್ಶನವು ಕುಮಾರ ವಾಲ್ಮೀಕಿಯ ರಾವಣ ಪಾತ್ರ ಸಂಯೋಜನೆಯಲ್ಲಿ ಸೂಚಿತವಾಗುತ್ತದೆ.[1]

ದೈವದ ಸಹಯೋಗದಿಂದಲೇ ತಮ್ಮಲ್ಲಿದ್ದ ಅಸುರಾಂಶವನ್ನು ಕಳೆದುಕೊಂಡು–ಕುಂಭಕರ್ಣ, ಅತಿಕಾಯ, ಇಂದ್ರಜಿತುಗಳು ತಮ್ಮ ಅಂತ್ಯ ಕಾಲದಲ್ಲಿ ಶ್ರೀರಾಮನ ದಿವ್ಯತೆಯನ್ನು ಗುರುತಿಸಿಕೊಂಡಂತೆ ವರ್ಣಿಸಿದ ಕುಮಾರ ವಾಲ್ಮೀಕಿಯು, ಅದೇ ನಿಟ್ಟಿನಲ್ಲಿ ರಾವಣನ ಪಾತ್ರವನ್ನು ಇನ್ನಷ್ಟು ಎತ್ತರದ ಸ್ತರಕ್ಕೇರಿಸಿದ್ದು ಸಹಜವೇ. ಆದರೆ, ಈ ಅಂತರಂಗ ಸಂಸ್ಕಾರ, ವಿಕಾಸಗಳು ಬಾಹ್ಯಗೋಚರವಾದ ಸಂದರ್ಭ ಅನಿರೀಕ್ಷಿತ, ರೀತಿ ಅಲೌಕಿಕ.

ಮೊದಲಲ್ಲಿ, ಮಾರೀಚನು ರಾಮನ ಮಹಿಮಾ ವರ್ಣನೆ ಮಾಡಿ, ಆತನ ಸತಿಗೆ ಕೈಯಿಕ್ಕಿದರೆ 'ಸೊಕ್ಕಿ ಕರಿ ಹರಿಯೊಡನೆ ಸೆಣಸುವಂತಾದೀತು' ಎಂದು ಎಚ್ಚರಿಸಿದಾಗ ರಾವಣನು ಆ ಮಾತುಗಳಿಗೆ ಕಿವಿಕೊಡುವುದಿಲ್ಲ. ಹಾಗೆಯೇ ವಿಭೀಷಣನು ರಾಮನೊಡನೆ ಕಲಹ ಬೇಡ ಎಂದಾಗ, ದಶಕಂಠನು ಕ್ರೋಧೋದ್ದೀಪಿತನಾಗಿ "ಈ ನಾಯ ತಲೆ ಹಿಡಿದು ಹೊಳಲ ಹೊರವಡಿಸು"[2] ಎಂದು ಇಂದ್ರಜಿತುವಿಗೆ ಹೇಳುತ್ತಾನೆ.

ಮಾತೆ, ಮಾತಾಮಹರು ನೀತಿಬೋಧಿಸಿದಾಗ, "ನಿಮ್ಮ ಕಣ್ಣಿಗೆ ಸ್ಥೂಲನಾಗಿ ಕಾಣುವ ರಾಮನು ನನ್ನ ದೃಷ್ಟಿಯಲ್ಲಿ ಅಣು ಮಾತ್ರ"[3]–ಎಂದು ಧಿಕ್ಕರಿಸಿದವನು ರಾವಣ.

ಮುಂದೆ, ಕುಂಭಕರ್ಣ,[4] ಅತಿಕಾಯರೂ[5] ತನ್ನ ವರ್ತನೆಯನ್ನು ಆಕ್ಷೇಪಿಸಿದಾಗ, ರಾವಣನು ಇಟ್ಟಹೆಜ್ಜೆಯನ್ನು ಹಿಂದಕ್ಕಿರಿಸಿದವನಲ್ಲ. ಪ್ರತಿನಾಯಕನಾದ ರಾವಣನೊಬ್ಬನಾದರೂ, ರಾಮನನ್ನು ಸಾಮಾನ್ಯನೆಂದು ತಿಳಿದು, ಅವನನ್ನು ಕೆಣಕಿ, ಸೆಣಸಿ ತನ್ನ ಶೌರ್ಯ ಸಾಹಸಗಳನ್ನು ಒರೆಹಚ್ಚಿನೋಡಲು ಮುಂದಾಗುತಿದ್ದಾನಲ್ಲ–ಎಂದು ನಮ್ಮಲ್ಲಿ ಉದ್ಗಾರ ಮೂಡಿಸುವಂತಿದೆ ಕಲಿರಾವಣನ ನುಡಿ, ನಿರ್ಧಾರ. ಈ ನಿರ್ಧಾರದ ಹಿಂದೆ "ರಾಮನನ್ನು ಕೂಡುವುದೇ ಈ ರಕ್ಕಸನ ಉದ್ದೇಶ" ಎಂಬ ಕಲ್ಪನೆಗೆ ಊಹೆಗೆ ಅವಕಾಶವೇ ಉಂಟಾಗುವುದಿಲ್ಲ.

## ರಾವಣನ ಜೀವನ ರಹಸ್ಯ ಪ್ರಕಟನೆ

ಹಲವು ದಿನ ಸಂಗ್ರಾಮ ನಡೆದ ಮೇಲೆ–ಧೂಮ್ರಾಕ್ಷ, ಪ್ರಹಸ್ತ, ಕುಂಭಕರ್ಣ, ಅತಿಕಾಯ, ಇಂದ್ರಜಿತು ಎಲ್ಲರೂ ಹತರಾದಮೇಲೆ–ಪುತ್ರಶೋಕತಪ್ತಳಾದ ಮಂಡೋದರಿಯು ತನ್ನ ಪತಿಯೊಡನೆ, "ಹರಿಯೊಡನೆ ಹಗೆಗೊಂಡು ಜೀವದಲುಳಿದವರು ಯಾರಿದ್ದಾರೆ? ರಾಮನನ್ನು ಮರೆಹೋಗುವುದೇ ಲೇಸು. ಬದುಕಿ ಉಳಿದ ವಿರೂಪಾಕ್ಷನನ್ನಾದರೂ ಉಳಿಸಿಕೊಂಡು ಬಾಳೋಣ" ಎಂದು ದೈನ್ಯದಿಂದ ಕೇಳಿಕೊಳ್ಳುತ್ತಾಳೆ.[6] ಆಗ ಸತಿಗೆ ಅದುವರೆಗೂ ಗುಪ್ತವಾಗಿರಿಸಿದ್ದ ತನ್ನ ಜೀವನ ರಹಸ್ಯವನ್ನು ಪ್ರಕಟಿಸುತ್ತಾನೆ. "ಜಗದೊಳುತ್ತಮದ ಜಯವಿಜಯರಾವು, ಜನ್ಮಗಳೇಳನೊಲ್ಲದೆ ಬಂದೆ

1. ಈ ವಿಚಾರದ ವಿವರಣೆ–'ಕೃತಿಯಲ್ಲಿ ತತ್ತ್ವದರ್ಶನ' ಪ್ರಕರಣದಲ್ಲಿದೆ.
2. ತೊ. ರಾ. VI ೨-೪೬.
3. ಇದೇ. ೧೨-೧೩.
4. ಇದೇ. ೨೬-೬೯.
5. ಇದೇ. ೩೪-೬೦ರಿಂದ ೨೧.
6. ಇದೇ. VI ೪೬/೫-೨೦.

ವಾವು ಜನ್ಮ ತ್ರಯಂಗಳಲಿ, ಹೇಳಲಿಕೆ ಇನ್ನೊಂದು ಜನ್ಮದ ಪಾಳಯವು ನಮಗುಂಟು ಈ ರಘುನಾಥನು ಲಕ್ಷ್ಮೀವಲ್ಲಭ ನೆಂಬುದ ನಾ ಬಲ್ಲೆ. ರಣಮುಖದಲಿ ರಾಮನನ್ನು ಕೂಡುವುದೇ ನನ್ನ ಸಂಕಲ್ಪ"[1].

ದಶಕಂಠನ ಈ ನುಡಿಗಳನ್ನು ಕೇಳುತ್ತಿದ್ದಂತೆ ನಮ್ಮ ಬಗೆಯಲ್ಲಿ ರೂಪಿತವಾಗಿದ್ದ ಪ್ರತಿನಾಯಕನ ಚಿತ್ರ ಪಕ್ಕನೆ ಅದೃಶ್ಯವಾಗಿ, ಆ ಸ್ಥಳದಲ್ಲಿ ರಾಮಾನುಗ್ರಹಗಳಿಸಲು ಹೊರಟ ಭಕ್ತ ರಾವಣನು ಗೋಚರಿಸುತ್ತಾನೆ. ಅವನ ಕ್ರೋಧ ಜ್ವಾಲೆಯೆಲ್ಲ ರಾಮಾರಾಧನೆಯ ಧೂಪಧೂಮವಾಗಿ ಪರಿವರ್ತಿತವಾಗುತ್ತದೆ. ಅಂತರಂಗದಲ್ಲಿ "ರಾಮನನ್ನು ಕೂಡು ವುದೇ ಸಂಕಲ್ಪ" ಎಂಬ ನಿರ್ಧಾರದ ದಶಶಿರನು

ಮಾಣದಾದೆನು ಮಾನ ನಾಡಿದ
ವಾಣಿಯನು ಕಾಮುಕತನದಿ ತಾ
ಕಾಣದಾದೆನು ಕಲಿ ವಿಭೀಷಣನುಚಿತಭಾಷಿತವ
ಪ್ರಾಣಮಿತ್ರನಲಾ ಪ್ರಹಸ್ತನ
ಲೂಣಯವ ತಾಳಿದೆನು ಜನನಿಯ
ಜಾಣಿಕೆಯ ಜಾತ್ಯುತ್ತರವನಗಳೆದೆನಕಟೆಂದ[2]

ಹೀಗೆ ಪಡುವ ಪಶ್ಚಾತ್ತಾಪ ಪ್ರಾಮಾಣಿಕ ಎನ್ನಲಾದೀತೇ? ಶ್ರೀರಾಮನಂತೆ ಇವನೂ ಇಲ್ಲಿ 'ಅಭಿನಯ' ನಡೆ ಸುತ್ತಿದ್ದಾನೆಂದು ಮಾತ್ರ ತೋರುತ್ತದೆ. ರಾವಣನ ಈ ರಹಸ್ಯವನ್ನು ವ್ಯಂಗ್ಯವಾಗಿರಿಸಿಕೊಳ್ಳದೆ ವಾಚ್ಯಗೊಳಿಸಿದ್ದ ರಿಂದ, ಅವನ ಮರುಗುವಿಕೆಯೂ ನಮ್ಮನ್ನು ಕರಗಿಸುವುದಿಲ್ಲ. ಮುಂದೆ ವರ್ಣಿತವಾದ ಅವನ ಮಾನಸಿಕ ತುಮುಲ, ಭೀಕರ ಹೋರಾಟ,–ಎಲ್ಲವೂ ಸಹಜವೆನಿಸುವುದಿಲ್ಲ, ಕಲಾತ್ಮಕ ಪರಿಣಾಮವನ್ನುಂಟುಮಾಡುವುದಿಲ್ಲ.

ಆದರೂ ಕುಮಾರ ವಾಲ್ಮೀಕಿಯು ತನ್ನ ದೃಷ್ಟಿಗನುಗುಣವಾಗಿ ರಾವಣ ಪಾತ್ರಪರಿವರ್ತನೆಯನ್ನು ಚಿತ್ರಿಸುತ್ತಾ ಸಾಗಿದ್ದಾನೆ. ಹಲವು ವಿಚಾರಗಳ ಚಂಡಮಾರುತಕ್ಕೆ ಸಿಕ್ಕಿ ಮುಂಗಾಣದವನಾದ ಲಂಕೇಶ್ವರನು

ತಲೆಯಬೋಳಿಸಿಕೊಂಡು ಭವಗೋ
ಟಲೆಯ ಕೊಡಹಿ ಸಮಸ್ತ ಭೂಮಂ
ಡಲವ ತೊಳಲುವುದೊಂದುಮತವಿನ್ನೊಂದು ಮತಬೇರೆ–
ಉಳಿದ ಬಯಕೆಯ ಬಿಸುಟು ಹಾಲಾ
ಹಲವನಂಗೀಕರಿಸುವುದು ಹಗೆ
ಗಲಹವಿನ್ನಕಟಕಟ ಕಷ್ಟದ ಕಡೆಯ ಮಾತೆಂದ–[3]

ಎಂದು ಕನಲು ದಾರಿಗಳಲ್ಲಿ ನಿಂತು ಯೋಚಿಸುತ್ತಾನೆ. ವೈರಾಗ್ಯಜನಿತವಾದ ಲೋಕ ಪರಿಭ್ರಮಣ, ಆತ್ಮ ಹತ್ಯೆಯಂತಹ ಪಲಾಯನ (ನಿವೃತ್ತಿ?) ಮಾರ್ಗ ಅವನ ಪ್ರವೃತ್ತಿಗೆ ಹಿಡಿಸುವುದಿಲ್ಲ.

"ಮೆಚ್ಚಿಸುವೆನಾ ವನಜಪೀಠನ, ನಿಗಮಜೂಟನ–ಕೋಟಿ ಹೋಮದಲಿ, ತನಗೆ ನೂರ್ಮಡಿ ವಿಕ್ರಮದ ಹೆಂಪಿನ ಮಹಾಭಟಕೋಟಿ ರಾವಣರನು ಮಹಾಕ್ರತುವಿನಲಿ ಹೊರಡಿಸುವೆ"[4]–ಎನ್ನುತ್ತಾ ನಿಕುಂಭಿಳೆಯ ನಿಳಯಕ್ಕೆ ನಡೆತಂದು ಯಜ್ಞಕ್ಕೆ ತೊಡಗುತ್ತಾನೆ. ಅವನ ಮನಸ್ಸನ್ನು ವಿಚಲಿತಗೊಳಿಸುವ ಉದ್ದೇಶದಿಂದ ಕಪಿನಾಯಕರು ಮಂಡೋದರಿಯ

1. ತೊ. ರಾ. ೪೬/೨೦-೨೨.
2. ಇದೇ. ೪೮-೨.
3. ಇದೇ. VI ೪೮-೪.
4. ಇದೇ. ೪೮-೫.

ವಸ್ತ್ರಾಪಹಾರಕ್ಕೆಳಸಲು, ದಶಶಿರನು ಆಕೆಯ ಆಕ್ರಂದನವನ್ನು ಕೇಳಿ ಕಿಡಿಕಿಡಿಯಾಗಿ, ಚಂದ್ರಹಾಸವನ್ನುಗಿಯುತ್ತಾ ಯಜ್ಞವೇದಿಕೆಯಿಂದೆದ್ದು, ಕಾಳಗಕ್ಕೆ ನುಗ್ಗುತ್ತಾನೆ.

ತಾನು ರಣಕ್ಕೆ ಹೊರಡುವ ಮೊದಲು ತನ್ನ ಭಂಡಾರದಲ್ಲಿ ಅಷ್ಟದಿಕ್ಪಾಲಕರಿಂದ ಕಪ್ಪವಾಗಿ ಬಂದು ತುಂಬಿದ್ದ 'ಪರಿಪರಿಯ ನಾಣ್ಯವೆಲ್ಲವನ್ನು ಅಖಿಳಯಾಚಕ ಸಂದಣಿಗೆ ವಿತರಣೆ ಮಾಡಿದ್ದು, ಮಾತ್ರವಲ್ಲದೆ, ತನ್ನವರನ್ನೆಲ್ಲ ಕರೆ ಕರೆದು,' ಮನೆವೆರಸಿ ಸೂರೆಯಬಿಟ್ಟು, ತೆರಿಗೆಯುಬರಹಗಳನ್ನು ತೊಡಿಸಿ ಸಂತಸಪಡಿಸುತ್ತಾನೆ–ರಾವಣ. ಸೆರೆಮನೆ ಯಲ್ಲಿ ಬಂದಿಗಳಾಗಿದ್ದ ದಾನವ ಸುರ ನರೋರಗ ಜನವ ಮನ್ನಿಸಿ, ಬಂಧಮುಕ್ತಗೊಳಿಸಿದ ಮೇಲೆ ಆಪ್ತ ಬಂಧುವರ್ಗ ದವರನ್ನು ಉದ್ದೇಶಿಸಿ, ಲಂಕಾಧಿಪನು ಅನ್ನುವುದು ಹೀಗೆ–

"ರಣರಂಗಪೊಳಗಳಿದೆನಾದರೆ–ವರವಿಭೀಷಣ ದೇವನನು ಪರಿಚಯದಿಂದುಪಚರಿಸಿಕೊಂಡಿಹುದು"[1] ಈ ವರ್ಣನೆ ಗಳೆಲ್ಲ ರಾವಣನ ಕುರಿತಾಗಿ ನಮ್ಮ ಮೆಚ್ಚುಗೆ ಗಳಿಸುವಲ್ಲಿ ಯಶಸ್ವಿಗಳಾಗುತ್ತವೆ. ತನ್ನ ಭವಿಷ್ಯವನ್ನು ತಾನೇ ತರ್ಕಿಸಿ, 'ಅಳಿದೆನಾದರೆ' ವಿರೋಧಿ ಪಕ್ಷವನ್ನು ಸೇರಿ ತನಗೆ ದ್ರೋಹ ಬಗೆದ ವಿಭೀಷಣನನ್ನೇ ಮತ್ತೆ ಗೌರವಿಸಬೇಕೆನ್ನುವ ರಾವ ಣನ ಉದಾರದೃಷ್ಟಿ ಅವನ ವ್ಯಕ್ತಿತ್ವದ ಅತ್ಯುದಾತ್ತ ಅಂಶ.

ಹೀಗೆ, ಒಳಗೊಳಗೆ 'ಹದಗೊಂಡ' ರಾವಣನಿಗೆ ಕುಮಾರ ವಾಲ್ಮೀಕಿಯು ರಣರಂಗದಲ್ಲಿ ರಾಮನ ವಿಶ್ವರೂಪ ವನ್ನು ಕಾಣುವ ಸೌಭಾಗ್ಯವನ್ನು ಒದಗಿಸುತ್ತಾನೆ. ಪ್ರತ್ಯಕ್ಷನಾದ 'ಸಗುಣ ಘನ' ಸ್ವಾತಂತ್ರ್ಯದೈವವ ಕಂಡ ಅಸು ರೇಂದ್ರ ತನಗಿನ್ನು 'ಮುಕ್ತಿಯಸೂರೆ' ಎಂದು ಹಿಗ್ಗುವುದು ಸಹಜವಾಗಿದೆ.[2] 'ತನು ಪರಿಚ್ಯುತಿಗೆ' ನಿರ್ಧರಿಸಿಕೊಂಡ ರಾವಣನಿಗೆ ಮರಣವೇ ಮಹಾನವಮಿಯಾಗುತ್ತದೆ, ಮುಕ್ತಿ ಸಾಮ್ರಾಜ್ಯದ ಮಹಾದ್ವಾರವು ತನ್ನ ಪಾಲಿಗೆ ಮುಕ್ತ ದ್ವಾರವಾದ ಅನುಭವ ಅವನಿಗಾಗುತ್ತದೆ.

ವಾಲ್ಮೀಕಿ ರಾಮಾಯಣದಲ್ಲಿ ದೊರೆಯದ ಇಂತಹ ಮೋಕ್ಷಕಾಮಿ ಮತ್ತು ಮೋಕ್ಷಗಾಮಿ ಪಾತ್ರಚಿತ್ರಣ ವಿಚಾರದಲ್ಲಿ ಕುಮಾರ ವಾಲ್ಮೀಕಿಯು ಆಧ್ಯಾತ್ಮ ರಾಮಾಯಣದ ವಸ್ತು ಮತ್ತು ಮಧ್ವಾಚಾರ್ಯರ ತತ್ವಗಳಿಗೆ ಋಣಿ ಯಾದಂತೆ ತೋರುತ್ತದೆ. ನಾಗಚಂದ್ರನ 'ರಾಮಚಂದ್ರಚರಿತ ಪುರಾಣ'ವನ್ನೂ ಓದಿಕೊಂಡ ಅಂಶ ಖಚಿತವಾಗು ತ್ತದೆ.[3]

ರಾವಣ ಚಾರಿತ್ರ್ಯದ ಬಗ್ಗೆ ವಾಲ್ಮೀಕಿ ರಾಮಾಯಣದಲ್ಲಿ ಶ್ರೀರಾಮನು :

> ತೇಜಸ್ವೀ ಬಲವಾನ್ ಶೂರಃ ಸಂಯುಗೇಷು ಚ ನಿತ್ಯಶಃ
> ಶತಕ್ರತುಮುಖೈರ್ದೇವೈಃ ಶ್ರೂಯತೇನ ಪರಾಜಿತಃ
> ಮಹಾತ್ಮಾ ಬಲಸಂಪನ್ನೋ ರಾವಣೋ ಲೋಕ ರಾವಣಃ[4]

"ರಾವಣನಲ್ಲಿ ಅಧರ್ಮವೂ, ಅನೃತವೂ ತುಂಬಿದ್ದವೆಂಬುದು ವಾಸ್ತವ. ಆದರೆ ಈತನು ಮಹಾ ತೇಜಸ್ವಿ, ಬಲಾಢ್ಯ, ಶೂರ. ಸಂಗ್ರಾಮದಲ್ಲಿ ಇಂದ್ರಾದಿದೇವತೆಗಳಿಂದಲೂ ಪರಾಜಯ ಹೊಂದದ ಪರಾಕ್ರಮಿಯೆಂದು ಕೀರ್ತಿ ಶಾಲಿಯಾಗಿದ್ದಾನೆ. ಬಲಶಾಲಿಯಾಗಿ, ಲೋಕರಾವಣನೆನಿಸಿದ್ದ ಮಹಿಮಾನ್ವಿತನಾಗಿದ್ದಾನೆ, ಮಹಾತ್ಮನಾಗಿದ್ದಾನೆ"– ಎಂದ ಮೆಚ್ಚುಗೆ ನುಡಿಗಳನ್ನು ಇಲ್ಲಿ ನೆನಪಿಸಬಹುದು. ರಾವಣನ ವ್ಯಕ್ತಿತ್ವದಲ್ಲಿ ದೋಷ, ಗುಣಗಳೆರಡೂ ಇದ್ದವು. ತನ್ನ ದೋಷಗಳಿಗಾಗಿ ಅವನು ಪಟ್ಟ ಲೌಕಿಕ ನಷ್ಟ ಅಪಾರ, ಸಾಂಸಾರಿಕ ದುಃಖ ಅಗಾಧ. ಅದರಂತೆಯೇ ಅವ ನಲ್ಲಿ ಸುಪ್ತವಾಗಿದ್ದ ಗುಣಗಳಿಂದಾಗಿ ಅವನು ಗಳಿಸಿದ ಅಲೌಕಿಕ ಗತಿಯೂ ಅಷ್ಟೇ ಅಸಮಾನವಾದುದು. ರಾವಣನ

---

1 ತೊ. ರಾ. VI ೪೬-೨೮.

2. ಇದೇ. ೫೦-೫೧.

3. ಈ ವಿಚಾರ 'ಕೃತಿಯ ವಿಶ್ಲೇಷಣಾತ್ಮಕ ಅಧ್ಯಯನ ಮತ್ತು ಕೃತಿಯಲ್ಲಿ ಪರಂಪರೆಯಸತ್ವ' ಪ್ರಕರಣದಲ್ಲಿ ವಿವೇಚಿತವಾಗಿದೆ.

4. ವಾ. ರಾ. VI ೧೧೪/೧೦೦-೧೦೧.

ವ್ಯಕ್ತಿತ್ವದ 'ಇನ್ನೊಂಗಗಳ ದರ್ಶನ' ವನ್ನು ಕುಮಾರ ವಾಲ್ಮೀಕಿಯು ನಮಗೆ ಪೂರೈಸುವ ಉದ್ದೇಶವಿರಿಸಿಕೊಂಡಂತೆ ತೋರುತ್ತದೆ. ಇದರ ಹೊರತಾಗಿ, 'ದುರಂತ ರಾವಣತತ್ವ'ದ ಕಲ್ಪನೆ, ಉದ್ದೇಶಗಳು ಕವಿಗೆ ಇದ್ದಂತೆ ಎನಿಸುವುದಿಲ್ಲ.

"ರಾಮಾವತಾರಾವಸರವೆಂದರೆ ಎಲ್ಲ ಸ್ತರಗಳ ಉದ್ಧಾರಾವಕಾಶ"–ಎಂಬ ನಿಲುವೇ ಕವಿಯದು. ಇದರಿಂದ ವಾಲ್ಮೀಕಿ ರಾಮಾಯಣದಲ್ಲಿ ಕೇವಲ 'ಪಾಪದರ್ಶಿನಿ'ಯಾಗಿರುವ ಮಂಥರೆಯೂ ಇಲ್ಲಿ ಅವತಾರ ಕಾರ್ಯಕ್ಕೆ ನೆರವಾಗಿ ಧನ್ಯೆಯಾಗುವ ಮಾಯಾ ತರುಣಿಯಾಗಿದ್ದಾಳೆ.[1] ಅಂತೆಯೇ ರಕ್ಕಸರೂ ಇಲ್ಲಿ ರಾಮದರ್ಶನದಿಂದಾಗಿ 'ಭವ ಮುಕ್ತ' ರಾಗುತ್ತಾರೆ. ವಾಲ್ಮೀಕಿ ರಾಮಾಯಣದ ರಾವಣನ ಧೂರ್ತತೆಯೂ ಇಲ್ಲಿ ಮೃದುಗೊಂಡು ಅವನನ್ನು 'ಅನುಗ್ರಹಾರ್ಹತೆಗೆ ಹದಗೊಳಿಸಿದ ವೈಶಿಷ್ಟ್ಯ' ಕುಮಾರ ವಾಲ್ಮೀಕಿಯದು.

## ಪಾತ್ರ ಪರಿಶೀಲನೆ–೩

### ವೈಷ್ಣವಶಿರೋಮಣಿ–ಅತಿಕಾಯ

ರಾವಣಪುತ್ರ ಅತಿಕಾಯ ಪಾತ್ರವು ಕುಮಾರ ವಾಲ್ಮೀಕಿಯ ವೈಷ್ಣವ ಶ್ರದ್ಧೆಗೆ ಒಂದು ಪ್ರತೀಕವಾಗಿ ನಿಲ್ಲುತ್ತದೆ. ಅತಿ ಸೂಕ್ಷ್ಮವಾದ ಕೆತ್ತನೆಯ ಕೆಲಸದಿಂದ ಮನೋಹರವಾಗಿರುವ ಗಂಧದ ವಿಗ್ರಹದಂತೆ ಅಚ್ಚುಕಟ್ಟಾದ ಈ ಪಾತ್ರವು ಕುಮಾರ ವಾಲ್ಮೀಕಿಯದೇ ಸೃಷ್ಟಿ. ಯುದ್ಧಕಾಂಡದ ಒಂದು ಸಂಧಿಯಲ್ಲಿ ಮಿಂಚಿ ಮರೆಯಾಗುವ ಅತಿಕಾಯನು ನಮ್ಮ ಮನಸ್ಸನ್ನು ಬಹುಕಾಲ ಸೆರೆಹಿಡಿದಿರುವುದಕ್ಕೆ–ನಮ್ಮ ಕನ್ನಡದ ಕವಿಯ ಸ್ವೋಪಜ್ಞತೆಯೇ ಕಾರಣ.

ವಾಲ್ಮೀಕಿ ರಾಮಾಯಣದಲ್ಲಿ ಅತಿಕಾಯನ ಕುರಿತು ಸಿಗುವ ಉಲ್ಲೇಖಗಳು ಕೆಳಗಿನಂತಿವೆ:

ತಸ್ಯಾಸೀದ್ವೀರ್ಯವಾನ್ ಪುತ್ರೋ ರಾವಣಪ್ರತಿಮೋ ರಣೇ
ವೃದ್ಧಸೇವೀ ಶ್ರುತಿಧರಃ ಸರ್ವಾಸ್ತ್ರವಿದುಷಾಂವರಃ
ಅಶ್ವಪೃಷ್ಠೇ ರಥೇ ನಾಗೇ ಖಡ್ಗೇ ಧನುಷಿ ಕರ್ಷಣೇ
ಭೇದೇ ಸಾಂತ್ವೇಚ ದಾನೇ ಚ ನಯೇ ಮಂತ್ರೇ ಚ ಸಂಮತಃ
ಯಸ್ಯ ಬಾಹೂ ಸಮಾಶ್ರಿತ್ಯ ಲಂಕಾ ವಸತಿ ನಿರ್ಭಯಾ
ತನಯಂ ಧಾನ್ಯಮಾಲಿನ್ಯಾ ಅತಿಕಾಯಮಿಮಂ ವಿದುಃ[2]

ರಣರಂಗದಲ್ಲಿ ಮುನ್ನುಗ್ಗುತ್ತಿದ್ದ ಅತಿಕಾಯನ ಬಗ್ಗೆ ರಾಮನು ವಿಭೀಷಣನನ್ನು ವಿಚಾರಿಸಿದಾಗ: "ರಾವಣನ ಮಗನಿವನು. ರಣಭೂಮಿಯಲ್ಲಿ ಇವನು ರಾವಣನಿಗೆ ಸಮಾನನಾದ ಪರಾಕ್ರಮಿ. ಗುರುಹಿರಿಯರನ್ನು ಸೇವಿಸತಕ್ಕವನು. ವಿದ್ಯಾವಂತ; ಸಕಲ ಅಸ್ತ್ರವಿದ್ಯೆಗಳಲ್ಲಿಯೂ ಪಾರಂಗತ. ಅಶ್ವಾರೋಹ, ಗಜಾರೋಹಗಳನ್ನು ಬಲ್ಲವನು. ರಥವಿದ್ಯೆಯಲ್ಲಿ ಪಳಗಿದ್ದಾನೆ. ಖಡ್ಗಯುದ್ಧ, ಧನುರ್ವಿದ್ಯೆಗಳಲ್ಲಿ ನಿಪುಣನು. ಪಾಶವೆಸೆದು ವೈರಿಗಳನ್ನು ಸೆರೆ ಹಿಡಿಯುವುದರಲ್ಲಿ ಜಾಣ. ಭೇದೋಪಾಯಗಳಲ್ಲಿ, ಕಪಟಯುಕ್ತಿಯಲ್ಲಿ, ಮಂತ್ರಾಲೋಚನೆಯಲ್ಲಿ ಪ್ರವೀಣ. ಇವನ ಭುಜಬಲದಿಂದ ಲಂಕೆಯು ನಿರ್ಭಯವಾಗಿದೆ. ರಾವಣನ ಮಡದಿ ಧಾನ್ಯಮಾಲಿನಿಯ ಮಗನಿವನು; ಹೆಸರು ಅತಿಕಾಯನೆಂದು...." ಎಂದು ಅವನು ತಿಳಿಸುತ್ತಾನೆ.

"ತೇಜಸ್ವೀ", "ಮಹಾತೇಜಾ", "ಧೀಮಾನ್"[3] ಎಂದೂ ಅತಿಕಾಯನನ್ನು ವಿಶೇಷಿಸಲಾಗಿದೆ. ಅಷ್ಟೆ.

ಇಷ್ಟು ಮೂಲ ಸಾಮಗ್ರಿಯಿಂದ, ಕುಮಾರ ವಾಲ್ಮೀಕಿಯು ಸಿದ್ಧಪಡಿಸಿದ ಅತಿಕಾಯ ಪಾತ್ರವು ಮೂಲದಲ್ಲಿಲ್ಲದ ಸೊಗಸು, ವೈಶಿಷ್ಟ್ಯಗಳಿಂದ ಕೂಡಿದೆಯೆನ್ನುವುದು ಮುಂದಿನ ಪರಿಶೀಲನೆಯಿಂದ ತಿಳಿಯುತ್ತದೆ.

---

1. ತೊ. ರಾ. I ೮-೭೦
2. ವಾ. ರಾ. VI ೭೧/೨೮-೩೦.
3. ವಾ. ರಾ. VI ೬೯/೯; ೭೧/೩, ೭೧/೩೫.

## ವೀರಶ್ರೀ–ಭಕ್ತಿಶ್ರೀಗಳ ಸಮ್ಮಿಲನ

'ತೊರವೆ ರಾಮಾಯಣ'ದ ರಾಕ್ಷಸ ಪರಿವಾರದಲ್ಲಿ ಇಬ್ಬರು 'ಹರಿ ಶರಣ'ರ ಪರಿಚಯ ನಮಗಾಗುತ್ತದೆ. ಅವರು- ವಿಭೀಷಣ ಮತ್ತು ಅತಿಕಾಯ. ವಿಷ್ಣುಭಕ್ತನಾದ ವಿಭೀಷಣನು ದೈವವಿರೋಧಿಯಾದ ಅಣ್ಣನನ್ನು ಬಿಟ್ಟು, ರಾಮನ ಮರೆಹೊಕ್ಕು, ಮುಂದೆ ಲಂಕೇಶನಾಗಿ ಬಾಳಿದವನು. ಆದರೆ, ರಾವಣನ ಮಗನಾದ ಅತಿಕಾಯನು ವಿಷ್ಣು ಭಕ್ತನಾದರೂ, ತಂದೆಯ ಪಕ್ಷವನ್ನು ತ್ಯಜಿಸದೆ, ರಾಮನೊಡನೆ ಕಾಳಗವೆಂದರೆ "ವೈಕುಂಠ ಸಾಮ್ರಾಜ್ಯಕ್ಕೆ ದಿಗ್ವಿಜಯ ನಡೆಸಿದಂತೆ" ಎಂದು ಭಾವಿಸಿದವನು. ರಣಕಣದಲ್ಲಿ ಲಕ್ಷ್ಮಣನಲ್ಲಿಯೇ ರಾಮನ ದರ್ಶನ ಪಡೆದು, "ಸರಳ ಭಕ್ತಿ" ಯನ್ನು ಮೆರೆದು, ಹೋರಾಟದ ಕೊನೆಯಲ್ಲಿ 'ಹರಿ, ವಿಷ್ಣು, ಲಕ್ಷ್ಮೀನಾಥ' ಎಂದುಚ್ಚರಿಸುತ್ತಾ ಪ್ರಾಣಾರ್ಪಣೆ ಮಾಡಿದ ಸಾರ್ಥಕ ಜೀವಿ. ಅವನು ಮಡಿದಾಗ, "ಲಂಕೇಶ್ವರನ ಮೊಗ ರಸದ ಸಿರಿ ಕೆಲಸಿಡಿದಂತಾಗುತ್ತದೆ",[1] 'ಲಂಕೇಶನೆರಡನೆಯ ಹರಿಪರಾಯಣ ನಷ್ಟವಿಸಿದನೆ' ಎಂದು ಸೂರ್ಯನು ಪಡುವಣಬುಧಿಯಲ್ಲಿ ಬೀಳುತ್ತಾನೆ.

ಅಸುರ ಪಕ್ಷದಲ್ಲಿ ಪ್ರಹಸ್ತ, ಕುಂಭಕರ್ಣ ಮೊದಲಾದ ವೀರರು ಮಡಿದ ಮೇಲೆ ಅತಿಕಾಯನ 'ಸೂಳ್' ಬರುತ್ತದೆ. ಯುದ್ಧಕ್ಕೆ ಹೊರಡುವ ಮೊದಲು ತನ್ನ ಆತ್ಮಸಾಕ್ಷಿಗನುಗುಣವಾಗಿ ತಂದೆಯೊಡನೆ ರಾಮನ ದಿವ್ಯತೆಯನ್ನು ಕೊಂಡಾಡಿ, 'ಸೀತೆಯ ಸೆರೆಯ ಬಿಡುವುದು ಲೇಸು' ಎನ್ನುತ್ತಾನೆ, ರಾವಣನು ಈ ನುಡಿಗಳಿಗೆ ಕಿವುಡಾಗಿ "ಬೊಮ್ಮದ ಮಾತದಂತಿರಲಿ, ರಿಪುಮಥನವುಂಟೆ ? ಹೇಳು"[2] ಎಂದು ಚುಚ್ಚಿದಾಗ, ಅತಿಕಾಯನಿಗೆ ತನ್ನ ಕರ್ತವ್ಯದ ಅರಿವಾಗುತ್ತದೆ. "ಅಹುದು ಮತ್ತೇನಾರ ಚಿತ್ತದಲಿಹುದನವರೇ ಬಲ್ಲರು" ಎಂದುಕೊಳ್ಳುತ್ತಾ,[3] ತಂದೆಯ ರಹಸ್ಯ ಭೇದ ಮಾಡುವುದಕ್ಕಿಂತ, ಅಯಾಚಿತವಾಗಿ ಒದಗಿದ ಯುದ್ಧಾವಸರದಲ್ಲಿ ವಿಷ್ಣು ಪದಭಾಗ್ಯವನ್ನು ಹೊಂದುವುದು ಮೇಲೆಂದು ಅತಿಕಾಯನು ನಿರ್ಧರಿಸುತ್ತಾನೆ. ತಂದೆಯಿಂದ ರಣವೀಳ್ಯವನ್ನು ಪಡೆದು ಅತಿಕಾಯನು ಭಕ್ತಿಶ್ರೀ–ವೀರಶ್ರೀಗಳ ಸಂಗಮದಂತೆ ಕಂಗೊಳಿಸುತ್ತಾನೆ.

ಅತಿಕಾಯನು ರಣರಂಗಕ್ಕೆ ಹೊರಟಾಗ ತಾನು ಅಲಂಕರಿಸಿಕೊಂಡ ರೀತಿ ಕುಮಾರ ವಾಲ್ಮೀಕಿಯ ವೈಷ್ಣವ ಶ್ರದ್ಧೆಯನ್ನು ಪ್ರತಿಫಲಿಸುತ್ತದೆ.

> ತರಿಸಿ ತುಳಸಿಯ ದಂಡೆಗಳ ನಿಜ
> ಶಿರಕಲಂಕರಿಸಿದನು ಕೊರಳಿನ
> ಲಿರಿಸಿದನು ಕೋಮಲದ ವಿವಿಧಾಭರಣಗಳ ಸಹಿತ ;
> ವರ ಲಲಾಟದಲೂರ್ಧ್ವ ತಿಲಕವ
> ಧರಿಸಿ ತಾಯಿಗೆ ನಮಿಸಿ ವೈಷ್ಣವ
> ರರಸ ನಡೆದನು ಜನಮನೋಹರಕಾಯನತಿಕಾಯ.[4]

ಹೀಗೆ ಕಾಳಗದ ಕಣಕ್ಕೆ ಸಿದ್ಧನಾಗಿ ಹೊರಟ ಅತಿಕಾಯನು ಲಂಕಾಪುರದ ಜನರನ್ನು ಕರೆಕರೆದು, ಡಂಗುರ ಹೊಡೆದು ಎಚ್ಚರಿಸಿ,

> ಬಹಡೆ ಬನ್ನಿ ಭವಾಬ್ಧಿ ಪೋತನ
> ಬಹಳ ಪದವಿಯ ಬಯಸುವಡೆ ನೀವ್
> ಬಹಡೆ ಬನ್ನಿ ಜರಾಮರಣವರ್ಜಿತನನೈದುವಡೆ....[5]

---

1. ತೊ. ರಾ. VI ೩೪-೭೮.
2. ಇದೇ. ೩೪-೨೩.
3. ಇದೇ. ೩೪-೨೪.
4. ತೊ. ರಾ. VI ೩೪/೨೫.
5. ಇದೇ. ೩೪/೨೬.

ಐದುನವರೈತನ್ನಿ, "ಮಾಯಾ ವಿಲಾಸದ ಬಲೆಗೆ ಬೀಳದೆ ಬನ್ನಿ", 'ಮೋಕ್ಷಕಾಂಕ್ಷಿಗಳೆಲ್ಲ ಬನ್ನಿ'–ಹೀಗೆ ಆಹ್ವಾನ ನೀಡಿದಾಗ, ರಾಮನೇ ನಿಜವಳಿಯದನುಲ ಬ್ರಹ್ಮವೆಂಬ ಭಕ್ತಿಭಾವದ "ತತ್ವ"ದ ತಿಳಿವಿನಸುರರು ಅತಿಕಾಯನನ್ನು ಸೇರಿಕೊಳ್ಳುತ್ತಾರೆ.[1] ವೈಷ್ಣವನಾದ ಅತಿಕಾಯನಿಗೆ ಯುದ್ಧಕ್ಷೇತ್ರವು ಭೌತಿಕ ವಿಜಯದ ರಂಗವಾಗಿರದೆ, ಮೋಕ್ಷ ಶ್ರೀಯ ಸ್ವಯಂವರ ಮಂಟಪವಾಗಿ ಆಕರ್ಷಿಸುತ್ತದೆ.

ರಣದಲ್ಲಿ ಲಕ್ಷ್ಮಣನು ಅತಿಕಾಯನನ್ನು ಎದುರಿಸುತ್ತಾನೆ, ತನ್ನ ಎದುರಾಳಿಯು ರಾಮನೇ? ಲಕ್ಷ್ಮಣನೇ?–ಅತಿಕಾಯನಿಗೆ ತಿಳಿಯದು. ಶ್ರೀರಾಮನೇ ಆಗಿದ್ದರೆ ಶ್ರೀ ಹರಿಯ ಕೈಯಿಂದಲೇ ಮುಕ್ತನಾಗುವ ಭಾಗ್ಯ ತನ್ನದಾಗುತ್ತಿತ್ತಲ್ಲ–ಎನ್ನುವ ಆತುರ ಅವನಿಗೆ. ಆದರೆ ಆ ಕುರಿತು ಲಕ್ಷ್ಮಣನೊಡನೆ ವಿಚಾರಿಸಿದಾಗ, "ನಿನ್ನ ಮನಕೇನೆಂದು ತೋರಿತೋ, ತೋರಿದನಿತನೆ ಬಗೆದುಕೋ" ಎಂಬ ಜೂಪಾದ ಉತ್ತರ ಸಿಗುತ್ತದೆ.[2] ಈ ಉತ್ತರವು ಅತಿಕಾಯನಿಗೆ ತನ್ನ ಶ್ರದ್ಧೆಗೊಂದು "ಸವಾಲು" (ಪಂಥಾಹ್ವಾನ) ಆಗಿ ಕಂಡಿರಬೇಕು. ಇದರಿಂದ ನಿರಾಶನಾಗದ ಅತಿಕಾಯನು ಆಗಲಿ, ರಣಕೆ ನಮಗಾರಾದರೇನು? ಅದರೆಣಿಕೆ ನಮಗಿಲ್ಲ, ಸಮರದಲಿ ಸಚರಾಚರಾತ್ಮಕಗೆ ನಾವು ಆತ್ಮನಿವೇದಕರು"[3] ಎನ್ನುತ್ತಾ, ಲಕ್ಷ್ಮಣನಲ್ಲೇ ಪರಾತ್ಪರ ರೂಪವನ್ನು ಕಂಡು ಕಾಳಗ ಮುಂದುವರಿಸುತ್ತಾನೆ.

### ಸರಳ ಭಕ್ತಿ, ಸರಳ ಪೂಜೆ

ಯುದ್ಧದ ನಡುವೆ 'ನೀವು ಜಗದಧಿದೈವವೆಂಬುದ ನಾವು ಬಲ್ಲೆವು. ನಾವು ಪೂರ್ವ ಪದ್ಧತಿಯನ್ನಾದರೂ ಬಿಡುವುದು ಸಾಧ್ಯವೇ? ನಾವು ಸಂಪ್ರದಾಯದಂತೆ ಮಾಡುವ ಸಮರ ಮುಖ ಸಂಭಾವನೋಚಿತ "ಸರಳ ಭಕ್ತಿಯ ಸರಳ ಪೂಜೆಯ ನೀವು ಕೈಗೊಳ್ಳಬೇಕು"[4] ಎನ್ನುತ್ತಾ, ಲಕ್ಷ್ಮಣನಿಗೆ ಸರಳುಗಳನ್ನೆಸೆಯುತ್ತಿರುವಂತೆಯೇ ಆ ಮೂಲಕವಾಗಿ ಷೋಡಶೋಪಚಾರವನ್ನು ನಡೆಸುತ್ತಾನೆ. ಕೃತಾರ್ಥನಾದೆನೆಂದು "ಸಿರಿ ನಾರಾಯಣನ ಧ್ಯಾನದಲಿ ಮುಕ್ತಿಗೆ ಮನವ ಮಾಡಿದನು".

### ಭಕ್ತಿಯೋಗ–ಬಾಣಪ್ರಯೋಗ

ತನ್ನ ಅಂತರಂಗದ ಸರಸಿಜದ ಕರ್ಣಿಕೆಯ ಮಧ್ಯದಲಿ ಶ್ರೀರಾಮಮೂರ್ತಿಯನ್ನಿರಿಸಿ, ವೀರ ವೈಷ್ಣವನಾಗಿ ಭಕ್ತಿಯೋಗದೊಂದಿಗೆ ಬಾಣ ಪ್ರಯೋಗವನ್ನು ನಡೆಸುತ್ತಾನೆ. ಲಕ್ಷ್ಮಣನು ಪ್ರಯೋಗಿಸಿದ ಬ್ರಹ್ಮಾಸ್ತ್ರವು ಅತಿಕಾಯನ ಶಿರವನ್ನು ಛೇದಿಸಲು–ಆತನು ವಿಷ್ಣುಸ್ಮರಣೆ ಮಾಡುತ್ತಿದ್ದಂತೆ "ಆತ್ಮ ಜ್ಯೋತಿಯು ರವಿಮಂಡಲದ ಮಧ್ಯದಲ್ಲಿ ಉಜ್ವಲಿಸುತ್ತದೆ".

ಮಿಸುಪ ಮಣಿಮಯ ಕುಂಡಲದ ಡಾ
ಳಿಸುವ ಕದಪಿನ ಮುಗುಳುನಗೆ ಲಂ
ಬಿಸುವ ವದನದ ವೀರರಸದಭಿನವದ ಲೋಚನದ
ಅಸುರ ಪತಿ ಲಂಕೇಶ್ವರನ ಮೊಗ
ರಸದ ಸಿರಿ ಕೆಲ ಸಿಡಿವವೊಲು ತಲೆ
ವಿಶಿಖ ಮುಖದಲಿ ಕೆಡೆದುದಿಳೆಗತಿಕಾಯರಕ್ಕಸನ.[5]

ಕುಮಾರವ್ಯಾಸನ ಕರ್ಣಾವಸಾನ ಪ್ರಸಂಗವು ಅತಿಕಾಯನ ಅಂತ್ಯದ ವರ್ಣನೆಯಲ್ಲಿ ಪ್ರಭಾವ ಬೀರಿದ್ದು ಸ್ಪಷ್ಟವಾಗುತ್ತದೆ. ಆದರೆ ಅತಿಕಾಯನ ವಿಷ್ಣುಭಕ್ತಿ, ಭಕ್ತರ ತಂಡವನ್ನೊಳಗೊಂಡು ರಣಕಣದಲ್ಲಿ ಮಾಡುವ ಆತ್ಮನಿವೇದನೆ,

1. ತೊ. ರಾ. VI ೩೪/೩೫.
2. ಇದೇ. ೩೪–೫೪.
3. ಇದೇ. ೫೯.
4. ಇದೇ. ೬೦. ('ಸರಳಭಕ್ತಿ' ಎನ್ನುವಲ್ಲಿಯ 'ಧ್ವನಿ' ಗಮನಾರ್ಹ)
5. ಇದೇ. ೬೪.

ಬಾಣಮುಖೇನ 'ಸರಳ ಭಕ್ತಿ' ಯನ್ನು ವ್ಯಕ್ತಪಡಿಸಿದ ರೀತಿ–ಎಲ್ಲವೂ ಕುಮಾರ ವಾಲ್ಮೀಕಿಯ ಕಲ್ಪನೆಗಳೇ ; ಇತರ ಯಾವ ರಾಮಾಯಣಗಳಲ್ಲೂ ದೊರೆಯದ ಚಿತ್ರಗಳೇ.

ಕನ್ನಡ ನಾಡಿನ ವಿಶಿಷ್ಟ ಕಲೆಯೆನಿಸಿದ ಯಕ್ಷಗಾನ–ಬಯಲಾಟ–ತಾಳಮದ್ದಳೆಗಳ ಮೂಲಕ ಜನಜನಿತವಾದ 'ಆತ್ಮ ನಿವೇದಕ, ವೈಷ್ಣವರರಸನಾದ ಅತಿಕಾಯ' ಪಾತ್ರವೂ ಸಂಪೂರ್ಣವಾಗಿ ಕುಮಾರ ವಾಲ್ಮೀಕಿಯ ಕೃತಿಯಿಂದ ಪ್ರಭಾವಿತವಾದುದು.[1]

ಆದಿಕಾವ್ಯದಲ್ಲಿ ರಕ್ಕಸರ ತಂಡದವರಲ್ಲೊಬ್ಬನಾಗಿ "ಹತ್ತರೊಂದಿಗೆ ಹನ್ನೊಂದಾಗಿ" ಪರಿಗಣಿತನಾದ ಅತಿಕಾಯನಿಗೆ ಗಣ್ಯ ಸ್ಥಾನವನ್ನು ಕಲ್ಪಿಸಿ, ಆ ಪಾತ್ರದ 'ಒಳತೋಟ' ಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದು–ಕುಮಾರ ವಾಲ್ಮೀಕಿಯ ಸ್ವೋಪಜ್ಞತೆಗೆ ಸಾಕ್ಷಿಯಾಗಿದೆ.

ಅತಿಕಾಯ ಪಾತ್ರವೊಂದೇ ಕುಮಾರ ವಾಲ್ಮೀಕಿಯ ಹೆಸರನ್ನು ಚಿರಸ್ಥಾಯಿಗೊಳಿಸುವಷ್ಟು ಗಟ್ಟಿಮುಟ್ಟಾಗಿದೆ.

## ಕುಮಾರ ವಾಲ್ಮೀಕಿಯ ಅಭಿವ್ಯಕ್ತಿ–ಶೈಲಿ

### ಕಥನ ಕಲೆ

ರಾಮಾಯಣದ ವಸ್ತು ವಿಸ್ತಾರವನ್ನೂ, ಅದರಲ್ಲಿರುವ ಉಪಾಖ್ಯಾನಗಳ ವಿಪುಲತೆಯನ್ನೂ ಕಂಡರೆ, ಅದನ್ನು ಅನುವಾದಿಸುವುದಾಗಲೀ, ಸಂಗ್ರಹಿಸುವುದಾಗಲೀ ಸಾಮಾನ್ಯ ಕವಿಗಳಿಗೆ ಒಂದು ಪಂಥಾಹ್ವಾನವೇ ಸರಿ. ಪ್ರಮಾಣ ಜ್ಞಾನವಿಲ್ಲದ, ಕುತೂಹಲ ಕೆರಳಿಸುವಂತೆ ಕಥೆ ಹೇಳಲೊಲ್ಲದ ಲಿಪಿಕಾರನು ತನ್ನ 'ಸಾಹಸದಲ್ಲಿ' ತೊಡಕಿಗೆ ಸಿಕ್ಕಿ ಮುಗ್ಗರಿಸುವ ಸಂಭವವೇ ಹೆಚ್ಚು.

'ವಾಲ್ಮೀಕಿಯ ದಿವ್ಯಶಿಲ್ಪದಲ್ಲಿ ಒಂದೊಂದು ಪದ್ಮದಳವೂ ಸೌಂದರ್ಯದ ಒಂದು ಕಳೆಯನ್ನು ಸಾಧಿಸುತ್ತದೆ'[2] ಅಂತಹ ಸೂಕ್ಷ್ಮ ದೃಷ್ಟಿ, ಗಾಂಭೀರ್ಯ, ಸಮತೂಕ–ಇತ್ಯಾದಿಗಳನ್ನು ಕುಮಾರ ವಾಲ್ಮೀಕಿಯಲ್ಲಿ ಅರಸುವ ವಿಫಲ ಪ್ರಯತ್ನ ಮಾಡದೆ, ಆ ಮಹಾಕಾವ್ಯವನ್ನು ತನ್ನ ಕೃತಿಯ ಚೌಕಟ್ಟಿನಲ್ಲಿ ತಂದು ನಿಲ್ಲಿಸಿದ ಕನ್ನಡದ ಕವಿಯ ಸಾಹಸಕ್ಕೆ ತಲೆದೂಗಿ, ಇವನ ಕಥನ ಕೌಶಲದ ವೈಶಿಷ್ಟ್ಯಗಳನ್ನು ಗುರುತಿಸುವುದೇ ಸೂಕ್ತ.

### ಸಂಕ್ಷಿಪ್ತತೆ

ಸಾಮಾನ್ಯ ಕವಿಗಳಿಗೆ ಸಂಕ್ಷಿಪ್ತತೆಯು ಒಂದು ಸುಲಭದ ಅಡ್ಡದಾರಿ. ಕಥೆಯನ್ನು ಸಂಗ್ರಹಿಸಿ ಹೇಳಿ, ಅಥವಾ ಸೂಚಿಸಿ, ಕೈತೊಳೆದುಕೊಳ್ಳುವುದರಲ್ಲಿಯೇ ಅವರ ಸಾರ್ಥಕತೆ. ವಾಲ್ಮೀಕಿಯ ಮಹಾಕಾವ್ಯಕುಸುಮದಲ್ಲಿ ಒಂದೊಂದೂ ಸುಂದರ ದಳದಂತೆ ಶೋಭಿಸುವ ಉಪಾಖ್ಯಾನಗಳು ಕನ್ನಡ ರಾಮಾಯಣದಲ್ಲಿ ಕಥೆಯ ಅನಿವಾರ್ಯತೆಯಿಂದಾಗಿ ಮಾತ್ರ–ಚಿಕ್ಕ ಪುಟ್ಟ ಟಿಪ್ಪಣಿಗಳ ರೂಪದಲ್ಲಿ–ಮೈದೋರಿವೆ. ಇಂತಹ ಸಂಕ್ಷಿಪ್ತತೆಗೆ ಕೆಲವು ಮಾದರಿಗಳನ್ನು ಕೊಡಬಹುದು:

---

1. ಯಕ್ಷಗಾನ ಪ್ರಸಂಗ ಸಾಹಿತ್ಯದ ಮೇಲೆ 'ತೊ. ರಾ.' ದ ಪ್ರಭಾವ ವಿವೇಚನೆಯು ಇದೇ ಪ್ರಬಂಧದ 'ಕೃತಿಯ ಪ್ರಭಾಮಂಡಲ' ಪ್ರಕರಣದಲ್ಲಿದೆ.
2. ಮಾಸ್ತಿ ವೆಂಕಟೇಶ ಅಯ್ಯಂಗಾರ್–ಆದಿಕವಿ ವಾಲ್ಮೀಕಿ. ಪು. ೧೮೩.

| | ಉಪಾಖ್ಯಾನಗಳು | ವಾಲ್ಮೀಕಿ ರಾಮಾಯಣ | ತೊರವೆ ರಾಮಾಯಣ |
|---|---|---|---|
| ೧. | ವ್ಯಾಧನು ಕವಿಯಾದ ಕಥೆ | ಇಲ್ಲ | ಎರಡು ಷಟ್ಪದಿಗಳು. |
| ೨. | ಕಲುಷ ಕಾನನದ ಕಥೆ | ೭ ಶ್ಲೋಕಗಳು. | ,, |
| ೩. | ವಾಮನಾವತಾರದ ಕಥೆ | ೨೧ ಶ್ಲೋಕಗಳು. | ,, |
| ೪. | ಗಂಗಾವತರಣದ ಕಥೆ | ೧೯೮ ,, | ,, |
| ೫. | ಅಹಲ್ಯಾ ವೃತ್ತಾಂತ | ೪೫ ,, | ,, |
| ೬. | ಹರಧನುಸ್ಸಿನ ಪೂರ್ವಕಥೆ | ೧೭ ,, | ಐದು ಷಟ್ಪದಿಗಳು. |
| ೭. | ವೈಶ್ಯಮುನಿಪುತ್ರನ ಕಥೆ | ೫೩ ,, | ೧೯ ,, |
| ೮. | ವಾಲಿ-ಸುಗ್ರೀವ ವೈರವೃತ್ತಾಂತ | ೪೯ ,, | ೧೦ ,, |
| ೯. | ದುಂದುಭಿ ವೃತ್ತಾಂತ | ೫೧ ,, | ೭ ,, |
| ೧೦. | ಸುಪಾರ್ಶ್ವನ ಕಥೆ | ೨೯ ,, | ೨ ,, |

ಇದು ಸಮಯವೆನುತಿಂದ್ರ ನಾ
ರದ ಸುರಾಚಾರಿಯರ ಮತದಿಂ
ಹದನ ಕಂಡನು ಹರಣದಂತ್ಯಕೆ ಶಂಬುಕಾಸುರನ
ತ್ರಿದಶರೂಪವನುಳಿದು ಕೈರಾ
ತದಲಿ ಕಂಗೊಳಿಸಿದನು ಬಳಿಸಲಿ
ಸಿದುದು ಸುರನಿಕುರುಂಬವಾಕ್ಷಣ ರಾಘವಾಶ್ರಮಕೆ[11]

ಶಂಬುಕನು ಸುರಪತಿತ್ವವನ್ನು ಬಯಸಿ ತಪಶ್ಚರ್ಯೆ ಕೈಗೊಂಡಾಗ, ಇದನ್ನರಿತ ಇಂದ್ರನು ಚಿಂತಿಸಲು, ರಾಮ ಲಕ್ಷ್ಮಣರು ವನವಾಸದಲ್ಲಿರುವ ಈ ಸಮಯವೇ ಅವನ ವಧೆಗೆ ಸೂಕ್ತವೆಂದು ನಾರದ, ಬೃಹಸ್ಪತಿಗಳು ತಿಳಿಸಲು, ತಾನು ಕಿರಾತ ರೂಪವನ್ನೂ, ಉಳಿದ ಸುರರು ಸಾಮಾನ್ಯ ಬೇಟೆಗಾರರ ವೇಷವನ್ನೂ ತೊಟ್ಟು ರಾಘವಾಶ್ರಮಕ್ಕೆ ಬಂದರು–ಇಷ್ಟು ಅಂಶಗಳನ್ನು ಮೇಲಿನ ಒಂದೇ ಷಟ್ಪದಿಯಲ್ಲಿ ಅಡಕಗೊಳಿಸಿದ್ದು–ಕುಮಾರ ವಾಲ್ಮೀಕಿಯ ಸಂಗ್ರಹಶಕ್ತಿಗೆ ಒಂದು ಉದಾಹರಣೆ.

---

| | ವಾ. ರಾ. | | | ತೊ. ರಾ. | | |
|---|---|---|---|---|---|---|
| | ಕಾಂಡ. | ಸರ್ಗ. | ಶ್ಲೋಕಗಳು. | ಕಾಂಡ. | ಸಂಧಿ. | ಪದ್ಯಗಳು. |
| 1. | | | | ೧ | ೨ | ೧೧-೧೨ |
| 2. | ೧ | ೨೪ | ೧೮...೨೪ | ೧ | ೧೦ | ೨-೩ |
| 3. | ೧ | ೨೯ | ೧...೨೧ | ೧ | ೧೧ | ೪-೫ |
| 4. | ೧ | ೩೮-೪೪ | | ೧ | ೧೨ | ೧೨-೧೩ |
| 5. | ೧ | ೪೮ ೧೩-೩೩ ಮತ್ತು | | ೧ | ೧೨ | ೧೭-೧೮ |
| | ೧ | ೪೯ ಸರ್ಗ | | | | |
| 6. | ೧ | ೬೬ ಸರ್ಗ. ೭೫ ಸರ್ಗ | | ೧ | ೧೩ | ೧೩-೧೭ |
| 7. | ೨ | ೬೩ ಸರ್ಗ. ೧-೫೩ | | ೨ | ೫ | ೯-೨೭ |
| 8. | ೪ | ೯ ಸರ್ಗ ಮತ್ತು ೧೦ ಸ. | | ೪ | ೨ | ೨೩-೩೨ |
| 9. | ೪ | ೧೧ | ೭_೫೮ | ೪ | ೨ | ೩೩-೩೯ |
| 10. | ೪ | ೧೯ ಸರ್ಗ | | ೪ | ೧೦ | ೧೮-೧೯ |
| 11. | ತೊ. ರಾ. III ೩-೨ | | | | | |

ವಾಲ್ಮೀಕಿ ರಾಮಾಯಣದಲ್ಲಿ ಏಳು ಸರ್ಗಗಳಲ್ಲಿ ವರ್ಣಿತವಾದ ಗಂಗಾವತರಣದ ಕಥಾಸಲಿಲವನ್ನು ಕುಮಾರ ವಾಲ್ಮೀಕಿಯು 'ಜಹ್ನು'ವಿನಂತೆ ಎರಡು ಷಟ್ಪದಿಗಳಲ್ಲೇ ನುಂಗಿ ಮುಗಿಸಿದ್ದಾನೆ. ಇಂತಹ ಉದಾಹರಣೆಗಳನ್ನು ತೊರವೆ ರಾಮಾಯಣದಿಂದ ಸಾಕಷ್ಟು ಕೊಡಬಹುದು.

### ಕಥಾ ಸಂಬೋಧನೆ–ಕೇಳಿ ಲವಕುಶರೇ ಕೇಳಿ ಕೇಳಿ....

ವಾಲ್ಮೀಕಿಯು ರಾಮಾಯಣ ಕಾವ್ಯವನ್ನು ಲವಕುಶರಿಗೆ ಹೇಳಿದ್ದೇನೋ ನಿಜ. ಇದನ್ನೇ ಆಧರಿಸಿ, ಕಾವ್ಯದಲ್ಲಿ ಆಗಾಗ (ಏಕೆ ? ಕ್ಷಣಕ್ಷಣಕ್ಕೂ ಎಂಬಂತೆ) ಲವ ಕೇಳು, ಕುಶಾನುಜ ಕೇಳು, ಕುಶಕೇಳು, ತರುಣಕೇಳು, ದಾಶರಥಿ ಸುತಕೇಳು, ಭೂಮಿಜಾಸುತಕೇಳು, ನಿಮಿಸುತಾಸುತಕೇಳು[1]–ಎಂದು ಬಗೆಬಗೆಯಾಗಿ ಕರೆದು ಕಥೆ ಹೇಳುವುದರಿಂದ, ಕಾವ್ಯವನ್ನೋದುವವರಿಗೂ "ಲವಕುಶಪ್ರಜ್ಞೆ" ಮೂಡಿದರೆ ಅಚ್ಚರಿಯಿಲ್ಲ. ಅಲ್ಲಲ್ಲಿ 'ಕೇಳು ಲವಕುಶ'ರು ಷಟ್ಪದಿಯ ಪಾದ ಪೂರಣೆಗೆ ಮಾತ್ರ ನೆರವಾಗುತ್ತಾರೆ.

### ಬಿಟ್ಟ ಬಾಣದಂತಹ ಕಥೆಯ ಗತಿ, ಸರಳತೆ, ಅರ್ಥವ್ಯಕ್ತಿ

ಯಾವ ಸಂಕೀರ್ಣತೆಯನ್ನೂ ಸೃಷ್ಟಿಸದೆ, ನೇರವಾಗಿ ಕಥೆ ಹೇಳುವುದು ಕುಮಾರ ವಾಲ್ಮೀಕಿಯ ಸಂಪ್ರದಾಯ. ಹೇಳಬೇಕಾದ ಕಥೆಯನ್ನು ಅಚ್ಚುಕಟ್ಟಾಗಿ ಪರದಿಮಾಡಿ–ಮುಂದಿನ ಘಟನೆಯ ಕಡೆಗೆ ಕವಿಯ ಗಮನ ಹರಿಯುತ್ತದೆ. ಮೂಲಕಥೆಯ ರಾಜಮಾರ್ಗವನ್ನು ಬಿಟ್ಟು, ಉಪಕಥೆಗಳೆಂಬ ಅಕ್ಕಪಕ್ಕದ ಓಣಿಗಳಲ್ಲಿ ವಿಹರಿಸುವ ಒಲವು ಕುಮಾರ ವಾಲ್ಮೀಕಿಗಿಲ್ಲ. ಮಕ್ಕಳಿಗೆ ತಿಳಿಯಹೇಳಿದ ಕಥೆಯಂತೆ ಘಟನಾ ಪ್ರಧಾನವಾಗಿ ಸಾಗುತ್ತದೆ ನಿರೂಪಣೆ. ಗುರಿಯಿಟ್ಟು ಬಿಟ್ಟ ಬಾಣದಂತೆ ಕಥೆಯ ಗತಿ. ರಾಮನಾಮ ಮಹಿಮೆಯನ್ನು ಹೇಳಹೊರಟ ಕವಿಗೆ ಪಂಡಿತ ರಂಜನೆಗಿಂತಲೂ, ಪಾಮರೋದ್ಧಾರವೇ ಉದ್ದೇಶ. ಇಲ್ಲಿ ವ್ಯಂಗ್ಯಕ್ಕಿಂತಲೂ ವಾಚ್ಯಕ್ಕೆ ಪ್ರಾಧಾನ್ಯ; ಅರ್ಥವ್ಯಕ್ತಿಯೇ ಕುಮಾರ ವಾಲ್ಮೀಕಿಯ ಅಭಿವ್ಯಕ್ತಿಯ ಮುಖ್ಯ ಗುಣ ಮತ್ತು ಶಕ್ತಿ. ಹಲವು ಪಂಡಿತಂಮನ್ಯ ಕವಿಗಳ ಪಾಂಡಿತ್ಯ ಪ್ರದರ್ಶನೋತ್ಸಾಹದ ವರ್ಣನಾ ವೈಖರಿ, ಅಲಂಕಾರ ಚಮತ್ಕಾರ, ಅಷ್ಟಾದಶವರ್ಣನೆಯ ವ್ಯಾಮೋಹ, ಕಥೆಯ ಮಂದಗತಿ–ಇವುಗಳನ್ನೆಲ್ಲ ಗಮನಿಸಿದಾಗ ಕುಮಾರ ವಾಲ್ಮೀಕಿಯ ಸರಳತೆ, ನಮಗೆ ಹೆಚ್ಚು ಪ್ರಿಯವೆನಿಸುತ್ತದೆ.

### ಪದ ರಚನಾ ವಿನ್ಯಾಸ

ಕುಮಾರ ವಾಲ್ಮೀಕಿಯ ಶಬ್ದ ಸಂಪತ್ತು ದೊಡ್ಡದು. ನಿರರ್ಗಳವಾಗಿ ಮನಸೆಳೆಯುವ ಅವನ ಕಾವ್ಯವು ಪದರಮ್ಯತೆಯಿಂದ ನಮ್ಮನ್ನು ಸಂತಸಗೊಳಿಸುತ್ತದೆ. ಆದರೆ ಹಿಂದೆಯೇ ಸೂಚಿಸಿದಂತೆ ಕುಮಾರ ವಾಲ್ಮೀಕಿಯ ಪದಗಳಲ್ಲಿ ಅಭಿಧಾ ವೃತ್ತಿಗೇ ಸ್ಥಾನ, ವಾಚ್ಯಾರ್ಥಕ್ಕೇ ಪ್ರಾಶಸ್ತ್ಯ. ಕುಮಾರವ್ಯಾಸನಂತೆಯೇ ಹಿರಿಯ ಶಬ್ದ ಭಂಡಾರವುಳ್ಳ ಈ ಕವಿಯು ಅವನಂತೆಯೇ ಶಬ್ದಗಳಲ್ಲಿ 'ಧ್ವನಿ' ತುಂಬಿ ಬಳಸುವ ಕಲೆಯನ್ನು ಸಿದ್ಧಿಸಿದ್ದರೆ, ಕನ್ನಡದ ಈ ರಾಮಾಯಣವೂ 'ಕನ್ನಡ ಭಾರತದ' ಎತ್ತರವನ್ನು ಏರುತ್ತಿತ್ತು–ಎನಿಸುತ್ತದೆ.

ಕನ್ನಡದ ವಾಲ್ಮೀಕಿಯ ಪದರಚನಾ ವಿನ್ಯಾಸ, ಶಬ್ದ ಸಂಪತ್ತುಗಳ ಪರಿಚಯಕ್ಕೆ ಈ ಕೆಳಗಿನ ಕೆಲವೇ ಉದಾಹರಣೆಗಳು ಸಾಕೆನಿಸೀತು.

### ಅಚ್ಚಕನ್ನಡದ ಚೆಲುವು

ಮೂಗಕ್ಕೆಯಲಿ ಮರುಗು[2]

---

1. ೬೨ ಪದ್ಯಗಳ ಒಂದು ಸಂಧಿಯಲ್ಲಿ ೧೨ ಸಾರಿ ಇಂತಹ ಸಂಬೋಧನೆಗಳು ಬಂದಿವೆ. ಎಂದರೆ ಸರಾಸರಿ ೫ ಪದಗಳಿಗೊಮ್ಮೆ ಎಂದಾಯಿತು.
2. ತೊ. ರಾ. ೧–೪–೯

ಗೋನಾಳಿಯನು ಗೋರು[1]
ತೊಲಗು ತೊತ್ತಿನಮಗಳೆ[2]
ಹದನ ಹವಣೇನೆಂದರಿಯೆ[3]
ನುಡಿಗೆ ಹೊದ್ದದು ಹಳಿವು[4]
ಅತ್ತುಂಬ ಹರೆಯ[5]
ತೂಗದಿರ್ದಡೆ ತೋಟಿಯೇಕೆ ?[6]
ಮೂಗುಬ್ಬಸವ ಮಾಡು[7]
ಮೂಡದು ಮೂಗು ಮಾನಿನಿಗೆ[8]
ಸುರರ ಬಿರುದಿನ ಹಾಹೆಗಳ[9]
ತಾಯನುಡಿ ತಾರ್ಕಾಣೆಯಾಯ್ತು[10]
ಬೆಂಕೊಂಡು ತೆವರು[11]
ಇನ್ನು ಒತ್ತಿ ನೋಡುವುದುಂಟೆ ?[12]
ಹೆಗಲು ಬಡಿಕರ ಹೇಳದಿರು[13]
ದಿಟ್ಟಿಸಿದ ಕಂಗಳ ಹಾಹೆಯೊಲೆಸೆದಿರ್ದನು[14]
ಕೆಡುವೊಡಲು,[15] ಕರುಳು ಮರುಗದೆಬಿಡವುದೆ ?[16] ನುಡಿಗೆ ನಾಲಗೆಯಿಲ್ಲ[17]
ಕಟ್ಟಿದ ಕರುವಂತಾಗು.[18]
ರಾಮನಿಗೆ ಮಾರಿದವ ನೀ[19]

---

|  | ತೊ. ರಾ. |  |  |
|---|---|---|---|
|  | ಕಾಂ. | ಸಂ. | ಪ. |
| 1. | ೧ | ೨ | ೨೦ |
| 2. | ೧ | ೧೦ | ೧೩ |
| 3. | ೧ | ೮ | ೪೨ |
| 4. | ೧ | ೯ | ೨೬ |
| 5. | ೧ | ೯ | ೨೯ |
| 6. | ೧ | ೯ | ೩೨ |
| 7. | ೩ | ೬ | ೩ |
| 8. | ೩ | ೬ | ೫೩ |
| 9. | ೩ | ೯ | ೩೬ |
| 10. | ೪ | ೧ | ೮ |
| 11. | ೪ | ೨ | ೨೪ |
| 12. | ೪ | ೨ | ೪೯ |
| 13. | ೪ | ೩ | ೩ |
| 14. | ೪ | ೪ | ೩೨ |
| 15. | ೪ | ೪ | ೫೮ |
| 16. | ೪ | ೪ | ೬೩ |
| 17. | ೪ | ೬ | ೨೯ |
| 18. | ೬ | ೯ | ೨೨ |
| 19. | ೬ | ೨೧ | ೩೬ |

## ಸಂಸ್ಕೃತ ಪದಗಳ ಜೋಡಿ

ಮಹಾದಿವೌಕಸಪ್ರಚುರಭಾಷಾಕವಿಜನೋತ್ತಂಸ[1]
ಸೂರಿಗಳ ಹೃದಯಾಕುರುಷಣ ಕಥಾಕುತೂಹಲ[2]
ವಾರ್ಧಕ ಕಾಲ ವಿಕೃತಾಕಲಿತ ಪಲಿತ ಜರಾತಿರೇಕ[3]
ಸುರ ವಿಷ್ಟಪದ ಸುರಪತಿಯ ಮಣಿಮಯದ ವಿಷ್ಟರದ ಸಿರಿ[4]
ಅರುಣಪಟ ಪರಿಧಾನ ಶೌರ್ಯಾಭರಣ[5]
ಶ್ರುತಿ ಕೋಟಿ ಕನ್ಯಾವರ ಶ್ರೀವರ[6]
ವಿಬುಧರಿಪು ವೇತಂಡ ಪಂಚಾನನ[7]
ಶಶಿಶೇಖರ ಜಟಾಘಟ ಪಟಲ ಸಂಘಟಿತ ವಿಸ್ಫುಟಿ[8]
ಚಟುಳವಿಳಯಾನಳಶಿಖಾ ಸಂಘಟಿತ ಸತ್ಕ್ರೋಧ ಪ್ರಭಾ ಧೂರ್ಜಟಿ ವಿಡಂಬನ[9]
ಹಾಲಾಹಲ ಮಹೋಗ್ರವ್ಯಾಳಪಾಶ ವಿನಾಶ ರೋಷ[10]
ಲಂಕಾವೀತಿಹೋತ್ರ ರಣಸುಪುತ್ರ ಮಾರುತ[11]
ಘನಘೋರ ಮುಷ್ಟಿನಿಘಾತ ಶತಧಾರ ಶತಶತ ಚೂರ್ಣ[12]
ತಳಿತ ಕುಸುಮಿತ ಕಿಂಶುಕಾವನವಳಯ–ನಿರ್ದಳಿತ ರಕ್ತೋತ್ಪಲ[13]
ವೀರವೀರೋದ್ಧತ ರಣಲಯ ಭೈರವ ಬಾಹು ಪ್ರತಾಪನುದಾರ ಲಂಕೇಶ್ವರ[14]
ಅನುಪಮದ ರಣದ ಘಾಟ ಕಿರೀಟ ವರ್ಧನರು[15]
ಭವಾಬ್ಧಿ ಮೂಲೋತ್ಪಾಟ, ಬಹಳಬಾಹಾಸ್ಫೋಟನಾಕಂಪಿತ ಸರೋಜ ಭವಾಂಡಮಂಡಲನು[16]

---

ತೊ. ರಾ.

| | ಸಂ. | ಕಾಂ. | ಪ. |
|---|---|---|---|
| 1. | ೧ | ೧ | ೮ |
| 2. | ೧ | ೧ | ೯ |
| 3. | ೧ | ೪ | ೧ |
| 4. | ೧ | ೪ | ೧೨ |
| 5. | ೧ | ೮ | ೩೬ |
| 6. | ೧ | ೮ | ೫೨ |
| 7. | ೧ | ೯ | ೩ |
| 8. | ೧ | ೧೨ | ೧೦ |
| 9. | ೬ | ೪ | ೩೦ |
| 10. | ೬ | ೧೬ | ೨೯ |
| 11. | ೬ | ೧೭ | ೧೮ |
| 12. | ೬ | ೧೭ | ೨೫ |
| 13. | ೬ | ೧೭ | ೩೩ |
| 14. | ೬ | ೨೦ಸಂಧಿಸೂಚನೆ | |
| 15. | ೬ | ೨೦ | ೩ |
| 16. | ೬ | ೨೦ | ೨ |

## ಕನ್ನಡ ಸಂಸ್ಕೃತ ಪದಗಳ ಸರಸ ದಾಂಪತ್ಯ

ಇಕ್ಷ್ವಾಕು ವಂಶದ ಕಡಲು ಬರತುದು[1]
ಅನ್ವಯ ಲಲಿತ ಲತೆ ಕುಡಿಗೊಂಬುದೇ ?[2]
ಕೊಳನು ಕೂರ್ಮನ ಬೆನ್ನಿಗಿಳಿದುದು[3]
ನನ್ನಿಕಾರರ ದೇವ[4]
ತಿದ್ದಿತೇ ಭವದೀಯಕರ್ಣದ ಹೊದ್ದಿಗೆಯ ಸೌಭಾಗ್ಯ ?[5]
ತೆರಳಿತಷ್ಟಾದಶ ಪ್ರಜೆ ಪುರದೊಳಿಲ್ಲೊಳಲಿಕೆ ನಾಯ[6]
ಅಮೆಯಲಿನನೊಡನಿದ್ದು ತೊಲಗಿದ ಹಿಮಕರನವೊಲು[7]
ಕರಚರಣಗಳ ತೊಳೆದು ಕುಡಿತೆಯಲೀಂಟಿದರು ನಿರ್ಮಳ ಹಿಮೋದಕವ[8]
ಕುಲ ಸಂಪದದ ಸಿರಿಗಾಭರಣನಾದನು ಪುತ್ರ[9]
ಅಗ್ನಿಯಲೊರಗಿತ್ತೈನೂರರಸಿಯರು[10]
ನಮ್ಮ ಪಾಡೇನಾದಿಯುವನಿಯ ಹೆಮ್ಮೆಕಾರರು ಸತ್ಯಮಾರ್ಗವ ನೆಮ್ಮಿದರು-ಅವರೇನಪ್ರಬುದ್ಧರೇ ?[11]
ನಡವಳಿಯು ಶೀಲವದು ಸಿಗುರೇಳದೆ[12]
ನಾಲಗೆಯನರೆಗಚ್ಚಿ ಕೆಡೆವ ಮೃಗಾಳಿ[13]
ಅಟ್ಟುವಾಪತ್ತಿನ ಸಮುದ್ರಕೆ ಕಟ್ಟೆ ನೀನು[14]
ವಿಮಲ ಲಕ್ಷ್ಮಿಯ ನೊಸಲ ಮಾಣಿಕದಂತೆ ಮೆರೆದುದು[15]
ನಗೆಯುನಯನದ ಸನ್ನೆವಾತಿನ ಸೊಗಸಿನಬಲಾಜನರು[16]
ಇಳಿದರಂದಾ ದುರ್ಗವನು ದಿಗುವಲಯ ಬೆಸಲಾದಂತೆ[17]
ಚಿಂತಾ ಬಾಲಕಿಯ ಬಳಿವಿಡಿದು ಹೊಕ್ಕನು ತನ್ನ ಮಂದಿರವ[18]
ಕುಡಿದವರುಣಾಂಬುವನು ಮರದುದಿಗಡರಿ ರಕ್ಕಸವಕ್ಕಿಗಳು[19]

---

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 1. | ೧ | ೪ | ೯ |
| 2. | ೧ | ೫ | ೫ |
| 3. | ೧ | ೫ | ೧೬ |
| 4. | ೧ | ೫ | ೧೯ |
| 5. | ೨ | ೬ | ೨೫ |
| 6. | ೨ | ೩ | ೬೦ |
| 7. | ೨ | ೪ | ೭ |
| 8. | ೨ | ೪ | ೨೨ |
| 9. | ೨ | ೫ | ೭ |
| 10. | ೨ | ೬ | ೬ |
| 11. | ೨ | ೬ | ೩೧ |
| 12. | ೩ | ೧ | ೩ |
| 13. | ೩ | ೩ | ೧೬ |
| 14. | ೪ | ೮ | ೧೬ |
| 15. | ೬ | ೬ | ೧೮ |
| 16. | ೬ | ೧೦ | ೧೨ |
| 17. | ೬ | ೧೭ | ೧೧ |
| 18. | ೬ | ೧೮ | ೧ |
| 19. | ೬ | ೧೯ | ೩೯ |

**ಪದ ಬಂಧದಲ್ಲಿ ಹೊಸ ಮಿರುಗು–ಚಮತ್ಕಾರ**

ಜಾತರಹಿತನು ಜನಿಸಿದನು.[1]
ನಿಜವಂಶ ವಂಧ್ಯಾಮಾನಿನಿಗೆ ಪತಿಯಾದನೇ ?[2]
ನಿನಗೆ ಸೇರುವ ಸಿರಿಗೆ ಶಕ್ರನು ಮುನಿದನು[3]
ಸಗರರ ಸಿರಿಗೆ ಸೇರದಾ ಶಕ್ರ[4]
ಕುಸುಮಾಯುಧನ ಖಂಡೆಯಕೆ ತೆಕ್ಕದ ಮುನಿಪ[5]
ಇಳೆಯ ರಾಯರ ಬಾಯ್ಗಳಲಿ ಬೆರಳಾಡಿಸಿದನು.[6]
ಕಟಾಕ್ಷದ ರಸುಮೆಯನು ಸೂಸಿದನು ಸುರರ ವಿಷಾದ ರಜನಿಯಲಿ[7]
ಅನಿಲ ಶರದಿಂದೂದಿದನು ಜಲನಿಧಿಯ ತೆಂಕಣತೀರಕಾ ಖಳನ[8]
ಮಾನಭಂಗ ಸ್ಥಳಕೆ ನಾಯಕನಾಗು.[9]
ದುರ್ಜನರು ಬಳಸುವ ಕೆರೆಗೆ ಕಲ್ಲಿನ ಕಟ್ಟೆಯಾಗದಿರು[10]
ಬಾಲೆಯರೊರಗಿದರು ವಹ್ನಿ ಜ್ವಾಲೆಯಲಿ[11]
ಬಲಿದ ಚಿಂತೆಯ ಮನದ ಬೆರಗಿನ ಬೆಳವಿಗೆಯ ಭಾರಣೆಯ ಕರಣದಲಿ[12]
ಮಾನಸದೆರಕವಾದರೆ ಕೊಂಡುಬಾ–ನಾವರಿವೆವಂಗೀಕರಣದಿಂಗಿತವ[13]
ದಾನವಿಲ್ಲದ ಧನಪತಿಯ ಸುಮ್ಮಾನ[14]

**ಪ್ರಾಸಪ್ರಿಯತೆ, ‘ ಮ ’ಕಾರದ ಮೋಹ–ಮಾಯೆ.**

ಕರೆಕಟ್ಟೊಳಗದ ಕಾತರರ[15]
ನೀಲೋತ್ಪಲ ನಿಭಾಂಗನ ನಿಖಿಳದೇವೋತ್ತಮನ ನಿರುಪಮನ[16]
ವಾಸವನ ನಗರದಲಿ ವಾನರ ವಾಸವನ ನಿಲಿಸುವೆನು[17]

---

| | ತೊ. ರಾ. | | |
|---|---|---|---|
| | ತಾ. | ಸಂ. | ಪ. |
| 1. | ೧ | ೨ | ೧೯ |
| 2. | ೧ | ೪ | ೧೦ |
| 3. | ೧ | ೫ | ೨೩ |
| 4. | ೧ | ೧೨ | ೧೨ |
| 5. | ೧ | ೫ | ೪೮ |
| 6. | ೧ | ೮ | ೩೭ |
| 7. | ೧ | ೮ | ೬೪ |
| 8. | ೧ | ೧೧ | ೨೧ |
| 9. | ೪ | ೨ | ೩೧ |
| 10. | ೬ | ೩೪ | ೨೧ |
| 11. | ೬ | ೫೨ | ೧೮ |
| 12. | ೬ | ೫೩ | ೧೪ |
| 13. | ೬ | ೫೩ | ೧ |
| 14. | ೬ | ೫೪ | ೩೧ |
| 15. | ೧ | ೮ | ೫೪ |
| 16. | ೧ | ೧೦ | ೨೦ |
| 17. | ೪ | ೨ | ೪೧ |

ದಶರಥರಾಯನಾಣೆ ನಿನ್ನಯ ದಾಯಿಗನ ದಿತಿಸಂಭವನ ದಾಯಿಗನ ಸಭೆಯೊಳಗೆ ರಾಯನನು ಮಾಡುವೆ[1]
ಗಗನಕ್ಕೆ ಗರುಡನ ಗರುವಿಕೆಯ ಗಾಡಣೆಯ ಗತಿಯಲಿ[2]
ವಿಜಯರಾಘವನಹಿತ ವಿಜಯಕೆ ಬಿಜಯಮಾಡುವನೆಂದು ಅಜ ರಜಕ ರಚಿಸಿದ ಮೆಲ್ಲಡಿಯ ಮಡಿವಾಸು[3]
ಮುಸುಕುಗಳ ಮೇಲ್ಸೆರಗುಗಳ ಮೌಳಿಗಳ ಮಹಿಳಾಜನ.[4]
ಮುನಿಪನಿದ್ದನು ಮುಗ್ಧ ತಾಪಸ ಮುನಿಗಣದ ಮಧ್ಯದಲಿ[5]
ಮದ್ದಿನಲಿ ಮರುಳಾಗಿ ಮದನನ ಹೊದ್ದಿದನು[6]
ಮೆಚ್ಚಿ ಮರುಳಾದಾ ಮುನೀಂದ್ರನ[7]
ಮಾಯೆಯಾಗದೆ ಮಾಣಳೀಸತಿ ಮಾಯೆಯಲಿ ಮತಿಗೆಡಿಸಿ[8]
ಮಾಯಾವಿದ ಮೃಗವ್ಯಸನದಲಿ ಮಾಯಾತೀತ ಮರುಳಾದ.[9]
ಮಂದರಾದ್ರಿಗೆ ಮಿಗಿಲೆನಿಪ ಮಹೇಂದ್ರ[10]
ಮನ್ನಣೆಯ ಮೈದುನನು ಮೈದೋರಿದನು ಮೈನಾಕ[11]
ಮಾಯಾವಿದರ ಮಾಯೆಗೆ ಸಿಲುಕುವಳೆ ಮಾಯಾಮಾನಿನಿ ?[12]

## ಹೆಸರು ಹೇಳುವ ವೈಖರಿ

ಪೌರಾಣಿಕ ಕಥಾ ಪರಿಚಯ ಮತ್ತು ಹಿರಿದಾದ ಶಬ್ದ ಭಂಡಾರಗಳನ್ನು ಗಳಿಸಿಕೊಂಡ ಕುಮಾರ ವಾಲ್ಮೀಕಿಯು ಕೆಲವು ಪಾತ್ರಗಳ ಹೆಸರುಗಳನ್ನು ಹೇಳುವುದರಲ್ಲಿಯೂ ವಿಶೇಷತೆ ಇದೆ.

ರಾಮ—ಜನಕನ ಕನ್ನಿಕೆಯ ಗಂಡ, .ಚಂಡಾಂಶು ವಂಶೋದ್ಭವ, ಸೀತಾ ಲತಾಂಗಿಯ ರಮಣ.

ಲಕ್ಷ್ಮಣ—ಸೀತಾ ಪ್ರಾಣನಾಥ ಸಹೋದರ, ಮಗಧ ಚಕ್ರೇಶ್ವರನ ಮೋಹದ ಮಗಳ ಮಗ.

ಸೀತೆ—ಆದಿಮಾಯಾ ಮಹಿಮೆ, ಕ್ಷೀರೋದಧಿಯ ನಂದನೆ, ಮೇದಿನೀ ಸಂಭವೆ, ವೇದಮಾತೆ, ನರಭಾಮಿನಿಯ ರೂಪಕದ ಆದಿಶಕ್ತಿ.

ಜಾಂಬವ—ತಾವರೆಯ ನಂದನನ ನಂದನ, ಬಿಡೌಜಸುತಸುತ.

ಇಂದ್ರ—ನೂರು.ಯಜ್ಞದ ಜಾಣ.

ಇಂದ್ರಜಿತು—ಸುರಪನ ಕಟ್ಟಿ ತಂದವ, ಸ್ಥಾಣು ಶೈಲೋದ್ಧರಣ ಸುತ.

ಈಶ್ವರ—ಅಗಜಾ ನಿತಂಬಿನಿಯರಸ

---

ತೊ. ರಾ

| | ಕಾಂ. | ಸಂ. | ಪ. |
|---|---|---|---|
| 1. | ೪ | ೩ | ೨೮ |
| 2. | ೫ | ೧ | ೧೪ |
| 3. | ೬ | ೬ | ೬ |
| 4. | ೧ | ೫ | ೨೯ |
| 5. | ೧ | ೫ | ೪೭ |
| 6. | ೧ | ೫ | ೫೬ |
| 7. | ೧ | ೫ | ೫೭ |
| 8. | ೩ | ೮ | ೨೨ |
| 9. | ೩ | ೮ | ೫೧ |
| 10. | ೪ | ೧೨ | ೨೦ |
| 11. | ೫ | ೧ | ೬ |
| 12. | ೫ | ೩ | ೩೯ |

ಮೈನಾಕ—ಕಪರ್ದಿಯ ಮನ್ನಣೆಯ ಮೈದುನ
ಸುಷೇಣ—ಸರೋಜ ಮಹಾಸನ ಸುತ.
ಲವ ಕುಶ—ಧರಣಿಜಾಸುತ, ನೃಪಸೂನು, ಕೋಸಲ ಧರಿತ್ರೀಪಾಲಸುತ, ತರಣಿವಂಶಲಲಾಮಸುತ.
ಅಂಗದ—ಸುರೇಂದ್ರಜಸೂನು.
ಹನುಮಂತ—ಪವಮಾನನಂದನ, ಉದಧಿಕ್ರಮ,
ಅಂಜನಾಸೂನು,
ಐಂದ್ರವ್ಯಾಕರಣ ಪಂಡಿತ,
ಲಂಕಾವೀತಿಹೋತ್ರ,
ತೊರವೆಯರಾಯ ನರಹರಿಯ ನಿಜದೂತ.
ಪರಶುರಾಮ—(ಇಳೆಯ ಪಾರ್ಥಿವರದಟು) ಕೊಡಲಿಯ ಕೊಲೆಗಡಿಕ (೧–೧೭–೩)

**ವಿಶೇಷಣಗಳ ಕೂಡುನುಡಿಗಳು**

ನಾರದ—ನೀತಿ ವಿಶಾರದ.
ಆದಿನಾರಾಯಣ—ಶ್ರುತಿ ಸಂವಾದ ಪಾರಾಯಣ
ಬಾಲಶಶಿಧರ ಸನ್ನಿಭ—ಮುನಿಜಾಲ ಚಂದ್ರಪ್ರಭ.
ಹರಿಭಕ್ತಿ ಭೂಷಣ—ವರ ವಿಭೀಷಣ.
ನೈಶಾಟ ಕುಲದಾಟವಿಕಿ—ತಾಟಕಿ
ರಾಮ—ಇನಕುಲಾಂಬರ ಸೋಮ
ಅಭಿನವರಾಮ—ಆಹವಭೀಮ
ಕಾಂಚನ ಮಾಲೆ—ನಿಖಿಳಾಂಶುಮಾಲೆ
ಲಂಕಾವೀತಿಹೋತ್ರ—ರಣತ್ರಿನೇತ್ರ
ರಣಕೆ ನೀಲಗ್ರೀವ—ರಿಪುಮಾರಣಕೆ ಕಾಲಗ್ರೀವ—ಸುಗ್ರೀವ.

ಖವಖವಿಸು, ಥಳಥಳಿಸು, ಗಡಗಡನೆ, ಮೊದಲಾದ ಕೂಡುನುಡಿಗಳೂ ಅಲ್ಲಲ್ಲಿ ದೊರೆಯುತ್ತವೆ.

**ಪ್ರಾದೇಶಿಕತೆ**

ಕುಮಾರ ವಾಲ್ಮೀಕಿಯ ಈ ಕೆಲವು ನುಡಿಗಳಲ್ಲಿ ದೇಶೀಯತೆ, ಅನ್ಯಭಾಷಾಪ್ರಭಾವಗಳು ವ್ಯಕ್ತವಾಗುತ್ತವೆ.

ಪರುಠವಣೆ, ಸೀವಟ, ಡಿಳ್ಳಾಯಿ, ಐಲಪೈಲ, ಚಡ್ಡಣ, ದಕ್ಕಡ, ಡೋವಿಗೆ, ಸುರಾಡ; ಅಳಿಜುಳುಕು; ಜನಾಖಿ, ಜೀಬಿ, ಕುಸ್ತರಣೆ, ಗೊಂಗಲ (ಸ), ನಿಹಾದಿ, ಚಪೇಟ, ಕೇವಟ, ಜತ್ತರಟ್ಟ, ತಿದ್ದುಡಿಕೆ, ತಿತ್ತಿರಿ, ಕಾರಮ, ಗಂಗಸಿ (ಸ),[1] ಸಗ್ಗಳೆ, ಸಕ್ಕಜ,.[2]

1. ಗಂಗಸ (ಗೊಂಗಸ, ಗಂಗಸಿ,) : ಕಬ್ಬಿನ ಹೊಲಕ್ಕೆ ನುಗ್ಗುವ ನರಿಗಳನ್ನು ಹಿಡಿಯುವ ಉಪಾಯದ ಉಪಕರಣ
2. ಈ ನುಡಿಗಳಲ್ಲಿ–ಹೆಚ್ಚಾಗಿ 'ಮರಾಠಿ'ಯ ಛಾಯೆ ತೋರುತ್ತದೆ.

## ನಾಣ್ನುಡಿಗಳು–ಲೋಕಾನುಭವದ ಸಾರ

ಸತಿಯರ ಬಲೆಗೆ ಸಿಲುಕದರಾರು ?[1]
ತೂಗದಿರ್ದಡೆ ತೋಟಿಯೇಕೆ ?[2]
ಗುರುನಿರೂಪವಲಂಘ್ಯ[3]
ಮದನನಾರ್ಗೊಳ್ಳಿದನು ?[4]
ಮಾಯೆಯ ಕಟ್ಟಿಗೊಳಗಾಗದವರಾರು ?[5]
ಕುಜನರ ಜಿಹ್ವೆ ಕಡುಕೂರಿತು[6]
ಸತ್ಯವಿಹೀನನೇ ತಾ ನರಕಭಾಜನನು.[7]
ಅವನೀನಾರಿಯೆಂದಡೆ ನಲಿಯದವರಾರು[8]
ಆಪತ್ತಿಗೊಳಗಾಗದವರಾರು ?[9]
ಕಾಲಗೆ ಕರುಣೆಯಿಲ್ಲ[10]
ತನುವಿದು ತಾಮರಸ ಬಾಂಧವನ ಬಾಳಿಕೆಗಕಟ ಶಾಶ್ವತವೇ ?[11]
ಸುಲಭವೇ ರವಿ ತಾಮಸಿಗೆ ?[12]
ಮಿಾನ್ಬುಲಿಗನೌಕಿದಡೆ ಅಳುಕುವುದೆ ಮಕರೇಶ ?[13]
ಬಾಯ ಹವಣಿಂಗಳವಡದ ಬಲುದುತ್ತನಂಗೈಗಳಲಿ ಧರಿಸಿದೆ–[14]
ಮಾಯೆಯ ಮರೆವಿಡಿದು ನಡೆವವರ ಗೆಲುವರಾರು "[15]
ಜೂಜು ಸೋತಡೆ ಸೋಲುವುದೆ ಮರುಜೂಜು ?[16]
ಇರುಳುಗನ್ನದ ಕೆಲಸ ದಿವದಾಚರಣೆ ಧರ್ಮದ ವಿರಸ.[17]
ಬಸಿದ ಶೂಲಕೆ ಸವಣನನು ಸೇರಿಸು.[18]
ನುಡಿಯೆ ನಾಲಗೆಯಿಲ್ಲ.[19]
ನರಿ ಸುಮ್ಮಾನದಲಿ ಕಟಕವನು ಹೊಕ್ಕಂತಹುದು.[20]
ಮಗಳಿಗೆ ತಂದೆ ಮುನಿದರೆ ನಗದಿಹರೆ ಬಲ್ಲವರು ?[21]
ಹೇನನೊರೆಸುವೊಡೇಕೆ ಶರಸಂಧಾನ ?[22]
ರೋಗಿಗೌಷಧ ಸೊಗಸುವುದೆ ?[23]
ಮರುಳಿಗೆತ್ತಣ ಮಂಡನವು ?[24]

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 1. | ೧ | ೫ | ೨೫ |
| 2. | ೧ | ೯ | ೩೨ |
| 3. | ೧ | ೯ | ೪೧ |
| 4. | ೧ | ೧೨ | ೧೭ |
| 5. | ೨ | ೧ | ೩೭ |
| 6. | ೨ | ೨ | ೪೪ |
| 7. | ೨ | ೩ | ೧೫ |
| 8. | ೨ | ೩ | ೩೧ |
| 9. | ೨ | ೪ | ೧೬ |
| 10. | ೩ | ೬ | ೫೨ |
| 11. | ೩ | ೬ | ೫೪ |
| 12. | ೩ | ೭ | ೩೫ |

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 13. | ೩ | ೭ | ೪೧ |
| 14. | ೩ | ೮ | ೬ |
| 15. | ೩ | ೮ | ೫೩ |
| 16. | ೪ | ೪ | ೫ |
| 17. | ೪ | ೪ | ೫೧ |
| 18. | ೪ | ೫ | ೧೮. |
| 19. | ೪ | ೬ | ೨೯ |
| 20. | ೫ | ೧ | ೨೯ |
| 21. | ೬ | ೪ | ೪೦ |
| 22. | ೬ | ೪ | ೫೬ |
| 23. | ೬ | ೧೦ | ೫೨ |
| 24. | ೬ | ೧೬ | ೧೧ |

ಚೋರರಂಗವನಾತು ತಳವರ ಕೇರಿಯಲಿ ಭೂಷಣವೆ ?[1]
ಇರಿತದಿಂಧನಕಗ್ನಿ ನೋವೆಂದುರಿಸುವುದೆ ?[2]
ಎಳೆಗೊನೆಯ ಚಿವುಟುವಡೆ ಕೊಡಲಿಯ ತರಿಸುವರೆ ?[3]
ಹೊಯ್ದ ಡೆ ಬಿದ್ದೆನೆಂದೆಂಬವರ ಕಥೆ.[4]
ಅಡಗಲು ಹೆತ್ತ ತಾಯೊಡಲಲ್ಲ.[5]
ಕಾನನವ ಕಣುಗುರುಡ ಹೊಕ್ಕಂತೆ ಚಿಂತೆಯ ಬೆಣೆಯಬಿಗುಹಿನಲಿರ್ದನು.[6]
ತಗರು ತಿರುಗಿದರೇನು ?–ಮರು ಸನ್ನೆಗಳ ಸಮರವ ಜಯಿಸದೇ ?[7]
ಕಾಮನಾರ್ಗತಿ ಹಿತವನು ?[8]
ಕರಿಯನಿಟ್ಟೊಡಲನ ಮರವನು ಮರೆಯ ಹೋಗುವರೆ ?[9]
ಸಾವಿಗೆ ಸೆಡೆದರಿಹಪರವಿಲ್ಲ.[10]
ರಣದಲಿ–ಕಲು ಹೃದಯುತನವಿರಲಿ, ಕರುಣದ ಮಾತದೇಕೆ ?[11]
ವಾರಿಕಲ್ಲಿನೊಳುದಿಸೆ ಶಿಖಿ ತಾ ಧಾರುಣಿಗೆ ಕಡುಚಿತ್ರವಲಾ ![12]
ಇರಿತಕಂಬರವಳಕುವುದೇ ?[13]
ನೊರಜುರುಬಲಗ್ನಿಗೆ ನೋವಹುದೇ ?[14]
ಕಟ್ಟೆರುವೆ ಕಚ್ಚಿದರೆ ಅಳುಕುವುದೆ ಸುರಗಿರಿ ?[15]
ಉರುಬುಗೊಂಡೆಳೆಗುಬ್ಬಿ ಕುಡಿದರೆ ಬರುವುದೇ ಜಲರಾಶಿ ?[16]
ದುರ್ಜನಕೆ ಸಂಧಿಸಿದ ಸಿರಿ.[17]
ಮೂರು ದಿವಸದ ಹಗರಣಕೆ ಹರಿಸದಿರು ಗಡ್ಡವನು[18]
ಮುನ್ನೈತಂದು ಹೆಚ್ಚಿದ ಕಿವಿಗಳಿಂ ಬಳಿಸಂದ ಕೋಡತಿ ಕೂರಿತು.[19]

## ವರ್ಣನಾವೈಭವ

ಕುಮಾರ ವಾಲ್ಮೀಕಿಯ ವರ್ಣನೆಗಳಲ್ಲಿ 'ಕವಿಸಮಯ'ಗಳು ತುಂಬಿಕೊಂಡಿದ್ದರೂ, ಎದ್ದು ಕಾಣುವ ಹೊಸ ತನವಿಲ್ಲದಿದ್ದರೂ, ಪರಿಮಿತತ್ವ ಮತ್ತು ಅರ್ಥವ್ಯಕ್ತಿಗಳಿಂದಾಗಿ ಅವು ನಮ್ಮನ್ನು ತಣಿಸುತ್ತವೆ, ದಣಿಸುವುದಿಲ್ಲ. ವರ್ಣನೆ ಗಳು ಎಲ್ಲೂ ಕಥೆಯ ಗತಿಯನ್ನು ಕುಂಠಿತಗೊಳಿಸದಿರುವುದೂ, ಪ್ರಮಾಣದಲ್ಲಿ ಮಿತವಾಗಿರುವುದೂ, ಅಷ್ಟಾದಶವರ್ಣನೆ ಗಳೆಲ್ಲವೂ–ಅವು ಉಚಿತವಿರಲಿ, ಇಲ್ಲದಿರಲಿ–ತನ್ನ ಕೃತಿಯಲ್ಲಿ ಬರಲೇಬೇಕು ಎಂದು ಕವಿಯು ಸಂಕಲ್ಪಿಸದಿರುವುದೂ– ಒಳ್ಳೆಯ ಅಂಶಗಳು.

---

| | ತೊ. ರಾ. | | | | ತೊ. ರಾ. | | |
|---|---|---|---|---|---|---|---|
| | ಕಾಂ. | ಸಂ. | ಪ. | | ಕಾಂ. | ಸಂ. | ಪ. |
| 1. | ೬ | ೨೨ | ೬ | 11. | ೬ | ೩೩ | ೨೧ |
| 2. | ೬ | ೨೨ | ೮ | 12. | ೬ | ೩೪ | ೧೨ |
| 3. | ೬ | ೨೩ | ೧೦ | 13. | ೬ | ೩೪ | ೧೨ |
| 4. | ೬ | ೨೪ | ೨೧ | 14. | ೬ | ೫೪ | ೧೨ |
| 5. | ೬ | ೨೪ | ೨೮ | 15. | ೬ | ೩೪ | ೧೨ |
| 6. | ೬ | ೨೬ | ೧೦ | 16. | ೬ | ೩೪ | ೧೨ |
| 7. | ೬ | ೨೬ | ೧೪ | 17. | ೬ | ೩೬ | ೧ |
| 8. | ೬ | ೨೬ | ೬೬ | 18. | ೬ | ೪೬ | ೭೧ |
| 9. | ೬ | ೨೬ | ೭೧ | 19. | ೬ | ೪೦ | ೪೯ |
| 10. | ೬ | ೨೭ | ೨೯ | | | | |

ಕೆಲವು ಉದಾಹರಣೆಗಳನ್ನು ಗಮನಿಸಬಹುದು :

**ತಂಗಾಳಿ : ಪಾವನ ಪರಮ ಮುನಿ**

ಸರಸಿಗಳ ಪುಣ್ಯೋದಕದಲಘು
ಮರುಷಣಂ ಗೈದಬ್ಜ ಕುಸುಮೋ
ತ್ಕರ ಪರಾಗವಿಲೇಪನಾಂಗದಿನಳಿಕದಂಬಕದ
ವರ ಚತುಸ್ವರದಮಳ ನಿಗಮೋ–
ತ್ಕರದ ತದ್ವನ ಸಂಚರದ ಪರಿ
ಸರದ ಪಾವನ ಪರಮ ಮುನಿಯಪ್ಪಿದನು ಕೌಶಿಕನ.[1]
............
ಸುಳಿದನೊಯ್ಯನೆ ಶೈತ್ಯ ಸಲಿಲೋ
ಚ್ಚಲಿತಧೂತ ತುಷಾರ ಭಾರಾ
ಕಲಿತ ದಳಿತ ಸರೋಜ ಗಂಧ ಪರಾಗ ಯೋಗದಲಿ
ತಿಳಿಗೊಳನ ತಡಿವಿಡಿದು ಮಂದ
ಸ್ಖಲಿತ ಮಾರುತನಾ ವನಾಧ್ವದ
ಬಳಲಿಕೆಯ ಬಿಸಜಕುಲಾನ್ವಯ ರಂಗವೀಧಿಯಲಿ.[2]

**ಪರ್ವತ**

ತುಂಗತರ ಧಾತು ಪ್ರಕೀರ್ಣದ
ಶೃಂಗದುರುಸಾನುವಿನ ಸುರಗಿ ಲ–
ವಂಗ ಕದಳಿ ತಮಾಲ ಚೂತ ಪ್ರಮುಖ ತರುಲತೆಯ
ಸಂಗದಲಿ ಹರಿಶರಭಕುಲಸಾ–
ರಂಗ ಸೂಕರ ಹರಿಣ ಮದ ಮಾ–
ತಂಗದೆಡೆಯಾಟದಲಿ ಗಿರಿ ಕಂಗೆಸೆದುದಿದಿರಿನಲಿ[3]

**ಸರೋವರ**

ಪರಿಮಳದ ಪದ್ಮದ ಪರಾಗದಿ
ಹೊರೆದ ನಿರುದೆರೆಯುಬ್ಬುಗಳ ಸಂ
ಚರಿಸುವಂಚೆಯ ರಾಗರಥಿ ರಥಾಂಗ ದಂಪತಿಯ
ಮೊರೆವ ಮರಿದುಂಬಿಗಳ ಸೊಗಸಿನ
ಸರಸಿ............[4]

---

1. ತೊ. ರಾ. ೧. ೯–೧೫.
2. ತೊ. ರಾ. ೨. ೪–೨೧.
ಈ ವರ್ಣನೆಗಳು ' ಕಾದಂಬರಿ ', ' ಜಗನ್ನಾಥವಿಜಯ ', ' ಗದುಗಿನ ಭಾರತ 'ಗಳನ್ನು ನೆನಪಿಗೆ ತರುತ್ತವೆ. ' ಕೃತಿಯಲ್ಲಿ ಪರಂಪರೆಯ ಸತ್ವ '–ಪ್ರಕರಣ ನೋಡಿರಿ.
3. ತೊ. ರಾ. ೨. ೪–೨೫
4. ಇದೇ ೨. ೬–೪

## ನದೀ ಸೌಂದರ್ಯ

ಶ್ರುತಿಸಮಾಜತರಂಗಮಯ ಪೂ
ರಿತ ಸುಧೋಪಮ ಸಲಿಲಮಯ ಸಂ
ಭೃತ ಸುಮುಕ್ತಾ ಫಲ ನಿಭೋತ್ಕರ ಸೈಕತಾವಳಿಮಯ.
ಕೃತಜಗತ್ಪಾವನಮಯಪ್ರ
ಚ್ಯುತಭವಾಖಿಲದುರಿತಮಯ ಶೋ
ಭಿತೆಯ ಸುಮನಸ್ತುತೆಯ ಕಂಡನು ರಾಮ ಜಾಹ್ನವಿಯ.[1]

ಇದನ್ನೇ ಹೋಲುವ ಇನ್ನೆರಡು ಪದ್ಯಗಳೂ ಇವೆ.

## ಚಳಿಗಾಲ

ಶಿರದ ಗಂಗೆಯ ತೊರೆ ತುಹಿನಾ । ಕರನನಂಬರಕಿಟ್ಟು ಹಣೆಗ
ಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ
ಹರಿ ಪಯೋನಿಧಿಯುಳಿದು ಲಕ್ಷ್ಮಿಯ । ಗುರುಪಯೋಧರದಿರುಬಿನಲಿ ಜೈ
ತಿರಿಸಿದನು ನಿಜಮೂರ್ತಿಯನು ಹೇಮಂತಕಾಲದಲಿ.[2]

## ಮಳೆಗಾಲ

ಮಳೆಗಾಲದ ವರ್ಣನೆಯನ್ನು ಕವಿ ಮನಮುಟ್ಟುವಂತೆ ಹಲವು ಪದ್ಯಗಳಲ್ಲಿ ಮಾಡಿದ್ದಾನೆ.

ತೊಟ್ಟರೋ ನಭಕವಚವನು, ನೆಲ
ಕಟ್ಟಿ ಬಿಗಿದರೊ ಸುರರು ನಿರಿವಿಡಿ
ದುಟ್ಟಳೋ ಜಲದಾಗಮಶ್ರೀ ನೀಲಮಯಪಟವ.
ಮುಟ್ಟ ಮರಕತಶಿಲೆಯ ನೀಲಿಯ
ಬೆಟ್ಟದಿರವೆಂಬಂತೆ ಜಂಪಳ
ವಿಟ್ಟು ಝಡಿದುದು ಕಾರ್ಮುಗಿಲು ಕತ್ತಲಿಸೆ ಕುಂಭಿನಿಯ.[3]

## ಮುಗಿಲುಗಳ ವೈವಿಧ್ಯ

ದೊರೆಮುಗಿಲು, ತೆರೆಮುಗಿಲು, ನಿಡುಮೋ
ಹರದ ಮುಗಿಲುಪ್ಪರದಮುಗಿಲು
ಬ್ಬರದಜಾಡಿಯ ಜೋಡಿಗಳ ಜಂಗಳದ ಮುಗಿಲಿನಲಿ
ತರಣಿಶಶಿತಾರಾಗ್ರಹಂಗಳ
ಹರವು ನಿಂದುದು ಗಗನ ಜಲನಿಧಿ
ಜರಿದುದಿಳೆಗೆಂಬಂತೆ ಜಲ ಜೋಂಪಿಸಿತು ಮೇದಿನಿಯ.[4]

1. ತೊ. ರಾ. I. ೧೨-೯ (ಪ್ರಭಾವಗಳಿಗೆ 'ಪರಂಪರೆಯ ಸತ್ವ' ಪ್ರಕರಣ ನೋಡಿರಿ.)
2. ಇದೇ. III. ೨–೩
3. ಇದೇ. IV. ೬–೩
4. ಇದೇ. IV ೬–.೫ .

### ಕಡಲು

ಪಾಲ್ಗಡಲ ವರ್ಣನೆಯು ಒಂದು ಪದ್ಯದಲ್ಲಿ ಬಂದಿದೆ.[1] ಕಪಿನಾಯಕರು ಕಂಡ ಸಮುದ್ರವೂ ರಾಮನ ಮುಂದೆ ಭೋರ್ಗರೆದ ಕಡಲೂ ಎರಡೆರಡು ಪದ್ಯಗಳಲ್ಲಿ ವರ್ಣಿತವಾಗಿವೆ.[2]

ರಾಮನ ರೋಷಾವೇಶಕ್ಕೆ ಬೆದರಿದ ವರುಣರಾಜನು ತನ್ನ ಸ್ವಭಾವವನ್ನು ವರ್ಣಿಸಿಕೊಂಡ ರೀತಿ ಹೀಗಿದೆ: ಸ್ತಿಮಿತ, ದುಶ್ಚರಿತ, ನಿಗಮಕ್ರಮಿತ, ವಿಭ್ರಮಣಶೀಲ ಭ್ರಮಿತ, ಕ್ಷುದ್ರಾತ್ಮ, ಅನುಗ್ರಹ ಬದ್ಧವಿಗ್ರಹ, ಅಮಿತ ಪಂಕ ಸುಸಂಭೃತ, ಸಂಕ್ರಮಿತ ದೋಷಾಕರ, ಜಡಾತ್ಮ.[3]

### ಸೂರ್ಯೋದಯ–ಸೂರ್ಯಾಸ್ತಗಳು

ರಾಮಲೀಲೆಯಲ್ಲಿ ಪ್ರಕೃತಿಯ ಶಕ್ತಿಗಳೂ, ಆಸಕ್ತಿಯಿಂದ ಪಾಲ್ಗೊಳ್ಳುವುದನ್ನು ಸೂರ್ಯೋದಯ, ಸೂರ್ಯಾಸ್ತಗಳ ಮೂಲಕ ಕವಿಯು ಸೂಚಿಸಿದ್ದಾನೆ. ಈ ವಿಚಾರದಲ್ಲೂ ಕುಮಾರವಾಲ್ಮೀಕಿಗೆ ಕುಮಾರವ್ಯಾಸನೇ ಆದರ್ಶ.[4]

ಶ್ರೀರಾಮನು ವನವಾಸಕ್ಕೆ ಹೊರಡಲಿರುವ ದಿನದ ಸೂರ್ಯೋದಯದ ವರ್ಣನೆ ಹೀಗಿದೆ.

> ನರಚರಿತ್ರದ ರಾಮು ದಶಕಂ
> ಧರನ ವಧೆಗುದ್ಯುಕ್ತನಹನೆಂ
> ಬುರುತರೋತ್ಸಹವರಿದು ಶಚಿ ಸುರಪತಿಯ ನೇಮದಲಿ
> ಇರುಳಿನಗ್ರದಲಮಳ ಮಣಿಬಂ
> ಧುರದ ಹೊಂದಳಿಗೆಯ ನಿವಾಳಿಯು
> ಧರಿಸಿದಳೊ ದರಹಾಸ ಮಿಗಿಲೆನಲೆಸೆದುದಿನಬಿಂಬ.[5]

ಇನ್ನೊಂದೆಡೆ, "ದೇವ ಮನುಜ ಮಹೋರಗರ ಒಡೆಯ ವೀರ ದಶಕಂಧರನ ಆಯುಷ್ಯರಾಶಿಯನ್ನಳೆವ ಕೊಳಗದಂತೆ ಲವಣಾಂಬುರಾಶಿಯ ತೀರದಲ್ಲಿ ರವಿ ಮೆರೆಯುತ್ತಾನೆ"[6]

ಹೀಗೆಯೇ, ಕಥಾ ಸನ್ನಿವೇಶದ ಭಾವ ಪೋಷಕವಾಗಿ ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಸೂರ್ಯೋದಯ,[7] ಸೂರ್ಯಾಸ್ತಗಳು[8] ಸಂಘಟಿಸುತ್ತವೆ.

### ಶಬ್ದ ಚಿತ್ರಣಗಳು

ಯಾವ ಅಲಂಕಾರಾತಿಶಯವೂ ಇಲ್ಲದೆ, ಸರಳ ಶಬ್ದಗಳಿಂದಲೇ ನಮ್ಮ ಕಣ್ಣಮುಂದೆ ಚಿತ್ರವನ್ನು ನೇಯುವ ಕಲೆಯಲ್ಲಿ ಕುಮಾರ ವಾಲ್ಮೀಕಿ ಪಳಗಿದವನು. ಅವನ ಕಾವ್ಯಗಳಲ್ಲಿ ನಮ್ಮ ಮನಸೆಳೆವ ನಿರಾಭರಣ ಸೌಂದರ್ಯಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು.

---

1. ತೊ. ರಾ. I ೮-೩.
2. ಇದೇ. IV ೧೨-೧, ೨ ಮತ್ತು VI ೧-೧೭, ೧೮.
3. ಇದೇ. VI ೪-೪೬.
4. ಕುಮಾರವ್ಯಾಸಕೃತಿಯಲ್ಲಿ ಭೀ. ಪ. ೬-೪೮, ದ್ರೋ. ಪ. ೬-೬೬ ಕರ್ಣ ಪರ್ವ ೨-೧, ೨೭-೩೦, ೩೧ ನೋಡಬಹುದು.

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 5. | ೨ | ೨ | ೯ |
| 6. | ೬ | ೯ | ೨೯ |
| 7. | ೬ | ೨ | ೨, ೬-೨-೫೬, ೬-೯-೩೧, ೬-೧೯-೧೪, ೬-೪೫-೨, ೪೪. |
| 8. | ೫ | ೨ | ೧, ೬-೩೪.೭೯. |

ರಾಘವಾಶ್ರಮಕ್ಕೆ ಬಂದ ಶಬರರು ಶಬ್ದಗಳಲ್ಲಿ ಹೀಗೆ ಮೂಡಿದ್ದಾರೆ:

> ಹೀಲಿಯುಡುಗೆಯ ಹೆಗಲ ಬಿಲು ಬಡಿ
> ಗೋಲುಗಳ ಸಂಕಲೆಯ ನಾಯ್ಗಳ
> ತೋಳಗುಂಜಿಯ ದಂಡೆಗಳ ಕಟಿತಟದ ಸುರಿಗೆಗಳ
> ಜೋಳಿಗಳ ಮಿಟ್ಟಿಗಳ ದೀಹವ
> ಸಾಳುವನಗಳೆಯಂಟುಗಳ ಶಬ
> ರಾಳಿ ಬಂದುದು ಪರ್ಣಶಾಲೆಗೆ ಸೂರ್ಯವಂಶಜನ.[1]

ಅಶೋಕವನದಲ್ಲಿನ ಸೀತೆಯ ಚಿತ್ರಣ ಕಣ್ಣ ಮುಂದೆ ಕಟ್ಟುವಂತಿದೆ:

> . ದೇವಿಯಿದ್ದಳು ಬಾಗಿದೊಡಲಿನ
> ಕೈವೆರಳ ಹತ್ತುಗೆಯ ಕದಪಿನ
> ಜೀವನವನುದುಗಲಿಪ ನಯನದ ಮಣಿದ ಮಸ್ತಕದ
> ತೀವಿದುಸ್ಸುಳಿಕೆಗಳ ನಸಿದ ಕ
> ಳೇವರದ ನಿಜಪತಿಯ ಪದರಾ
> ಜೀವಯುಗಳದ ನೆನಹಿನಲಿ ನೋಡುತ ಮಹೀತಳವ.[2]

ಅಳಲುತ್ತಿರುವ ಕೊಂಚೆ,[3] ಆಶ್ರಮಕ್ಕೆ ಹೊರಟ ಸೊಬಗಿಯರು,[4] ರಾವಣನ ಅಂತಃಪುರದಲ್ಲಿ ಸೆರೆಯಾದ ಸುರಸ್ತ್ರೀಯರು,[5] ದಶಕಂಠನ ಆಸ್ಥಾನ ನುಗ್ಗಿದ ಶೂರ್ಪನಖಿ,[6] ಸೀತೆಯ ಮನವನ್ನು ಸೋಲಿಸಿದ ಹೊಮ್ಮಿಗ,[7] ರಾವಣನ ಸನ್ಯಾಸಿ ರೂಪ,[8] ಯುದ್ಧಕ್ಕೆ ಶಸ್ತ್ರಧಾರಿಯಾಗಿ ನಿಂತ ರಾಮ[9]–ಹೀಗೆ ಕುಮಾರ ವಾಲ್ಮೀಕಿಯ ಶಬ್ದ ಚಿತ್ರಣಗಳ ಪಟ್ಟಿಯನ್ನು ಇನ್ನಷ್ಟು ಉದ್ದ ಬೆಳೆಸಬಹುದು.

---

| | ತೊ. ರಾ. | | |
|---|---|---|---|
| | ಕಾಂ | ಸಂ. | ಪ. |
| 1. | ೩ | ೩ | ೩ |
| 1. | ೫ | ೩ | ೩೩ |
| 2. | ೧ | ೨ | ೧೪ |
| 3. | ೧ | ೫ | ೩೧ |
| 4. | ೫ | ೨ | ೭೧ |
| 5. | ೩ | ೭ | ೧೨ |
| 6. | ೩ | ೮ | ೧೫ |
| 7. | ೩ | ೯ | ೧೭ |
| 8. | ೬ | ೨೮ | ೧೬ |

## ಕುಮಾರ ವಾಲ್ಮೀಕಿಯ ಅಲಂಕಾರ ವೈಭವ

### ರೂಪಕೋಕ್ತಿಗಳು

ಪದಪಂಕೇಜ,[1] ಪದಸರೋಜ ಭ್ರಮರ,[2] ಮುಖಪದ್ಮಸದ್ಮ,[3] ಕವಿರಾಜ ಹಂಸ,[4] ದುರ್ವಾರ್ತೆಲತೆ,[5] ಇಕ್ಷ್ವಾಕು ವಂಶದ ಕಡಲು ಬರತುದು,[6] ಪಾವನ ಪವನಮುನಿ,[7] ಬಯಲ ಮೋಹದ್ವಿಪ,[8] ಹರುಷಲತೆ ಲಂಬಿಸು,[9] ರಘುಕುಲ ಸಮುದ್ರೋದ್ಧರಣ ಹಿಮಕರಣ,[10] ಮನೋರಥ ಕುಜಕೆ ಕಠಿಣ ಕುಠಾರರಾಗು,[11] ಉತ್ತರದಲಗು,[12] ಮಹಾದುಷ್ಟಾಂಗ ನಾರಸಾಹಿ ದುಷ್ಟ,[13] ಮನುಕುಲಾಂಬರಗಗನಮಣಿ,[14] ಫಲಿಸಿತಗ್ಗದ ಸತ್ಯತರು,[15] ನೃಪಾಲನ ಜೀವಶರಧಿಗೆ ಬಡ ಬನೊ, ಚಂದ್ರಮನೋ,[16] ಸುತವಿಯೋಗದ ಶೋಕನದಿ ನಿಜಪತಿವಿಯೋಗ ತಟಿನೀಪತಿಯ ಸಂಗಮವಾದುದು,[17] ಉಚ್ಚದಿರುದೋರ್ಬಳ ತಟಾಕದ ಮುಚ್ಚುದೂಂಬನು[18] ಮೋಕ್ಷಾಂಗನೆಯ ಘನಪೀನ ಜಘನಕುಚಂಗಳಿಗೆ ಕೈನಿಲುಕ ಲುದ್ಯೋಗಿಸು,[19] ಗುರುವಚನವಿದು ಸುಜನ ಜನಕಾಭರಣ[20]

ಇಂತಹ ರೂಪಕೋಕ್ತಿಗಳು ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಹೇರಳ ದೊರೆಯುತ್ತವೆ.[21]

### ಉಪಮೆಗಳು

ಪರಮತತ್ವದ ಬಿತ್ತಿನೊಳಗಂ
ಕುರಗಳ್ಳಿದಾದಂತೆ ತೋರುವ
ಪರಮ ತೇಜೋಮಯನು ಮೆರೆದನು ಪಂಚವಕ್ತ್ರದಲಿ[22]

---

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 1. | ೧ | ೧ | ೧ |
| 2. | ೧ | ೧ | ೪ |
| 3. | ೧ | ೧ | ೫ |
| 4. | ೧ | ೧ | ೮ |
| 5. | ೧ | ೩ | ೩ |
| 6. | ೧ | ೪ | ೯ |
| 7. | ೧ | ೯ | ೧೫ |
| 8. | ೧ | ೧೫ | ೧೫ |
| 9. | ೧ | ೧೬ | ೯ |
| 10. | ೨ | ೧ | ೫ |
| 11. | ೨ | ೨ | ೪ |
| 12. | ೨ | ೨ | ೮ |
| 13. | ೨ | ೨ | ೩೧ |
| 14. | ೨ | ೨ | ೩೩ |
| 15. | ೨ | ೩ | ೨೪ |
| 16. | ೨ | ೪ | ೧೨ |
| 17. | ೨ | ೫ | ೩೦ |
| 18. | ೩ | ೬ | ೧೮ |
| 19. | ೩ | ೮ | ೬೪ |

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 20. | ೪ | ೨ | ೩ |
| 21. | ೧ | ೫ | ೫೨, ೪೪, ೪೫ |
| | ೧ | ೮ | ೩೪, ೭೨, ೭೩ |
| | ೧ | ೧೬ | ೪೯ |
| | ೨ | ೩೧ | ೩೬, ೩೭ |
| | ೩ | ೨ | ೪ |
| | ೩ | ೮ | ೧೯ |
| | ೩ | ೧೦ | ೨ |
| | ೩ | ೧೧ | ೧೯ |
| | ೪ | ೫ | ೮ |
| | ೪ | ೬ | ೪ |
| | ೫ | ೮ | ೮೩ |
| | ೫ | ೯ | ೨೬, ೨೮ |
| | ೬ | ೧ | ೧೭ |
| | ೬ | ೨ | ೨, ೨೧, ೨೭, ೪೭, ೫೪ |
| | ೬ | ೩ | ೧ |
| | ೬ | ೧೦ | ೪೫, ೫೧ |
| | ೬ | ೧೬ | ೧೩ |
| 22. | ೧ | ೨ | ೨ |

ಇದು ಹರನ ಪಂಚಮುಖಗಳ ವರ್ಣನೆ. ಕುಕ್ಷಿನೃಪಾಲನು “ಭೂಮಿಯಲಿ ಜನಿಸಿದನು ನಿಗಮ ಸ್ತೋಮಕಾದಿ ಪ್ರಣವದೊಲು.[1] “ಹರನೆಡೆಗೆ ನಡೆವಾ ಸ್ಮರನ ಪಾಳಯದಂತೆ[2] ವಿಭಾಂಡಕ ಸುಕುಮಾರನಲ್ಲಿಗೆ ಸುಂದರಿಯರ ಪಯಣ ಸಾಗುತ್ತದೆ. ಇದನ್ನೇ ಹೋಲುವ ಇನ್ನೆರಡು ಉಪಮೆಗಳು :

ಮುತ್ತಿತಾ ಬಲಜಲಧಿ ವಡಬನ
ಮುತ್ತುವಂಬುಧಿಯಂತೆ.[3]

ಕೂಡಿತಸುರ ಪದಾತಿ ಲಗ್ಗೆಯ
ಮಾಡಿ ಮುತ್ತಿದರಂಗದನ ಮು
ಮ್ಮೋಡ ಮುರಿದುಪ್ಪರಿಸಿ ತರಣಿಯ ತುಡುಕುವಂದದಲಿ[4]

“ನಿಧಿಯನು ಕೂಡಿಕೊಂಡಿಹ ಕಾಳಸರ್ಪನ ತುಡುಕುವಂದದಲಿ.[5] ಶಿವಧನುಸ್ಸನ್ನು ಭಂಗಿಸಹೋದ ದಶಾನನನು “ರಸದ ಲಂಪಟಿಕೆಕ್ಷುವನು ಖಂಡಿಸಲು ಸಿಲುಕಿದ ನಾಲಗೆಯ ಗಂಗಸದ ನರಿಯ” ಪಾಡಿಗೊಳಗಾಗುತ್ತಾನೆ.[6] (ಇಲ್ಲಿನ–ನರಿಯನ್ನು ತೋಟ ನುಗ್ಗಿದಾಗ ಹಿಡಿಯುವುದಕ್ಕಾಗಿ ಬಳಸುವ ‘ಗಂ(ಗೊಂ)ಗಸ’ದ ಉಲ್ಲೇಖ ಪ್ರಾದೇಶಿಕತೆಯಿಂದಾಗಿ ವೈಶಿಷ್ಟ್ಯವುಳ್ಳದ್ದು)

ಶ್ರೀ ರಾಮನು ಸೀತಾ ಕಲ್ಯಾಣ ಮಂಟಪದಲ್ಲಿ ‘ವರ ಪಯೋನಿಧಿ ಮಧ್ಯದಿಂದವತರಿಸುವ ಅಮೃತಾಂಶುವಿನಂತೆ’[7] ತೋರುತ್ತಾನೆ. ಇಂತಹ ‘ಹೋಲಿಕೆ’ಗಳು ಕೃತಿಯಲ್ಲಿ ಸಹಜ ಸುಂದರವಾಗಿವೆ, ಸಂಖ್ಯೆಯಲ್ಲೂ ವಿಪುಲವಾಗಿವೆ.[8]

ಇನ್ನಷ್ಟು ಉಪಮೆಗಳಿಗೆ ಉದಾಹರಣೆಗಳು :

---

| | ತೊ. ರಾ. ಕಾಂ. | ಸಂ. | ಪದ್ಯ. |
|---|---|---|---|
| 1. | ೧ | ೩ | ೧೩ |
| 2. | ೧ | ೫ | ೩೬ |
| 3. | ೫ | ೬ | ೮ |
| 4. | ೬ | ೧೦ | ೬೦ |
| 5. | ೧ | ೧೫ | ೧೮ |
| 6. | ೧ | ೧೫ | ೨೬ |
| 7. | ೧ | ೧೫ | ೩೪ |
| 8. ಉದಾ : | ೧ | ೧೫ | ೩೬, ೪೧ |
| | ೧ | ೧೭ | ೧೦, ೧೯ |
| | ೨ | ೩ | ೫೨ |
| | ೨ | ೪ | ೭ |
| | ೨ | ೫ | ೨೦ |
| | ೩ | ೬ | ೧೬, ೪೪ |
| | ೩ | ೮ | ೪೪, ೪೬, ೪೭, ೫೩ |
| | ೩ | ೧೧ | ೪೮ |
| | ೪ | ೪ | ೩೨ |
| | ೪ | ೬ | ೨ |
| | ೪ | ೧೨ | ೩೧ |
| | ೫ | ೧ | ೧೭, ೨೯ |
| | ೫ | ೨ | ೩೮, ೪೫ |

| ತೊ. ರಾ. ಕಾಂ. | ಸಂ. | ಪದ್ಯ. |
|---|---|---|
| ೬ | ೨ | ೧೬ |
| ೬ | ೩ | ೧, ೨, ೩ |
| ೬ | ೪ | ೨೪, ೩೪, ೩ |
| ೬ | ೮ | ೧೦ |
| ೬ | ೯ | ೭, ೨೨ |
| ೬ | ೧೦ | ೨೪, ೫ |

(ಒಟ್ಟು ೪೯೩ರಷ್ಟು ಉಪಮೆಗಳಿವೆ)

## ಮಾಲೋಪಮೆಗಳು

ಮಂಥರೆಯ ಮಾಯೆಯ ಕಟ್ಟಿಗೊಳಗಾದ ಕೈಕೇಯಿಯು ದಶರಥನಿಗೆ ಕಾಣಿಸಿಕೊಂಡ ರೀತಿಯನ್ನು ವರ್ಣಿಸುವುದಕ್ಕೆ ಉಪಮೆಗಳ ಮಾಲೆಯೆ ಬೇಕಾಗುತ್ತದೆ:

ಲಲನೆಯಿದ್ದಳು ಮಲಿನಮಯ ಪು
ತ್ತಳಿಯವೊಲು, ಹೇಮಂತಕಾಲದ
ನಳಿನಿಯಂತೆ, ನಿದಾಘದೆಳಲತೆಯಂತೆ, ರಾಹುವಿನ
ಎಳತಟದ ಶಶಿಲೇಖೆಯಂತು
ಜ್ವಲತೆಗುಂದಿದ ಮುಖದ ಕಾಂತಿಯ
ಹಳಹಳಿಕೆ ಹಳುವಾದ ಕೈಕೆಯ (ಕಾಂತೆಯ) ಕಂಡನಾ ಭೂಪ[1]

ಇಂತಹ 'ಹೋಲಿಕೆಗಳ ಸರಮಾಲೆ' ಕಾವ್ಯದಲ್ಲಿ ನಾಲ್ಕಾರು ಕಡೆ ಸಿಗುತ್ತದೆ[2]

## ಉತ್ಪ್ರೇಕ್ಷೆಗಳು

'ದೇವ ದೇವನಾದ ರಾಮನ' ಮಹಿಮಾತಿಶಯದ ವರ್ಣನೆಗೆ ಕವಿಯು ಉತ್ಪ್ರೇಕ್ಷೆಗೆ ಶರಣು ಹೋಗಿದ್ದಾನೆ. ಮೃಗಾಭಿಸರಣ ಕಾಲದಲ್ಲಿ ಶ್ರೀ ರಾಮನ 'ಪಾದಮಾರ್ಗ'ದಲಿ ಕಾನನದ ಸ್ಥಿತಿಯು 'ನಿಶಾಂತ ಪದ ಪ್ರಘಾತದಲಿ ಗಜದ ಕಾಲ್ದುಳಿವಾಳಿಯೋ, ಭೂಮಿಜವೋ' ಎನ್ನುವಂತಾಗುತ್ತದೆ[3] ವಾಲಿ ಸುಗ್ರೀವರ ದ್ವಂದ್ವ ಯುದ್ಧವು "ಮಲೆತುದೋ ಕೈಲಾಸ ಕನಕಾಚಲದೊಳೆನೆ" ತೋರುತ್ತದೆ[4] ಅಲ್ಲದೆ, ಅದೇ ಕಾಳಗವು 'ಕೈಟಭನ ಕಮಲಾಂಬಕನಹೊಯ್ಲಾಟವೋ, ಅಂಧಕನ ಶಶಿ ಜೂಟರಿಬ್ಬರ ತಿವಿಗಳೋ ನರಹರಿ ಹಿರಣ್ಯರ ರಣರೌದ್ರವೋ....' ಎಂಬಂತೆ ಕವಿವಾಣಿಯಲ್ಲಿ ವಿಜೃಂಭಿಸುತ್ತದೆ.[5]

ಕಪಿವೀರರು ರಚಿಸಿದ ಸೇತುವು 'ಕೀಶ ದೋರ್ವಲಶಿಲಾ ಪರಿಶಾಸನವೋ, ರಘುಪತಿಯ ಕೀರ್ತಿ ಶ್ರೀ ಸತಿಯ ಸೀಮಂತವೋ, ಪಾಶಧರನುದಿತ ಪ್ರತಾಪ ವಿಲಾಸ ವಿಜಯಸ್ತಂಭವೋ,[6] ದಶಾಸ್ಯನ ಕರೆದು ಮೋದಲು ಮೃತ್ಯು ನೀಡಿದ ಕರವೋ ಎನ್ನುವಂತೆಯೂ' ಮೆರೆಯುತ್ತಿತ್ತು ಎಂದು ಎಷ್ಟು ಉತ್ಪ್ರೇಕ್ಷಿಸಿದರೂ ಕವಿಗೆ ಆಯಾಸವಿಲ್ಲ. ಹಾಗಾಗಿ 'ಭವಾಬ್ಧಿ ಸೇತು'ವಿನ 'ಸೇತು'ವು 'ವಿಜಯರಾಘವನಹಿತ ವಿಜಯಕೆ ಬಿಜಯ ಮಾಡುವನೆಂದು ಬವದಜ ರಜಕ ರಚಿಸಿದ ಮೆಲ್ಲಡಿಯ ಮಡಿವಾಸಿನತಿಶಯವೋ, ಅಂಬುಧಿಯು ತ್ರಿಜಗದಧಿದೇವತೆಯನು ಭಜಿಸಿ ಭಾಳದಲಿಟ್ಟ ತಿಲಕವೋ"[7]–ಎಂದೆಲ್ಲಾ ವರ್ಣಿಸಿ ತೃಪ್ತಿಪಟ್ಟುಕೊಳ್ಳುತ್ತಾನೆ–ಕುಮಾರವಾಲ್ಮೀಕಿ.

ಸುಮಾರು ಒಂರಷ್ಟು ಉತ್ಪ್ರೇಕ್ಷೆಗಳು ನಮಗೀ ಕಾವ್ಯದಲ್ಲಿ ದೊರೆಯುತ್ತವೆ.

---

1. ತೊ. ರಾ. II ೩-೩
2. ಇದೇ. V ೩-೩೪, ೩೫, ೪೭
3. ಇದೇ. III ೮-೪೯.
4. ಇದೇ. ೭-೭.
5. ಇದೇ. IV ೭-೧೪.
6. ಇದೇ. VI ೬-೫
7. ಇದೇ. VI ೬-೬.

### ಇತರ ಅಲಂಕಾರಗಳು

ತೊರವೆ ರಾಮಾಯಣದಲ್ಲಿ ಬರುವ ಇತರ ಅಲಂಕಾರಗಳು ಈ ಕೆಳಗಿನಂತಿವೆ :

ಅತಿಶಯೋಕ್ತಿ[1]
ದೃಷ್ಟಾಂತ[2]
ಅಸಂಭವ[3]
ಸ್ವಭಾವೋಕ್ತಿ[4]
ಸಂದೇಹ[5]
ಭ್ರಾಂತಿಮದ[6]
ಸ್ಮೃತಿಮದ[7]
ಸಹೋಕ್ತಿ[8]
ಮುಕ್ತಪದಗ್ರಹಣ[9]

### ಶಬ್ದಾಲಂಕಾರಗಳು

ಪ್ರಾಸ, ಅನುಪ್ರಾಸ, ವೃತ್ತ್ಯನುಪ್ರಾಸ, ಪುನರುಕ್ತಿ, ಯಮಕಗಳಂತಹ ಶಬ್ದಾಲಂಕಾರಗಳು ಕುಮಾರವಾಲ್ಮೀಕಿಯ ಕೃತಿಯಲ್ಲಿ ೧೫೦ರಷ್ಟು ಇವೆ. ಕವಿಯ ಈ ಸಂಬಂಧವಾದ ಒಲವಿನ ನಿದರ್ಶನಕ್ಕಾಗಿ ಒಂದೆರಡು ಉದಾಹರಣೆಗಳನ್ನು ಉಲ್ಲೇಖಿಸಬಹುದು :

ರಮಣರಿನ್ನಾರಹರೊ ಲಕ್ಷ್ಮೀ
ರಮಣನಲ್ಲದೆ ನೆರೆದ ಪೃಥ್ವೀ
ರಮಣರೀ ಕನ್ನಿಕೆಗೆ ಸದೃಶವೆ ಶಿವಮಹಾದೇವ[10]

---

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪದ್ಯ. |
| 1. | ೨ | ೬ | ೪೨ |
| | ೬ | ೩೫ | ೯, ೧೮ |
| 2. | ೧ | ೧೫ | ೨೬ |
| | ೩ | ೨ | ೨೨ |
| | ೨ | ೭ | ೪೧ |
| 3. | ೨ | ೬ | ೪೨, ೬-೩೫/೯, ೧೫ |
| 4. | ೧ | ೮ | ೩, ೨, ೯, ೧೭/೨, ೪/೩೧, ೪-೫ |
| ೫. | ೧ | ೧೦ | ೭, ೪-೫, ೧೧, ೧೩, ೬/೨, ೫, ೧-೮ |
| 6. | ೨ | ೪ | ೨೪, ೨೫ |
| 7. | ೨ | ೧೧ | ೪೦ |
| 8. | ೨ | ೬ | ೧ |
| 9. | ೫ | ೩ | ೬೪ |
| 10. | ೧ | ೧೪ | ೧೩ |
| 11. | ೬ | ೨೩ | ೩೮ |

ಅರರೆ ರಣಸಿಂಧುರವು ರಣ ಪು–
ಷ್ಕರಣಿಯಲಿ ಪುಷ್ಕರಕೆ ನಿಜ
ಪುಷ್ಕರದ ಮುಖದಲಿ ಚೆಲ್ಲಿದುದು ನವ ರುಧಿರ ಪುಷ್ಕರವ

ಕವಿಯ 'ಮ'ಕಾರಪ್ರಿಯತೆಯಬಗ್ಗೆ ಈ ಮೊದಲೇ ಉದಾಹರಣೆಗಳನ್ನು ಕೊಡಲಾಗಿದೆ[1] ಶಬ್ದಾಲಂಕಾರ ವೈಭವ ಪ್ರದರ್ಶನದ ಮೂಲಕ ನಮಗೆ ಕುಮಾರ ವಾಲ್ಮೀಕಿಯ ಅಪಾರ ಶಬ್ದ ಭಂಡಾರದ ಅನುಭವವಾಗುತ್ತದೆ–ಎಂದು ಮಾತ್ರ ಹೇಳಬಹುದು.

## ಅಲಂಕಾರಗಳ ಲೆಕ್ಕಾಚಾರ

ತೊರವೆ ರಾಮಾಯಣದಲ್ಲಿನ ಪ್ರತಿಯೊಂದು ಪದ್ಯವನ್ನೂ ಸೂಕ್ಷ್ಮವಾಗಿ ಗಮನಿಸಿ, ಅಲ್ಲಿರುವ ಅಲಂಕಾರ ಮತ್ತು ಅಲಂಕಾರ ಛಾಯೆಯನ್ನು ಲೆಕ್ಕಿಸುತ್ತಾಹೋದರೆ ನಮ್ಮ ಗಣನೆಗೆ ಸಿಕ್ಕುವ ಅಲಂಕಾರಗಳ ಸಂಖ್ಯೆ ಈ ಕೆಳಗಿನಂತಿರುತ್ತದೆ :

**ಅರ್ಥಾಲಂಕಾರಗಳು :**

೧. ರೂಪಕಾಲಂಕಾರಗಳು, ರೂಪಕೋಕ್ತಿಗಳು, ರೂಪಕ ಪದಗಳು : ೧೭೯೫
೨. ಉಪಮೆ, ಉತ್ಪ್ರೇಕ್ಷೆ ಮುಂತಾದ ಇತರ ಅಲಂಕಾರಗಳು : ೭೮೭

**ಶಬ್ದಾಲಂಕಾರಗಳು :**

೩. ಯಮಕ, ಅನುಪ್ರಾಸ, ವೃತ್ತ್ಯನುಪ್ರಾಸ ಮತ್ತು ಇತರ : ೯೬೬
ಒಟ್ಟು ಸಂಖ್ಯೆ : ೩೫೪೮

ತೊರವೆ ರಾಮಾಯಣದಲ್ಲಿರುವ ಷಟ್ಪದಿಗಳ ಒಟ್ಟು ಸಂಖ್ಯೆ : ೫೧೦೩

೫೧೦೩ ಪದ್ಯಗಳಲ್ಲಿ ೩೫೪೮ ಸಾಲಂಕೃತ ಎಂದಂತಾಯಿತು. ಶೇಕಡಾವಾರು ಲೆಕ್ಕದಂತೆ ಶೇ. ೭೦ರಷ್ಟು ಪದ್ಯಗಳಲ್ಲಿ ಒಂದಲ್ಲ ಒಂದು ರೀತಿಯ ಅಲಂಕಾರ ಅಥವಾ ಛಾಯೆ ಇದೆ ಎಂದು ಹೇಳಬೇಕಾಗುತ್ತದೆ. ಆದರೆ ಯಾವ ಅಲಂಕಾರವೂ ಪಾಂಡಿತ್ಯ ಪ್ರದರ್ಶನಕ್ಕಾಗಿ ಬಂದಿಲ್ಲ, ಸಂದರ್ಭ ಸಹಜವಾಗಿದೆ. ಪಂಡಿತ ಪ್ರಿಯವಾದ ಶ್ಲೇಷೆ, ಅಪಹ್ನುತಿ–ಮೊದಲಾದ ಅಲಂಕಾರಗಳು ಇಲ್ಲಿ ಇಲ್ಲ. ಅಲಂಕಾರಗಳಲ್ಲಿ ಹೊಸತನ, ಕುಮಾರ ವಾಲ್ಮೀಕಿಯದೇ ಆದ 'ಸ್ವಂತಿಕೆ' ಇಲ್ಲ ಎಂದು ಹೇಳಬಹುದಾದರೂ, ಜನಸಾಮಾನ್ಯರನ್ನು ದೃಷ್ಟಿಯಲ್ಲಿರಿಸಿಕೊಂಡು ಕಾವ್ಯ ರಚಿಸಿದ ಕವಿಗೆ, ರಾಮನಾಮ ಮಹಿಮೆಯ ಪ್ರಸಾರದ ಮೂಲಕ ಪಾಮರೋದ್ಧಾರವನ್ನು ಗುರಿಯಲ್ಲಿರಿಸಿಕೊಂಡ ಕವಿಗೆ–ಅದು ಮುಖ್ಯವಾಗಿರಲಿಲ್ಲ ಎಂದು ಸಮಾಧಾನ ಹೇಳಬಹುದು.

## ಕುಮಾರ ವಾಲ್ಮೀಕಿಯ ಕೃತಿಯಲ್ಲಿ ರಸ ಪೋಷಣೆ–ಪ್ರಧಾನ ರಸ

ರಸ್ಯೈಃ ಶೃಂಗಾರ ಕರುಣ ಹಾಸ್ಯ ರೌದ್ರಭಯಾನಕೈಃ
ವೀರಾದಿಭಿಶ್ಚ ಸಂಯುಕ್ತಂ ಕಾವ್ಯಮೇತದಗಾಯತಾಮ್[2]

1. ಪು. ೫೯ ನೋಡಿರಿ.
2. ವಾ. ರಾ. ಬಾಲ ಕಾಂಡ ೪-೯.

"ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರಗಳೆಂಬ ರಸಗಳಿಂದ ತುಂಬಿದೆ. ಇಂತಹ ಈ ಕಾವ್ಯವನ್ನು ಆ (ಲವಕುಶ) ಕುಮಾರರು ಕಲಿತು ಹಾಡುತಿದ್ದರು". ಆದಿಕಾವ್ಯವಾದ ರಾಮಾಯಣವು ರಸೋಪೇತವಾದುದರಿಂದಲೇ, ಅದನ್ನು ಕೇಳಿ ಮುನಿಗಳೆಲ್ಲರೂ ಆನಂದಬಾಷ್ಪಗಳನ್ನುದುರಿಸುತ್ತಾ, ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಲವಕುಶರಿಗೆ ಉಡುಗೊರೆಗಳನ್ನು ನೀಡಿ ಆಶೀರ್ವದಿಸಿದರು.[1] ಅಯೋಧ್ಯಾ ನಗರದಲ್ಲಿ ಲವಕುಶರ ರಾಮಾಯಣ ಗಾನ ಕೇಳಿ ಶ್ರೋತೃಗಳ ಮನಸ್ಸು ಆನಂದದಿಂದ ಹಿಗ್ಗಿ ಆ ಗಾಯನದಲ್ಲಿ ತಲ್ಲೀನ ವಾಯಿತು.[2]

ಹೀಗೆ ಆದಿಕಾವ್ಯದಲ್ಲೇ ಕಾವ್ಯದ ರಸಾತ್ಮಕ ಸ್ವರೂಪ ಮತ್ತು ಅದರ ಪರಿಣಾಮಗಳ ವರ್ಣನೆ ಇದೆ. "ಕಾವ್ಯ ಮಾನಂದಾಯ"–ಹಾಡು ಹಿಗ್ಗಿಗಾಗಿ–ಎಂದರು ಪುರಾತನರು. ಸೋಪಾನ ಕ್ರಮದಿಂದ ಸಹೃದಯನಲ್ಲಿ ಆನಂದ ವರ್ಧನ ಮಾಡುತ್ತಾ ಬ್ರಹ್ಮಾನಂದ ಸದೃಶವಾದ ಅನುಭವವನ್ನು ಉಂಟುಮಾಡುವುದೇ ಕಾವ್ಯದ ಪರಮೋದ್ದೇಶ. ಈ ಆನಂದಾನುಭವವು ವಿವಿಧ ರಸಾಸ್ವಾದದಿಂದ–ನವರಸಗಳ ಮೂಲಕವಾಗಿ–ಚಿತ್ತವೇದ್ಯವಾಗುವುದು. ಹೀಗೆ ರಸ ಪೋಷಣೆಯ ಮೂಲಕವಾಗಿಯೇ ಕಾವ್ಯ ಸಾರ್ಥಕವಾಗುವುದು–ಎಂಬ ವಿಚಾರಗಳಿಗೆಲ್ಲಾ ಆದಿಕಾವ್ಯವೇ ಉಗಮ ವೆಂದರೂ ತಪ್ಪಾಗದು.

"ನಂದಿಕೇಶ್ವರನು ರಸದ ಋಷಿಯೆಂದು ರಾಜಶೇಖರನು 'ಕಾವ್ಯ ಮೀಮಾಂಸೆ' ಯಲ್ಲಿ ಹೇಳಿದ್ದರೂ, ರಸವಿಚಾ ರವು ಭರತಮುನಿಯ ನಾಟ್ಯ ಶಾಸ್ತ್ರದಲ್ಲಿಯೇ ಪ್ರತಿಷ್ಠಿತವಾಗಿ ಕಂಡುಬರುತ್ತದೆ. "ತತ್ರ ವಿಭಾವಾನುಭಾವ ವ್ಯಭಿ ಚಾರಿ ಸಂಯೋಗಾದ್ರಸನಿಷ್ಪತ್ತಿಃ" ಎಂಬ ರಸ ಸೂತ್ರದಲ್ಲಿ ಅದರ ಉಗಮವಾಗಿದೆ. ಮುಂದಿನವರ ರಸ ವಿಚಾರವೆಲ್ಲ ಇದರಮೇಲಿನ ಭಾಷ್ಯವೆಂದರೂ ಸಾಗೀತು"[3]

## ರಸಭಕ್ತಿ–ಭಕ್ತಿರಸ

ವ್ಯಾಪಕವಾದ ರಸಮೀಮಾಂಸೆಗೆ ಹಿನ್ನೆಲೆಯಾದ ಕಾವ್ಯ ಗಂಗೋತ್ರಿಯೂ, ರಸಗಂಗೋತ್ರಿಯೂ ಎನಿಸಿರುವ ಆದಿಕಾವ್ಯವನ್ನು ಕನ್ನಡಿಸಹೊರಟವನು ಕುಮಾರ ವಾಲ್ಮೀಕಿ. ಆದಿಕವಿಯ ಕೃತಿಯಲ್ಲಿ ರಸದೃಷ್ಟಿ ಪ್ರಮುಖವಾಗಿದ್ದರೆ, ಕುಮಾರ ವಾಲ್ಮೀಕಿಯ ರಾಮಾಯಣದಲ್ಲಿ ಭಕ್ತಿದೃಷ್ಟಿಯು ಸ್ಫುಟವಾಗಿದೆ. ಕನ್ನಡದ ಕವಿಗೆ ಭಕ್ತಿಯೇ ಪ್ರೇರಣೆ, ಭಕ್ತಿಯ ಪ್ರಚೋದನೆಯೇ ಗಮ್ಯ.

"ಭಕ್ತಿ"ಯು ಅಲೌಕಿಕ ಭಾವದಿಂದ ಕೂಡಿದುದಾದುದರಿಂದ ಅದಕ್ಕೆ 'ರಸ' ವೆಂಬ ಹೆಸರು ಅಲಂಕಾರ ಶಾಸ್ತ್ರದಲ್ಲಿ ದೊರಕದೇ ಹೋಗಿರುವುದೇನೋ ನಿಜ. 'ದೇವಾದಿ ವಿಷಯಾ ರತಿಃ' ಎಂದು ಭಕ್ತಿಯನ್ನು ಭಾವದಲ್ಲಿ ತುರು ಕಿದ್ದೂ ಇದೆ. ಇದರಿಂದ ಭಕ್ತಿರಸಕ್ಕೆ–ಹಿಂದೊಮ್ಮೆ ಶಾಂತರಸಕ್ಕಾದಂತೆಯೇ–"ಒಳಕ್ಕೆ ಬರುವೆ, ದಾರಿಕೊಡು ದಮ್ಮಯ್ಯ" ಎಂದು ಅಲಂಕಾರ ಶಾಸ್ತ್ರದ ಬಾಗಿಲಲ್ಲಿ ಕಾದು ಕುಳಿತುಕೊಳ್ಳಬೇಕಾಯಿತು. "ದೇವ ಭಕ್ತಿಯನ್ನು" ಮಾಹಾತ್ಮ್ಯೆ ಪೂರ್ವಕ ಸುದೃಢಃ ಸ್ನೇಹಃ–ಎಂದು ವರ್ಣಿಸಿರುವರು. ಆದರೆ, ಜೀವಜೀವರಲ್ಲಿರುವ ಈ ಅದಮ್ಯ ಆಕರ್ಷಣಕ್ಕೆ, ಈ ನಿರಪೇಕ್ಷ ಪಕ್ಷಪಾತಕ್ಕೆ ಈ 'ಅಂತರಃ ಕೋಪಿಹೇತು'ವಿಗೆ ಸ್ನೇಹವೆಂದೆನ್ನುವುದು ಒಳಿತು. ಜೀವ ಈಶರೊಳಗಿನದಕ್ಕೆ ಭಕ್ತಿಯೆಂದೆ ವಿಂಗಡಿಸುವುದೊಳಿತು; ರತಿಯ ಆಕರ್ಷಣದ ಆಳವು "ಜನ್ಮಾಂತರ ನಿಬಿಡ ಬದ್ಧ: ಪರಿಚಯ"ದಷ್ಟು ದೂರ ಹೋಗುವುದಿಲ್ಲ. ಹೀಗೆ, ಸ್ನೇಹದಲ್ಲಿಯೂ, ಭಕ್ತಿಯಲ್ಲಿಯ ಆತ್ಮ ಸಮರ್ಪಣಭಾವ ದಲ್ಲಿಯೂ ಮತ್ತು ರತಿಯಲ್ಲಿಯೂ ಭೇದ ಮಾಡುವುದಗತ್ಯವು"[4]

---

1. ವಾ. ರಾ. ಬಾಲಕಾಂಡ ೪-೧೫, ೨೭.
2. ಇದೇ. ೪-೩೩, ೩೪.
3. ದ. ರಾ. ಬೇಂದ್ರೆ–ಸಾಹಿತ್ಯ ಮತ್ತು ವಿಮರ್ಶೆ, ಪು. ೪೫.
4. ದ. ರಾ. ಬೇಂದ್ರೆ–ನವರಸ ವಿಚಾರ–ಸಾಹಿತ್ಯ ಮತ್ತು ವಿಮರ್ಶೆ ಪು. ೫೫.

ತೊರವೆ ರಾಮಾಯಣದ ದೃಷ್ಟಿಯನ್ನು ಗಮನಿಸಿದರೆ ಜೀವವು ದೇವನಿಗೆ ಅರ್ಪಿತವಾಗುವ ಭಕ್ತಿಭಾವದ ಉತ್ಪತ್ತಿಯೇ ಕವಿಯ ಆಶಯವೆನ್ನುವುದು ಖಚಿತವಾಗುತ್ತದೆ. ಕಾವ್ಯವು ಸೃಷ್ಟಿಗೊಂಡ ಕಾಲ, ಪರಿಸರ, ಪ್ರೇರಣೆಗಳನ್ನು ಗಮನಿಸಿದರೂ ಭಕ್ತಿ ಪ್ರಭಾವವು ಈ ಕೃತಿಯಲ್ಲಿ ಸ್ಪಷ್ಟವಾಗುತ್ತದೆ.[1] ಆಲಂಕಾರಿಕರು ಭಕ್ತಿಗೆ ರಸದ ಸ್ಥಾನವನ್ನು ಕೊಡಲಿ, ಬಿಡಲಿ, ಕುಮಾರ ವಾಲ್ಮೀಕಿಯಂತೂ ಭಕ್ತಕವಿ, ತೊರವೆ ರಾಮಾಯಣವು ಭಕ್ತದೃಷ್ಟಿಯ ಕಾವ್ಯ.[2]

## ದೈವಿಕ–ಲೌಕಿಕ ಶೃಂಗಾರಗಳ ಮುಖಗಳು

ಲೌಕಿಕವಾದ 'ರತಿ'ಯೇ ಭಾವವಾಗಿ ಉಳ್ಳ 'ಶೃಂಗಾರ'ಕ್ಕೂ ಅಲೌಕಿಕವಾದ 'ವಿರತಿ' ಯೇ ಮುಖ್ಯಭಾವವಾಗಿ ಉಳ್ಳ 'ಭಕ್ತಿ–ಶೃಂಗಾರ'ಕ್ಕೂ ಅಂತರ ಕಲ್ಪಿಸಿಕೊಳ್ಳದೆ, ಕಾವ್ಯದ ಪ್ರಧಾನ ರಸವು ಶೃಂಗಾರವೆಂದರೆ ಕುಮಾರ ವಾಲ್ಮೀಕಿಗೆ ಅಪಚಾರವೆಸಗಿದಂತಾದೀತು. ಭಕ್ತಿಮಾರ್ಗದಲ್ಲಿ ಭೋಗದ ವಿಜೃಂಭಣೆಯಿಲ್ಲ, ಪೌರುಷದ ಮಸೆದಾಟವಿಲ್ಲ, ತರ್ಕದ ಎಳೆದಾಟವಿಲ್ಲ. ಅಲ್ಲಿರುವುದು ಅಪೌರುಷೇಯವಾದ, ತರ್ಕಾತೀತವಾದ ಪರಮಾತ್ಮತತ್ವದಲ್ಲಿ ಅಚಲವಾದ ಶ್ರದ್ಧೆ, ಸರ್ವಾರ್ಪಣಯೋಗ. ದೈವಿಕ ಶೃಂಗಾರ (ಭಕ್ತಿ) ದ ಭಾವ, ವಿಭಾವ, ಅನುಭಾವ, ವ್ಯಭಿಚಾರಿಭಾವ–ಎಲ್ಲವೂ ಲೌಕಿಕ ಶೃಂಗಾರಕ್ಕಿಂತ ಭಿನ್ನವಾದುವುಗಳು, ಇವೆರಡನ್ನೂ ಪ್ರತ್ಯೇಕವಾಗಿ ಗಮನಿಸುವುದು ಕವಿಯ ಆಶಯಕ್ಕೆ ಸಮುಚಿತವಾದದ್ದು.

## ದೈವಿಕ ಶೃಂಗಾರ

ಕಂಗಳನು ಹರಹಿದನು ರಾಮನ
ಮಂಗಳಶ್ರೀ ಮೂರ್ತಿಯಲಿ ನೆರೆ
ಹಂಗ ಕಳೆದನು ಭವಭವದ ದುಷ್ಕರ್ಮ ವಾಸನೆಯ.
ಸಂಗಿಯಾದನು ಸುಖಮಯದ ನೋ
ಕ್ಷಾಂಗನೆಯ ಘನಪೀನ ಜಘನಕು–
ಚಂಗಳಿಗೆ ಕೈನಿಲುಕಲುದ್ಯೋಗಿಸಿದನವ ಬಳಿಕ.[3]

ಇನ್ನೊಂದು ಉದಾಹರಣೆ :

ಮುತ್ತು ನೀರಿನಲಾದ ಬಳಿಕದು
ಮತ್ತೆ ನೀರಹುದೇ ಸುವರ್ಣಕ
ವೆತ್ತಕಬ್ಬಿನ ಮತ್ತೆ ಕಬ್ಬಿನವಹುದೆ ರಸತಾಗಿ[4]

## ಲೌಕಿಕ ಶೃಂಗಾರ

ನಿರಿಯನೊಯ್ಯಾರಿಸುತ ಮೇಲು ದ
ನಿರಕುತೆಡಗೈದುದಿಯಲಾ ಮುಂ
ದೆರಗ ಸಂವರಿಸುತ್ತ ನಸುನಾಚಿಕೆಯ ಭಾರದಲಿ
ತುರುಗೆವೆಯ ನಿಡುಗಂಗಳಿನ ಕಡೆ
ಸೆರಗನಮರಿಸುತೊಯ್ಯನೊಯ್ಯನೆ
ಮುರುಕ ಮಿಗೆ ಕಾಣಿಸುತ ಬಂದಳು ರಾಮನಿದ್ದೆಡೆಗೆ[5]

---

1. ಈ ಕುರಿತಾಗಿರುವ ವಿಚಾರಗಳಿಗೆ ಇದೇ ಪ್ರಬಂಧದ ೨ನೇ (ಭಾಗ) ನೋಡಿರಿ.
2. ಇದೇ ಪ್ರಬಂಧದ 'ಕೃತಿಯ ತಾತ್ವಿಕ ಅಧ್ಯಯನ' ಪ್ರಕರಣ ನೋಡಬಹುದು.
3. ತೊ. ರಾ. ೩-೮--೬೪.
4. ಇದೇ. ೬-೩೪-೩೪.
2. ಇದೇ. ಕಾಂ. ೩ ಸಂ. ೪ ಪದ್ಯ. ೮

ಶೂರ್ಪನಖಿಯು ಈ ಆಸುರ ಶೃಂಗಾರವನ್ನು ಭರತ, ಅಹಲ್ಯೆ, ವಿಭೀಷಣ, ಅತಿಕಾಯ–ಮೊದಲಾದವರ ದೈವಿಕವಾದ 'ಭಕ್ತಿ' ಯೊಂದಿಗೆ ಸರಿದೂಗಿಸುವುದು ಸರಿಯಾದೀತೇ? ಅಂತೂ, ಕುಮಾರ ವಾಲ್ಮೀಕಿಯ ಕಾವ್ಯದಲ್ಲಿ ವಿವಿಧ ರಸಮಾರ್ಗಗಳ ಮೂಲಕ ಕಾವ್ಯೋದ್ದೇಶವನ್ನು ಸಾಧಿಸುವ ಸಾಮಗ್ರಿಗಳಿವೆ ಎನ್ನುವುದಕ್ಕೆ ಈ ಕೆಳಗಿನ ಪಟ್ಟಿ ಸಾಕಾದೀತು.

### ಶೃಂಗಾರ (ಭಕ್ತಿ)

ದೇವತೆಗಳು ನಾರಾಯಣನಿಗೆ ಮೊರೆಯಿಟ್ಟ ಪ್ರಸಂಗ.[1] ಅಹಲ್ಯಾ ಮೋಕ್ಷ;[2] ಭರತ ಪ್ರಾರ್ಥನೆ[3] ಮಾರೀಚಾವಸಾನ,[4] ಸುಗ್ರೀವ ದೈನ್ಯ,[5] ವಿಭೀಷಣ ಶರಣಾಗತಿ,[6] ಸಮುದ್ರಗರ್ವಭಂಗ.[7]

### ಶೃಂಗಾರ (ಲೌಕಿಕ)

ಋಷ್ಯಶೃಂಗನನ್ನು ಮರುಳುಮಾಡಿದ ಸೊಬಗಿಯರ ವೃತ್ತಾಂತ,[8] ಸೀತಾ ಸೌಂದರ್ಯವರ್ಣನೆ[9] ವನದಲ್ಲಿ ಸೀತಾ–ರಾಮರ ವಾರಿಕೇಳಿ,[10] ಶೂರ್ಪನಖಿಯ ಕಾಮಭಿಕ್ಷೆ[11]

### ವಿಪ್ರಲಂಭ ಶೃಂಗಾರ

ಸೀತಾಪಹಾರದ ನಂತರ ರಾಮ ವಿಲಾಪ,[12] ಸೀತಾ ಪ್ರಲಾಪ,[13] ಮಾಯಾಸೀತೆಯ ಹನನವನ್ನು ಕಂಡು ರಾಮನು ಸೀತೆಯನ್ನು ನೆನೆದು ಅಳಲುವುದು.[14]

### ಹಾಸ್ಯ ಪೋಷಣೆ

ನರಚರಿತ್ರದ ನಾರಾಯಣನ ಕಥೆಯಲ್ಲೂ ಕವಿಯು ನರಲೋಕದ ಹಾಸ್ಯದ ಮಂದಹಾಸವನ್ನು ಬೀರದೆ ಇಲ್ಲ. ರಾಮಲಕ್ಷ್ಮಣರನ್ನು ಕಾಮಿಸಿ, ಕೊನೆಗೆ ಮೂಗು ಕತ್ತರಿಸಿಕೊಂಡ ಶೂರ್ಪನಖಿಯನ್ನು ಕಂಡು "ಲೋಕದ ಸುದತಿಯರಿಗೆ ಈ ಸೊಬಗು ಸಂಭವಿಸಿದುದ ಕಾಣೆ, ನೀವು ಮದುವೆಯಾಗಬಹುದಿತ್ತು, ಬೇಡ ಲಕ್ಷ್ಮಣನಾದರೂ ಆಕೆಯ

---

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 1. | ೧ | ೮ | ೫೬, ೫೭ |
| 2. | ೧ | ೧೨ | ೨೦, ೨೧ |
| 3. | ೨ | ೬ | ೨೩, ೨೪ |
| 4. | ೩ | ೮ | ೬೪ |
| 5. | ೪ | ೭ | ೨ |
| 6. | ೬ | ೩ | ೨೩-೨೬ |
| 7. | ೬ | ೪ | ೩೯, ೫೬ |
| 8. | ೧ | ೫ | ೨೯, ೩೧ |
| 9. | ೧ | ೧೪ | ೧೫, ೧೭, ೨೪, ೨೭ |
| 10. | ೨ | ೪ | ೪, ೬ |
| 11. | ೩ | ೪ | ೫, ೮, ೧೭, ೧೮ |
| 12. | ೩ | ೧೧ | ೩೪-೩೭, ೪೧, ೪೮ |
| 13. | ೫ | ೩ | ೬೩-೬೬ |
| 14. | ೬ | ೪೧ | ೬೦-೬೨ |

ಕೈಹಿಡಿಯಬಹುದಿತ್ತಲ್ಲ, ಅದನ್ನುಳಿದು ನಿಮ್ಮ ರೂಪಿಗೆ ಸೋತು ಬಂದವಳ ಗುಮ್ಮನನ್ನು ಮಾಡುವುದು ಸರಿಯಲ್ಲ" ಎಂದು ನಗುತ್ತಾಳೆ–ಸೀತೆ.[1]

"ನಮ್ಮ ಬನವನ್ನು ಏಕೆ ಮುರಿದೆ ?" ಎಂದು ಪ್ರಹಸ್ತನು ಕೇಳಿದ ಪ್ರಶ್ನೆಗೆ ಹನುಮಂತನು, "ನಾವಿದನರಿಯೆವು, ಈ ಹುಲು ಬಾಲವೆಸಗಿದ ಕೆಲಸವಿದೈಸೆ" ಎಂದುತ್ತರಿಸುವಲ್ಲಿ ಮುಖ್ಯಪ್ರಾಣನ ಹಾಸ್ಯ ದೃಷ್ಟಿಯೇ ಮುಖ್ಯವಾಗಿದೆ.[2]

ಲಂಕಾನಗರದ ವಸ್ತ್ರಗಳಿಂದೆಲ್ಲ ಅಲಂಕೃತವಾದ ತನ್ನ ಬಾಲವನ್ನು ಕಂಡು ಮಾರುತಿಯೇ ನಕ್ಕು ನುಡಿದಿರುವುದು ಹೀಗೆ :

ಕಟ್ಟಿದೀ ಕೌಪಿದನು ಕಮಲಜ
ಕೊಟ್ಟನಿಸಿತಕೆ ಪೂರ್ವಭವದಲಿ
ಕೊಟ್ಟು ಹುಟ್ಟಿದುದಿಲ್ಲವಾಗಿ ನಿದಾನವಿದು ನಿನಗೆ
ನೆಟ್ಟನಾದಿಯಲಾವ ಸುಕೃತವ
ಮುಟ್ಟಿನೀ ಮಾಡಿದೆಯೊ ನಿನ್ನವೊ
ಲುಟ್ಟು ಮೆರೆದವರಾರು ಸಾಕಿನ್ನದಟುತನವೆಂದ.[3]

## ಹಾಸ್ಯರಸ ಪೋಷಣೆ

ಅಂಗದನು ಸಂಧಾನಕ್ಕೆಂದು ದಶಕಂಠನ ಆಸ್ಥಾನಕ್ಕೆ ಬರುತ್ತಾನಷ್ಟೆ. ಅಲ್ಲಿ ಪ್ರಹಸ್ತನು ಅಂಗದನೊಡನೆ, "ಹಿಂದೊಮ್ಮೆ ಬಂದು ಬಾಲ ಸುಡಿಸಿಕೊಂಡು ತೆರಳಿದ ಕಪಿಯ ವಿಚಾರವೇನಾದರೂ ನಿನಗೆ ತಿಳಿದಿದೆಯೆ ?" ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಉತ್ತರವಾಗಿ ಅಂಗದನು ಆಡಿದ ಮಾತಿನಲ್ಲಿ ದಿಟ್ಟತನದ ಚುಚ್ಚು–ಹಾಸ್ಯವಿದೆ :

ಹೇಳಲೇನದನವನ ವಿಧಿಯನು
ಕೇಳಿತಿಲ್ಲವಲಾ ಕಪೀಂದ್ರನ
ಪಾಳೆಯವ ಹೊಗ ಗೊಡದೆ ಕಪಿಪೋತಂಗಳುಬ್ಬರಿದು
ಬಾಲ ಸುಡುಕನ ತೆವರಲಾ ಕಪಿ
ಯೂಳಿಗವು ಏನಗಾಯ್ತು ನಮ್ಮಾ
ಬಾಲವನು ನೀವ್ ಕೆಣಕಿ ನೋಡಿದಡರಿಯಬಹುದೆಂದ್

ಹನುಮನು ತಾನು ತಂದ ಮಹೌಷಧಿಯಲ್ಲಿ ಬಾಲವನ್ನು ಅದ್ದಿ ರಣರಂಗದಲ್ಲಿ ಬಿದ್ದ ಕಪಿವೀರರಮೇಲೆ ಚೆಲ್ಲಿದ ದೃಶ್ಯ ನಿಜವಾಗಿ ನಗು ಉಕ್ಕಿಸುವಂತಹುದು.[6]

ಸುಗ್ರೀವನು ಕುಂಭಕರ್ಣನ ಕಂಕುಳಲ್ಲಿಂದ ತಪ್ಪಿಸಿಕೊಂಡ ರೀತಿಯೂ, ಹಾಗೆ ಜಾರಿ ತಪ್ಪಿಸಿಕೊಂಡು ನುಸುಳಿದ ಸುಗ್ರೀವನು ಆ ರಕ್ಕಸನ ಮೂಗನ್ನುಕಿತ್ತು ಹರಿದುಕೊಂಡು ತಂದುದೂ, ಕುಂಭಕರ್ಣನು ಆಸ್ಥಾನಕ್ಕೆ ಹೋಗಿ 'ಕಪಿರಾಜನನ್ನು ಕಂಕುಳಲ್ಲಿರಿಸಿ ತಂದಿರುವೆ, ನೋಡು' ಎಂದು ಕಂಕುಳೆತ್ತಿ ನಗೆಗೀಡಾಗುವುದೂ[7]–ಎಲ್ಲವೂ ನಗು ತರುವ ದೃಶ್ಯಗಳೇ.

---

ತೊ. ರಾ.

| | ಕಾಂ. | ಸಂ. | ಪದ್ಯ. |
|---|---|---|---|
| 1. | ೩ | ೪ | ೨೮-೨೯ |
| 2. | ೫ | ೭ | ೪೨ |
| 3. | ೫ | ೮ | ೨೫ |
| 5. | ೬ | ೧೦ | ೩೯ |
| 6. | ೬ | ೩೬ | ೬೮ |
| 7. | ೬ | ೨೭ | ೫೮-೬೨ |

ಮೂಗು ಕಳೆದುಕೊಂಡ ಕುಂಭಕರ್ಣನನ್ನು ಕಂಡು ಜನರು:

> ಮುಗಿದುದಿಂತಿವರಿಬ್ಬರಿಗೆ ಸಂ
> ಯುಗದೊಳಿನ್ನವರಣ್ಣಗೇನನು
> ಬಗೆವರೋ ಬಲಿಮುಖರು–ಎಂದಾಡಿಕೊಳ್ಳುತ್ತಾರೆ.[1]

ರಾಮನು ವಿಭೀಷಣನೊಡನೆ 'ನಿನ್ನಣ್ಣನ ಸೇನೆಯಲ್ಲಿ ಹೀಗೆ ಮೂಗ ಕಳೆದುಕೊಂಡವರ ಲೆಕ್ಕವೆಷ್ಟು ?' ಎಂದು ನಕ್ಕು ವಿಚಾರಿಸುತ್ತಾನೆ.[2]

ಕೆಲವೊಮ್ಮೆ, ಕುಮಾರ ವಾಲ್ಮೀಕಿಯು ನಗಿಸಹೊರಟು ಗಂಭೀರತೆ ಮತ್ತು ಔಚಿತ್ಯಗಳ ಗೆರೆ ಮೀರಿದನಲ್ಲ–ಎನಿಸುವುದುಂಟು. ದಶರಥನು ನಡೆಸಿದ ಯಜ್ಞಗಳಲ್ಲಿ ಭಾಗವಹಿಸಿದ ವಿಪ್ರರ ಗಾಂಭೀರ್ಯವರಿಯದ ನುಡಿಗಳು[3] ಆಶ್ರಮಗಳಲ್ಲಿ ತಪೋಮಗ್ನರಾದ ಮುನಿಗಳ ಲಘುವಾದ ಚಿತ್ರಣ,[4] ರಾವಣನ ಮುಖಗಳು ಹತ್ತಕ್ಕೂ ಬಾಲದ ಬೆಂಕಿ ಹೊತ್ತಿಸಿ ಅವನ ಸಾಲು ಗಡ್ಡಗಳನ್ನು ಸುಟ್ಟ ಹನುಮಂತನ ಪ್ರತಾಪ,[5] ರಣರಂಗದಲ್ಲಿ ರಾವಣನು ಮೈಯ ಬಟ್ಟೆಗಳನ್ನು ಕಳೆದುಕೊಂಡು ಜಿನಮುನಿಯಂತೆ ಬತ್ತಲೆಯಾದನೆಂಬ ವರ್ಣನೆ,[6] ಆತನ ಬತ್ತಲೆ ಮೈಯನ್ನು ಸುರನಾರಿಯರು ಕಂಡು ನಾಚಿದರೆನ್ನುವ ಹೇಳಿಕೆ,[7] ನೀಲನು ದಶಕಂಠನನ್ನು ತನ್ನ ಬಾಲದಲ್ಲಿ ಕಟ್ಟಿ ಜೋಗುಳ ಹಾಡುವುದು[8]–ಇವೆಲ್ಲಾ ಕವಿಯ ಔಚಿತ್ಯ ಪ್ರಜ್ಞೆಯ ಮುಂದಿರಿಸಿದ ಸವಾಲುಗಳಂತೆ ತೋರುತ್ತವೆ.

### ಕರುಣ ರಸ

ಶೋಕವೇ ಸ್ಥಾಯಿಭಾವವಾಗಿ ಉಳ್ಳ ಕರುಣ ರಸ ಪೋಷಕ ಸನ್ನಿವೇಶಗಳು : ಪುತ್ರಹೀನನಾದ ದಶರಥನ ವ್ಯಥೆ,[9] ವನವಾಸಕ್ಕೆ ರಾಮನು ಹೊರಟಾಗ ಕೌಸಲ್ಯೆ, ದಶರಥ ಮೊದಲಾದವರ ದುಃಖ,[10] ತಾಂಡವನ ಮರಣವಾರ್ತೆ ತಿಳಿದು ಅವನ ಮಾತಾಪಿತರ ಶೋಕ,[11] ವಾಲಿ ವಧೆಯನ್ನರಿತ ತಾರಾ ವಿಲಾಪ[22] ರಾಮ–ಕ್ರೋಧ ತಿಳಿದು ನದೀ ಮಾನಿನಿಯರ ದೈನ್ಯ,[13] ಕುಂಭಕರ್ಣ, ಅತಿಕಾಯ, ಇಂದ್ರಜಿತು, ರಾವಣರ ಮರಣ ಕಾಲದಲ್ಲಿ ರಾಕ್ಷಸ ಸ್ತ್ರೀಯರ (ಮಂಡೋದರಿ) ಪ್ರಲಾಪ,[14] ಅಣ್ಣನ ಮರಣ ಕಂಡು ವಿಭೀಷಣ ದುಃಖ[15] ಇತ್ಯಾದಿ.

### ರೌದ್ರ ರಸ

ರೌದ್ರಕ್ಕೆ ಕ್ರೋಧವೇ ಸ್ಥಾಯಿಭಾವ. ದೇವತೆಗಳ ಕುರಿತು ರಾವಣ ಕ್ರೋಧ,[16] ತಾಟಕಿಯ ರೌದ್ರಾವೇಶ,[17] ರಾಮನ ಪಟ್ಟಾಭಿಷೇಕಕ್ಕೊದಗಿದ ವಿಘ್ನವನ್ನರಿತ ಲಕ್ಷ್ಮಣನ ಕ್ರೋಧ[18] ಖರ, ದೂಷಣ, ತ್ರಿಶಿರ ಸಂತಾಪ,[19] ಸಮುದ್ರರಾಜನು ತನ್ನನ್ನು ಗಮನಿಸದಿರಲು ರಾಮಕ್ರೋಧ[20] ರಾಕ್ಷಸ ರೌದ್ರ.[21]

---

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪದ್ಯ. |
| 1. | ೬ | ೨೮ | ೬ |
| 2. | ೬ | ೨೮ | ೧೧ |
| 3. | ೧ | ೭ | ೪೫ |
| 4. | ೧ | ೫ | ೩೬ ಮತ್ತು ೧-೧೧-೧೨ |
| 5. | ೫ | ೮ | ೩೫ |
| 6. | ೬ | ೨೫ | ೨೭ |
| 7. | ೬ | ೨೬ | ೨೮ |
| 8. | ೬ | ೨೨ | ೧೧-೧೨ |
| 9. | ೧ | ೪ | ೨-೪, ೮ |
| 10. | ೨ | ೩ | ೩, ೩೯, ೪೦ ೫೫-೫೯ |
| 11. | ೨ | ೫ | ೨೪ |
| 12. | ೪ | ೫ | ೨-೧೨ |
| 13. | ೬ | ೪ | ೩೯-೪೦ |

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪದ್ಯ. |
| 14. | ೬ | ೨೯ | ೨-೪ |
| | | ೩೯ | ೨ |
| | | ೪೫ | ೧೧-೨೮ |
| | | ೫೧ | ೯೧-೧೦೧ |
| 15. | | ೫೧ | ೭೭-೮೨ |
| 16. | ೧ | ೮ | ೩೨ |
| 17. | ೧ | ೧೦ | ೭-೮ |
| 18. | ೨ | ೩ | ೭-೧೩ |
| 19. | ೩ | ೫-೭ ಸಂಧಿಗಳು | |
| 20. | ೬ | ೩೦-೩೬ | |
| 21. | ೬ | ೧೧ನೇ ಸಂಧಿಯಿಂದ ೫೦ನೇ ಸಂಧಿಯವರೆಗೆ | |

### ವೀರ ರಸ

ರಾಮಾಯಣದ ಮುಖ್ಯ ವಸ್ತುವಾದ ರಾವಣ ವಧೆಗೆ ಶ್ರೀರಾಮ ಲಕ್ಷ್ಮಣ ಮತ್ತು ವಾನರವೀರರ ಸಾಹಸಾತಿಶಯವೇ ಕಾರಣ. ಇದರಿಂದಾಗಿ ರಾಮಕಥೆಯಲ್ಲಿ ರಾಮವೀರಶ್ರೀಯ ವರ್ಣನೆಗೆ ಪ್ರಾಧಾನ್ಯ. ರಾಮನಿಂದ ವಿಶ್ವಾಮಿತ್ರ ಯಜ್ಞರಕ್ಷಣೆ,[1] ಸೀತಾ ಕಲ್ಯಾಣ ಮಂಟಪದಲ್ಲಿ ರಾಮನಿಂದ ಶಿವಧನುರ್ಭಂಗ[2] ಪರಶುರಾಮನ ಗರ್ವ ಭಂಗ,[3] ಮುಂದೆ ಅಸಂಖ್ಯ ದಾನವ ವೀರರ ಹನನ[4]–ಎಲ್ಲೆಲ್ಲೂ ವೀರದ ವರ್ಣನೆಯಿದೆ.

### ಭಯಾನಕ ರಸ

ದಾನವ ಭಯ ನಿವಾರಣೆಯೇ ರಾಮಾವತಾರದ ಉದ್ದೇಶ. ರಾವಣ ಮತ್ತು ಅವನ ರಾಕ್ಷಸ ಪರಿವಾರದವರಿಂದಾಗಿ ಸಜ್ಜನರಿಗೂ, ಸತ್ಕರ್ಮಗಳಿಗೂ ಭಯಾವಹ ಪರಿಸ್ಥಿತಿಯಿದ್ದುದರ ವರ್ಣನೆ ಕಾವ್ಯದಲ್ಲಿದೆ. ರಾಕ್ಷಸರು ಶ್ರೀರಾಮ ಮತ್ತು ವಾನರ ಸೇನೆಯೊಂದಿಗೆ ನಡೆಸಿದ ಯುದ್ಧವಂತೂ ಘೋರ–ಭಯಾನಕವಾದುದು.

ರಾವಣನ ಕುರಿತಾಗಿ ದೇವತೆಗಳ ಭಯ,[5] ಪರಶುರಾಮನನ್ನು ಕಂಡು ದಶರಥನ ಪರಿವಾರವು ತಾನೊಳಗಾದ ಭಯ,[6] ಭೀಕರ ಮಳೆಗಾಲದ ವರ್ಣನೆ,[7] ಲಂಕಾ ದಹನದ ಭಯಾನಕ ಚಿತ್ರಣ,[8] ಕುಂಭಕರ್ಣ, ಇಂದ್ರಜಿತು ರಾವಣ–ಇವರ ಬಲಾತಿಶಯವು ಕಪಿಸೇನೆಯಲ್ಲಿ ಉಂಟು ಮಾಡಿದ ಭಯ[9]–ಇವುಗಳನ್ನಿಲ್ಲಿ ಉದಾಹರಿಸಬಹುದು.

### ಬೀಭತ್ಸ ರಸ

ಜುಗುಪ್ಸೆಯನ್ನು ಕೆರಳಿಸುವ ಹೆಣಗಳಿಂದಲೂ, ರಕ್ತದ ಮಡುಗಳಿಂದಲೂ ತುಂಬಿದ ರಣರಂಗದ ವರ್ಣನೆಯು ಬೀಭತ್ಸರಸ ಪೋಷಕವಾಗಿದೆ[10]

### ಅದ್ಭುತರಸ

ಕುಮಾರ ವಾಲ್ಮೀಕಿಯ ದೃಷ್ಟಿಯಲ್ಲಿ ಅದ್ವಿತೀಯನಾದ ಶ್ರೀರಾಮನ ಪ್ರತಾಪಾತಿಶಯಕ್ಕಿಂತ ಅದ್ಭುತವಾದುದು ಇನ್ನೊಂದಿಲ್ಲ. ಪರಮಾತ್ಮನ ಮಾಹಾತ್ಮ್ಯ ಜ್ಞಾನ ಪೂರ್ವಕವಾದ ಭಕ್ತಿ ಹೊರಹೊಮ್ಮುವುದಕ್ಕೆ ದೇವೇಶನ ಅಗಾಧ ಲೀಲಾ ವೈಭವವನ್ನು ಕಂಡು ಉಂಟಾಗುವ ಅವರ್ಣನೀಯವಾದ ವಿಸ್ಮಯವೂ ಪ್ರಮುಖ ಪ್ರೇರಕ. ವೈಕುಂಠ ವೈಭವ ವರ್ಣನೆ,[11] ಪರಮಾತ್ಮನ ಅಸಾಧಾರಣತೆಯ ಕುರಿತಾದ ಸ್ತುತಿ,[12] ಹನುಮಂತನ 'ತ್ರಿವಿಕ್ರಮ ರೂಪ,'[13] ರಾಮನ ವಿಶ್ವರೂಪ,[14] ಸೇತು ಬಂಧನ ಕಾಲದಲ್ಲಿ ಜಾಂಬವ ನೊದಲಾದ ವಾನರವೀರರು ಅದ್ಭುತ ಸಾಹಸ[15]–ಇವೆಲ್ಲವೂ ಅದ್ಭುತ ಜನಕಗಳಾಗಿವೆ.

---

| | ತೊ. ರಾ. ಕಾಂ. | ಸಂ. | ಪದ್ಯ |
|---|---|---|---|
| 1. | ೧ | ೧೯ | ೧೩-೧೮ |
| | | ೧೧ | ೧೨ |
| 2. | ೧ | ೧೫ | ೪೧ |
| 3. | ೧ | ೧೨ | ೫-೧೬ |
| 4. | ೬ | ೧೧-೫೦ ಸಂಧಿಗಳು. | |
| 5. | ೧ | ೮ | ೪೭ |
| 6. | ೧ | ೧೨ | ೪ |
| 7. | ೪ | ೬ | ೩ |
| 8. | ೫ | ೮ | ೬೦-೬೭, ೮೩ |
| 9. | ೬ | ೭೨ | |
| | | ೩೫ | |
| | | ೧೨ | |
| | | ೪೬ | |

| | ತೊ. ರಾ. ಕಾ. | ಸಂ. | ಪದ್ಯ. |
|---|---|---|---|
| 10. | ೩ | ೬ | ೧೬ |
| | ೩ | ೮ | ೩-೬ |
| | ೬ | ೩೪ | ೫೫ |
| 11. | ೧ | ೮ | ೪೫-೪೮ |
| 12. | ೧ | ೯ | ೩೬ |
| 13. | ೫ | ೩ | ೮೦-೮೧ |
| 14. | ೬ | ೫೧ | ೪೪-೫೭ |
| 15. | ೬ | ೫ | ೨-೬೪ |

### ಶಾಂತ ರಸ

ಕೈಲಾಸದಲ್ಲಿ ಶಿವಸಾನ್ನಿಧ್ಯ,[1] ವಿಭಾಂಡಕ ಕುಮಾರನ ಆಶ್ರಮ,[2] ಶಬರಿಯ ಆಶ್ರಮದ ದ್ವೇಷರಹಿತ ಪರಿಸರ,[3]– ಇವುಗಳ ವರ್ಣನೆಯಲ್ಲಿ ಶಾಂತರಸ ಪೋಷಣೆಯಾಗಿದೆ.

"ಕಳವು, ಅನೃತ, ಅನ್ಯಾಯ, ಕೊಲೆ, ದಳವುಳವು, ದುರ್ಭಯ, ಬಾಧೆ, ವಂಚನೆ, ಹಳಿವು, ಹಾದರ ಬಂದಿ ಸಂಕರ ಜಾತ್ಯಧರ್ಮಗಳು ಸುಳಿಯದ" ರಾಮರಾಜ್ಯ ಶಾಂತಿಯ ಆವಾಸ ಸ್ಥಾನವಾಗಿದ್ದಂತೆ ಕವಿ ವರ್ಣಿಸಿದ್ದಾನೆ.[4]

ಹೀಗೆ, ತೊರವೆ ರಾಮಾಯಣದ ಪ್ರಧಾನರಸವು ದೈವಿಕ ಶೃಂಗಾರ (ಭಕ್ತಿ) ವಾದರೂ ಕವಿಯು ಇತರ ರಸಗಳ ಪೋಷಣೆಗೂ ಗಮನ ಕೊಟ್ಟಿದ್ದಾನೆನ್ನುವುದು ಗಮನಾರ್ಹವಾಗಿದೆ.

### ಕುಮಾರ ವಾಲ್ಮೀಕಿಯ ಕಾವ್ಯ ಕಲ್ಪನೆ

ಸಂಸ್ಕೃತದ ಮಹಾಕಾವ್ಯವೊಂದನ್ನು ಕನ್ನಡಿಸಿದ ಕುಮಾರ ವಾಲ್ಮೀಕಿಗೆ ಕಾವ್ಯ ಮೀಮಾಂಸೆಯು ಅಪರಿಚಿತ ವಿಷಯವೇನೂ ಆಗಿರಲಿಲ್ಲ, ಕಾವ್ಯ ಸೃಷ್ಟಿ, ಕಾವ್ಯದ ಉದ್ದೇಶ ಮತ್ತು ಕಾವ್ಯ ಪರಿಣಾಮಗಳ ಕುರಿತು ಕವಿಗೆ ತನ್ನವೇ ಆದ ನಿಲುಮೆಗಳಿವೆ.

ಕಾವ್ಯವು ರಸಮಯವಾಗಿರಬೇಕು, ರಸವು ಅಮೃತ ಸ್ವರೂಪಿ ಎನ್ನುವ ತನ್ನ ಅನಿಸಿಕೆಯನ್ನು 'ಅಮೃತ ರಸ ಮಯ ವಿವಿಧಕಾವ್ಯ' ಎಂದು ಉಲ್ಲೇಖಿಸಿದ್ದಾನೆ–ಕವಿ.[5]

ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸಗಳಿಲ್ಲದ ಕವಿಯ ಕಾವ್ಯವು–'ಅಳಿಗಬ್ಬಿಗನ ಹೆಕ್ಕಳದ ಕೃತಿ' ಯಾಗುತ್ತದೆ. ಈ ವಿಚಾರವನ್ನು ಕುಮಾರ ವಾಲ್ಮೀಕಿಯು 'ಸೀತಾಶೂನ್ಯವಾದ ದಳನಿಳಯವು ಅಳಿಗಬ್ಬದಂತೆ ನೀರಸವಾಗಿ ತೋರಿತು' ಎಂದು ಹೋಲಿಸುವಲ್ಲಿ ಧ್ವನಿಸಿರುತ್ತಾನೆ.[6]

ಕವಿಗೆ ಶಬ್ದ ಸಂಪತ್ತು ಅನಿವಾರ್ಯವಾದ ಐಶ್ವರ್ಯ, ಆ ಸಂಪತ್ತಿನ ಕೊರತೆಯುಳ್ಳವನು 'ಶಬ್ದಾಕ್ಷರ ದರಿದ್ರನಾಗುತ್ತಾನೆ' ಅಂತಹ ಕಾವ್ಯವು 'ಬಂಧುರ ರಸ ವಿವರ್ಜಿತವಾಗುತ್ತದೆ', ಅಂತಹ ಕುಕವಿಗಳ ಹಂಗು ತನಗಿಲ್ಲ ಎಂದು ಕವಿ ಹೇಳಿಕೊಳ್ಳುತ್ತಾನೆ.[7]

ಶಬ್ದ ಜ್ಞಾನವೊಂದೇ ಮಹಾಕವಿಯ ಬಂಡವಾಳವಲ್ಲ, ಶಬ್ದದಲ್ಲಿ 'ಧ್ವನಿ' ಯನ್ನು ತುಂಬುವುದೇ ಕವಿಯ ಕಾಯಕ. ಶಬ್ದದ ವ್ಯಂಜನಾ ವೃತ್ತಿಯಿಂದಾಗಿ ಕಾವ್ಯವು ರಸಪ್ರತೀತಿಗೆ ನೆರವಾಗುತ್ತದೆ. ಕಾವ್ಯದ ಗೂಢಾರ್ಥವು ಎಂದೂ ವಾಚ್ಯವಲ್ಲ, ಸೂಚ್ಯ, ಅದು ಮೇಲಿಂದ ಮೇಲೆ ಅಸ್ಪಷ್ಟವೆನಿಸಿದರೂ, ಆದರ ಹೃದಯಶ್ರೀ ವಿಪುಲಾರ್ಥ ದಾಯಕವಾದದ್ದು. ಈ ಅಂಶಗಳ ಸೂಚನೆ, ಅಶೋಕವನದಲ್ಲಿ ಸೀತಾಮಾತೆಯು ಹನುಮಂತನಿಗೆ "ಗೂಢದರ್ಥವ ತೆಗೆಯಬಾರದ ಕಾವ್ಯದವೊಲು" ಕಾಣುತ್ತಾಳೆ[8] ಎಂಬಲ್ಲಿದೆ.

---

ತೊ. ರಾ.

| | ಕಾಂ. | ಸಂ. | ಪದ್ಯ. |
|---|---|---|---|
| 1. | ೧ | ೨ | ೨-೫ |
| 2. | ೧ | ೫ | ೪೩-೪೪ |
| 3. | ೩ | ೧೨ | ೨೬-೨೮ |
| 4. | ೬ | ೫೫ | ೫೯-೬೧ |

ತೊ. ರಾ.

| | ಕಾಂ. | ಸಂ. | ಪ. |
|---|---|---|---|
| 5. | ೧ | ೫ | ೫೪ |
| 6. | ೩ | ೧೧ | ೮ |
| 7. | ೬ | ೫೫ | ೬೮ |
| 8. | ೫ | ೩ | ೨೪ |

## ಕಾವ್ಯ ಪರಿಣಾಮ 'ಒದೆವುದಘ'

ಕುಮಾರ ವಾಲ್ಮೀಕಿಯು ಕುಮಾರ ವ್ಯಾಸನನ್ನೇ ಅನುಸರಿಸಿ[1] ತನ್ನ ಕಾವ್ಯವು :

ಸುಕವಿಗಳ ಸುಮ್ಮಾನ ಸೂರಿ
ಪ್ರಕರದಮಲಜ್ಞಾನ ಮುನಿಕರ
ಮುಕುರ ಗುಣಿಗಳ ಗೂಢ ನಿಧಿ ಸುರಸರ ಸುಧಾಶರಧಿ
ಅಕುಟಿಲರ ಮನಮೆಚ್ಚು ಸಿರಿಹರಿ
ಭಕುತರುಮ್ಮಹದಚ್ಚು ಶಿವನೇ
ವಕರ ಮೆಚ್ಚು ಕುಮಾರ ವಾಲ್ಮೀಕಿ ಪ್ರಬಂಧಕೃತಿ[2]

ಕಾವ್ಯವು ಸಾರ್ಥಕವಾಗಬೇಕಾದರೆ ಸಹೃದಯರಲ್ಲಿ ಕೆಲವು ಯೋಗ್ಯತೆಗಳಿರಬೇಕೆಂದು ಕವಿಯು ಸೂಚಿಸುತ್ತಾನೆ. ಅವರು "ಅಕುಟಿಲರೂ, ಸುರಸರೂ, ವಿವೇಕಾಶ್ರಯರೂ, ಜಾಣರೂ, ಅನಸೂಯರೂ...." ಆಗಿರಬೇಕು.[3]

ತನ್ನ ಕಾವ್ಯವು ಸುಸಂಸ್ಕೃತರಾದ ಶ್ರೋತೃಗಳ ಅಘರಾಶಿಯನ್ನು ನಾಶಮಾಡುವುದೆಂದೂ, ಇಹದಲಿ ಮುದವ ನೀಡುವುದೆಂದೂ, ಪರದೊಳಗೆ ಪರಮಪದವನ್ನೀಯುವುದೆಂದೂ[4]–ಹೇಳಿಕೊಂಡ ಕುಮಾರವಾಲ್ಮೀಕಿಯು ಕಾವ್ಯೋದ್ಯಮ ದಲ್ಲಿ ಇಹಪರಗಳೆರಡರ ಕಲ್ಯಾಣವನ್ನೂ ಕಂಡವನು.

"ನರನೊಳಗಿನ ನಾರಾಯಣನ ಅವತಾರದ ಬೆಲೆಗಳನ್ನೂ, ಮಾನವನೊಳಗಿನ ಮನುವಿನ ಉದ್ಧಾರದ ನೆಲೆ ಗಳನ್ನೂ, ಪ್ರಾತಿಭ ಚಕ್ಷುವಿನ ಜ್ಯೋತಿಯ ಬೆಳಕಿನಲ್ಲಿ ಜಗತ್ತಿನ ರಸಿಕ ದೃಷ್ಟಿಗೆ ತೋರಿಸುವ ಶ್ರವಣಮಾತ್ರದಿಂದ ಸಹೃದ ಯರ ಹೃದಯದಲ್ಲಿ ವಿದ್ಯುದ್ದೀಪಗಳ ಕಾರ್ತಿಕವನ್ನು ಹಚ್ಚಿದಂತೆ ಮಾಡುವ, ಮಂತ್ರಜಲವನ್ನು ಕಿವಿಯಿಂದೀಂಟಿಸುವ ಕಾವ್ಯ ನಮಗೆ ಬೇಕಾದ ಕಾವ್ಯ."[5] ಸಾರ್ವಕಾಲಿಕವಾದ ಈ ಕಾವ್ಯೋದ್ದೇಶವನ್ನು ಗ್ರಹಿಸಿ ಕುಮಾರ ವಾಲ್ಮೀಕಿಯು 'ರಾಮಕಥೆ' ಯನ್ನು ಹೇಳಿದವನು. ಈ ಮೂಲ ತನ್ನ ಕಾವ್ಯವು–ಏನಿಲ್ಲದಿದ್ದರೂ–'ಸಿರಿಹರಿಭಕುತರುಮ್ಮಹದಚ್ಚು' ಎನಿಸುವಲ್ಲಿ ಧನ್ಯನಾದವನು.

## ಆದಿಕವಿಯ ಶ್ರೀಮದ್‌ವಾಲ್ಮೀಕಿ ರಾಮಾಯಣ ಮತ್ತು ಕುಮಾರ ವಾಲ್ಮೀಕಿಯ ರಾಮಾಯಣ ತುಲಾಭಾರ

ಕುಮಾರ ವಾಲ್ಮೀಕಿಯ 'ಕೃತಿಪರಿಚಯ'ದ ವಿಹಂಗಮ ನೋಟದಿಂದ ಕವಿಯು ಒಬ್ಬ ರಾಮಭಕ್ತನಾಗಿ ರಾಮಾಯಣದ ದಿವ್ಯ ಕಥೆಯನ್ನು ಕನ್ನಡದಲ್ಲಿ ಸಂಗ್ರಹಿಸಿ ಹೇಳಿ ಸಾರ್ಥಕನಾದಂತೆಯೂ ತೋರುತ್ತದೆ. ಅವನ ಉದ್ದೇಶವು ಸೀಮಿತವಾಗಿದ್ದು, ಅದರ ಸಾಧನೆಯಲ್ಲಿ ಯಶಸ್ಸು ಗಳಿಸಿದ್ದಾನೆ ಎಂದ ಮೇಲೆ ಇತರ ಪ್ರಶ್ನೆಗಳಿಗೆ ಅವಕಾ ಶವೇ ಇಲ್ಲ ಎಂದೂ ಹೇಳಬಹುದಾಗುತ್ತದೆ. ಆದರೆ....

ಮಹಾಕಾವ್ಯವೊಂದನ್ನು ಕನ್ನಡಿಸಲು ಹೊರಟವನು ಇಷ್ಟರಲ್ಲಿಯೇ ತೃಪ್ತನಾದುದು ಸಮಂಜಸವೇ? ಅದ ರಿಂದ ಮೂಲಕವಿಗೆ ಅಪಚಾರವಾಗಲಾರದೇ?–ಎನ್ನುವ ಪ್ರಶ್ನೆಗಳು ಸಹೃದಯರಲ್ಲಿ ಮೂಡದೆ ಇರುವುದಿಲ್ಲ, "ಆದಿಕವಿ

1. ಕು. ವ್ಯಾ. ಭಾ. ಆದಿಪರ್ವ೧–೧೯.
2. ತೊ. ರಾ. ಬಾ. ಕಾಂಡ ೧–೧೧.
3. ಇದೇ. ೧–೧೧, ೧೨.
4. ಇದೇ. ೧–೧೫ ಮತ್ತು ಯುದ್ಧಕಾಂಡ ೫೫–೭೦.
5. ಶ್ರೀ ಅರವಿಂದರು 'Future Poetry' ಯಲ್ಲಿ. ದ. ರಾ. ಬೇಂದ್ರೆ–ನಮಗೆ ಬೇಕಾದ ಕಾವ್ಯ-ಪು.೨೧ರಲ್ಲಿ (ಸಾಹಿತ್ಯ ಮತ್ತು ವಿಮರ್ಶೆ) ಉದ್ಧೃತ.

ಕವಿರಾಜಹಂಸನೂ, ಅನಾದಿ ಕವಿಕುಲಕಮಲಮಿತ್ರನೂ, ಮಹಾದಿವೌಕಸ ಪ್ರಚುರ ಭಾಷಾಕವಿಜನೋತ್ತಂಸನೂ, ವೇದಗರ್ಭ ವರಪ್ರಸಾದಾಹ್ಲಾದಕವಿಯೂ ರಘುವರಕಥಾ ವಿಮಲೋದದಿಂದುವೂ, ಮಹಾಮುನಿಯೂ.[1] ಆದ ವಾಲ್ಮೀಕಿಯನ್ನು ವಿನಯದಿಂದಲೂ, ಭಕ್ತಿಯಿಂದಲೂ ಸ್ತುತಿಸಿ ಕಾವ್ಯ ರಚನೆಗೆ ತೊಡಗಿದ ಕುಮಾರ ವಾಲ್ಮೀಕಿಯು ಎಂದೂ ಆ ಮಹಾಕವಿಯೊಂದಿಗೆ ಸ್ಪರ್ಧೆಗೆ ನಿಂತವನಲ್ಲ, ಅಷ್ಟಲ್ಲದೆ ಆದಿಕಾವ್ಯದ ಕಥೆಯೊಂದಿಗೆ ಅದರ ಸತ್ವವನ್ನೂ ಸೌಂದರ್ಯವನ್ನೂ ಕನ್ನಡಿಸಬಲ್ಲೆ ಎಂಬ ಹೆಗ್ಗಳಿಕೆಯಾಗಲೀ, ಹೆಮ್ಮೆಯಾಗಲೀ ಅವನಿಗಿದ್ದಂತಿಲ್ಲ.

"ಶ್ರೀಮದಾಗಮಕುಲಕೆ ನಾಯಕವೂ, ಪಂಚಮ ಶ್ರುತಿಯೂ"[2] ಎನಿಸಿದ ವೇದವ್ಯಾಸಮುನಿ ವಿರಚಿತ ಮಹಾಭಾರತ ಕೃತಿಯನ್ನು ಕನ್ನಡದಲ್ಲಿ 'ತಿಳಿಯ ಹೇಳಿದ' ಕುಮಾರವ್ಯಾಸನಿಂದ ಕನ್ನಡಕ್ಕೊಂದು "ಮಹಾಕಾವ್ಯ"ವೇ ಲಬ್ಧವಾಯಿತು. ಕುಮಾರ ವಾಲ್ಮೀಕಿಯಿಂದ, ಅವನು ಕುಮಾರವ್ಯಾಸನನ್ನು ಎಷ್ಟೇ ಅನುಸರಿಸಿದರೂ, ಅನುಕರಿಸಿದರೂ ಕನ್ನಡಕ್ಕೆ ಇನ್ನೊಂದು 'ಮಹಾಕಾವ್ಯ'ವು ಲಭ್ಯವಾಗದೇ ಹೋಯಿತಲ್ಲ—ಎನ್ನುವ ಕೊರಗು ನಮ್ಮದು. ಇದು ಹೀಗೇಕಾಯಿತು ?—ಎಂದು ತುಲನಾತ್ಮಕವಾಗಿ ವಿವೇಚಿಸಹೊರಟಾಗ, ಕುಮಾರ ವಾಲ್ಮೀಕಿಯು ತನ್ನ ಭಕ್ತಿಯ ಭರದಲ್ಲಿ ಈ ಮುಂದಿನ ಅಂಶಗಳಿಗೆ ಸಾಕಷ್ಟು ಗಮನ ಹರಿಸದ್ದರಿಂದಲೇ ಹೀಗಾಗಿರಬೇಕು—ಎಂಬ ತರ್ಕ ನಮ್ಮದು. ಈ ಅಂಶಗಳಿಗೆ ಕವಿಯು ಪೂರ್ಣದೃಷ್ಟಿ ಹರಿಸಿದ್ದಿದ್ದರೆ ಕನ್ನಡಕ್ಕೆ ಮಹಾಕೃತಿಯೊಂದು ದೊರೆಯುತಿತ್ತಲ್ಲಾ—'ಗತೋದಕಕೆ ಸೇತುವೆ'—ಎಂಬಂತಹ ಆಶಾಗಣಿತ ನಮ್ಮದು. ಅದನ್ನು ಇಲ್ಲಿ ಹೇಳಬಹುದಲ್ಲವೇ ?

## ಕಥಾ ಸಂವಿಧಾನ

ಆದಿ ಕಾವ್ಯದ ಆರು ಕಾಂಡಗಳನ್ನೆ ತನ್ನ ಕೃತಿಯ ಆರು ಕಾಂಡಗಳನ್ನಾಗಿ ಮಾಡಿಕೊಂಡಿದ್ದರೂ, ತನ್ನದೇ ಆದ ಕಥಾವೈಶಿಷ್ಟ್ಯಗಳನ್ನು ಮೆರೆದ, ಈ ಕವಿಯು ಮೂಲ ಕೃತಿಯ ಸಮತೋಲಾತ್ಮಕವಾದ ಅಂಗ ಸೌಷ್ಠವದ ಕಡೆಗೆ ಗಮನ ಹರಿಸಿದಂತೆ ತೋರುವುದಿಲ್ಲ.

ಎರಡು ಕೃತಿಗಳ ಕಾಂಡ—ಪ್ರಮಾಣಗಳನ್ನು ಹೋಲಿಸಿ ನೋಡಬಹುದು :

| | ವಾಲ್ಮೀಕಿ ರಾಮಾಯಣ[3] | | ಕುಮಾರ ವಾಲ್ಮೀಕಿಯ ರಾಮಾಯಣ[4] | |
|---|---|---|---|---|
| ಕಾಂಡ | ಸರ್ಗಗಳು | ಶ್ಲೋಕಗಳು | ಸಂಧಿಗಳು | ಷಟ್ಪದಿಗಳು |
| ಬಾಲಕಾಂಡ | ೭೭ | ೨೨೫೬ | ೧೭ | ೫೯೯ |
| ಅಯೋಧ್ಯಾಕಾಂಡ | ೧೧೯ | ೪೪೧೫ | ೭ | ೨೬೩ |
| ಅರಣ್ಯಕಾಂಡ | ೭೫ | ೨೭೩೨ | ೧೨ | ೫೧೮ |
| ಕಿಷ್ಕಿಂಧಾಕಾಂಡ | ೬೭ | ೨೬೨೦ | ೧೨ | ೪೦೧ |
| ಸುಂದರಕಾಂಡ | ೬೮ | ೩೦೦೬ | ೯ | ೫೦೮ |
| ಯುದ್ಧಕಾಂಡ | ೧೩೧ | ೫೯೯೦ | ೫೫ | ೨೮೧೪ |
| ಒಟ್ಟು | ೫೩೭ | ೨೧೦೧೯ | ೧೧೨ | ೫೧೦೩ |

1. ತೊ. ರಾ. ೧-೧-೮.
2. ಕು. ವ್ಯಾ. ಭಾ. ೧-೧-೧೩.
3. ಎನ್. ರಂಗನಾಥ ಶರ್ಮ—ಬಾಲಕಾಂಡ-ಅನುಬಂಧ, ಪು. ೪೨೨ (ಗೋವಿಂದರಾಜರ ರೀತ್ಯಾ ಈ ಸಂಖ್ಯೆಗಳಿವೆ)
4. ತೊರವೆ ರಾಮಾಯಣ ಸಂಪುಟ ೧-೨. ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ.

ವಾಲ್ಮೀಕಿ ರಾಮಾಯಣದಲ್ಲಿ ಬಾಲಕಾಂಡವು ಅತಿ ಚಿಕ್ಕದು.[1] ಅಯೋಧ್ಯಾಕಾಂಡವು ಬಾಲಕಾಂಡದ ಸುಮಾರು ಎರಡರಷ್ಟು ವಿಸ್ತಾರವಾಗಿದೆ. ಈ ಕಾಂಡದಲ್ಲಿ ನಮಗೆ ದೊರೆಯುವ ಕಥೆ ದಶರಥನ ಸಂಸಾರದ ಹತ್ತುದಿನಗಳ ಕಥೆ ಮಾತ್ರ. ಆದರೆ, "ವಾಲ್ಮೀಕಿಯು ಅಯೋಧ್ಯಾಕಾಂಡದಲ್ಲಿ ಜೀವನದ ಬಯಲಾಟವನ್ನು ತೆರೆದಿರುವಷ್ಟು ವಿಸ್ತಾರವಾಗಿ ಪ್ರಪಂಚದ ಸಾಹಿತ್ಯದ ಇನ್ನಾವ ಕಾವ್ಯವೂ ತೆರೆದಿರುವಂತೆ ತೋರುವುದಿಲ್ಲ."[2]

ಕುಮಾರ ವಾಲ್ಮೀಕಿಯು ಬಾಲಕಾಂಡದ ಗಾತ್ರವನ್ನು ಹಿಗ್ಗಿಸಿ, ಅಯೋಧ್ಯಾಕಾಂಡವನ್ನು ಅನುಚಿತವಾಗಿ ಸಂಕ್ಷಿಪ್ತಗೊಳಿಸಿದ್ದಾನೆ. ವಾಲ್ಮೀಕಿರಾಮಾಯಣದಲ್ಲಿ ಅಯೋಧ್ಯಾಕಾಂಡಕ್ಕೆ ಗಾತ್ರದಲ್ಲಿ ಎರಡನೆಯ ಸ್ಥಾನವಿದ್ದರೆ, ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಅಯೋಧ್ಯಾಕಾಂಡಕ್ಕೆ ಕೊನೆಯ (೬ನೆಯ) ಸ್ಥಾನ ದೊರಕಿದೆ. ವಾಲ್ಮೀಕಿ ರಾಮಾಯಣದ ಒಟ್ಟು ಗಾತ್ರದಲ್ಲಿ ಅಯೋಧ್ಯಾಕಾಂಡವು ಶತಶಃ (ಶೇ) ೨೧ ಇದ್ದರೆ, ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಅದು ಶೇಕಡಾ ೫ ಮಾತ್ರ.

ವಾಲ್ಮೀಕಿರಾಮಾಯಣದಲ್ಲಿಲ್ಲದ 'ಸೀತಾ ಸ್ವಯಂವರ ವರ್ಣನೆ' ಯು ತೊರವೆ ರಾಮಾಯಣವನ್ನು ಉಬ್ಬಿಸಿದೆ. ಅಯೋಧ್ಯಾಕಾಂಡದಲ್ಲಿನ ಹೃದಯ ಸ್ಪರ್ಶಿಯೂ, ಲೋಕ ಸಹಜವೂ ಆದ ದಶರಥನ ಸಂಸಾರದ ಚಿತ್ರಣ, ಭರತನ ಅಸಾಧಾರಣವಾದ ವ್ಯಕ್ತಿತ್ವ ನಿರೂಪಣೆಗಳ ಕಡೆಗೆ ಕುಮಾರ ವಾಲ್ಮೀಕಿಯು ಕೊಟ್ಟ ಗಮನ ಸಾಲದು ಎನಿಸುತ್ತದೆ. ಆದಿಕಾವ್ಯದಲ್ಲಿ ೪೭ ಸರ್ಗಗಳಲ್ಲಿ ೧೪೯೨ ಶ್ಲೋಕಗಳಲ್ಲಿ[3] ಚಿತ್ರಿತವಾದ ಭರತನ ಕನಸು, ಅವನ ಪ್ರಯಾಣ, ಸಂತಾಪ, ಭರತ–ಕೈಕೆ, ಭರತ–ಕೌಸಲೆ, ಭರತ–ರಾಮ ಇವರ ಭೇಟಿ, ಸಂಭಾಷಣೆ–ಎಲ್ಲಾ ಪ್ರಸಂಗಗಳನ್ನೂ ಕುಮಾರ ವಾಲ್ಮೀಕಿಯು ಕೇವಲ ೩೫ ಷಟ್ಪದಿಗಳಲ್ಲೇ 'ವರದಿ' ಮಾಡಿ ಮುಗಿಸಿದ್ದಾನೆ.[4]

ರಾಮನ ಅಲೌಕಿಕ ಕಥೆಗೇ ಸಂಪೂರ್ಣ ಗಮನ ಹರಿಸಿ, ಉಳಿದ ಲೌಕಿಕ ಘಟನೆಗಳ ಬಗ್ಗೆ ಸಾಕಷ್ಟು ಆಸಕ್ತಿ ವಹಿಸದ್ದರಿಂದ ಕುಮಾರ ವಾಲ್ಮೀಕಿಯ ಕೃತಿಯು ಮಹಾಕಾವ್ಯವಾಗುವುದು ಸಾಧ್ಯವಾಗಲಿಲ್ಲ.

## ಯುದ್ಧಕಾಂಡದ ದೀರ್ಘತೆ

ಯುದ್ಧಕಾಂಡವನ್ನು ಬರೆಯುವಲ್ಲಿ ಕುಮಾರ ವಾಲ್ಮೀಕಿಯ ಶಕ್ತಿಯು ದುರ್ವ್ಯಯವಾದಂತೆ ತೋರುತ್ತದೆ. ಕಥಾದೃಷ್ಟಿಯಿಂದ ಅಮುಖ್ಯವೂ, ಕಾವ್ಯ ಸೌಂದರ್ಯದೃಷ್ಟಿಯಿಂದ ಅನುಚಿತವೂ, ಪುನರುಕ್ತವೂ ಆದ ಹಲವಾರು ಘಟನೆಗಳಿಂದಲೂ, ವರ್ಣನೆಗಳಿಂದಲೂ ಕಿಕ್ಕಿರಿದ ಯುದ್ಧಕಾಂಡವು ಅಯೋಧ್ಯಾಕಾಂಡದ ಸುಮಾರು ಹನ್ನೊಂದು ಮಡಿಯಷ್ಟು ಹಿಗ್ಗಿರುವುದು ಅನಗತ್ಯವಾಗಿತ್ತು. ಇದರಿಂದ, ವಾಲ್ಮೀಕಿಯ ಹಿತ–ಮಿತ ಕಾವ್ಯ–ಸೌಷ್ಠವ, ಸೌಂದರ್ಯಗಳು ಇಲ್ಲಿ ಕಾಣದಾಗಿವೆ.

## ಪಾತ್ರ ಚಿತ್ರಣ ಮತ್ತು ಜೀವನ ಸಂಕೀರ್ಣತೆಗಳ ಕಡೆಗೆ ಅಲಕ್ಷ್ಯ

ವಾಲ್ಮೀಕಿ ರಾಮಾಯಣದಲ್ಲಿ ದೊರೆಯುವ ಮಾನವೀಯ ಅಂತರಂಗದ ಚಿತ್ರಣ, ವೈವಿಧ್ಯ, ಸಂಕೀರ್ಣತೆ, ಸಂಘರ್ಷಗಳನ್ನು ತೊರವೆ ರಾಮಾಯಣದಲ್ಲಿ ನಿರೀಕ್ಷಿಸಿದರೆ ನಿರಾಶೆ ಸಹಜ. ಕುಮಾರ ವಾಲ್ಮೀಕಿಯ ಎಲ್ಲಾ ಪಾತ್ರಗಳೂ 'ದಿವ್ಯಲೀಲಾ ವಿನೋದಿ' ಯಾದ ಶ್ರೀರಾಮನ ಸೂತ್ರದಾಟದ ಗೊಂಬೆಗಳು ಮಾತ್ರ. ಅವುಗಳಿಗೆ ಪ್ರತ್ಯೇಕವಾದ ಅಸ್ತಿತ್ವವಿಲ್ಲ, ಸ್ವಾತಂತ್ರ್ಯವಿಲ್ಲ. ಇದರಿಂದಾಗಿ, ವಾಲ್ಮೀಕಿ ರಾಮಾಯಣದಲ್ಲಿನ "ಪಾಪದರ್ಶಿನಿ" ಯಾದ ಮಂಥ

---

1. ಬಾಲಕಾಂಡದ ಮೇಲೆ ಹೇಳಿದ ಪ್ರಮಾಣದಲ್ಲಿ ವಿದ್ವಾಂಸರು ಪ್ರಕ್ಷಿಪ್ತವೆಂದು ಅಭಿಪ್ರಾಯಪಡುವ ಭಾಗಗಳೂ ಸೇರಿವೆ. ಆ ಪ್ರಕ್ಷಿಪ್ತ ಭಾಗಗಳನ್ನು ತೆಗೆದರೆ ಅದರ ಗಾತ್ರ ಇನ್ನಷ್ಟು ಕಿರಿದಾಗುತ್ತದೆ.
   ಕಾಮಿಲ್ ಬುಲ್ಕೆ–ರಾಮಕಥಾ (ಹಿಂದಿ)–ಪು. ೧೨೬–೧೪೭ ನೋಡಬಹುದು.
2. ಮಾಸ್ತಿ ವೆಂಕಟೇಶ ಅಯ್ಯಂಗಾರರು–ಆದಿಕವಿ ವಾಲ್ಮೀಕಿ ಪು. ೭೬
3. ವಾ. ರಾ. ಅಯೋಧ್ಯಾಕಾಂಡ ೬೯–೧೧೫ ಸರ್ಗಗಳಲ್ಲಿ.
4. ತೊ. ರಾ. ಅಯೋಧ್ಯಾಕಾಂಡ ಸಂಧಿ ೧–೩೫ ಪದ್ಯಗಳು.

ರೆಯೂ[1] ಇಲ್ಲಿ ದಿವ್ಯಪುರುಷನ ಅವತಾರಕಾರ್ಯಕ್ಕೆ ನೆರವಾಗಲು ಬಂದ "ಮಾಯಾವತಾರಿಣಿ".[2] ಅವಳು ರಾಮನನ್ನು ರಾವಣ ವಧೆಗಾಗಿ ವನಕ್ಕೆ ಕಳುಹಿಸುವ ಉದ್ದೇಶದಿಂದಲೇ ಕೈಕೇಯಿಯನ್ನು ಪ್ರಬೋಧಿಸುತ್ತಾಳೆ.[3] ಆದಿಕಾವ್ಯದಲ್ಲಿ ದೈತ್ಯಮನೋವೃತ್ತಿಯವರಾಗಿ ಚಿತ್ರಿತರಾದ ರಾವಣ, ಕುಂಭಕರ್ಣ, ಅತಿಕಾಯ, ಇಂದ್ರಜಿತು–ಎಲ್ಲರೂ ಈ ಕೃತಿಯಲ್ಲಿ ರಾಮನಲ್ಲಿ ದಿವ್ಯತೆಯನ್ನು ಕಂಡುಕೊಂಡ ಸಫಲಜೀವಿಗಳು.

ಕೇವಲ ನಿರೂಪಣಾತ್ಮಕವಾದ 'ವರದಿ' ಯಂತಹ ಕಥನರೀತಿಯೇ ಕುಮಾರ ವಾಲ್ಮೀಕಿಯ ಕಾವ್ಯದ ಜೀವಾಳ. ಇದರಿಂದ ಪಾತ್ರಚಿತ್ರಣಕ್ಕೆ ಮಹತ್ತ್ವದ ಉಪಕರಣಗಳಾಗಿ ನೆರವಾಗುವ ಸಂಭಾಷಣೆ, ಸಂವಾದಗಳಿಗೆ ಇಲ್ಲಿ ಅವಕಾಶವೇ ಸಿಕ್ಕದ್ದೆ ಹೋಗಿದೆ. ದಿವ್ಯಾವೇಶಕ್ಕೊಳಗಾದ ಮಂಥರೆ, ವಾಲಿ, ರಾವಣ, ಮಂಡೋದರಿ–ಎಲ್ಲರೂ, 'ಒಂದೇ ರಾಗ, ಒಂದೇ ತಾಳ' ಎಂಬಂತೆ ಮಾತನಾಡುವವರೇ. ಅಂತಹ ಮಾತುಗಳಲ್ಲಿ ಅವರ ಅಂತರಂಗದ ಪದರುಗಳನ್ನು ಬಿಚ್ಚಿ ತೋರುವ 'ಸತ್ತ್ವ' ವಿಲ್ಲ. ಇದರಿಂದ, ಕುಮಾರ ವಾಲ್ಮೀಕಿಯ ಕೃತಿಯಲ್ಲಿ "ರಾಮ, ಸೀತೆ, ಲಕ್ಷ್ಮಣ.... ಎಲ್ಲರೂ ಒಂದೇ ಅಚ್ಚಿನಿಂದ ತೆಗೆದ ಮಾದರಿಗಳು."[4] ವಾಲ್ಮೀಕಿ ರಾಮಾಯಣದಲ್ಲಾದರೋ ಎಲ್ಲ ಪಾತ್ರಗಳೂ ಮಾನವ ಲೋಕಕ್ಕೆ ಸಹಜವಾದ ಸುಖ ದುಃಖಗಳನ್ನೂ, ಅನಿವಾರ್ಯವಾದ ಜೀವನ ದ್ವಂದ್ವಗಳನ್ನೂ ಎದುರಿಸುವ 'ಸ್ವಂತಿಕೆ' ಉಳ್ಳವುಗಳು. ಅಲ್ಲಿನ ಯಾವ ಪಾತ್ರಗಳಿಗೂ "ಸಂಘರ್ಷ" ತಪ್ಪಿದ್ದಲ್ಲ. "....ದಶರಥನು ಕುಲಕ್ರಮದಿಂದ ಹಿರಿಯ ಮಗನಿಗೆ ಪಟ್ಟಕಟ್ಟುವುದೂ ಧರ್ಮ, ಕೊಟ್ಟ ಭಾಷೆಯಂತೆ ಭರತನಿಗೆ ಪಟ್ಟಕಟ್ಟುವುದೂ ಧರ್ಮ, ಈ ಧರ್ಮ ಸಂಕಟದಲ್ಲಿ ಅವನು ದೇಹವನ್ನೇ ಬಿಡಬೇಕಾಯಿತು; ತಪ್ಪಿಸಿಕೊಳ್ಳಲಾಗಲಿಲ್ಲ. ಕೈಕೇಯಿಗೆ ಮಗನ ಹಿತರಕ್ಷಣೆ ಧರ್ಮ, ಪತಿಯ ಇಷ್ಟಾನುವರ್ತನೆಯೂ ಧರ್ಮ. ಒಂದನ್ನಾರಿಸಿ ಅವಳು ವೈಧವ್ಯವನ್ನು ತಂದುಕೊಂಡಳು; ಎಲ್ಲರ ನಿಂದೆಗೂ ಗುರಿಯಾದಳು. ರಾಮನು ಪಿತೃವಾಕ್ಯವನ್ನು ಪಾಲಿಸುವುದು ಧರ್ಮ, ಭರತನ ಇಷ್ಟಾರ್ಥವನ್ನು ನಡೆಸುವುದೂ ಧರ್ಮ; ಮೊದಲನೆಯದನ್ನು ಸ್ವೀಕರಿಸಿದ ರಾಮನಿಗೆ ಸೀತಾ ವಿಯೋಗಾದಿಗಳು ಬಂದವು. ಮುನಿಗಳ ರಕ್ಷಣೆ ಧರ್ಮ, ರಾಕ್ಷಸರನ್ನು ನಿಷ್ಕಾರಣವಾಗಿ ನೋಯಿಸದಿರುವುದೂ ಧರ್ಮ; ಇಲ್ಲಿಯೂ ಸೀತೆಯನ್ನು ರಾವಣನ ಕೈಯಿಂದ ಬಿಡಿಸಲು ಮುನಿಗಳೇನೂ ಬರಲಿಲ್ಲ. ವಾಲಿಯನ್ನು ಎದುರಿಸುವುದು ಧರ್ಮ; ಸುಗ್ರೀವನ ಇಚ್ಛೆಯಂತೆ ನಡೆಯುವುದೂ ಧರ್ಮ; (ಸೀತೆಯನ್ನೂ ಸ್ವೀಕರಿಸುವುದೂ ಧರ್ಮ, ಬಿಡುವುದೂ ಧರ್ಮ)–ಹೀಗೆ ರಾಮಾಯಣದಲ್ಲಿ ಪ್ರತಿಯೊಂದು ಸನ್ನಿವೇಶದಲ್ಲಿಯೂ ಎರಡು ಧರ್ಮಗಳ ಸಂಘರ್ಷ ಬರುತ್ತದೆ. ಅದೇ ಜೀವನ ತಥ್ಯವೆಂಬುದು ವಾಲ್ಮೀಕಿಗಳ ಸಿದ್ಧಾಂತವೆಂದು ಕಾಣುತ್ತದೆ."[5]

ವಾಲ್ಮೀಕಿ ರಾಮಾಯಣದಲ್ಲಿ ನಮ್ಮ ಮನ ಸೆಳೆಯುವ ದಶರಥ–ಜನಕ,[6] ದಶರಥ–ರಾಮ,[7] ರಾಮ–ಕೌಸಲೆ,[8] ದಶರಥ–ಕೈಕೇಯಿ,[9] ಲಕ್ಷ್ಮಣ–ಗುಹ,[10] ಭರತ–ಕೈಕೇಯಿ,[11] ಭರತ–ಕೌಸಲ್ಯೆ,[12]–ಇವರೊಳಗಿನ ಸಂಭಾಷಣೆಗಳ ಕಡೆಗೆ ಕುಮಾರ ವಾಲ್ಮೀಕಿ ಗಮನ ಹರಿಸಿದಂತೆ ತೋರುವುದಿಲ್ಲ.

---

1. ವಾ. ರಾ. II ೭-೧೩, ೧೬.
2. ತೊ. ರಾ. I ೮-೭೧.
3. ತೊ. ರಾ. II ೧-೨೩.
4. ಎಸ್. ವಿ. ರಂಗಣ್ಣ-ಶೈಲಿ-ಪು. ೪೧೯.
5. ಕೆ. ಕೃಷ್ಣಮೂರ್ತಿ-ಸಂಸ್ಕೃತ ಕಾವ್ಯ-ಪು. ೮೪.
6. ವಾ. ರಾ. I ೭೨-೭೩ ಸರ್ಗಗಳು.
7. ಇದೇ. II ೪. ೫-೨೮.
8. ಇದೇ. ೪. ೩೪-೪೧.
9. ಇದೇ. ೧೦-೧೪ ಸರ್ಗಗಳು.
10. ಇದೇ. ೫೧ನೇ ಸರ್ಗ.
11. ಇದೇ. ೭೩ನೇ ಸರ್ಗ.
12. ಇದೇ. ೭೫ನೇ ಸರ್ಗ.

## ಪ್ರಕೃತಿಯ ಬಗ್ಗೆ ಅಲಕ್ಷ್ಯ

ನ ರಾಜ್ಯಾದ್ಭ್ರಂಶನಂ ಭದ್ರೇ ನ ಸುಹೃದ್ಭಿರ್ವಿನಾ ಭವಃ
ಮನೋ ಮೇ ಬಾಧತೇ ದೃಷ್ಟ್ವಾ ರಮಣೀಯಮಿಮಂ ಗಿರಿಮ್[1]

"ಭದ್ರೆ, ರಮಣೀಯವಾದ ಈ ಬೆಟ್ಟವನ್ನು ನೋಡುತ್ತಿದ್ದರೆ, ರಾಜ್ಯಭ್ರಂಶವಾಗಲೀ–ನನ್ನ ಗೆಳೆಯರ ವಿರಹವಾಗಲೀ–ನನ್ನ ಮನಸ್ಸನ್ನು ಬಾಧಿಸುವುದಿಲ್ಲ...." ಎನ್ನುತ್ತಾನೆ ವಾಲ್ಮೀಕಿಯ ರಾಮ. ಅರಣ್ಯ ಜೀವನವು ರಾಮನ ಪಾಲಿಗೆ ಎಂದೂ ಒಂದು ದಂಡನೆಯಾಗಿರಲಿಲ್ಲ. ಪ್ರಕೃತಿಯ ನಿತ್ಯನೂತನವಾದ ಸೌಂದರ್ಯವು ಅವನ ಪಾಲಿಗೆ ಆನಂದದ ಅಕ್ಷಯನಿಧಿಯಾಗಿತ್ತು. ಸೀತಾವಿರಹ ಕಾಲದಲ್ಲಿ ನಿಸರ್ಗರಮಣಿಯು ರಾಮನನ್ನು ಸಂತೈಸುವುದನ್ನು ನಾವು ಕಾಣಬಹುದು.

ಶೋಕಾರ್ತಸ್ಯಾಪಿ ಮೇ ಪಂಪಾ ಶೋಭತೇ ಚಿತ್ರಕಾನನಾ
ವ್ಯವಕೀರ್ಣಾ ಬಹುವಿಧೈಃ ಪುಷ್ಪೈಃ ಶೀತೋದಕಾ ಶಿವಾ[2]

"ತಮ್ಮ, ಶೋಕಾರ್ತನಾದ ನನಗೂ ಈ ಪಂಪೆಯು ಮನೋಹರವಾಗಿ ಕಾಣುವುದು! ವಿವಿಧ ಪುಷ್ಪಗಳಿಂದ ಚಿತ್ರವರ್ಣವಾದ ವನವು ತೀರದಲ್ಲಿ ಹೇಗೆ ಶೋಭಿಸುತ್ತಿದೆ! ಕೊಳದಲ್ಲಿ ತಿಳಿಯಾದ ತಣ್ಣೀರು ತುಂಬಿದೆ"–ಎನ್ನುತ್ತಾ ಶ್ರೀರಾಮನು ನಿಸರ್ಗ ರಮಣೀಯತೆಯಲ್ಲಿ ತನ್ಮಯನಾಗುತ್ತಾನೆ.

"ರಾಮಾಯಣವು ಒಂದು ನಿಸರ್ಗಕಾವ್ಯ. ಇದರಲ್ಲಿ ನಾವು ಕಾವ್ಯ ನಾಯಕನನ್ನು ಅರಮನೆಗಿಂತಲೂ ಹೆಚ್ಚಾಗಿ ನಿಸರ್ಗದ ನಡುವೆಯೇ ಕಾಣುತ್ತೇವೆ....."[3]

ಹೀಗೆ, ವಾಲ್ಮೀಕಿಯ ಪ್ರಕೃತಿ ಪ್ರೇಮ,[4] ಮತ್ತು ಖಚಿತವಾದ ಭೌಗೋಳಿಕ ಜ್ಞಾನಗಳು[5] ಆದಿಕಾವ್ಯದ ಹಿರಿಮೆಯನ್ನು ಹೆಚ್ಚಿಸಿವೆ. ನಿಸರ್ಗವೂ ಒಂದು ಪಾತ್ರವೆಂಬಂತೆ ಚಿತ್ರಿತವಾಗಿರುವ ಆ ಮಹಾಕಾವ್ಯದ ಸೊಗಸನ್ನುಂಡು, ಕುಮಾರವಾಲ್ಮೀಕಿಯ ಕೃತಿಯನ್ನು ಕಂಡರೆ ಸಪ್ಪೆಯೆನಿಸಿದರೆ ಅಚ್ಚರಿಯಿಲ್ಲ. ಇಲ್ಲಿನ ವರ್ಣನೆಗಳೆಲ್ಲವೂ 'ಮಾಮೂಲಾಗಿ' ಕವಿ ಸಮಯಗಳಿಂದ ತುಂಬಿವೆ. ಕೆಲವೆಡೆ ಮರಗಿಡಗಳ[6] ಮತ್ತು ಪ್ರಾಣಿಪಕ್ಷಿಗಳ ಹೆಸರುಗಳ ಪಟ್ಟಿಯಿಂದಲೇ[7] ನಾವು ತೃಪ್ತಿ ತಂದುಕೊಳ್ಳಬೇಕಾಗುತ್ತದೆ.

---

1. ವಾ. ರಾ. II ೯೪-೩.
2. ಇದೇ. IV ೧-೬.
3. "The Ramayana is a Nature Poem... Bow and arrows and valour was mixed up with mountains and rivers, trus and forests, and crupers and flowers, animals and birds, seasons and the varions luminarie's sun and moon and stars, dawn and sunset. hot noon and dark midnight"—C. Kunhan Raja—Survey of Sanskrit Literature-p.72.
4. ಮನೋಜ್ಞವಾದ ವಾಲ್ಮೀಕಿಯ ಪ್ರಕೃತಿ ವರ್ಣನೆಗೆ ಕೆಲವು ಉದಾಹರಣೆಗಳು: ವಾ. ರಾ. II ಸರ್ಗ: ೫೬, ೫೬, ೭೧, ೯೩ ೧೧೪, ೧೧೯-ಗಳಲ್ಲಿವೆ.
5. ಉದಾ: ವಾ. ರಾ. ಬಾಲಕಾಂಡ ೨೪ನೇಸರ್ಗ, ಆಯೋಧ್ಯಾಕಾಂಡ ೪೯, ೭೧ನೇ ಸರ್ಗಗಳು, ಅರಣ್ಯಕಾಂಡ ೩೫ನೇ ಸರ್ಗ, ಕಿಷ್ಕಿಂಧಾಕಾಂಡ ೪೦-೪೬ಸರ್ಗಗಳು.
6. ತೊ. ರಾ. ಅರಣ್ಯಕಾಂಡ ಸಂಧಿ ೧-೬, ೧೫, ೨೬, ೨೭, ೨೯ ಪದ್ಯಗಳು.
7. ತೊ. ರಾ. ಅಯೋಧ್ಯಾಕಾಂಡ ಸಂಧಿ ೨-೨೫, ಅರಣ್ಯಕಾಂಡ ಸಂಧಿ ೩-೨೦-೩೪, ಸಂಧಿ ೩-೧೩, ೧೭ನೇ ಪದ್ಯಗಳು.

ಉದಾಹರಣೆಗಾಗಿ :

ಆದೀಪ್ತಾನಿವ ವೈದೇಹಿ ಸರ್ವತಃ ಪುಷ್ಪಿತಾನ್ನಗಾನ್
ಸ್ವೈಃ ಪುಷ್ಪೈಃ ಕಿಂಶುಕಾನ್ ಪಶ್ಯ ಮಾಲಿನಃ ಶಿಶಿರಾತ್ಯಯೇ[1]

"ವೈದೇಹಿ, ವಸಂತಕಾಲವಾದ್ದರಿಂದ ಅರಳಿ ನಿಂತಿರುವ ಈ ಮುತ್ತುಗದ ಮರಗಳನ್ನು ನೋಡು, ಬೆಂಕಿಯಿಂದ ಉರಿಯುತ್ತಿರುವಂತೆ ಕಾಣುತ್ತಿವೆ, ಮಾಲೆ ಮಾಲೆಯಾಗಿ ಹೂಬಿಟ್ಟಿವೆ........" ಎನ್ನುವಲ್ಲಿ ವಾಲ್ಮೀಕಿಯ ಸೂಕ್ಷ್ಮ ನಿರೀಕ್ಷಣೆ, ಕಲಾತ್ಮಕ ಅಭಿವ್ಯಕ್ತಿಗಳು ಚಿತ್ತಾಕರ್ಷಕವಾಗಿವೆ. ಅದೇ ಸನ್ನಿವೇಶದಲ್ಲಿ ಕುಮಾರ ವಾಲ್ಮೀಕಿಯು :

ಬೆಳುವ ಬೆಂಚಗ ಬೆಕ್ಕು ಬಕ ಮೀ
ಸ್ಬುಲಿಗ ಮಂಜುರಿಗಣ್ಣ ಶಿಖಿ ಮಡ
ಗೊಳಲೆ ಮುಖ್ಯ ವಿಹಂಗವಿವೆ ವೈದೇಹಿ ನೋಡೆಂದ.[2]

ಎಂದು ತನ್ನ ಶಬ್ದ ಸಂಗ್ರಹವನ್ನು ಮಾತ್ರ ಸೆರೆಯುತ್ತಾನೆ.

### ಅನುಚಿತವಾದ ಉತ್ಪ್ರೇಕ್ಷೆ

ರಸಭಂಗಕ್ಕೆ ಅನೌಚಿತ್ಯಕ್ಕಿಂತ ಹಿರಿದಾದ ಕಾರಣವಿಲ್ಲವಷ್ಟೆ. ಕುಮಾರ ವಾಲ್ಮೀಕಿಯು ಈ ವಿಚಾರದ ಕಡೆಗೆ ಸಾಕಷ್ಟು ಗಮನ ಹರಿಸಿದಂತೆ ತೋರುವುದಿಲ್ಲ. ಉಚಿತಾನುಚಿತ ವಿವೇಚನೆಮಾಡದೆ, ಉತ್ಪ್ರೇಕ್ಷಿಸುವ ಉದ್ವೇಗದಲ್ಲಿ ಕವಿಯು ರಸಭಂಗಕ್ಕೆ ಕಾರಣವಾಗುವ ಕೆಲವು ಅಂಶಗಳನ್ನು ವರ್ಣಿಸುವುದನ್ನು ಕಾಣಬಹುದು. ಈ ಕುರಿತು ಕೆಲವು ಉದಾಹರಣೆಗಳನ್ನು ಪರಿಶೀಲಿಸಬಹುದು :

೧. ರಾಮನು ಮಾಯಾಮೃಗವನ್ನು ಬೆನ್ನಟ್ಟುತ್ತಾ ನಗರೋಪಕಂಠ, ಹಳ್ಳಿ, ನಗರ, ಗ್ರಾಮ, ಸೀಮೆಗಳೆಲ್ಲ ವನ್ನೂ ಹಾದದ್ದಲ್ಲದೆ,

ತೊಳಲಿಸಿತು ಸೌರಾಷ್ಟ್ರದವನೀ
ತಳದೊಳಾ ಗೌಳಾವನಿಯ ಮಂ
ಡಲದೊಳಂಗ ಕಳಿಂಗ ಗುಜ್ಜರ ನಿಷಧ ಕಾಂಭೋಜ
ತುಳು ವಿದರ್ಭ ದ್ರಾವಿಡಾವನಿ
ಗಳಲಿ ಕೇರಳ ಸಿಂಧು ಮರುಕುಂ
ತಳ ವಿಷಯಂಗಳಲಿ ವಿವಿಧಾರಣ್ಯ ವೀಥಿಯಲಿ.[3]

ಎಂದು ವರ್ಣಿಸಿರುವುದರಲ್ಲಿ ಯಾವ ಔಚಿತ್ಯವೂ ತೋರುವುದಿಲ್ಲ, ಅಷ್ಟಲ್ಲದೆ ಖಚಿತವಾದ ಭೌಗೋಳಿಕ ಜ್ಞಾನದ ಅಭಾವವೂ ಇಲ್ಲಿ ಸೂಚಿತವಾಗುತ್ತದೆ.

೨. ರಾಮನ ಮುಂದೆ ಹನುಮಂತನು ತನ್ನ ಮೊದಲ ಸಂದರ್ಶನದ ಸಂದರ್ಭದಲ್ಲಿ—ವಿರೂಪಾಕ್ಷಂಗೆ ಪಡಿಯೆನೆ ಬೆಳೆದು—

ಥಳಥಳಿಸಿತಿನಬಿಂಬ ನಾಭೀ
ನಳಿನದಲಿ ನಭದಮಳತಾರಕಿ
ತೋಗಿದವು ತುದಿಮಸ್ತಕದಲುತ್ತಾನಪಾದಜನ[4]

---

1. ವಾ. ರಾ. ಅಯೋಧ್ಯಾಕಾಂಡ ೫೬-೬
2. ತೊ. ರಾ. ೩—೧-೩೨
3. ತೊ. ರಾ. ಅರಣ್ಯಕಾಂಡ ೮-೫
4. ತೊ. ರಾ. ಕಿಷ್ಕಿಂಧಾಕಾಂಡ ೧-೧೯

ಎಂಬಂತೆ ವರ್ಣಿಸುವುದು ವಾಲ್ಮೀಕಿಯಲ್ಲಿಲ್ಲದ ಅಂಶ; ಮಾತ್ರವಲ್ಲದೆ ಸಂದರ್ಭಕ್ಕೆ ಹೊಂದಿಕೊಳ್ಳದ ಹೇಳಿಕೆಯೂ ಹೌದು.

೩. ಹನುಮಂತನು ನೂರು ಯೋಜನದಗಲದ ಕಡಲನ್ನು ಲಂಘಿಸಹೊರಟವನು,

ಉಕ್ಕುವತಿಶಯವೀರರಸದೊಳ
ಸೊಕ್ಕಿನಲಿ ಲಂಕಾಪುರವನೆಡ
ಕಿಕ್ಕಿ ಹಾರಿದನತ್ತ ಮೇಲೇಳ್ನೂರು ಯೋಜನವ[1]

ಎಂದರೆ ಉಚಿತವಾದೀತೇ ?[2]

೪. ಮಾರುತಿಯು ಸಿಂಹಿಕೆಯನ್ನು ಸೀಳಿ, "ಸೀಳ್ದ ಶರೀರದೊಳಗೆಡದಭಾಗದ ಹೋಳ ದಶಶಿರನ ಊರಿಗಿಟ್ಟನು. ಮಿಕ್ಕ ಹೋಳನು ಕುಮಾರ ಜಾಂಬವ ದೇವರಿದ್ದೆಡೆಗಿಟ್ಟು ಬೊಬ್ಬಿರಿದ."[3] ಹನುಮಂತನ ಶಕ್ತಿ ಸಾಹಸಗಳನ್ನು ಹೊಗಳುವಲ್ಲಿ ಕವಿಯು ಬಹಳ ಉದಾರವೃತ್ತಿ ತಳೆದಂತಿದೆ. ಆದರೆ ಇದೇ ಹನುಮಂತನು ಕುಂಭಕರ್ಣನ ಮೂಗಿನ ಸಿಂಬಳದಲ್ಲಿ, ಸಿಕ್ಕಿ, ಒದ್ದಾಡಿ, ಹೊರಬಿದ್ದ ಕಥೆಯನ್ನು ಕೇಳುವಾಗ–ಅವನ ಬಗ್ಗೆ 'ಅಯ್ಯೋ' ಎನಿಸುವಂತಿದೆ ಕುಮಾರ ವಾಲ್ಮೀಕಿಯ ವರ್ಣನೆ.[4]

೫. ಹನುಮಂತನ ಬಾಲಕ್ಕೆ ಬಟ್ಟೆ ಸುತ್ತಿ, ಎಣ್ಣೆ ಸುರಿದು, ಕಿಚ್ಚಿಕ್ಕುವ ವರ್ಣನೆಯೂ 'ಹನುಮಂತನ ಬಾಲ'ದಂತೆಯೇ ಹಿಡಿತವಿಲ್ಲಾರಿ ಬೆಳೆಯುತ್ತಾ ಹೋಗುತ್ತದೆ. ನಗು ತರಿಸುವ ಉದ್ದೇಶದ ಈ ವರ್ಣನೆಯಲ್ಲಿ, ವೀರ ಮಾರುತಿಯ ಪಾತ್ರ ಗಾಂಭೀರ್ಯಕ್ಕೆ ಲೋಪಬಂದು, ಅವನ ವಿದೂಷಕ ಸ್ವರೂಪವೇ ಎದ್ದು ಕಾಣುವಂತಾಗಿದೆ.[5]

೬. ಸೇತುಬಂಧನಕ್ಕಾಗಿ ಅಂಗದನು ಕೈಲಾಸವನ್ನೂ, ನೀಲನು ಮೇರು ಪರ್ವತವನ್ನೂ, ಜಾಂಬವನು ಹಿಮಾಲಯವನ್ನೂ ತರುವ ಸಾಹಸ ಮಾಡಿದರೆ, ಹನುಮಂತನು 'ಬ್ರಹ್ಮ ಸೃಷ್ಟಿ'ಯನ್ನೇ ಕೀಳ–ಹೊರಡುತ್ತಾನೆ.[6] ಇಂತಹ ವರ್ಣನೆಗಳಿಂದ ಕುಮಾರ ವಾಲ್ಮೀಕಿಯು–ಸೇತುಬಂಧನದ ನೆವದಲ್ಲಿ–ಕಪಿಗಳಿಂದ ಜಗತ್ತನ್ನೇ ಅಳಿಸಹೊರಟಂತೆ ತೋರುತ್ತದೆ. ನೂರು ಯೋಜನದುದ್ದದ ಸೇತು–ನಿರ್ಮಾಣಕ್ಕೆ 'ಭರತಖಂಡದ ಎಲ್ಲ ಪರ್ವತಗಳೂ ಅಲ್ಲಿ ಬೀಳುವಂತೆಮಾಡಿ, ಪ್ರಪಂಚವನ್ನೇ 'ಪರ್ವತರಹಿತ' ಗೊಳಿಸಿದ ಕವಿಯ ಬಗ್ಗೆ ಇನ್ನೇನೆನ್ನೋಣ?

೭. ಮಹಾವೀರ ರಾವಣನನ್ನು ನೀಲನು ತನ್ನ ಬಾಲಕ್ಕೆ ಕಟ್ಟಿ ಜೋಗುಳ ಹಾಡಿ ತೂಗುವುದು[7] ದಶಕಂಠನನ್ನು ರಣರಂಗದಲ್ಲಿ ಬತ್ತಲೆಗೊಳಿಸುವುದು,[8] ಆಗ ರಾವಣನನ್ನು ಆ ಸ್ಥಿತಿಯಲ್ಲಿ ಕಂಡು ಶಚಿ, ಸರಸ್ವತಿ ಮೊದಲಾದ ಸುರನಾರಿಯರು ಮುಸುಡಿಗೆ ಮೇಲುದು ರಚಿಸಿ, ನಾಚಿ, ಮಂದಹಾಸವನ್ನು ಬೀರುವುದು,[9] ಅಂತಹ 'ದಿಗಂಬರ

---

1. ತೊ. ರಾ. ೫–೧–೨೪
2. ತೃಣಬಿಂದುವಿನ ಕಥೆಯನ್ನು ಹೇಳುವುದಕ್ಕಾಗಿಯೇ ಕವಿ ಹೀಗೆ ಹೇಳಿರಬೇಕು. ಈ ಕುರಿತು ವಿವರಣೆಗೆ–ಇದೇ ಪ್ರಬಂಧದ "ಕಥಾವೈಶಿಷ್ಟ್ಯಗಳು–ತುಲನಾತ್ಮಕ ವಿವೇಚನೆ" ಪ್ರಕರಣ ನೋಡಬಹುದು.
3. ತೊ. ರಾ. ೫ ೧-೨೨
4. ಇದೇ. ೫-೨-೪೫
5. ಸುಂದರಕಾಂಡದ ೮ನೇ ಸಂಧಿ
6. ಯುದ್ಧಕಾಂಡ ೫–೪೮–೫೯
7. ತೊ. ರಾ. ೬ ೨೨ ೧೧–೧೨
8. ಇದೇ. ೬ ೨೫ ೨೭
9. ಇದೇ. ೬ ೨೫ ೨೮

ರಾವಣ 'ನು ತನ್ನ ಅರಮನೆಯ ಬಾಗಿಲ ಭಟರಿಗೆ ತಾನೇ ರಾವಣನೆಂದು ಕುರುಹುದೋರಿ, ತಲೆತಗ್ಗಿಸಿಕೊಂಡು ಒಳಹೊಕ್ಕುದು–ಇವೆಲ್ಲಾ ಕುಮಾರ ವಾಲ್ಮೀಕಿಯ ವರ್ಣನಾ ವೈಶಿಷ್ಟ್ಯಗಳು. ವಾಲ್ಮೀಕಿಯ ರಾವಣನು ಎಂದೂ ಈ ದುಸ್ಥಿತಿಗೆ ಇಳಿಯುವುದಿಲ್ಲ. ದಶಕಂಠನನ್ನು ಮಹಾ ಸಾಹಸಿಯೆಂದು ವರ್ಣಿಸಿದ ಕುಮಾರ ವಾಲ್ಮೀಕಿಯು ಹೀಗೆಲ್ಲಾ ಏಕೆ ಚಿತ್ರಿಸಿದನೋ ಊಹಿಸುವುದು ಕಷ್ಟ. ರಾಮ ಮತ್ತು ರಾಮ ಭಟರ ಮುಂದೆ ರಾವಣಶಕ್ತಿಗೊದಗಿದ ಅಧಃಪತನದ ವರ್ಣನೆಯಿದು–ಎಂದು ತರ್ಕಿಸಬಹುದೋ ಏನೋ !

೮. 'ಧೈರ್ಯವಿದ್ದರೆ ಸೀತೆಯು ಅಗ್ನಿ ಪ್ರವೇಶ ಮಾಡಲಿ' ಎಂದು ರಾಮನೇ ಸೂಚಿಸುವುದೂ,[2] ಆಕೆ ಅಗ್ನಿಪೂತೆಯಾಗಿ ಬಂದರೂ, ತನ್ನ ವಂಶದವರು ಬಂದು ಆಕೆಯ ಚಾರಿತ್ರ್ಯದ ಬಗ್ಗೆ ಒಕ್ಕಣೆ ನೀಡಬೇಕೆಂದು ಹಟ ಹಿಡಿಯುವುದೂ[3] ಕಾವ್ಯಕ್ಕಾಗಲೀ, ಅವತಾರೀ ಪುರುಷ ರಾಮ ಪಾತ್ರಕ್ಕಾಗಲೀ ಶೋಭೆ ತರುವಂತಹುದಲ್ಲ.

ಇಂತಹ ಕಾರಣಗಳಿಂದಾಗಿ, ಕನ್ನಡದ ಕವಿ ಕುಮಾರ ವಾಲ್ಮೀಕಿಯು ಆದಿಕವಿ ವಾಲ್ಮೀಕಿಯ ಎತ್ತರವನ್ನಾಗಲೀ ಕುಮಾರ ವ್ಯಾಸನ ಹಿರಿಮೆಯನ್ನಾಗಲೀ (ತಾನು ಕುಮಾರ ವ್ಯಾಸನಿಗೆ ಸಮಾನನೆಂದು ಕುಮಾರ ವಾಲ್ಮೀಕಿಯು ಹೇಳಿಕೊಂಡರೂ[4]) ಪಡೆಯುವುದು ಸಾಧ್ಯವಾಗಲಿಲ್ಲ. ಮಹಾಕಾವ್ಯವೊಂದರ ಅನುವಾದವಾಗಲೀ, ಭಾಷಾಂತರವಾಗಲೀ ಅನುಸರಣೆಯಾಗಲೀ–ಕೇವಲ ದೈವಭಕ್ತಿಯಿಂದಲೇ, ವಸ್ತುವಿನ 'ಹಿರಿಮೆ 'ಯ ಕಾರಣದಿಂದಲೇ–ಮಹಾಕಾವ್ಯವಾಗುವುದು ಸಾಧ್ಯವಿಲ್ಲ ಎನ್ನುವುದಕ್ಕೆ ಕುಮಾರ ವಾಲ್ಮೀಕಿಯ ರಾಮಾಯಣವೇ ಉದಾಹರಣೆಯಾಗಿದೆ.

## ಕುಮಾರ ವಾಲ್ಮೀಕಿ ಗಳಿಸಿಕೊಂಡ ಸ್ಥಾನ ; ಅವನಿಗೆ ಸಲ್ಲಬೇಕಾದ ಕಾಣಿಕೆ

ಹೀಗೆ, ಮಹಾಕಾವ್ಯಗಳ ಸಾಲಿನಲ್ಲಿ ತೊರವೆ ರಾಮಾಯಣಕ್ಕೆ ಒಂದು ಸ್ಥಾನ ಸಿಗುವುದು ಅಶಕ್ಯವಾದರೂ, ಕನ್ನಡ ಜನ ಮತ್ತು ಸಾಹಿತ್ಯಗಳಿಗೆ ಕುಮಾರ ವಾಲ್ಮೀಕಿಯ ಕೊಡುಗೆಯನ್ನು ನಾವು ಮರೆಯುವಂತಿಲ್ಲ. ಅವನ ವಚೋವಿಲಾಸ ನಿರರ್ಗಳವಾಗಿದ್ದು, ಕಥೆಯನ್ನು ನೇರವಾಗಿ, ಸರಳವಾಗಿ ಹೇಳಬಲ್ಲವನಾದುದರಿಂದ, ಕುಮಾರ ವಾಲ್ಮೀಕಿಯ ರಾಮಾಯಣವು ಸಾಮಾನ್ಯ ಜನತೆಯ ದೃಷ್ಟಿಯಿಂದ ಕನ್ನಡದ ಹಿರಿಯ ಸತ್ಕೃತಿಗಳಲ್ಲಿ ಒಂದಾಗಿದೆ. ಪಂಡಿತ ಪ್ರಿಯನಲ್ಲವಾದರೂ, ಕುಮಾರ ವಾಲ್ಮೀಕಿಯು ಪಾಮರ ರಂಜಕ, ಭಕ್ತಪೋಷಕ. ತನ್ನ ಉದ್ದೇಶಕ್ಕನುಗುಣವಾದ ರೀತಿಯಲ್ಲಿ, ವಾಲ್ಮೀಕಿಯ ಕಾವ್ಯಸುಧೆಯ ರುಚಿಯನ್ನು ಕನ್ನಡದ ನಾಲಿಗೆಗೆ ಪ್ರಪ್ರಥಮವಾಗಿ ನೀಡಿದ ಧನ್ಯತೆ ಕುಮಾರ ವಾಲ್ಮೀಕಿಗೆ ಸಲ್ಲುತ್ತದೆ.[5] ತನ್ನ ಕಾವ್ಯದ ಮೂಲಕ ಸಹೃದಯರಲ್ಲಿ ಆದಿಕಾವ್ಯದ ರಸ ಸಮಾರಾಧನೆಗೆ ಪ್ರಚೋದನೆಯಿತ್ತ ಯಶಸ್ಸೂ ಕುಮಾರ ವಾಲ್ಮೀಕಿಗೇ ಸೇರಬೇಕು. ತೊರವೆ ರಾಮಾಯಣದಂತಹ ವಾಚ್ಯಾರ್ಥಪ್ರಧಾನವಾದ ಕೃತಿಗಳ ಅಭ್ಯಾಸವು, ವ್ಯಂಗ್ಯಾರ್ಥವೇ ಪ್ರಧಾನವಾಗಿ ಉಳ್ಳ ಧ್ವನಿ ಪೂರ್ಣವಾದ ಮಹಾಕಾವ್ಯಗಳ ಸೌಂದರ್ಯ ದರ್ಶನ ಮಾಡುವುದಕ್ಕೆ ಸಹಕಾರಿಯಾಗಿದೆ–ಎನ್ನುವುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು.

ತೊರವೆ ರಾಮಾಯಣವು ಗಮಕಿಗಳಿಗೆ ಪ್ರಿಯವಾದ ಗ್ರಂಥ; ತನ್ನ ಗೇಯತೆ, ಸರಳತೆ, ದೇಸಿಯ ಸತ್ತ್ವಗಳಿಂದಾಗಿ ಈ ಕೃತಿಯು ಕನ್ನಡದ ಯಕ್ಷಗಾನ ಪ್ರಸಂಗಗಳ ಕವಿಗಳಿಗೆ ಆಕರಗ್ರಂಥವಾಗಿ ಮೆರೆಯುತ್ತಿದೆ.[6] ತನ್ನ ನಂತರದ ರಾಮಕಥಾ ಸಾಹಿತ್ಯದಮೇಲೆ ತೊರವೆ ರಾಮಾಯಣವು ಒಂದಲ್ಲ, ಒಂದು ರೀತಿಯಲ್ಲಿ ಪ್ರಭಾವ ಬೀರಿದ್ದೂ ಅದರ ಹಿರಿಮೆಗೆ ಸಾಕ್ಷಿ.[7]

---

| | | ಕಾಂ. | ಸಂ. | ಪದ್ಯ. |
|---|---|---|---|---|
| 1. | ತೊ. ರಾ. | ೬ | ೨೬ | ೩ |
| 2. | ಇದೇ. | ೬ | ೫೩ | ೮೦ |
| 3. | ಇದೇ. | ೬ | ೫೩ | ೮೦ |
| 4. | ಇದೇ. | ೬ | ೫೫ | ೬೭, ೬೮ |

5. ಈ ಅಂಶದ ಸಮರ್ಥನೆಗೆ ಭಾಗ ೨, ಕುಮಾರ ವಾಲ್ಮೀಕಿಯ ಕಾವ್ಯರಚನೆಗೆ ಪ್ರೇರಣೆಗಳನ್ನು ನೋಡಿ.

6.–7. ಇದೇ ಪ್ರಬಂಧದ 'ಕೃತಿಯ ಪ್ರಭಾಮಂಡಲ' ಪ್ರಕರಣ ನೋಡಬಹುದು.

ಕುಮಾರ ವಾಲ್ಮೀಕಿಯು ಜನ ಸಾಮಾನ್ಯರ ಕವಿ. ಹೀಗೆ ಜನ ಸಾಮಾನ್ಯರ ಸಾಮಾನ್ಯ ಕವಿಯಾಗಿ, ಜೀವಂತವಾಗಿ ಉಳಿಯುವುದು ಕೂಡ ಒಂದು ವಿಶೇಷವೇ, ಗೌರವವೇ. ಮನುಷ್ಯನಿಗೆ ಆವಶ್ಯಕವಾದ ಸಾಮಾನ್ಯತೆಯು ಬಹುಕಾಲ ಬಾಳುವಂತೆ ಇದೂ ಬಹುಕಾಲ ಬಾಳುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ಇದು ಅರಸರ ಮೇಜಿಗೆ ಅರ್ಹವಾಗುವ ಆಹಾರವಾಗದಿದ್ದರೂ ಬಡವನ ಬಟ್ಟಲಿನ ದಿನ ನಿತ್ಯದ ಆಹಾರವಾಗುತ್ತದೆ.[1]–ಎನ್ನುವ ಹೇಳಿಕೆ ಸಮುಚಿತವಾದುದು.

ಅಲೌಕಿಕ ಶಕ್ತಿ ಕಡಮೆ ಇರುವ "ಸಾಹಿತ್ಯ ಕವಿಗಳಿಗಿಂತ, ನಮ್ಮ ಭಕ್ತಿಕವಿಗಳ ಸತ್ತ್ವ ಹಿರಿದು. ಕನ್ನಡಿಗರ ವೈಭವ, ಪರಾಕ್ರಮ, ಸಾಹಸಗಳನ್ನು ಎತ್ತಿಹಿಡಿದ ನಮ್ಮ ಕಲಿಕವಿಗಳು ಕಡಮೆಯವರಲ್ಲ; ಸಂಸಾರದಲ್ಲಿ ರಸಿಕತೆಯನ್ನು ಹದಕ್ಕೆ ತಂದ ಅವರ ವಾಣಿ ನಿಜವಾಗಿಯೂ ಸವಿನುಡಿಯೇ. ಆದರೂ, ತಮ್ಮ ಜೀವನವನ್ನೆ ದಿವ್ಯ ಕೃತಿಯಾಗಿ ಮಾಡಿ ಅದರ ಉಚ್ಛ್ವಾಸದಂತೆ ವಚನ –ಪದಗಳನ್ನು ಹಾಡಿದ ನಮ್ಮ ಶರಣರ, ದಾಸರ ಶಕ್ತಿ ಹೆಚ್ಚಿನದು"[2] ಇಂತಹ ದಾಸಕವಿಗಳ ಸಾಲಿಗೆ ಕುಮಾರ ವಾಲ್ಮೀಕಿಯನ್ನು ಸೇರಿಸಬಹುದೆನಿಸುತ್ತದೆ. ಪಂಡಿತರನ್ನು ಮೆಚ್ಚಿಸಿ ತಲೆದೂಗಿಸುವ ಪ್ರೌಢಿಮೆಗಿಂತಲೂ, ಸಂಸಾರಾಸಕ್ತಿಯನ್ನು ಕುದುರಿಸುವ ರಸಿಕತೆಗಿಂತಲೂ ಹೆಚ್ಚಾಗಿ, ಸಾಮಾನ್ಯರ ಹೃದಯವನ್ನರಳಿಸಿ, ಅಲ್ಲಿ ದಿವ್ಯ ಪ್ರಜ್ಞೆಯನ್ನು ಮೂಡಿಸುವ ಸರಳತೆಯೇ ಕುಮಾರ ವಾಲ್ಮೀಕಿಯ ಕಾವ್ಯಯೋಗ.

"ವಾಲ್ಮೀಕಿಯ ರಾಮಾಯಣವನ್ನು ಕನ್ನಡಕ್ಕೆ ಇಳಿಸುವುದರ ಮೂಲಕ ಕುಮಾರ ವಾಲ್ಮೀಕಿಯು ಕನ್ನಡಕ್ಕೆ ಹಿರಿದಾದ ಉಪಕಾರ ಮಾಡಿದ್ದಾನೆ....ಕನ್ನಡ ಜನಪದವನ್ನು ಸಂಸ್ಕರಿಸಲು ಈ ಕವಿಯು ಬಹಳ ಸಹಾಯ ಮಾಡಿದ್ದಾನೆ." ಕನ್ನಡ ಸಾಹಿತ್ಯಪ್ರಪಂಚದಲ್ಲಿ ಕವಿಗೆ ಸಲ್ಲಬೇಕಾದ ಕಾಣಿಕೆ ಇನ್ನೂ ಸಲ್ಲಿಸಲ್ಪಟ್ಟಿಲ್ಲ."[3]–ಎನ್ನುವ ಹೇಳಿಕೆಯಲ್ಲಿ ಯಥಾರ್ಥತೆ ತುಂಬಿದೆ. ಹೀಗಾಗಿ, ಕುಮಾರ ವಾಲ್ಮೀಕಿಯ ಕೃತಿಯಕಡೆಗೆ ವಿಮರ್ಶೆಯ ಕಿರಣಬೀರಿ, ಅದನ್ನು ಚಿಕಿತ್ಸೆಗೆ ಒಳಪಡಿಸುವುದಕ್ಕಿಂತಲೂ ಹೆಚ್ಚಾಗಿ, ಕೃತಜ್ಞತೆಯ ಕಾಣಿಕೆ ಹಿಡಿದು ವಿನಯದಿಂದ ಸಾಗುವುದು ಮೇಲು.

ಮುಂದೆ ನಡೆಸಲಾದ ಕೃತಿಯ ಪರಿಸರ, ಕವಿಯಕಾಲ, ಕಾವ್ಯಪ್ರಚೋದನೆ, ಕುಮಾರವಾಲ್ಮೀಕಿಯ ಬಹುಜ್ಞತೆ, ಸಾಮಾಜಿಕ ಪ್ರಜ್ಞೆ, ತಾತ್ತ್ವಿಕ ನಿಷ್ಠೆಗಳ ಪರಿಶೀಲನೆಯ ಮೂಲಕ, ಕನ್ನಡದ ಈ ರಾಮಾಯಣವು ಪರಂಪರೆಯ ಸತ್ತ್ವವನ್ನು ಹೀರಿಕೊಂಡು ಹೇಗೆ ಬಾಳಿಬಂದಿದೆ–ಎನ್ನುವುದರ ಪರಿಚಯ ಆದೀತು; ಅದರೊಂದಿಗೆ ಈ ಕೃತಿಯಿಂದ ಸ್ಫೂರ್ತಿ–ಪ್ರಭಾವಹೊಂದಿ ಸೃಷ್ಟಿಗೊಂಡ ಇತರ ಸಾಹಿತ್ಯ ಕೃತಿಗಳ ಸುಳಿವೂ ತಿಳಿದೀತು;–ಆಗ ಕುಮಾರ ವಾಲ್ಮೀಕಿಯ ಕಾವ್ಯದ ಚಿರಂತನತೆಯನ್ನೂ ಅದಕ್ಕೆ ಕನ್ನಡ ಸಾಹಿತ್ಯದಲ್ಲಿ ಲಭ್ಯವಾದ ಒಂದು ವಿಶಿಷ್ಟವಾದ ಸ್ಥಾನದ ಹಿನ್ನೆಲೆಯನ್ನೂ ಗುರುತಿಸುವುದು ಸಾಧ್ಯವಾದೀತು ಎನ್ನುವ ಸದಾಶಯದಿಂದ ಅಂತಹ ಪ್ರಯತ್ನವನ್ನು ಕೈಕೊಳ್ಳಲಾಗಿದೆ. ಈ ಪ್ರಯತ್ನವು ಸಫಲವಾದರೆ ಕುಮಾರ ವಾಲ್ಮೀಕಿಗೆ ಸಲ್ಲಬೇಕಾದ ಕಾಣಿಕೆಯಲ್ಲಿ ಒಂದು ಪಾಲಾದರೂ, ಯಥಾಮತಿಯಾಗಿ ಸಲ್ಲಿಸಲ್ಪಟ್ಟ ಸಮಾಧಾನಕ್ಕೆ ಈ ಲೇಖಕನು ಪಾತ್ರನಾದಾನು.

---

1. ಎಲ್. ಬಸವರಾಜು ಮತ್ತು ಎಸ್. ಬಸವಾರಾಧ್ಯ– ತೊರವೆ ರಾಮಾಯಣ ಸಂಗ್ರಹ– ಪೀಠಿಕೆ ಪು. ೨.
2. ದ. ರಾ. ಬೇಂದ್ರೆ-ಸಾಹಿತ್ಯ ಮತ್ತು ವಿಮರ್ಶೆ ಪು. ೪೧-೪೨.
3. ಸ. ಸ. ಮಾಳವಾಡ.-ಸಾಹಿತ್ಯ ಸಂಗಮ ಪು. ೫೨.

# ಅಧ್ಯಾಯ ೨

## ತೊರವೆ ರಾಮಾಯಣ ಸೃಷ್ಟಿಯ ಪರಿಸರ, ಕವಿಯ ಕಾಲ, ಸಾಹಿತ್ತ್ಯಿಕ ಪ್ರೇರಣೆ, ಪ್ರಚೋದನೆಗಳು

"ನಾವು ವಿಶಿಷ್ಟ ಪುಸ್ತಕಗಳಿಂದ ಹೊರಟು ಅವುಗಳ ಕರ್ತೃಗಳತ್ತ ಸಾಗುವಂತೆಯೇ ಅಷ್ಟೇ ಸಹಜವಾದ ಕ್ರಮದಲ್ಲಿ ಒಬ್ಬ ವಿಶಿಷ್ಟ ಲೇಖಕನಿಂದ ಹೊರಟು ಅವನ ಕಾಲ, ದೇಶಗಳತ್ತ ಸಾಗುತ್ತೇವೆ."[1] ಏಕೆಂದರೆ, ಪ್ರತಿಯೊಂದು ಸಾಹಿತ್ಯ ಕೃತಿಯೂ ತಾನು ಸೃಷ್ಟಿಗೊಂಡ ಕಾಲ, ದೇಶ, ಪರಿಸರಗಳಿಂದ ಪ್ರಭಾವಿತವಾಗದೆ, ಪ್ರತ್ಯೇಕವಾಗಿ ಉಳಿಯುವಂತಿಲ್ಲ. ಹೀಗಾಗಿ, "ಪ್ರತಿಯೊಂದು ಸಾಹಿತ್ಯ ಕೃತಿಯೂ ಐತಿಹಾಸಿಕವೇ ಆಗಿರುತ್ತದೆ."[2]

ಯಾವುದೇ ಸಾಹಿತ್ಯಕೃತಿಯ ಉದ್ದೇಶವು ಇತಿಹಾಸ ಕಥನವಲ್ಲ ; ಸಮಕಾಲೀನ ಐತಿಹಾಸಿಕ ದಾಖಲೆ, ಮಾಹಿತಿಗಳ ನೆರವಿಲ್ಲದಿದ್ದರೂ ಕಾವ್ಯವೊಂದರ ಪರಿಚಯ ಮಾಡಿಕೊಳ್ಳುವುದು ಸಾಧ್ಯವಿದೆ-ಎನ್ನುವುದೂ ಸತ್ಯವೇ. ಆದರೆ ಒಂದು ಕೃತಿಯ ಮಹತ್ತು ಯಾವ ಯಾವ ಅಂಶಗಳ ಮೇಲೆ ನಿಂತಿದೆ ಎನ್ನುವ ಕುರಿತು ಸೂಕ್ಷ್ಮವಾಗಿ ವಿಚಾರಿಸಿ, ನಿರ್ಣಯಕ್ಕೆ ಬರಬೇಕಾದ ಅಭ್ಯಾಸಿಗೆ, ಆ ಕೃತಿಯ ಪರಿಸರದ,-ಅದು ಮೂಡಿಬಂದ ಸಂದರ್ಭಗಳ, ಒತ್ತಡಗಳ ಪರಿಚಯವೂ ಅನಿವಾರ್ಯವಾಗುತ್ತದೆ. ಯಾವುದೇ ಕಾಲದ ಸಂಸ್ಕೃತಿ, ನಾಗರಿಕತೆಗಳು ಆ ಕಾಲದ ಸಾಹಿತ್ಯದ ಮೂಲಕವೂ ಅಭಿವ್ಯಕ್ತಗೊಳ್ಳುತ್ತವೆ-ಎಂಬ ಸತ್ಯವನ್ನು ಗಮನಿಸಿದರೆ, ಸಾಹಿತ್ಯ ಮತ್ತು ಇತಿಹಾಸಗಳ ಅಧ್ಯಯನವು ಪರಸ್ಪರ ಪೂರಕವಾಗಿದೆ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ. ಅಷ್ಟಲ್ಲದೆ, ಒಂದು ಕೃತಿಯನ್ನು ಇನ್ನೊಂದರ ಜತೆಗಿರಿಸಿ ತೂಗಿ ನೋಡುವ ತೌಲನಿಕ ವಿಮರ್ಶೆಗೆ ಕೃತಿಯ ಕಾಲ ನಿರ್ಣಯ ವಿಚಾರವು ಅತ್ಯಗತ್ಯವಾದ ನೆಲಗಟ್ಟನಂತೆ ಅವಿಭಾಜ್ಯವಾದ ಅಂಶವಾಗಿದೆ.

ಈ ಹಿನ್ನೆಲೆಯಲ್ಲಿ ಕುಮಾರ ವಾಲ್ಮೀಕಿಯ 'ತೊರವೆ ರಾಮಾಯಣ'ದ ಅಧ್ಯಯನದಲ್ಲಿ, ಆ ಕೃತಿಯು ಸೃಷ್ಟಿಗೊಂಡ ಕಾಲ, ಐತಿಹಾಸಿಕ, ಸಾಮಾಜಿಕ, ಸಾಹಿತ್ತ್ಯಿಕ ಪರಿಸರಗಳ ಅಭ್ಯಾಸವೂ ಒಂದು ಅಂಗವೆನಿಸುತ್ತದೆ.

ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲೆಲ್ಲೂ ತನ್ನ ನಿಜನಾಮ, ದೇಶ, ಕಾಲ, ಮತ, ಆಶ್ರಯವಿತ್ತ ರಾಜ-ಮೊದಲಾದುವುಗಳಲ್ಲಿ ಯಾವುದೊಂದನ್ನೂ ಹೇಳಿಲ್ಲ.[3] ಮಧ್ವಾಚಾರ್ಯ[4], ಆದಿಕವಿವಾಲ್ಮೀಕಿ[5] ಮತ್ತು ಕುಮಾರವ್ಯಾಸ[6]-ಇವರ ವಿನಾ ಇನ್ನಾರ ಹೆಸರನ್ನೂ ತನ್ನ ಕಾವ್ಯದಲ್ಲಿ ಉಲ್ಲೇಖಿಸಿಲ್ಲ. ಈ ಕುಮಾರ ವಾಲ್ಮೀಕಿಯನ್ನು ಸ್ಮರಿಸಿದ ಮೂವರು ಕವಿಗಳು ಮಾತ್ರ ನಮ್ಮ ಗಮನಕ್ಕೆ ಬರುತ್ತಾರೆ. ಇವರು-ಕನಕದಾಸ, ಚೆನ್ನಿಗ ಮತ್ತು ಬಬ್ಬೂರು ರಂಗ. ಇವರಲ್ಲಿ ಬಬ್ಬೂರು ರಂಗನು ಮಾತ್ರ 'ಕುಮಾರ ವಾಲ್ಮೀಕಿ' ಎಂದು ಸ್ಪಷ್ಟವಾಗಿ ಈತನ ಹೆಸರನ್ನು ಹೇಳಿದ್ದಾನೆ.

---

1. William Henry Hudson—An Introduction to the study of Literature
ಅನು : ಸಿ. ಪಿ. ಕೆ.–ಸಾಹಿತ್ಯಪ್ರವೇಶ–ಪು. ೨೭

2. Helen Gardner—'All art, including contemporary art, is historical'
ಜಿ. ಎಸ್. ಶಿವರುದ್ರಪ್ಪ–ವಿಮರ್ಶೆಯಪೂರ್ವ ಪಶ್ಚಿಮ– ಪು. ೬೩

3. ತೊ. ರಾ. ಮತ್ತು ಮೈರಾವಣಕಾಳಗಗಳೆರಡೂ ಏಕಕವಿಕೃತಗಳೆಂದು ಭಾವಿಸಿ, 'ಮೈರಾವಣಕಾಳಗ' ಕವಿಯು ತನ್ನ ಹೆಸರನ್ನು 'ನರಹರಿ' ಎಂದು ಹೇಳಿಕೊಂಡಿರುವುದನ್ನು ಆಧರಿಸಿ, ಕುಮಾರ ವಾಲ್ಮೀಕಿಯ ಹೆಸರೂ 'ನರಹರಿ' ಎಂದು ಕ. ಕ. ಚರಿತ್ರಕಾರರು ತರ್ಕಿಸಿದ್ದಾರೆ. ಆರ್. ನರಸಿಂಹಾಚಾರ್--ಕ. ಕ. ಚ. ೨-೧೪೨. ಆದರೆ ಅವೆರಡು ಕೃತಿಗಳೂ ಒಬ್ಬನದೇ ರಚನೆಗಳಲ್ಲ ಎಂದು ಇದೇ ಪ್ರಬಂಧದಲ್ಲಿ ಮುಂದೆ ವಿವೇಚಿಸಲಾಗಿದೆ.

4. ತೊ. ರಾ. I. ೧-೭

5. ತೊ. ರಾ. I. ೧-೮

6. ತೊ. ರಾ. VI. ೫೫-೬೭, ೬೮

## ಕನಕದಾಸ

ಕನಕದಾಸನು ತನ್ನ 'ಮೋಹನ ತರಂಗಿಣಿ'ಯಲ್ಲಿ

> ಉರಗಾಲಯುವೆ ಪೆಸರ್ವಡೆದನ ಮತ್ಸ್ಯೋ
> ದರಜಾತೆಯಾತ್ಮ ಸಂಭವನ
> ವರಪುರಾಣಂಗಳ ಕನ್ನಡಿಸಿದ ಕವಿ
> ವರರ ಕೊಂಡಾಡುವೆ ಮುದದಿ.[1]

ಎಂದಾಗ 'ಉರಗಾಲಯುವೆ ಪೆಸರ್ವಡೆದವನ' (ವಾಲ್ಮೀಕಿಯ) ಪುರಾಣ (ರಾಮಾಯಣ) ವನ್ನು ಕನ್ನಡಿಸಿದ ಕವಿವರನೆಂಬ ಹೇಳಿಕೆಯು ಕುಮಾರ ವಾಲ್ಮೀಕಿಗೇ ಸಂಬಂಧಿಸಿರಬೇಕೆಂದು ತರ್ಕಿಸುವುದು ಸಹಜವಾಗಿದೆ. ಕನಕದಾಸನ ಕಾಲವನ್ನು ಸುಮಾರು ಕ್ರಿ.ಶ. ೧೫೫೦ ಎಂದು ಗೊತ್ತು ಮಾಡಲಾಗಿದೆ.[2] ಈ ಕಾಲಕ್ಕೆ ಮೊದಲು ಕುಮಾರ ವಾಲ್ಮೀಕಿಯನ್ನುಳಿದು ಇತರಕವಿಗಳು ವಾಲ್ಮೀಕಿಯ ಕೃತಿಯನ್ನು ಕನ್ನಡಿಸಿಲ್ಲ ಎಂದು ನಿರ್ಧಾರವಾಗಿ ಹೇಳಲು ಅಸಾಧ್ಯ–ಎಂಬ ತರ್ಕವೂ ಇದೆ. ಕುಮಾರವ್ಯಾಸನು ತನ್ನ ಕಾವ್ಯದಲ್ಲಿ 'ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ'[3]–ಎಂದಿರುವುದು ಕುಮಾರವ್ಯಾಸನಿಗಿಂತಲೂ ಮೊದಲೇ ಹಲವು ರಾಮಾಯಣಗಳು ಕನ್ನಡದಲ್ಲಿ ಸೃಷ್ಟಿಗೊಂಡಿದ್ದುವು ಎಂಬ ಊಹೆಗೆ ಎಡೆ ಕೊಟ್ಟಿದೆ. ಅಷ್ಟಲ್ಲದೆ ರಾಮಾಯಣ 'ಉತ್ತರಕಾಂಡ' ವನ್ನು 'ಉತ್ತರರಾಮ ಕಥೆ'ಯಾಗಿ ಬರೆದ ನಾರಾಯಣಕವಿಯು[4] ವಾಲ್ಮೀಕಿ, ವೇದವ್ಯಾಸರ ನಂತರ ಕುಮಾರವ್ಯಾಸನನ್ನು ಮಾತ್ರ ಸ್ತುತಿಸಿ,[5] ಕುಮಾರ ವಾಲ್ಮೀಕಿಯನ್ನು ಸ್ಮರಿಸುವುದಿಲ್ಲವಾದ್ದರಿಂದ–ಇವನು ಪೂರ್ತಿ ಮಾಡಿರಬಹುದಾದ ಪೂರ್ವಕಾಂಡ ರಾಮಾಯಣವು ಹಿಂದಣ ಮತ್ತಾವನದೋ ಕವಿಯದಾಗಿರಬೇಕು ಎಂಬ ತರ್ಕವೂ ಇದೆ.[6]

ಆದರೆ ವಾಲ್ಮೀಕಿಯ ಆದಿಕಾವ್ಯವನ್ನು ಮೊದಲಾಗಿ ಕನ್ನಡಿಸಿ, ಜನಪ್ರಿಯನಾದ ಕವಿಯು ಕುಮಾರ ವಾಲ್ಮೀಕಿಯೇ ಎನ್ನುವುದಕ್ಕೆ ಸಾಕಷ್ಟು ಆಧಾರ, ಸಮರ್ಥನೆಗಳು ದೊರೆಯುತ್ತವೆ.[7] 'ಬ್ರಾಹ್ಮಣ ಕವಿಗಳು ಬರೆದ ರಾಮಾಯಣಗಳಲ್ಲಿ 'ತೊರವೆಯ ರಾಮಾಯಣ'ವು ಮೊದಲನೆಯದು[8] ಎಂದೂ, 'ತೊರವೆ ರಾಮಾಯಣವೇ ವಾಲ್ಮೀಕಿ ರಾಮಾಯಣದ ಎಲ್ಲ ಕಾಂಡಗಳನ್ನು ಮೊದಲನೆಯ ಸಲ ಅನುವಾದಿಸಿದ ಕನ್ನಡ ಕಾವ್ಯ'–ಎಂದೂ ಹೇಳಲಾಗಿದೆ.[9]

ಹಂಪೆಯ ಕೃಷ್ಣದೇವಾಲಯದಲ್ಲಿ ದೊರೆತ ಸು. ೧೪೧೫ನೆಯ ವರ್ಷದ ಶಾಸನದ ಪ್ರಕಾರ[10] ಮಾಧವ ಸಾಯಣರ ತಂಗಿಯ ಮಗನಾದ ಲಕ್ಷ್ಮೀಧರಾಮಾತ್ಯನು ನೀತಿ ವಾಕ್ಯಾಮೃತ, ಆನಂದ–ರಾಮಾಯಣ, ಕೃಷ್ಣಲೀಲೆ ಎಂಬ ಗ್ರಂಥ

---

1. ಕನಕದಾಸ - ಮೋಹನ ತರಂಗಿಣಿ - ೧-೧೭
2. ರಂ. ಶ್ರೀ ಮುಗಳಿ - ಕನ್ನಡ ಸಾಹಿತ್ಯ ಚರಿತ್ರೆ - ಪು. ೨೩೧. ಆರ್. ನರಸಿಂಹಾಚಾರ್ - ಕ. ಕ. ಚ. ೨-೩೩೮ ಕಟ್ಟಿ ಶೇಷಾಚಾರ್ಯ ಮತ್ತು ಕವಿ ಕನಕದಾಸರು - ಪುಟ. ೫
3. ಕುಮಾರವ್ಯಾಸ - ಕರ್ನಾಟಕ ಭಾರತ ಕಥಾಮಂಜರಿ I. ೧-೧೭.
4. ನಾರಾಯಣ ಕವಿಯ ಕಾಲ ಕ್ರಿ.ಶ. ೧೪-೧೫ನೆ ಶತಮಾನ-ಕೆ. ವೆಂಕಟರಾಯಾಚಾರ್ಯ-'ಉತ್ತರರಾಮ ಕಥೆ'-ಅರಿಕೆಗಳು–ಪುಟ. ೫
ನಾರಾಯಣ ಕವಿಯ ಕಾಲ ಕ್ರಿ.ಶ. ೧೫೩೦-ಉಗ್ರಾಣ ಮಂಗೇಶರಾವ್-ಉತ್ತರರಾಮ ಕಥೆ ೨ನೆಭಾಗ ಪುಟ. ೪.
5. ನಾರಾಯಣ ಕವಿ–ಉತ್ತರರಾಮಕಥೆ ೧-೮.
6. ಮಂ. ಅ. ದೊರೆಸ್ವಾಮಿ ಅಯ್ಯಂಗಾರ್-ಜಯಕರ್ನಾಟಕ ೧೧-೧೧. (ಲೇಖನ : ಕುಮಾರವ್ಯಾಸ)
7. ಈ ಕುರಿತು ಇದೇ ಪ್ರಕರಣದಲ್ಲಿ ಮುಂದೆ ವಿವರಣೆಗಳಿವೆ.
8. ಆರ್. ನರಸಿಂಹಾಚಾರ್-ಕ. ಕ. ಚ. ೨-೧೪೩ ಮತ್ತು ಇ. ಪಿ. ರೈಸ್-ಹಿಸ್ಟರಿ ಆಫ್ ಕಾನ್ಸೀಸ್ ಲಿಟರೇಚರ್
9. ರಂ. ಶ್ರೀ. ಮುಗಳಿ. ಕ. ಸಾ. ಚರಿತ್ರೆ ಪು. ೨೬೬
10. ದ.ಇಂಡಿಯಾ ಶಾಸನಗಳು ೪-ಸಂಖ್ಯೆ ೨೬೭. ಈ ವಿಚಾರವು ತಿ. ತಾ. ಶರ್ಮರಿಂದ ಕ. ಸಾ. ಪರಿಷತ್ಪತ್ರಿಕೆ ೧೪-೧ (ಏಪ್ರಿಲ್ ೧೯೨೯)ರಲ್ಲಿ ಉದ್ಧೃತವಾಗಿದೆ.

ಗಳನ್ನು ರಚಿಸಿರುವಂತೆ ತಿಳಿದುಬರುತ್ತದೆ. ಈ ರಾಮಾಯಣವು ಆ ಶಾಸನದ ೫೧ನೆಯ ಸಾಲಿನಲ್ಲಿ ಬಂದ ಆನಂದಾರಾಮರೆಂಬ ಕುಲಗುರುಗಳ ಅಂಕಿತದಿಂದ ಬರೆಯಲ್ಪಟ್ಟ ವಾಲ್ಮೀಕಿ ರಾಮಾಯಣವೋ, ತದ್ಭಿನ್ನವಾದ ರಾಮಾಯಣವೋ ತಿಳಿಯದು. ಇದು 'ಆನಂದರಾಮಾಯಣ'ವೇ ಆಗಿದ್ದರೆ, ಸರ್ವ ಪ್ರಸಿದ್ಧವಾದ ವಾಲ್ಮೀಕಿ ರಾಮಾಯಣವು ಕನ್ನಡದಲ್ಲಿ ಹುಟ್ಟಿದೆ, ಈತನು ಆನಂದರಾಮಾಯಣವನ್ನು ಕನ್ನಡಿಸಲಾರ ಎಂದು ತರ್ಕಿಸಿ, ಈ ಕಾಲಕ್ಕಾಗಲೇ ಕನ್ನಡದಲ್ಲಿ ವಾಲ್ಮೀಕಿ–ರಾಮಾಯಣವು ಸೃಷ್ಟಿಗೊಂಡಿರಬೇಕು ಎಂದು ಊಹಿಸುವುದಕ್ಕೆ ಅವಕಾಶವಿದೆ.[1] ಈ ಊಹೆಯು ನಿಜವಾದರೆ, ಇಷ್ಟರೊಳಗೇ ಕುಮಾರ ವಾಲ್ಮೀಕಿಯಿಂದ ಆದಿಕಾವ್ಯವು ಕನ್ನಡಿಸಲ್ಪಟ್ಟಿರಬೇಕು ಎನ್ನಬೇಕಾಗುತ್ತದೆ.

ಕುಮಾರವ್ಯಾಸ ಪೂರ್ವದಲ್ಲಿದ್ದ ಕನ್ನಡ ವಾಲ್ಮೀಕಿ ರಾಮಾಯಣದ ಕವಿಗಳ ಮತ್ತು ಕೃತಿಗಳ ಸುಳಿವು ನಮಗೆ ಇನ್ನೂ ದೊರೆಯದ್ದರಿಂದ–ಕುಮಾರವ್ಯಾಸನು ತನ್ನ ಕಾಲದಲ್ಲಿ ಪ್ರಚುರವಾಗಿದ್ದ ಜೈನ ರಾಮಾಯಣಗಳ ವಿಪುಲತೆಯನ್ನು ಗಮನಿಸಿ "ತಿಣಿಕಿದನು.... ರಾಮಾಯಣದ ಕವಿಗಳ ಭಾರದಲಿ" ಎಂದು ಹೇಳಿರಬೇಕೆಂದು ಮಾತ್ರ ನಾವು ತರ್ಕಿಸಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ, ಕನಕದಾಸನ ಕಾಲಕ್ಕೆ ಮೊದಲೇ ಸಾಕಷ್ಟು ಸಂಖ್ಯೆಯಲ್ಲಿ ವಾಲ್ಮೀಕಿ ರಾಮಾಯಣದ ಕನ್ನಡ ಅವತರಣಿಕೆಗಳು ಸೃಷ್ಟಿಯಾಗಿರಬೇಕು, ಎಂದು ಗೊತ್ತಾಗುವುದರಿಂದ, ಕನಕದಾಸನ ಸ್ತುತಿಯು[2] ಕುಮಾರ ವಾಲ್ಮೀಕಿಗೇ ಸಂಬಂಧಪಟ್ಟಿರಬಹುದೆಂದು ನಿರ್ಧರಿಸಿಕೊಂಡರೂ, ಅದು ಕುಮಾರ ವಾಲ್ಮೀಕಿಯ ಕಾಲವನ್ನು ನಿಖರವಾಗಿ ತಿಳಿಯಲು ಸಹಾಯಕವಾಗುವುದಿಲ್ಲ. ಕನ್ನಡದಲ್ಲಿ ವ್ಯಾಸಭಾರತದಂತೆ, ವಾಲ್ಮೀಕಿ ರಾಮಾಯಣವೂ ಕನಕದಾಸನ ಕಾಲಕ್ಕಾಗಲೇ ಪ್ರಸಿದ್ಧವಾಗಿತ್ತು–ಎಂಬ ನಿರ್ಣಯಕ್ಕೆ ಬರುವಲ್ಲಿ ಮಾತ್ರ ಅವನ ಹೇಳಿಕೆಯು ನಮಗೆ ನೆರವಾಗುತ್ತದೆ.

### ಚೆನ್ನಿಗ

"ಪ್ರಹ್ಲಾದ ಚರಿತ್ರೆ" ಯನ್ನು ಬರೆದ ಚೆನ್ನಿಗನು,

> ಉತ್ತಮ ಕವಿ ಕಾಳಿದಾಸ, ಭಾರತವನು
> ವಿಸ್ತರಿಸಿದ ವ್ಯಾಸರಾಯ.
> ಬತ್ತಲೇಶ್ವರ ವಾಲ್ಮೀಕಿಗಳಂಘ್ರಿಗೆ
> ಭಕ್ತಿಯಿಂದಲೇ ವಂದಿಸುವೆ–

ಎಂದಿದ್ದಾನೆ. ಇವನ ಕಾಲ ಕ್ರಿ.ಶ. ಸು. ೧೭೦೦ ಎನ್ನಲಾಗಿದೆ.[3] ಈ ಕವಿಯು ಸ್ತುತಿಸಿದ 'ವಾಲ್ಮೀಕಿ' ಎಂದರೆ "ಕುಮಾರ ವಾಲ್ಮೀಕಿ" ಎಂದೇ ಕವಿಚರಿತಕಾರರು ನಿರ್ಣಯಿಸಿದ್ದಾರೆ.[4] ಆದರೆ ಈ ನಿರ್ಣಯದಿಂದಾಗಿಯೂ ಕುಮಾರ ವಾಲ್ಮೀಕಿಯ ಕಾಲನಿರ್ಣಯಕ್ಕೆ ಸಮೀಪವರ್ತಿಯಾದ ಉಲ್ಲೇಖವು ದೊರೆತಂತಾಗುವುದಿಲ್ಲ.

### ಬಬ್ಬೂರು ರಂಗ

ಸುಮಾರು ಕ್ರಿ.ಶ. ೧೭೫೦ರ ಕಾಲದ ಬಬ್ಬೂರು ರಂಗನು[5] ತನ್ನ "ಅಂಬಿಕಾ ವಿಜಯ" ದಲ್ಲಿ, 'ಕುಮಾರವ್ಯಾಸ, ಅವನ ಬಳಿವಿಡಿದು ಶ್ರೀರಾಮಚರಿತವ ಬೆಳಗಿದ ಕುಮಾರ ವಾಲ್ಮೀಕಿ' ಇವರುಗಳನ್ನು ಸ್ತುತಿಸಿದ್ದಾನೆ.[6] ೧೮ನೇ ಶತ

1. ಮಂ. ಅ. ದೊರೆಸ್ವಾಮಿ ಅಯ್ಯಂಗಾರ್-ಕುಮಾರವ್ಯಾಸ-ಜಯಕರ್ನಾಟಕ ೧೧-೧೧
2. ಕನಕದಾಸ–ಮೋಹನ ತರಂಗಿಣಿ–೧-೧೭.
3. ಆರ್. ನರಸಿಂಹಾಚಾರ್–. ಕ. ಚ. ೨-೫೩೦.
4. ಇದೇ. ೨-೫೩೦.
5. ಇದೇ. ೩-೬೨.
6. ಬಬ್ಬೂರು ರಂಗ - ಅಂಬಿಕಾ ವಿಜಯ - ಸಂಧಿ ೧ ಪದ್ಯ ೧೭.

ಮಾನದ ಈ ಕವಿಯ ಸ್ಮರಣೆಯೂ ಕುಮಾರ ವಾಲ್ಮೀಕಿಯ ಕಾಲನಿರ್ಣಯಕ್ಕೆ ನೆರವಾಗುವುದಕ್ಕಿಂತಲೂ ಹೆಚ್ಚಾಗಿ ಅವನ ಪ್ರಸಿದ್ಧಿ ಜನಪ್ರಿಯತೆಗಳ ವ್ಯಾಪ್ತಿಯನ್ನು ತಿಳಿಯುವಲ್ಲಿ ಸಹಕಾರಿಯಾಗುತ್ತದೆ.[1]

ಮೇಲಿನ ಕವಿಗಳ ಉಲ್ಲೇಖಗಳನ್ನು ಪರಿಶೀಲಿಸಿದ ನಂತರ, ಕುಮಾರ ವಾಲ್ಮೀಕಿಯ ಕಾಲದ ಕುರಿತಾಗಿ ವಿಚಾರ ನಡೆಸಿದ ಸಂಶೋಧಕ, ವಿಮರ್ಶಕರ ಅಭಿಮತಗಳನ್ನು ಹೀಗೆ ಸಂಗ್ರಹಿಸಬಹುದು.

೧. ಆರ್. ನರಸಿಂಹಾಚಾರ್–ಕುಮಾರ ವಾಲ್ಮೀಕಿಯ ಕಾಲ ಕ್ರಿ.ಶ. ೧೫೦೦[2]

೨. ಇ. ಪಿ. ರೈಸ್–ಕುಮಾರ ವಾಲ್ಮೀಕಿಯ ಕಾಲ ಸು. ೧೫೦೦[3]

೩. ರಂ. ಶ್ರೀ. ಮುಗಳಿ–೧೬ನೇ ಶತಮಾನದೊಳಗೆ, ಕುಮಾರವ್ಯಾಸ ತರುವಾಯ, ಕುಮಾರ ವಾಲ್ಮೀಕಿಯು ಇದ್ದನೆಂದು ಸದ್ಯಕ್ಕೆ ಹೇಳಿದರೆ ಎಲ್ಲರೂ ಒಪ್ಪುವಂತಿದೆ.[4]

೪. ಎನ್. ಕೆ. ಕುಲಕರ್ಣಿ–ಕುಮಾರ ವಾಲ್ಮೀಕಿಯ ಕಾಲ ಕ್ರಿ.ಶ. ೧೫೦೦[5]

೫. ತ. ಸು. ಶಾಮರಾವ್ ಮತ್ತು ಮೋ. ರಾಜೇಶ್ವರಯ್ಯ–ಕುಮಾರವಾಲ್ಮೀಕಿಯ ಕಾಲವು ಕುಮಾರ ವ್ಯಾಸ ಮತ್ತು ಬಬ್ಬೂರು ರಂಗರ ಕಾಲಗಳ ಮಧ್ಯದ್ದು.[6]

೬. ತ. ಸು. ಶಾಮರಾವ್–ಕುಮಾರ ವಾಲ್ಮೀಕಿಯ ಕಾಲ ಸು. ೧೫೦೦[7]

೭. ಕೆ. ವೆಂಕಟರಾಮಪ್ಪ–ಕುಮಾರ ವಾಲ್ಮೀಕಿಯ ಕಾಲ ಸು. ೧೫೦೦[8]

೮. ಎನ್. ಬಸವಾರಾಧ್ಯ–"ಕ್ರಿ.ಶ. ೧೪೩೦ರಿಂದ ೧೭೬೦ರ ಅವಧಿಯಲ್ಲಿ ಕುಮಾರ ವಾಲ್ಮೀಕಿಯು ಯಾವಾಗ ಜೀವಿಸಿದ್ದನೆಂಬುದನ್ನು ಆಧಾರಗಳು ಸಿಕ್ಕುವವರೆಗೂ ನಿರ್ಧರಿಸುವುದು ಸಾಧ್ಯವಿಲ್ಲ"[9]

೯. ಕೆ. ರಾಜಾರಾಯ– ಕುಮಾರ ವಾಲ್ಮೀಕಿಯು ಸುಮಾರು ೧೫೬೦ ರಿಂದ ೧೬೦೦ ಅಥವಾ ೧೬೧೦–ಈ ಕಾಲದಲ್ಲಿ ಜೀವಿಸಿದ್ದನೆಂದು ಊಹಿಸಬಹುದಾಗಿದೆ.[10]

೧೦. ಬಿ. ಎಸ್. ಸಣ್ಣಯ್ಯ–ಕವಿಯ ಕಾಲವನ್ನು ಸು. ೧೫೮೦ ಎಂದೇ ಹೇಳಬೇಕು.[11]

೧೧. ಎಲ್. ಬಸವರಾಜು ಮತ್ತು ಎನ್. ಬಸವಾರಾಧ್ಯ - ಕವಿಯ ಕಾಲ ಕ್ರಿ.ಶ. ೧೫೦೦[12]

೧೨. ಎಸ್. ಲೀಲಾವತಿ - ಶ್ರೀ ಬಿ. ಎಸ್. ಸಣ್ಣಯ್ಯನವರು ಹೇಳಿದ ಕಾಲವನ್ನು (ಕ್ರಿ.ಶ. ೧೫೮೦) ಒಪ್ಪಬಹುದು.[13]

೧೩. ಮಂ. ಅ. ದೊರೆಸ್ವಾಮಿ ಅಯ್ಯಂಗಾರ್ - ಕುಮಾರ ವಾಲ್ಮೀಕಿಯ ಕಾಲವು ಕ್ರಿ.ಶ. ೧೩೭೫ ಎಂದೇ ಹೇಳಬೇಕಾಗುವುದು.[14]

---

1. ಇವನ ಸ್ತುತಿಯಲ್ಲಿನ 'ಕುಮಾರ ವ್ಯಾಸನ ಬಳಿವಿಡಿದು....ಬೆಳಗಿದ ಕುಮಾರ ವಾಲ್ಮೀಕಿ' ಎನ್ನುವುದು ಅಕ್ಷರಶಃ ಆ ಇಬ್ಬರು ಕವಿಗಳ ಸಮಕಾಲೀನತೆ ಮತ್ತು ಸಮಿಾಪವರ್ತಿತ್ವಗಳನ್ನು ಸೂಚಿಸುತ್ತಿರಬಹುದೆ ? ಹಾಗಿದ್ದರೆ, ನಮ್ಮ ಮುಂದಿನ ನಿರ್ಣಯಕ್ಕೆ ಇದು ಪೋಷಕವಾಗುತ್ತದೆ.
2. ಆರ್. ನರಸಿಂಹಾಚಾರ್–ಕ. ಕ. ಚ. ೨-೧೪೧.
3. ಇ. ಪಿ. ರೈಸ್, - History of Kanares Literaure ಪು. ೭೯.
4. ರಂ. ಶ್ರೀ. ಮುಗಳಿ - ಕ. ಸಾ. ಚ. ಪು. ೨೬೬.
5. ಎನ್. ಕೆ. ಕುಲಕರ್ಣಿ- ಕನ್ನಡ ಸಾಹಿತ್ಯವಾಹಿನಿ (೧೯೫೪ರ ಮುದ್ರಣ) ಪು. ೬೨.
6. ತ. ಸು. ಶಾಮರಾವ್ ಮತ್ತು ರಾಜೇಶ್ವರಯ್ಯ - ಜನಪ್ರಿಯಸಾಹಿತ್ಯ ಚರಿತ್ರೆ ಪು. ೩೫೨.
7. ತ. ಸು. ಶಾಮರಾವ್-ಕನ್ನಡ ಸಾಹಿತ್ಯ ಚರಿತ್ರೆ : ಒಂದು ಸಮಿಾಕ್ಷೆ - ಪು. ೧೫೬
8. ಕೆ. ವೆಂಕಟರಾಮಪ್ಪ - ಕನ್ನಡ ಸಾಹಿಸ್ಯ - ಪು. ೮.
9. ಎನ್. ಬಸವಾರಾಧ್ಯ - ತೊರವೆ ರಾಮಾಯಣ ಸಂಪುಟ ೧ ಪೀಠಿಕೆ ೧೨.
10. ಕೆ. ರಾಜಾರಾಯ - ತೊರವೆ ರಾಮಾಯಣದ ವಿಮರ್ಶೆ-ಕನ್ನಡಸಾಹಿತ್ಯ ಪರಿಷತ್ಪತ್ರಿಕೆ ೨೩-೨
11. ಬಿ. ಎಸ್. ಸಣ್ಣಯ್ಯ - ತೊರವೆ ರಾಮಾಯಣ ಸಂಪುಟ ೨ ಪೀಠಿಕೆ-೧೫.
12. ಎಲ್. ಬಸವರಾಜು ಮತ್ತು ಎನ್. ಬಸವಾರಾಧ್ಯ - ತೊರವೆ ರಾಮಾಯಣ ಸಂಗ್ರಹ - ಪೀಠಿಕೆ ಪು. ೨.
13. ಎಸ್ ಲೀಲಾವತಿ - ಕುಮಾರ ವಾಲ್ಮೀಕಿ-ಪ್ರತಿನಿಧಿ (ಹಾಸನದ ಪತ್ರಿಕೆ) ದೀಪಾವಳಿ ಸಂ. ೧೯೬೬ ಪು. ೫-೧೩.
14. ಮಂ. ಅ. ದೊರೆಸ್ವಾಮಿ ಅಯ್ಯಂಗಾರ್–ಕುಮಾರ ವ್ಯಾಸ–ಜಯಕರ್ನಾಟಕ ೧೧-೧೧.

14. ಕೆ. ವೆಂಕಟರಾಯಾಚಾರ್ಯ - ಕುಮಾರ ವಾಲ್ಮೀಕಿಯು ೧೩-೧೪ನೇ ಶತಕದವನೆಂದು ನಿರ್ಧರಿಸುವುದು ಸಾಧುತರವೂ, ಸಾಧಾರವೂ ಆಗಿದೆ.[1]

ಈಗ, ಕುಮಾರ ವಾಲ್ಮೀಕಿಯ ಕಾಲದ ಕುರಿತಾಗಿರುವ ಮೇಲಣ ಹೇಳಿಕೆಗಳನ್ನು ಒಂದೊಂದಾಗಿ ಪರಿಶೀಲಿಸಬಹುದು.

"ಕರ್ಣಾಟಕ ಕವಿಚರಿತಕಾರರಾದ ಆರ್. **ನರಸಿಂಹಾಚಾರ್ಯರು**-ಕುಮಾರ ವ್ಯಾಸನು ದೇವರಾಯನ ಆಳ್ವಿಕೆಯಲ್ಲಿ ದ್ದನೆಂದೂ, ಪ್ರಭುಲಿಂಗಲೀಲೆಯನ್ನು ಬರೆದ ಚಾಮರಸನ ತಂಗಿಯ ಗಂಡನೆಂದೂ ತಿಳಿಯುತ್ತದೆ ; ಈ ಇತಿಹಾಸದ ಪ್ರಕಾರ ಇವನ ಕಾಲವು ಸುಮಾರು ೧೪೩೦ ಆಗುವುದು. ಇದು ಇವನ ನಿಜವಾದ ಕಾಲವೆಂದು ತೋರುತ್ತದೆ." ಎಂದು ಕುಮಾರವ್ಯಾಸನ ಕಾಲವನ್ನು ನಿರ್ಣಯಿಸಿ ಅದರ ಆಧಾರದಮೇಲೆ ಕುಮಾರ ವಾಲ್ಮೀಕಿಯ ಕಾಲವನ್ನು ಊಹಿಸಿ ಸುಮಾರು ೧೫೦೦ ಇರಬಹುದು ಎಂದಿದ್ದಾರೆ.[2]

ಆದರೆ, ಕವಿಚರಿತಕಾರರು ಹೇಳಿದ ಕುಮಾರ ವ್ಯಾಸನೂ, ವೀರಶೈವ ಕವಿ ಚಾಮರಸನೂ ಸಂಬಂಧಿಕರು ಹಾಗೂ ಸಮಕಾಲೀನರು-ಎನ್ನುವುದು ಒಂದು 'ದಂತ ಕತೆ'ಯಲ್ಲದೆ ಮತ್ತೇನೂ ಅಲ್ಲ ಎಂಬ ಅಂಶ ಈಗ ಸರ್ವಮಾನ್ಯವಾಗಿದೆ.[3] ಆದುದರಿಂದ ಒಂದು ಕಟ್ಟುಕಥೆಯ ಆಧಾರದ ಮೇಲೆ ನಿಂತಿರುವ ಕುಮಾರವ್ಯಾಸನ ಕಾಲದ ಮೇಲೆ ಊಹಿಸಲಾದ ಕುಮಾರ ವಾಲ್ಮೀಕಿಯ ಕಾಲವನ್ನು ಸಾಧಾರವೆನ್ನಲಾಗುವುದಿಲ್ಲ.

ಕವಿಚರಿತಕಾರರು ಹೇಳಿದ ಇನ್ನೊಂದು ಅಂಶವನ್ನು ಇಲ್ಲಿ ಅಗತ್ಯವಾಗಿ ಸ್ಮರಿಸಬೇಕು. "ಕುಮಾರ ವಾಲ್ಮೀಕಿಯು ರಾಮಾಯಣವನ್ನು ಬರೆದಿದ್ದಾನೆ ; ಮೈರಾವಣಕಾಳಗವನ್ನೂ ಬರೆದಿರುವಂತೆ ತೋರುತ್ತದೆ"[4] ಮೈರಾವಣ ಕಾಳಗದಲ್ಲಿ ಬರುವ 'ವಿದ್ಯಾಶಂಕರ ಸ್ತುತಿ'[5] ಯನ್ನು ಉಲ್ಲೇಖಿಸಿ, "ಈ ಗುರುವು ಶೃಂಗೇರಿಯವನಾದ ಪಕ್ಷದಲ್ಲಿ ಕವಿಯ ಕಾಲವು ೧೪ನೆಯ ಶತಮಾನದ ಮಧ್ಯಭಾಗವಾಗುತ್ತದೆ. ಕವಿಯು ಆ ಕಾಲದವನು ಎಂದು ಕೆಲವರು ಭಾವಿಸಬಹುದು ; ಆದರೆ ಕುಮಾರ ವ್ಯಾಸನನ್ನು ಸ್ಮರಿಸುವುದರಿಂದ ಅಷ್ಟು ಹಿಂದಿನವನಲ್ಲ ಎಂದು ತಿಳಿಯಬೇಕಾಗಿದೆ."[6]

ಮೈರಾವಣಕಾಳಗದ ಕವಿ ನರಹರಿಯು ಶೃಂಗೇರಿಯ ಸುಪ್ರಸಿದ್ಧ ವಿದ್ಯಾಶಂಕರ ಗುರುವನ್ನು ಸ್ತುತಿಸಿದ್ದರೂ, ಆ ಗುರುವಿನ ಕಾಲವು ೧೨೨೮-೧೩೩೩ ವೆಂದು ಸುಸ್ಪಷ್ಟವಾಗಿದ್ದರೂ, ಕುಮಾರ ವ್ಯಾಸ-ಚಾಮರಸಸಂಬಂಧ, ಸಮಕಾಲೀನತೆಗಳನ್ನೇ ನಂಬಿ ಕವಿಚರಿತಕಾರರು ಹೀಗೆ (ಅಡಿಟಿಪ್ಪಣಿಯಲ್ಲಿ) ಬರೆದಿರುವಂತೆ ತೋರುತ್ತದೆ. ಒಂದು ಕಟ್ಟುಕಥೆಯು ಐತಿಹಾಸಿಕ ಸತ್ಯಕ್ಕೆ ಹೇಗೆ ಆತಂಕವೊಡ್ಡಬಲ್ಲುದು ಎನ್ನುವುದಕ್ಕೆ ಮೇಲಿನ ಹೇಳಿಕೆಯು ಒಂದು ಸಾಕ್ಷಿಯಾಗಿದೆ.

ಕುಮಾರ ವಾಲ್ಮೀಕಿಯ ಕಾಲನಿರ್ಣಯಕ್ಕೆ 'ಮೈರಾವಣಕಾಳಗ'ದಲ್ಲಿ ಬರುವ "ವಿದ್ಯಾಶಂಕರ ಸ್ತುತಿ"ಯು ಒಂದು ಖಚಿತವಾದ ಆಧಾರವಾಗಿದೆ ಎನ್ನುವುದನ್ನು ಮುಂದೆ ವಿವೇಚಿಸಲಾಗಿದೆ.[7]

'ತೊರವೆ'ಯು ಸೋಲಾಪುರದ ಜಿಲ್ಲೆಯಲ್ಲಿರುವ ಗ್ರಾಮ-ಎನ್ನುವ ಕವಿಚರಿತಕಾರರ ಹೇಳಿಕೆಯು[8] ಸರಿಯಾದುದಲ್ಲ, ತೊರವೆಯು ಬಿಜಾಪುರ ಜಿಲ್ಲೆಯಲ್ಲಿದೆ, ಸೋಲಾಪುರ ಜಿಲ್ಲೆಯಲ್ಲಲ್ಲ.

---

1. ಕೆ. ವೆಂಕಟರಾಯಾಚಾರ್ಯ-ಸಾಹಿತ್ಯದ ಹಿನ್ನೆಲೆ ಪು. ೪.
2. ಆರ್. ನರಸಿಂಹಾಚಾರ್ಯ. ಕ. ಕ. ಚ. ೨-೧೪೨.
3. ನಾ. ಶ್ರೀ. ರಾಜಪುರೋಹಿತ-ಕುಮಾರವ್ಯಾಸನು ಚಾಮರಸನ ಸಮಕಾಲೀನನಲ್ಲ-ಜಯಕರ್ನಾಟಕ ೧೨-೧.
   ರಂ. ಶ್ರೀ. ಮುಗಳಿ-ಕ. ಸಾ. ಚ. ಪು. ೨೩೮.
   ಕೆ. ವೆಂಕಟರಾಯಾಚಾರ್ಯ-ಸಾಹಿತ್ಯದ ಹಿನ್ನೆಲೆ ಪು. ೩೭.
4. ಆರ್. ನರಸಿಂಹಾಚಾರ್ ಕ. ಕ. ಚ. ೨-೧೪೧.
5. ನರಹರಿ ಕವಿ-ಮೈರಾವಣಕಾಳಗ ೧-೭.
6. ಆರ್. ನರಸಿಂಹಾಚಾರ್. ಕ. ಕ. ಚ. ೨-೧೪೪ರ ಅಡಿಟಿಪ್ಪಣಿ.
7. ಇದೇ ಅಧ್ಯಾಯದ (ಈ ಪ್ರಬಂಧದಲ್ಲಿ) 'ಮೈರಾವಣ ಕಾಳಗ' ಕವಿಯ ಹೇಳಿಕೆ-ಪ್ರಕರಣ ನೋಡಬಹುದು.
8. ಆರ್. ನರಸಿಂಹಾಚಾರ್- ಕ. ಕ. ಚ. ೨-೧೪೨.

## ರಂ. ಶ್ರೀ. ಮುಗಳಿ

ಕುಮಾರವ್ಯಾಸನ ಕಾಲದಬಗ್ಗೆ ಬರೆಯುತ್ತಾ ಮುಗಳಿಯವರು " ಕುಮಾರ ವಾಲ್ಮೀಕಿಯ ಕಾಲವನ್ನು ನಿರ್ಣಯಿಸಲು ಸ್ವತಂತ್ರವಾದ ಆಧಾರಗಳು ದೊರೆತಿದ್ದರೆ ಕುಮಾರವ್ಯಾಸನ ಕಾಲದ ಮೇಲಿನ ಎಲ್ಲೆಯನ್ನು ಗೊತ್ತುಪಡಿಸಲು ನೆರವಾಗುತ್ತಿತ್ತು. ಆದರೆ ಅವನ ಕಾಲವೇ ಕುಮಾರವ್ಯಾಸನ ಕಾಲವನ್ನು ಈ ವರೆಗೆ ನೆಮ್ಮಿಕೊಂಡಿದೆ[1] ಎಂದ ಮೇಲೆ, ಇತರ ಆಧಾರಗಳನ್ನು ವಿಸ್ತಾರವಾಗಿ ವಿವೇಚಿಸಿ, ಕುಮಾರವ್ಯಾಸನ ಕಾಲವನ್ನು ' ಕ್ರಿ.ಶ. ೧೫೦೦ ಎಂದು ಕೊಡಲಾಗಿದೆ ' ಎಂದಿದ್ದಾರೆ.[2] ಆದರೆ ಶ್ರೀ ಮುಗಳಿಯವರು ತಮ್ಮ ವಾದವನ್ನೇ ' ಇದಮಿತ್ಥಂ ' ಎಂದು ಸಾಧಿಸದೆ, " ಕುಮಾರವ್ಯಾಸನ ಕಾಲವು ಸು. ೧೪೦೦ ಎಂಬುದೇನೂ ಸರ್ವಸಮ್ಮತವಾಗಿಲ್ಲ. ಆದ್ದರಿಂದ, ೧೬ನೆಯ ಶತಮಾನದೊಳಗೆ–ಕುಮಾರವ್ಯಾಸನ ತರುವಾಯದಲ್ಲಿ-ಕುಮಾರ ವಾಲ್ಮೀಕಿಯು ಇದ್ದನೆಂದು ಸದ್ಯಕ್ಕೆ ಹೇಳಿದರೆ ಎಲ್ಲರೂ ಒಪ್ಪುವಂತಿದೆ ಎಂದೂ ಹೇಳಿದ್ದಾರೆ.[3] ಶ್ರೀಯುತರ ವಿಶ್ಲೇಷಣೆ ಸಾಕಷ್ಟು ಪುಷ್ಟವಾಗಿದೆ. ಆದರೆ ಅವರು ಕುಮಾರ ವಾಲ್ಮೀಕಿಗೆ ಸುಮಾರು ೨೦೦ ವರ್ಷಗಳ ಕಾಲವ್ಯಾಪ್ತಿಯನ್ನು ಗೊತ್ತುಪಡಿಸಿರುವುದರಿಂದ, ಇಕ್ಕಡೆಗಳಿಂದಲೂ ಗಡುಗಳನ್ನು ನಿರ್ಣಯಿಸಲು ಸಾಧ್ಯವಾದಲ್ಲಿ ಕಾಲವಿಚಾರದ ಈ ' ಅತಿವ್ಯಾಪ್ತಿ 'ಯನ್ನು ನಿವಾರಿಸಬಹುದು ಎನಿಸುತ್ತದೆ.

ಸರ್ವ ಶ್ರೀ ಇ. ಪಿ. ರೈಸ್, ಎನ್. ಕೆ. ಕುಲಕರ್ಣಿ, ತ. ಸು. ಶಾಮರಾವ್, ಕೆ. ವೆಂಕಟರಾಮಪ್ಪ, ಎನ್. ಬಸವಾರಾಧ್ಯ–ಇವರೆಲ್ಲರೂ ಕುಮಾರವ್ಯಾಸನ ಕಾಲ ಕ್ರಿ.ಶ. ೧೪೩೦ ಎಂಬ ನಿರ್ಣಯದಮೇಲೆ ಕುಮಾರವಾಲ್ಮೀಕಿಯ ಕಾಲವು ಕ್ರಿ.ಶ. ಸುಮಾರು ೧೫೦೦ ಎಂದವರು. ಅಥವಾ ಕ್ರಿ.ಶ. ೧೪೩೦ರಿಂದ ಬಬ್ಬೂರುರಂಗ (ಕ್ರಿ.ಶ. ೧೭೬೦)ರ ಅವಧಿಯೊಳಗೆ ಕುಮಾರ ವಾಲ್ಮೀಕಿ ಇದ್ದಿರಬೇಕು ಎಂದವರು. ಇವರು ಕುಮಾರ ವಾಲ್ಮೀಕಿಯ ಕಾಲನಿರ್ಣಯಕ್ಕೆ ಕುಮಾರವ್ಯಾಸನ ಕಾಲನಿರ್ಣಯವನ್ನೇ ಅವಲಂಬಿಸಿದವರು, ಕುಮಾರ ವಾಲ್ಮೀಕಿಗೇ ಸಂಬಂಧಿಸಿದ ಇತರ ಆಂತರಿಕ, ಬಾಹ್ಯ ಪ್ರಮಾಣಗಳ ಕಡೆಗೆ ಗಮನ ಹರಿಸಿದಂತೆ ತೋರುವುದಿಲ್ಲ.

## ಬಿ. ಎಸ್. ಸಣ್ಣಯ್ಯನವರು

" ೧೫೮೦ರಿಂದ ೧೬೨೭ರವರೆಗೆ ಆಳಿದ ಸಣ್ಣ ಇಬ್ರಾಹಿಮ ಆದಿಲ್‌ಶಹನು ತೊರವೆಯನ್ನು ಕಟ್ಟಿಸಿದ್ದಾನೆ. ಹೀಗೆಂದ ಮೇಲೆ ಕುಮಾರ ವಾಲ್ಮೀಕಿಯ ಕಾಲವು ಸುಮಾರು ಕ್ರಿ.ಶ. ೧೬೫೦ ಎಂದು ಹೇಳಬೇಕಾಗುವುದಲ್ಲವೇ ?" ಎಂದು ಕರ್ಣಾಟಕ ಕವಿಚರಿತಕಾರರು ತಮಗೆ ಬಂದ ಮಿತ್ರರೊಬ್ಬರ ಪತ್ರವನ್ನು ಉಲ್ಲೇಖಿಸಿ, " ತೊರವಿಯ ಉತ್ಪತ್ತಿ ಆ ಕಾಲದಲ್ಲಿ ಆಯಿತೆಂಬುದಕ್ಕೆ ಸರಿಯಾದ ಪ್ರಮಾಣವಿದ್ದರೆ ಕುಮಾರ ವಾಲ್ಮೀಕಿಯ ಕಾಲವನ್ನು ಈಚೆಗೆ ಹಾಕಬಹುದು "[4] ಎಂದಿದ್ದಾರಷ್ಟೆ. ಈ ಅಂಶವನ್ನು ' ತೊರವೆ ರಾಮಾಯಣ 'ದ ದ್ವಿತೀಯ ಸಂಪುಟದ ಸಂಪಾದಕರಾದ ಶ್ರೀ ಬಿ. ಎಸ್. ಸಣ್ಣಯನವರು ವಿವೇಚಿಸುತ್ತಾ " ಇವರು ಹೇಳುವ ಸಣ್ಣ ಇಬ್ರಾಹಿಮ ಆದಿಲ್‌ಷಹನು ೧೫೫೭–೧೫೭೯ ರವರೆಗೆ ಆಳಿದ ೧ನೇ ಆದಿಲ್‌ಷಹನೇ ಆಗಿರಬೇಕು, ಇವನು ತೊರವೆಯನ್ನು ಕಟ್ಟಿಸಿದುದಕ್ಕೆ ಕೆಲವು ಆಧಾರಗಳು ಸಿಕ್ಕುತ್ತವೆ" ಎಂದು[5] ವಿವರಿಸುತ್ತಾ, ' ೧ನೇ ಆಲಿ ಆದಿಲ್‌ಷಹನು ಈಗಿನ ' ತೊರವೆ 'ಯ ಪ್ರದೇಶದಿಂದ ನೀರನ್ನೊಯ್ಯುವ ವ್ಯವಸ್ಥೆ ಮಾಡಿದ್ದರಿಂದ ಈ ಊರಿಗೆ ತೊರೆಬಾಯ್–ತೊರೆವಾಯ್–ತೊರವಿ–ತೊರವೆ ಎಂದು ಆಗಿರಬಹುದು '[6]– ಎಂದು ಊಹಿಸುತ್ತಾರೆ.

---

1. ರಂ. ಶ್ರೀ. ಮುಗಳಿ–ಕ. ಸಾ. ಚ. ಪು. ೨೩೬.
2. ಇದೇ. ಪು. ೨೪೯.
3. ಇದೇ. ಪು. ೨೬೬.
4. ಆರ್. ನರಸಿಂಹಾಚಾರ್-ಕ. ಕ. ಚ. ೩-೩೮೦.
5. ಬಿ. ಎಸ್. ಸಣ್ಣಯ್ಯ–ತೊರವೆ ರಾಮಾಯಣ–ದ್ವಿತೀಯಸಂಪುಟ (ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ) ಪೀಠಿಕೆ ಪು. ೧೨.
7. ಇದೇ. ಪೀಠಿಕೆ ಪು. ೧೩.

## ತೊರವೆಯು ಅರ್ವಾಚೀನ ಕ್ಷೇತ್ರವಲ್ಲ

ಶ್ರೀ ಸಣ್ಣಯ್ಯನವರು ನೀಡಿದ ತೊರವೆ ಎಂಬ ಹೆಸರಿನ ಉತ್ಪತ್ತಿ ಮತ್ತು ಕಾಲಗಳ ಅಂಶವು ವಾಸ್ತವವಲ್ಲ ಎಂದು ಸಾಧಾರವಾಗಿ ಸಾಧಿಸಬಹುದಾಗುತ್ತದೆ. ಆದಿಲ್‌ಷಹನು ೧೬ನೇ ಶತಮಾನದಲ್ಲಿ ಏರ್ಪಡಿಸಿದ ನೀರು ಸರಬರಾಜು ವ್ಯವಸ್ಥೆಗಿಂತಲೂ ಬಹಳ ಹಿಂದೆಯೇ[1] ಆ ಊರು ‘ತೊರವೆ’ ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿತ್ತು ಎನ್ನುವುದಕ್ಕೆ ಸಾಕಷ್ಟು ಪ್ರಮಾಣಗಳಿವೆ.

## ತೊರವೆಯ ಪ್ರಾಚೀನತೆ

ತೊರವೆಯು ವಿಜಾಪುರದ ಪಶ್ಚಿಮಕ್ಕೆ ನಾಲ್ಕು ಮೈಲಿನ ಮೇಲೆ, ವಿಜಾಪುರದ ಭರಭರಿಯ ವೈಭವ ಕಾಲದಲ್ಲಿ ಆ ಪಟ್ಟಣದ ಭಾಗವೆನಿಸುತ್ತಿತ್ತು. ತೊರವಿಯಲ್ಲಿ ಹತ್ತೆಂಟು ಅರ್ವಾಚೀನ–ಕಾಲದ ಗುಡಿಗಳಿರುತ್ತವೆ. ಅವುಗಳಲ್ಲಿ ನರಸಿಂಹನ ಗುಡಿಯು ಜಾಗೃತಸ್ಥಾನವೆಂದು ಎಣಿಸಲ್ಪಟ್ಟದೆ. ನರಸಿಂಹನ ಗುಡಿಯನ್ನು ಇಟ್ಟಂಗಿಗಳಿಂದ ಚಚ್ಚೌಕವಾಗಿ ಕಟ್ಟಿದ್ದಾರೆ.’[2] ಈ ಹೇಳಿಕೆಯನ್ನು ಆಧರಿಸಿ, ನರಸಿಂಹನ ಗುಡಿಯು ಇಟ್ಟಂಗಿಗಳಿಂದ ಕಟ್ಟಿಸಿರುವುದರಿಂದ ಅದು ಇತ್ತೀಚಿನ ರಚನೆಯಾಗಿರಬೇಕು ಎಂದು ಶ್ರೀ ಸಣ್ಣಯ್ಯನವರು ತರ್ಕಿಸಿದ್ದಾರೆ.[3]

ತೊರವೆಯ ನರಸಿಂಹ ದೇವಾಲಯದ ಪ್ರಕೃತ ಕಮಾನುಗಳಿರುವ ಮುಂದಿನ ಭಾಗದ ಛಾವಣಿ (ಮೇಲ್ಭಾಗ) ಮಾತ್ರ ಇಟ್ಟಿಗೆಗಳಿಂದ (ಪುನಾ) ರಚಿತವಾಗಿರುತ್ತದೆ. ಈ ಲೇಖಕನೇ ಸ್ವತಃ ತೊರವೆಗೆ ಹೋಗಿ ದೇವಾಲಯವನ್ನು ಕಂಡುಬಂದವನಿದ್ದಾನೆ. ನರಸಿಂಹ ದೇವಾಲಯವು ಕಾಲಾಂತರದಲ್ಲಿ ಸ್ಥಳಾಂತರ, ರೂಪಾಂತರ ಮತ್ತು ಪುನಾ ರಚನೆಗಳಿಗೆ ಒಳಗಾಗಿರಬೇಕೆಂಬುದು ಪರಿಶೀಲನೆಯಿಂದಲೂ, ಕ್ಷೇತ್ರಮಹಿಮೆಯನ್ನು ತಿಳಿಸುವ ಪುಸ್ತಿಕೆಯಿಂದಲೂ,[4] ನರಸಿಂಹ ದೇವರ ಪ್ರಾಚೀನತೆಯನ್ನು ಸಾರಿ ಹೇಳುವ ಇತರ ಪ್ರಮಾಣಗಳಿಂದಲೂ[5] ಸ್ಪಷ್ಟವಾಗುತ್ತದೆ.

## ಕ್ರಿ ಶ. ೧೨ನೆಯ ಶತಮಾನದಲ್ಲೇ ಪ್ರಸಿದ್ಧವಾಗಿದ್ದ ನರಸಿಂಹ ಕ್ಷೇತ್ರ

ದೇವಗಿರಿಯ ಸೇವುಣ (ಯಾದವ) ರಾಜರಲ್ಲೊಬ್ಬನಾದ ಜೈತುಗಿಯ (೧೧೯೨-೧೨೦೦) ಕಾಲದಲ್ಲಿ ಆ ಭಾಗದಲ್ಲಿ ನರಸಿಂಹ ದೇವಾಲಯಗಳು ಪ್ರಸಿದ್ಧವಾಗಿದ್ದವು, ರಾಜಾಶ್ರಯ ಹೊಂದಿದ್ದವು.[6] ಜೈತುಗಿಯ ಮಗನಾದ ಸಿಂಘಣನು (೧೨೦೦-೧೨೪೭) ಸಿಂಹಣನೆಂದೂ ಕರೆಯಲ್ಪಡುತ್ತಿದ್ದು, ಅವನು ದೇವಿ ‘ನಾರಸಿಂಹಿ’ಯ ವರಪ್ರಸಾದದಿಂದ ಜನಿಸಿದುದಾಗಿಯೂ ಹೇಳಲಾಗಿದೆ.[7] ಈ ಸಿಂಘಣನು ನರಸಿಂಹ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳಿಗೆ ದತ್ತಿಗಳನ್ನು ಬಿಟ್ಟಿದ್ದನು.[8] ಸೇವುಣರ ಕಾಲದ ಶಾಸನಗಳಲ್ಲಿ ಶ್ರೀ ನಾರಸಿಂಹ ಪಾದೋದಕ ಸಂಪೂತ,[9] ನೃಹರಿ ಚರಣಭಕ್ತ[10] ಎಂಬ ವಿಶೇಷಣಗಳು ದೊರೆಯುತ್ತವೆ ; ಈ ದೇವಗಿರಿಯ ರಾಜರ ಇಷ್ಟದೇವತೆಯಾಗಿ ಮೆರೆಯುತ್ತಿದ್ದ

---

1. ಆದಿಲ್‌ಷಾಹಿಯ ನೀರುಸರಬರಾಜು ವ್ಯವಸೆಯಿಂದಾಗಿ ಆ ಊರಿಗೆ ‘ತೊರವೆ’ ಎಂಬ ಹೆಸರು ಹೊಸದಾಗಿ ಬಂದಿದ್ದರೆ, ಆ ಊರಿಗೆ ಆ ಮೊದಲು ಯಾವ ಹೆಸರಿತ್ತು-ಎನ್ನುವ ಪ್ರಶ್ನೆಗೆ ಉತ್ತರ ಹುಡುಕುವ ಗೋಜಿಗೆ ಶ್ರೀ ಸಣ್ಣಯ್ಯನವರು ಹೋದಂತಿಲ್ಲ.
2. ಮುಂಬೈ ಗಜೆಟಿಯರ್ ೧೮೮೪-ಪುಟ. ೫೫೭
   ಶ್ರೀ ಸಣ್ಣಯ್ಯನವರಿಂದ ತೊ. ರಾ. ಪೀಠಿಕೆ ಪು. ೧೨ರಲ್ಲಿ ಉದ್ಧೃತ.
3. ಬಿ. ಎಸ್. ಸಣ್ಣಯ್ಯ-ತೊ. ರಾ. ಪೀಠಿಕೆ. ಪು. ೧೨.
4. ತ್ಯರಿತಾಲಯ (ತೊರವಿ) ಕ್ಷೇತ್ರಮಹಿಮೆ–ಪು. ೫.
5. ಈ ಮುಂದೆ ಉಲ್ಲೇಖಿಸಲಾಗುವ ಶಾಸನಗಳು
6. A. V. Narasimhamurthi-The Sevunas of Devagiri-p. 81.
7. Epigraphia Indica-vol. XXVII. p. 208.
8. A. V. N-The Sevunas of Devagiri p. 102.
9. Karnataka Inscriptions-No. ೪೨ನೇ. ಕ್ರಿ.ಶ. ೧೨೪೯ರ ಶಾಸನ-ಸಾಲು. ೨೮
10. ,, ,, ,, ಸಾಲು. ೭೧

ನರಸಿಂಹನು ಬೇರಾವ ನರಸಿಂಹನೂ ಆಗಿರದೆ ಬಿಜಾಪುರದ ನರಸಿಂಹನೇ ಆಗಿದ್ದನು.[1] ಇಂದಿನ ಬಿಜಾಪುರದಲ್ಲಿ ಇನ್ನಾವ ನರಸಿಂಹ ದೇವಾಲಯವೂ ಪ್ರಾಚೀನವೂ, ಪ್ರಸಿದ್ಧವೂ ಆಗಿರದೆ ತೊರವೆಯ ನರಹರಿಯ ದೇವಾಲಯವೇ ದೇವಗಿರಿಯ ಸೇವುಣರಾಜರ ಕಾಲದಿಂದಲೂ ಜಾಗ್ರತ ಸ್ಥಾನವಾಗಿ ಶೋಭಿಸುತ್ತಿದೆ ಎನ್ನಬೇಕಾಗುತ್ತದೆ. ಹಿಂದೆ ಬಿಜಾಪುರ ಮತ್ತು ಇಂದಿನ ತೊರವಿಗಳು ಒಂದೇ ನಗರದ ಭಾಗಗಳಾಗಿದ್ದವೆಂದು ಇತಿಹಾಸ ಮತ್ತು ಸ್ಥಳ ಪರಿಶೀಲನೆಗಳಿಂದ ತಿಳಿಯುತ್ತದೆ. ಇದರಿಂದ ಸೇವುಣ ರಾಜರಿಂದ ದತ್ತಿ ಪಡೆದ ನರಸಿಂಹನೆಂದರೆ-ಪ್ರಕೃತದ ತೊರವೆಯ ನರಸಿಂಹನೇ ಆಗಿರಬೇಕು ಎನ್ನುವುದರಲ್ಲಿ ಸಂದೇಹವಿಲ್ಲ.[2]

ದೇವಗಿರಿಯ ರಾಜರಿಂದ ನರಹರಿಯು ದತ್ತಿ ಪಡೆದುದರಿಂದಲೇ, ನರಹರಿಯ ಭಕ್ತನಾದ ಕುಮಾರ ವಾಲ್ಮೀಕಿಯು ತನ್ನ ಕೃತಿಯಾದ ' ತೊರವೆ ರಾಮಾಯಣ 'ದಲ್ಲಿ ನಾಲ್ಕಾರು ಕಡೆ ಸೇವುಣ, ಸಿಂಘಣರನ್ನು–ತನ್ನ ಶ್ರೀರಾಮಕಥೆಗೆ ಯಾವುದೇ ಸಂಬಂಧವಿಲ್ಲವಾದರೂ–ಉಲ್ಲೇಖಿಸಿದ್ದಾನೆ[3] ಎಂದು ನಿರ್ಣಯಿಸುವುದು ಉಚಿತವೆನಿಸುತ್ತದೆ.

ಹೀಗೆ, ಕ್ರಿ.ಶ. ೧೨–೧೩ನೇ ಕಾಲಕ್ಕಾಗಲೇ ತೊರವೆಯ (ಬಿಜಾಪುರದ) ನರಹರಿಯ ದೇವಾಲಯವು ರಾಜಾಶ್ರಯವನ್ನು ಪಡೆದ ಪ್ರಸಿದ್ಧ ಕ್ಷೇತ್ರವಾಗಿತ್ತು.

ಇದಕ್ಕೆ ಪೂರಕವಾಗಿ, ಇನ್ನೂ ಕೆಲವು ಶಾಸನಾಧಾರಗಳನ್ನು ಕೊಡಬಹುದು :

೧. ದಕ್ಷಿಣ ವಾರಣಾಸಿಯೆಂದು ಕೀರ್ತಿತವಾದ ವಿಜಯಪುರದ ನರಸಿಂಹನಿಗೆ–ಮಹಾಪಸಾಯಿತ, ಸಂಮುಖಾಧಿಕಾರಿ ವಿಂಚುಪಡಿವರಸನು–ಮೂರು ನಾಡುಗಳಿಗೆ ತಿಕ್ಕರಸನು ಸರ್ವಾಧಿಕಾರಿಯಾಗಿದ್ದ ಕಾಲದಲ್ಲಿ–ದತ್ತಿ ಬಿಟ್ಟ ಶಕ. ೧೧೫೬ (ಜಯ ವೈಶಾಖಶುದ್ಧ ಪುಣ್ಣಮೆ-ವಡ್ಡವಾರ)ದ ಶಾಸನ.[4]

೨. ಸರ್ವಾಧಿಕಾರಿ ದೇವಯ್ಯ ನಾಯಕನು ನರಸಿಂಹ ದೇವರಿಗೆ ದತ್ತಿ ಬಿಟ್ಟ ಶಕ. ೧೨೦೫ರ ಶಾಸನ.[5]

೩. ಪೆರ್ಗಡೆ ಮಲ್ಲಿದೇವ ಮತ್ತು ಪಿರಿಯಕರ್ಣರು ರಾಜಧಾನಿ ವಿಜಯಪುರದ **ಜಲಮಂಟಪದ** ನರಸಿಂಹ ದೇವರಿಗೆ ದತ್ತಿ ಬಿಟ್ಟ ಶಾಸನ. (ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯ ಮಲ್ಲದೇವನು ಕಲ್ಯಾಣದಲ್ಲಿ ಆಳತೊಡಗಿದ ೩ನೆ ವರ್ಷ–ಪ್ರಜಾಪತಿ, ಭಾದ್ರಪದ ಪುಣ್ಣಮಿ ಸೋಮವಾರ–ಚಂದ್ರಗ್ರಹಣದಂದು)[6]

೪. ಶಕ. ೧೧೧೫ರಲ್ಲಿ ನರಸಿಂಹ ದೇವನಿಗೆ ಕೊಟ್ಟ ದತ್ತಿ ಶಾಸನ.[7]

೫. ಶಕ. ೯೫೪ (ಇದು ತಪ್ಪಾಗಿದೆ–ಎಂದು ಟಿಪ್ಪಣಿಸಲಾಗಿದೆ)ರ **ಜಲಮಂಟಪದ** ನರಸಿಂಹನಿಗೆ ದತ್ತಿ.[8]

೬. ಪಶ್ಚಿಮ ಚಾಲುಕ್ಯ ಚಕ್ರವರ್ತಿ ತ್ರಿಭುವನ ದೇವಮಲ್ಲನ ಆಳ್ವಿಕೆಯ ೮ನೇ ವರ್ಷದ ಶಾಸನ–ನರಸಿಂಹನಿಗೆ ಬಿಟ್ಟ ದತ್ತಿ.[9]

---

1. ಯಚ್. ಪದ್ಮರಾಜ್-ವಿಜಾಪುರದ ವೈಭವ ದರ್ಶನ ಪುಟ. ೧೪ ಮತ್ತು
   A. V. N-The Sevunas of Devagiri. p. 182.
2. ಇಂದಿನ ತೊರವಿಯ ನರಸಿಂಹ ದೇವಾಲಯಕ್ಕೆ ಕೆಲವು ಜಮೀನುಗಳು ಇದ್ದು–ರಾಜಕೀಯ ಸ್ಥಿತ್ಯಂತರ, ಕಾಲಗತಿಗಳ ಕಾರಣದಿಂದ-ದತ್ತಿಗಳ ಬಗೆಗೆ ದೇವಳದಲ್ಲಿ ನಿಶ್ಚಿತ ದಾಖಲೆಗಳು ಲಭ್ಯವಿಲ್ಲ, ಆದರೂ, ದೇವಾಲಯಕ್ಕೆ ಸಂಬಂಧಿಸಿದ ಕೆಲವು ಜಮೀನು ಹಿಂದಿನ ' ಕುರಂದವಾಡ ಸಂಸ್ಥಾನಿಕರಿಂದ ದತ್ತಿ ಬಂದಂತೆ ಕಾಣುವುದು '-ಎಂದು ತೊರವಿ ದೇವಾಲಯದ ವ್ಯವಸ್ಥಾಪಕರು ನನಗೆ ತಿಳಿಸಿರುತ್ತಾರೆ. ಇದರಿಂದ ದೇವಾಲಯ ' ರಾಜಾಶ್ರಯ ' ಪಡೆದಿದ್ದ ಸುಳಿವು ಸೂಚಿತವಾಗುತ್ತದೆ.
3. ತೊ. ರಾ. IV. ೧೦-೪. (ಸೇವುಣ)
   ತೊ. ರಾ. I. ೧೨-೨೯, IV. ೧೦-೫, VI.೨೮-೬೬ (ಸಿಂಘಣ)
4. No. 122 ಶಾಸನ–Annual Report of South Indian Epigraphy for the year 1933–1934.
5. No. 123. ,, ,,
6. No. 124. ,, ,,
7. No. 125. ,, ,,
8. No. 126. ,, ,,
9. No. 127. ,, ,,

೭. ಶಕ. ೧೨೩೪ರ ಕ್ರೋಧಿ, ಚೈತ್ರ ಶು. ೧೧ ಬುಧವಾರದ ಶಾಸನ–ರಾಜಧಾನಿ ವಿಜಯಪುರದ ನರಸಿಂಹ ದೇವನಿಗೆ ಸಂಗೀತ ಮತ್ತು ನೈವೇದ್ಯಗಳಿಗಾಗಿ ಊರೊಡೆಯರು ಮತ್ತು ಮಹಾಜನಗಳು ಬಿಟ್ಟ ದತ್ತಿ.[1]

೮. ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಕಾಲದಲ್ಲಿ ವಿಜಯಪುರದ ನರಸಿಂಹನಿಗೆ ದತ್ತಿ ಶಾಸನ[2]

೯. ಯಾದವ ಜೈತಪಾಲ ದೇವನ ಆಳ್ವಿಕೆಯ ೭ನೇ ವರ್ಷದಲ್ಲಿ ವಿಜಯಪುರದ ನರಸಿಂಹನಿಗೆ ದತ್ತಿ ಶಾಸನ[3]

೧೦. ಶಕ. ೧೧೬೨ರ ಶಾಸನ–ವಿಜಯಪುರದ ನರಸಿಂಹ ದೇವನಿಗೆ ದತ್ತಿ.[4]

**ಇಂದಿನ ತೊರವೆಯ ನರಹರಿಯು ಹಿಂದಿನ ವಿಜಯಪುರದ ಜಲಮಂಟಪ ನರಸಿಂಹನಾಗಿದ್ದಿರ ಬಹುದು.**

ಈ ಹಿಂದೆ ಉಲ್ಲೇಖಿಸಿದ ಶಾಸನ ಸಂಖ್ಯೆ ೧೨೪ ಮತ್ತು ೧೨೬ರಲ್ಲಿ ಹೇಳಲಾದ ಜಲಮಂಟಪ–ನರಸಿಂಹನೆಂಬ ವಿಶೇಷಣವೂ ತೊರವೆಯ ನರಹರಿಗೆ ಅನ್ವಯಿಸುತ್ತದೆ ಎಂದು ತರ್ಕಿಸುವುದಕ್ಕೆ ಅವಕಾಶವಿದೆ. "ಇಂದಿನ ತೊರವೆ ಗ್ರಾಮವು ಹಿಂದೆ ರಾಜಧಾನಿ (ವಿಜಯಪುರ) ಯಾಗಿದ್ದ ಕುರುಹುಗಳು ಈಗಲಾದರೂ ಕಂಡು ಬರುವವು. (ಮುಸಲ್ಮಾನರ ಆಳ್ವಿಕೆಯ ಕಾಲದಲ್ಲಿ) ಈ ಗ್ರಾಮಕ್ಕೆ ನೌಲಾಖಪುರ ಎಂದು ಕರೆಯುತ್ತಿದ್ದರೆಂದೂ, ಅದು ಒಂಭತ್ತು ಲಕ್ಷ ಮನೆಗಳಿಂದ ಯುಕ್ತವಾದ ದೊಡ್ಡ ಪಟ್ಟಣವಾಗಿತ್ತೆಂದೂ ಹೇಳುವರು."[5]

"ಇಂದಿನ ತೊರವೆಯ ಶ್ರೀ ನರಸಿಂಹ ದೇವರ ದೇವಸ್ಥಾನದಲ್ಲಿಯ ಗುಹೆ ಹಾಗೂ ಗರ್ಭಗುಡಿಗಳ ರಚನೆಯ ಮೇಲಿನಿಂದ ಈ ದೇವಸ್ಥಾನವು ಈ ಭಾಗದ ಮುಸಲ್ಮಾನರ ಆಳ್ವಿಕೆಗಿಂತಲೂ ಪೂರ್ವದಲ್ಲಿ ಇದ್ದುದೆಂದು ಅನಿಸುವುದು. ಏಕೆಂದರೆ ಈಗಿದ್ದ ಗುಹೆಯಲ್ಲಿ ಮತ್ತೊಂದು ಗುಹಾಮಾರ್ಗವಿದ್ದಂತೆ ಒಂದು ಕುರುಹು ಕಾಣುವುದು. ಅದು ಶ್ರೀ ನರಸಿಂಹ ತೀರ್ಥಕ್ಕೆ ಸಂಬಂಧಿಸಿದ್ದಿರಬಹುದೆಂದು ಅನಿಸುವುದು........ಅರ್ಚಕರು ಗುಹಾಮಾರ್ಗವಾಗಿ ಒಳಗಿನಿಂದಲೇ ಶ್ರೀ ನರಸಿಂಹತೀರ್ಥಕ್ಕೆ ತೆರಳಿ ಬಂದು ದೇವರ ಪೂಜೆ ಮಾಡುತಿದ್ದಿರಬಹುದೆಂಬ ತರ್ಕವಿದೆ."[6]

ಇದರಿಂದ ಶಾಸನಗಳಲ್ಲಿ ಉಲ್ಲೇಖಿತನಾದ ಜಲಮಂಟಪ ನರಸಿಂಹನೆಂದರೆ–ಬಹುಶಃ ಹಿಂದೆ ಶ್ರೀನರಸಿಂಹ ತೀರ್ಥದ ಜಲಮಂಟಪದಲ್ಲಿ ಆವಾಸವಾಗಿದ್ದಿರಬಹುದಾದ ನರಸಿಂಹನೇ ಇರಬೇಕು. ಕಾಲಾಂತರದಲ್ಲಿ ಮೂರ್ತಿಭಂಜಕರ ಭಯದಿಂದ ಜಲಮಂಟಪದ ನರಸಿಂಹ ಮೂರ್ತಿಯನ್ನು ಗುಹಾಮಾರ್ಗವಾಗಿ ಸ್ಥಳಾಂತರಗೊಳಿಸಿ, ಗುಹಾವಾಸಿಯನ್ನಾಗಿ ಮಾಡಿರಬೇಕು. ಇಂದಿನ ನರಸಿಂಹದೇವಸ್ಥಾನಕ್ಕೆ ಶಿಖರವಿಲ್ಲ. ಬಹುಶಃ ಹೊರಗಿನವರ ಕಣ್ಣಿಗೆ ದೇವಾಲಯದ ಅಸ್ತಿತ್ವವನ್ನೇ ಮರೆಮಾಡುವ ಉದ್ದೇಶದಿಂದ ಹೀಗೆ ಮಾಡಿರಬೇಕು.

ಅಷ್ಟಲ್ಲದೆ, ಇಂದಿನ ತೊರವೆಯಲ್ಲಿ ತೊರೆಯೊಂದು ಹರಿಯುತ್ತಿರುವುದಕ್ಕೂ, ಇಲ್ಲಿನ ದೇವರಿಗೆ ಜಲಮಂಟಪ ನರಸಿಂಹನೆಂಬ ಖ್ಯಾತಿ ಇರುವುದಕ್ಕೂ–ಏನಾದರೂ ಸಂಬಂಧವಿರಬಹುದೇ ?–ಎಂದೂ ತರ್ಕಿಸುವುದಕ್ಕೆ ಅವಕಾಶವಿದೆ.

**ತೊರವೆ ಎಂಬ ಹೆಸರು ಕ್ರಿ.ಶ. ೭ನೇ ಶತಮಾನದಲ್ಲೇ ಬಳಕೆಯಲ್ಲಿತ್ತು**

'ತೊರವೆ' ಎಂಬ ಹೆಸರು ಕ್ರಿ.ಶ. ೭ನೇ ಶತಮಾನದಲ್ಲೇ ರೂಢಿಯಲ್ಲಿತ್ತೆಂದು ಬಾದಾಮಿ ಚಾಲುಕ್ಯರಾಜ ವಿನಯಾದಿತ್ಯನ ಕಾಲದ ಶಾಸನವೊಂದರಿಂದ ಖಚಿತವಾಗುತ್ತದೆ. ಆ ಶಾಸನದ ಭಾಗವನ್ನು ಮುಂದೆ ಕೊಟ್ಟಿದೆ.

---

1. No. 129, Annual Report of South Indian Epigraphy for the year 1933-1934.
2. ಇದೇ. 130 ,, ,,
3. ಇದೇ. 131 ,, ,,
4. ಇದೇ. 132 ,, ,,

(ವಿ.ಸೂ : 'ತೊರವೆ' ಮತ್ತು 'ತೊರವೆಯ ನರಸಿಂಹ ದೇವಾಲಯ,'-ಇವುಗಳ ಪ್ರಾಚೀನತೆಯನ್ನು ಸಮರ್ಥಿಸುವುದಕ್ಕಾಗಿ ಮೇಲಿನ ಶಾಸನಗಳ ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ.)

5. ತೊರವಿ ಕ್ಷೇತ್ರಮಹಿಮೆ–ಪುಟ. ೬ (ಶ್ರೀಜ್ಞಾನಸತ್ರ ಸಮಿತಿ, ಶ್ರೀನರಸಿಂಹ ದೇವಸ್ಥಾನ, ತೊರವಿ, ಇವರ ಪ್ರಕಟಣೆ)
6. ಇದೇ. ಪು. ೫

**ಶಾಸನದ ಸಾಲು** **ಒಕ್ಕಣೆ**

೨೧ — — — — — — — — — — ವಿನಯಾದಿತ್ಯ ಸತ್ಯಾಶ್ರಯ ಶ್ರೀಪೃಥಿ

೨೨ ವೀ ವಲ್ಲಭಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಸರ್ವಾನೇವಮಾಜ್ಞಾಪಯತಿ ವಿ–

೨೩ ದಿತಮಸ್ತುವೀಸ್ಮಾಭಿಃ ದ್ವಾದಶೋತ್ತರಷಟ್ಛ (ದಶ) ಶೇಷು ಶಕವರ್ಷೇಷು, ಅತೀತೇಷು ಪ್ರವ–

೨೪ ರ್ಧಮಾನ ವಿಜಯರಾಜ್ಯ ಸಂವತ್ಸರೇ, ದಶಮೇ ವರ್ತಮಾನೇ ಮುಂಜೋಹಾಗ್ರಾಮಮಧಿವಸತಿವಿಜ–

೨೫ ಯಸ್ಕಂಧಾವಾರೇ ವೈಶಾಖ ಪೌರ್ಣಮಾಸ್ಯಾಂ ಮಹಾದೇವೀ ವಿಜ್ಞಾಪನಯಾ ಕನ್ಯಾಧರ್ಮಾರ್ಥೇ

೨೬ ಕಾಶ್ಯಪಸಗೋತ್ರಸ್ಯ (ತ್ರಾಭ್ಯಾಂ) ದುಗ್ಗ (ರ್ಗ) ಶರ್ಮರವಿಶರ್ಮಾಭ್ಯಾಂರಾಜಮಾನೇನ 'ತೊರವೆ' ಗ್ರಾಮೇ ಪಂಚಾಶ–

೨೭ ನ್ನಿವರ್ತನ ಪರಿಮಾಣಾಂ ಪಶ್ಚಿಮದಿಗ್ಭಾಗೇ ಸರ್ವಭೋಗಾ (ಗ) ಪರಿಹಾರೀದತ್ತ :[1]

ಈ ಶಾಸನದಲ್ಲಿ ಉಕ್ತವಾಗಿರುವ 'ತೊರವೆ'ಯು ಇಂದಿನ ಬಿಜಾಪುರದ (ಜಿಲ್ಲೆಯ) ತೊರವಿಯೇ ಆಗಿದೆ.[2] ಇದರಿಂದ ೧೬ನೇ ಶತಮಾನದಲ್ಲಿ ಅದಿಲ್‌ಷಹನು ಮಾಡಿದ ನೀರು ಸರಬರಾಜು ವ್ಯವಸ್ಥೆಯಿಂದಾಗಿ ಆ ಗ್ರಾಮಕ್ಕೆ ತೊರವೆ ಎಂಬ ಹೆಸರು ಬಂದಿರಬೇಕು ಎನ್ನುವ ಊಹೆಯು ವಾಸ್ತವಿಕವಾದುದಲ್ಲ.

**ಇತರ ಉಲ್ಲೇಖಗಳು**

೧. 'ಪರಮ ಹಂಸಪರೇಶಪಾವನಚರಿತ ವಿದ್ಯಾಶಂಕರೋತ್ತಮ'ನನ್ನು ನಮಿಸಿ[3] 'ಮೈರಾವಣ ಕಾಳಗ'ವನ್ನು ರಚಿಸಿದ ಕವಿ ನರಹರಿಯು ತನ್ನ ಕೃತಿಯಲ್ಲಿ 'ತೊರವೆಯಧಿಪತಿ',[4] ತೊರವೆಯ ರಘುನಾಥ[5] ಎಂದಿರುತ್ತಾನೆ. ವಿದ್ಯಾಶಂಕರರ ಕಾಲವು ಕ್ರಿ.ಶ. ೧೨೫೮–೧೩೩೩ ಎನ್ನುವುದನ್ನು[6] ಗಮನಿಸಿದರೆ, ಆ ಕಾಲಕ್ಕೇ 'ತೊರವೆ'ಯು ಪ್ರಸಿದ್ಧವಾಗಿತ್ತು–ಎನ್ನಬೇಕು.

೨. ಪುರಂದರ ದಾಸರಕಾಲಕ್ಕಾಗಲೇ–೧೬ನೇ ಶತಮಾನದಲ್ಲಿ–ತೊರವೆಯ ನರಹರಿಯ ಪ್ರಸಿದ್ಧಿ ಬಹಳ ವ್ಯಾಪಕವಾಗಿತ್ತೆನ್ನುವುದಕ್ಕೆ ಪುರಂದರದಾಸರ ಈ ಕೀರ್ತನೆಗಳೇ ಸಾಕ್ಷಿ:

ಅ) ದಾನವನ ಕೊಂದದ್ದಲ್ಲ ಕಾಣಿರೋ<br>ಗಾನವಿನೋದಿ ನಮ್ಮ ತೊರವೆಯ ನರಸಿಂಹ........

ಆ) ಮುದ್ದು ತಾರೋ ರಂಗ, ಎದ್ದು ಬಾರೋ<br>..........................................

---

1. Epigraphia Indica vol. xxv. ಪುಟ. ೨೯೧, ಕ್ರಿ.ಶ. ೬೯೦ರ ಶಾಸನ.

2. ......the village of 'Torave' presumably the same as the modern village 'Torveh' in the Bijapura district. Epigraphia Indica. vol xxv pp. 259. ff.
ಈ ಶಾಸನವನ್ನು ನನಗೆ ಒದಗಿಸಿ ಸಹಕರಿಸಿದವರು : Dr. G. S. Gai. ph. D. Chief Epigraphist. Govt of India,–ಇವರಿಗೆ ಕೃತಜ್ಞತೆಯ ವಂದನೆಗಳು. ಈ ಶಾಸನದಲ್ಲಿ ಬರುವ (ಸಾಲು ೨೪) 'ಮುಂಜೋಹಾ' ಎನ್ನುವುದು ತೊರವಿಯಿಂದ ಸು. ೨೦ ಮೈಲು ದೂರದಲ್ಲಿರುವ 'ಮಿಂಚಿನಾಳ್' (ಇಂಡಿತಾಲ್ಲೂಕು) ಆಗಿರಬೇಕೆಂದು ಡಾ. ಗಾಯಿ ನರ ಅಭಿಮತವಿದೆ.

3. ನರಹರಿಕವಿ–ಮೈರಾವಣಕಾಳಗ–೧–೬

4. ಇದೇ. ೪–೧೧೮

5. ಇದೇ. ೪–೧೧೯

6 ಕೆ. ಆರ್. ವೆಂಕಟರಾಮನ್–The Throne of Transcendental Wisdom. ಪುಟ ೨೦
ಮತ್ತು
ನಾ. ಶ್ರೀ. ರಾಜಪುರೋಹಿತ–ಶ್ರೀಮತ್ ಸುರೇಶ್ವರಾಚಾರ್ಯರ ಚರಿತ್ರೆ–೬೯

ತೊರವೆಯ ನರಸಿಂಹ ವರದ ಪುರಂದರ ವಿಠಲ
ಹರನಿ ಹಾಲನೆಲ್ಲ ಕುಡಿದ ನೊರೆಹಾಲಿನ ಬಾಯೊಳೊಪ್ಪೆ.

ಇ) ಇದು ಏನಂಗ ಮೋಹನಾಂಗ
ಮದನ ಜನಕ ನಮ್ಮ ತೊರವೆಯ ನರಸಿಂಗ.[1]

೩. ಸಾಲಿಗ್ರಾಮಶಿಲೆಯಿಂದ ರಚಿತವಾದ ತೊರವೆಯ ನರಸಿಂಹ ದೇವರ ಮೂರ್ತಿಯು ೩ ಅಡಿ ಎತ್ತರ ೨ ಅಡಿ ಅಗಲವಾಗಿರುತ್ತದೆ. ನರಹರಿಯು ಗರುಡನ ಮೇಲೆ ತನ್ನ ಎಡಗಾಲು ಮಡಚಿ, ಬಲಗಾಲು ಕೆಳಗೆಬಿಟ್ಟು ಕುಳಿತಿದ್ದಾನೆ. ತೊಡೆಯ ಮೇಲೆ ಹಿರಣ್ಯಕಶಿಪುವನ್ನು ಮಲಗಿಸಿ, ಅವನ ಹೊಟ್ಟೆ ಸೀಳಿ ಎರಡೂ ಕೈಗಳಿಂದ ಕರುಳನ್ನು ಎಳೆಯುವ ರಚನೆ ಇದೆ.[2] ಕುಮಾರವಾಲ್ಮೀಕಿಯ,

ತೊಡೆಯೊಳಗಿರಿಸಿಕೊಳ್ಳನೆ ಹಿರಣ್ಯಕನ ?–[3]

ಎಂಬ ವರ್ಣನೆಯೂ, ಪುರಂದರದಾಸರ,

ಸಿರಿಯಪ್ಪತೊಡೆಯೊಳು ಅರಿಯನಿಟ್ಟಿರುವುದು–
ಇದು ಏನಂಗ ಮೋಹನಾಂಗ–
ಮದನ ಜನಕ ತೊರವೆಯ ನರಸಿಂಗ–

ಎಂಬ ಕೀರ್ತನೆಯೂ ಇಂದಿನ ತೊರವೆಯ ನರಹರಿಮೂರ್ತಿಯನ್ನು ಕಂಡೇ ಸೃಷ್ಟಿಗೊಂಡವುಗಳು. ಇದರಿಂದ ಇವರಿಬ್ಬರ ಕಾಲಕ್ಕೆ ಈ ನರಹರಿ ವಿಗ್ರಹವು ಪೂಜಿತವಾಗಿತ್ತೆಂದು ನಿರ್ಣಯಿಸಬಹುದು.[4]

ಕ್ರಿ.ಶ. ೧೬೦೦ರಲ್ಲಿದ್ದ ಸೋಮನಾಥ ಎಂಬ ಕವಿಯು ತನ್ನ ರುಕ್ಮಾಂಗದ ಚರಿತೆ ಎನ್ನುವ ಸಾಂಗತ್ಯ ಕೃತಿಯಲ್ಲಿ ತೊರವೆಯ ನರಸಿಂಹನನ್ನು ಸ್ತುತಿಸಿದ್ದಾನೆ[5]. ಇದರಿಂದಲೂ, ತೊರವೆಯ ನರಹರಿಯ ದೂರವ್ಯಾಪೀ ಪ್ರಸಿದ್ಧಿಯು ಅರಿವಾಗುತ್ತದೆ.

ಹೀಗೆ, ಸೇವುಣ ರಾಜರ ದತ್ತಿಗಳನ್ನು ಪಡೆದು, ೧೪ನೇ ಶತಮಾನದಲ್ಲಿ ವೈರಾವಣಕಾಳಗದ ಕವಿ ನರಹರಿಯಿಂದ ಉಲ್ಲೇಖಿತವಾಗಿ, ಪುರಂದರದಾಸ, ಸೋಮನಾಥರ ಕಾಲದಲ್ಲಿ ಸುಪ್ರಸಿದ್ಧವಾಗಿದ್ದ ತೊರವೆಯ ನರಹರಿಯ ಕ್ಷೇತ್ರವು ಶ್ರೀ ಬಿ. ಎಸ್. ಸಣ್ಣಯ್ಯನವರು ಊಹಿಸಿದಂತೆ ಅರ್ವಾಚೀನವಾದುದೇನೂ ಅಲ್ಲ. ತೊರವೆ ಎಂಬ ಹೆಸರಂತೂ ೭ನೇ ಶತಮಾನದಲ್ಲೇ ಅಸ್ತಿತ್ವದಲ್ಲಿತ್ತು. ಈ ಐತಿಹಾಸಿಕ ಅಂಶಗಳನ್ನು ಗಮನಿಸದೆ ೧ನೇ ಆದಿಲ್‌ಷಾಹಿಯ ಕಾಲದಲ್ಲಿ 'ತೊರವೆ' ಎಂಬ ಹೆಸರು ಹುಟ್ಟಿಕೊಂಡಿತು ಎಂಬ ಊಹೆಯಿಂದ ಕುಮಾರ ವಾಲ್ಮೀಕಿಯ ಕಾಲವನ್ನು ಕ್ರಿ.ಶ. ೧೫೮೦ಕ್ಕೆ ತಂದು ನಿಲ್ಲಿಸುವುದು ಸೂಕ್ತವಲ್ಲ.

---

1. ಶ್ರೀ ಪುರಂದರ ದಾಸರ ಕೃತಿಗಳು ೧-೪೬, ೭೯
ಪುರಂದರದಾಸರ ಕಾಲದಲ್ಲಿಯೇ–ವಿಜಯಪುರದಲ್ಲಿ ತೊರವೆಗಿಂತ ಪ್ರತ್ಯೇಕವಾದ ಮತ್ತು ಪ್ರಸಿದ್ಧವಾದ 'ನರಹರಿ ಕ್ಷೇತ್ರ' ವಿದ್ದಂತೆ ತೋರುವುದಿಲ್ಲ. ದಾಸರನ್ನು ಆಕರ್ಷಿಸಿದ ನರಸಿಂಹನು–ಆ ಪೂರ್ವದಲ್ಲಿ ವಿಜಯಪುರದ ನರಸಿಂಹನೆಂದು ಪ್ರಸಿದ್ಧನಾದ ತೊರವೆ ನರಸಿಂಹನೇ ಇರಬೇಕು.

2. ನರಹರಿಮೂರ್ತಿಯ ಉಳಿದ ಆರು ಕೈಗಳಲ್ಲಿ ಶಂಖಚಕ್ರಾದಿ ಆಯುಧಗಳಿರುವವು. ಪ್ರಭಾವಳಿಯ ಸುತ್ತಲೂ ಮತ್ಸ್ಯ ಕೂರ್ಮಾದಿ ದಶಾವತಾರವಿಗ್ರಹಗಳಿದ್ದು, ನರಹರಿಮೂರ್ತಿಯ ಬಲಗಡೆ ಲಕ್ಷ್ಮೀ, ಎಡಗಡೆ ಪ್ರಹ್ಲಾದಮೂರ್ತಿಗಳಿರುವುವು.

3. ತೊ. ರಾ. VI ೮-೫೩

4. ಕುಮಾರ ವಾಲ್ಮೀಕಿ, ಪುರಂದರದಾಸರ ಕಾಲಕ್ಕೆ ನರಸಿಂಹನು ಈಗಿರುವಂತೆ ಗುಹಾವಾಸಿಯಾಗಿರಲಿಲ್ಲ. ಈ ಅಂಶವೂ ಕುಮಾರ ವಾಲ್ಮೀಕಿಯ ಪ್ರಾಚೀನತೆಗೆ ಪೋಷಕವಾಗಿದೆ.

5. ಆರ್. ನರಸಿಂಹಾಚಾರ್ಯ–ಕ. ಕ. ಚ. ೨-೪೧೩

ಕನಕದಾಸರಿಗಿಂತಲೂ ಮೊದಲು ಕುಮಾರ ವಾಲ್ಮೀಕಿ ಇದ್ದಿರಬೇಕು ಎಂಬ ಹಿನ್ನೆಲೆಯಿಂದ ಶ್ರೀ ಸಣ್ಣಯ್ಯನವರು ಕನಕದಾಸರ ಕಾಲದ ಬಗ್ಗೆ ವಿಚಾರ ನಡೆಸಿದ್ದು ಸೂಕ್ತವಾಗಿದೆ. ಆದರೆ ಅವರ ನಿರ್ಣಯದಂತೆ,[1] ಕನಕದಾಸರ ಕಾಲ ಕ್ರಿ.ಶ. ಸು. ೧೬೦೦ ಎಂದು ಒಪ್ಪಿಕೊಳ್ಳುವುದರಿಂದ ಕುಮಾರ ವಾಲ್ಮೀಕಿಯ ಪ್ರಾಚೀನತೆಗೇನೂ ಆತಂಕವಾಗುವಂತಿಲ್ಲ. ಇಂದಿನಂತೆ ಮುದ್ರಣ, ಪ್ರಯಾಣ ಸೌಕರ್ಯಗಳಿಲ್ಲದ ಕಾಲದಲ್ಲಿ ಯಾವ ರಾಜಾಶ್ರಯವನ್ನೂ ಹೊಂದದ ಕುಮಾರ ವಾಲ್ಮೀಕಿಯ ಹೆಸರು, ಕೃತಿಗಳು ಸುತ್ತ ಮುತ್ತ ಹರಡಲು ಕೆಲವಾರು ದಶಕಗಳಾದರೂ ಬೇಕು. ಇದರಿಂದ ೧೬ನೇ ಶತಮಾನದ ಕೊನೆಯ ಭಾಗದಲ್ಲಿದ್ದ ಕನಕದಾಸರಿಗಿಂತ ಬಹಳಷ್ಟು ಹಿಂದೆಯೇ ಕುಮಾರ ವಾಲ್ಮೀಕಿಯ ಕೃತಿ ರಚನೆಯಾಗಿರಬೇಕೆಂದು ಹೇಳಬೇಕಾಗುತ್ತದೆ.

## ಯುದ್ಧ ವರ್ಣನೆಯ ದೀರ್ಘತೆಯ ಕಾರಣ

ಕುಮಾರ ವಾಲ್ಮೀಕಿಯು ತನ್ನ ರಾಮಾಯಣದ ಅರ್ಧಭಾಗಕ್ಕಿಂತಲೂ ಹೆಚ್ಚಾಗಿ ಯುದ್ಧ ವರ್ಣನೆ ಮಾಡಿರುವುದಕ್ಕೆ ಆಗತಾನೇ ಮುಗಿದಿದ್ದ ತಾಳಿಕೋಟೆ ಯುದ್ಧ (೧೫೬೫)ದ ಭೀಕರತೆ ಜನರ ಮನಸ್ಸಿನಿಂದ ಅಳಿದು ಹೋಗದಿದ್ದುದು ಕಾರಣವಾಗಿರಬೇಕೆಂದು ಶ್ರೀ ಕೆ. ರಾಜಾರಾಯರು ಊಹಿಸಿದ್ದನ್ನು[2] ಶ್ರೀ ಸಣ್ಣಯ್ಯನವರು ಪೋಷಿಸುತ್ತಾ, ಕುಮಾರ ವಾಲ್ಮೀಕಿಯ ಕಾಲವು–ತಾಳಿಕೋಟೆ ಕದನದ ನಂತರ–ಎಂದರೆ ಸುಮಾರು ೧೫೯೦ ಎಂದು ಹೇಳಿದ್ದಾರೆ.[3]

ರಾಮಾಯಣದಂತಹ ಮಹಾಕೃತಿಯನ್ನು ಕನ್ನಡಿಸುವಲ್ಲಿ, ಭಕ್ತಭಾವದ ಕವಿಯು ಸಮಕಾಲೀನ ಘಟನೆಗಳಿಂದ(ಲೇ) ಸ್ಫೂರ್ತಿಗೊಂಡಿರಬಹುದೆನ್ನುವುದಕ್ಕಿಂತಲೂ, ಆ ಕಾಲದ ಕಾವ್ಯ ಸಂಪ್ರದಾಯದ ಅನುಸರಣೆಯಿಂದ ವೀರ ಜೀವನದ ವರ್ಣನೆಗೆ ಪ್ರಾಶಸ್ತ್ಯ ಕೊಡಬೇಕಾಯಿತು ಎನ್ನುವುದೇ ಹೆಚ್ಚು ಉಚಿತವಾದೀತು. ಕುಮಾರ ವಾಲ್ಮೀಕಿಯು ಆದರ್ಶವಾಗಿರಿಸಿಕೊಂಡ ಕುಮಾರವ್ಯಾಸನ ಕೃತಿ ಕರ್ಣಾಟ ಭಾರತ ಕಥಾಮಂಜರಿ (ಗದುಗಿನ ಭಾರತ) ಯಲ್ಲಿ ಸುಮಾರು ಅರ್ಧದಷ್ಟು ಭಾಗವು ಕೇವಲ ೧೮ ದಿನಗಳ ಯುದ್ಧ ವರ್ಣನೆಯಿಂದಲೇ ತುಂಬಿದೆ–ಎಂಬ ವಿಚಾರ ಇಲ್ಲಿ ಸ್ಮರಣೀಯ.

ಸಮಕಾಲೀನ ಜೀವನದ ಪ್ರಭಾವವನ್ನು ಕಾವ್ಯದಲ್ಲಿ ಗುರುತಿಸುವಲ್ಲಿ–ಕ್ರಿ.ಶ. ೧೫೬೫ರ ತಾಳಿಕೋಟೆ ಕಾಳಗದಿಂದಲೇ ಯುದ್ಧಕಾಂಡದ ವರ್ಣನೆಯು ಹಿಗ್ಗಿರಬೇಕೆಂದು ಊಹಿಸುವುದಕ್ಕಿಂತಲೂ ದ್ವಾರಸಮುದ್ರದ ಯಾದವರಿಗೂ, ದೇವಗಿರಿಯ ಸೇವುಣರಿಗೂ ನಡೆದ ಅಸಂಖ್ಯ ಯುದ್ಧಗಳ ನೆನಪು ಇನ್ನೂ ಮಾಸದ ಕಾಲದಲ್ಲಿ ಕುಮಾರ ವಾಲ್ಮೀಕಿಯು ಬಾಳಿದ್ದನೆನ್ನುವುದಕ್ಕೆ ಹೆಚ್ಚಿನ ಆಂತರಿಕ ಪ್ರಮಾಣಗಳ ಬೆಂಬಲವಿದೆ. ಸಮಕಾಲೀನ ವೀರಜೀವನಕ್ಕೆ ಸಂಬಂಧಿಸಿದ ಕೋಟೆಕಾಳಗಗಳ ವರ್ಣನೆಗೆ ಹೆಚ್ಚು ಗಮನ ಕೊಟ್ಟಿರುವುದೂ ಇದಕ್ಕೆ ಪೋಷಕವಾಗಿದೆ.

ಹೀಗೆ, ಶ್ರೀ ಬಿ. ಎಸ್. ಸಣ್ಣಯ್ಯನವರು, 'ತೊರವೆ'ಯ ಅರ್ವಾಚೀನತೆ, ಕನಕದಾಸರ ಕಾಲ, ಮತ್ತು ತಾಳಿಕೋಟೆಯ ಯುದ್ಧದ ನೆನಪು–ಇವುಗಳ ಆಧಾರದಿಂದ ಮಾಡಿದ ಕುಮಾರ ವಾಲ್ಮೀಕಿಯ ಕಾಲನಿರ್ಣಯ ವಿವೇಚನೆಯು ಸಾಹಿತ್ಯಾಭ್ಯಾಸಿಗಳ ವಿಚಾರವನ್ನು ಪ್ರಚೋದಿಸುವಲ್ಲಿ ಮಾತ್ರ ಯಶಸ್ವಿಯಾಗಿದೆ ಎನ್ನಬಹುದು.

ಇದರಂತೆಯೇ, ಶ್ರೀ ಕೆ. ರಾಜಾರಾಯರು ಕುಮಾರ ವಾಲ್ಮೀಕಿಯ ಕಾಲವು ಸುಮಾರು–೧೫೭೦ ರಿಂದ ೧೬೦೦ ಅಥವಾ ೧೬೧೦ ಇರಬಹುದು ಎಂದು ಮಾಡಿದ ಊಹೆಯೂ[4] ಶ್ರೀಮತಿ ಪಿ. ಎಸ್. ಲೀಲಾವತಿಯವರು 'ಶ್ರೀ ಬಿ. ಎಸ್. ಸಣ್ಣಯ್ಯನವರು ಹೇಳಿದ ಕಾಲವನ್ನು ಒಪ್ಪಬಹುದು' ಎಂದು ನೀಡಿದ ಸಮರ್ಥನೆಯೂ,[5] ಕವಿಯ ಕಾಲದ ಬಗ್ಗೆ ನಿಖರವಾದ ಆಧಾರಗಳ ಅಭಾವವನ್ನೇ ಸೂಚಿಸುತ್ತವೆ.

---

1. ಬಿ. ಎಸ್. ಸಣ್ಣಯ್ಯ-ತೊ. ರಾ. ಸಂ. ೨. ಪು. ೧೩-೧೪.
2. ಕೆ. ರಾಜಾರಾಯ-ತೊ. ರಾ. ವಿಮರ್ಶೆ-ಕ. ಸಾ. ಪ. ೨೩-೨.
3. ಬಿ. ಎಸ್. ಸಣ್ಣಯ್ಯ-ತೊ. ರಾ. ಸಂ. ೨ ಪು. ೧೫.
4. ಕೆ. ರಾಜಾರಾಯ-ತೊ. ರಾ. ವಿಮರ್ಶೆ-ಕ. ಸಾ. ಪ. ೨೩-೨.
5. ಪಿ. ಎಸ್. ಲೀಲಾವತಿ-'ಕುಮಾರ ವಾಲ್ಮೀಕಿ' (ಹಾಸನದ) ಪ್ರತಿನಿಧಿ ೧೯೬೭ರ ದೀಪಾವಳಿ ಸಂಚಿಕೆ. ಪು. ೫-೧೩.

### ಮಂ. ಅ. ದೊರೆಸ್ವಾಮಿ ಅಯ್ಯಂಗಾರ್

ಇವರು ಕುಮಾರವ್ಯಾಸನ ಕಾಲವನ್ನು ವಿಚಾರಮಾಡುತ್ತಾ, ಕುಮಾರ ವಾಲ್ಮೀಕಿಗೆ ಕ್ರಿ.ಶ. ಸು. ೧೩೭೫ರ ಕಾಲವನ್ನೇ ಕೊಡಬೇಕಾಗುತ್ತದೆ ಎಂದಿದ್ದಾರೆ[1] ಈ ನಿರ್ಣಯವು ನಾವು ಕಂಡುಕೊಂಡ ಇತರ ಆಂತರಿಕ, ಬಾಹ್ಯ ಪ್ರಮಾಣಗಳಿಗೆ ಹೊಂದಿಕೊಳ್ಳುತ್ತದೆ.

### ಕೆ. ವೆಂಕಟರಾಯಾಚಾರ್ಯ

'ವೈರಾವಣಕಾಳಗ'ದ ಕವಿ ನರಹರಿಯು ಸ್ಮರಿಸಿದ 'ಪರಮ ಹಂಸ ವಿದ್ಯಾಶಂಕರಗುರು'ವಿನ ಕಾಲವು ಕುಮಾರ ವಾಲ್ಮೀಕಿಯ ಕಾಲನಿರ್ಣಯಕ್ಕೆ ಸಮರ್ಪಕವಾದ ಆಧಾರವೆಂದು ಇವರು ವಿವೇಚಿಸಿದ್ದಾರೆ. ಇದಕ್ಕೆ ಹಿನ್ನೆಲೆಯಾಗಿ, 'ಕುಮಾರವ್ಯಾಸ ಚಾಮರಸರು ಸಂಬಂಧಿಗಳು, ಸಮಕಾಲೀನರು ಎಂದು ಕವಿಚರಿತಕಾರರು ಮಾಡಿಕೊಂಡ ಕಲ್ಪನೆಯನ್ನು ಅಲ್ಲಗಳೆದಿದ್ದಾರೆ.[2] "ಕುಮಾರ ವಾಲ್ಮೀಕಿಯು ವೈರಾವಣ ಕಾಳಗವನ್ನು ರಚಿಸಿದ್ದಾನೆಂದು ವಿಮರ್ಶಕರು ಎಲ್ಲರೂ ಒಪ್ಪಿದ್ದಾರೆ"–ಎನ್ನುವ ಹೇಳಿಕೆಯನ್ನು ನಾವು ಒಪ್ಪಲಾರೆವಾದರೂ,[3] ತೊರವೆ ರಾಮಾಯಣ ರಚನೆಯ ಕಾಲ ನಿರ್ಣಯ ವಿಚಾರದಲ್ಲಿ 'ವೈರಾವಣಕಾಳಗ'ಕ್ಕೆ ಅವರು ಕೊಟ್ಟ ಮಹತ್ತ್ವವು ಸಂಯುಕ್ತಿಕವಾಗಿದೆ.

### ಬಾಹ್ಯ, ಆಂತರಿಕ ಪ್ರಮಾಣಗಳು

ಕುಮಾರ ವಾಲ್ಮೀಕಿಯ ಕಾಲದ ವಿಚಾರವಾಗಿ ವಿದ್ವಾಂಸರು ಈ ತನಕ ನಡೆಸಿದ ವಿವೇಚನೆಯನ್ನು ವಿಶ್ಲೇಷಿಸಿದ ಮೇಲೆ, ಇನ್ನಷ್ಟು ಬಾಹ್ಯ, ಆಂತರಿಕ ಪ್ರಮಾಣಗಳ ಮೂಲಕ ಒಂದು ನಿರ್ಣಯಕ್ಕೆ ಬರುವುದು ಉಚಿತವಾಗಿದೆ.

ಕುಮಾರ ವಾಲ್ಮೀಕಿಯ ಕಾಲನಿರ್ಣಯದಲ್ಲಿ, ಕುಮಾರವ್ಯಾಸ, ಮಧ್ವಾಚಾರ್ಯ, ಮತ್ತು ವೈರಾವಣಕಾಳಗದ ಕವಿ ನರಹರಿ ಈ ಮೂವರ ಕಾಲಗಳಿಗೆ ಆದ್ಯತೆ ಕೊಡಬೇಕಾಗುತ್ತದೆ. ಮೊದಲಿನ ಇಬ್ಬರನ್ನು ಕುಮಾರ ವಾಲ್ಮೀಕಿಯು ಸ್ಮರಿಸಿದ್ದರಿಂದ, ಅವರ ಕಾಲವು ಕುಮಾರ ವಾಲ್ಮೀಕಿಯ ಕಾಲದ ಕೆಳಗಿನ ಗಡಿಯಾಗಿಯೂ, ಇವನ ಕಾವ್ಯ ಪ್ರಭಾವಕ್ಕೊಳಗಾಗಿ ಕೃತಿ ರಚನೆ ಮಾಡಿದ ವೈರಾವಣಕಾಳಗದ ಕವಿ ನರಹರಿಯ ಕಾಲವು ಇತ್ತೀಚಿನ ಗಡಿಯಾಗಿಯೂ ಗಮನಿಸಲ್ಪಡಬೇಕು.

ಕುಮಾರವ್ಯಾಸನ ಕಾಲದ ಬಗ್ಗೆ ಈಗಾಗಲೇ ಸಾಕಷ್ಟು ಸಂಶೋಧನೆ, ವಿವೇಚನೆ, ಚರ್ಚೆ ನಡೆದಿದ್ದರೂ ಸರ್ವಮಾನ್ಯವಾದ ನಿರ್ಧಾರಕ್ಕೆ ಅದು ತಲಪಿದಂತಿಲ್ಲ. 'ಕುಮಾರ ವಾಲ್ಮೀಕಿಯ ಕಾಲವನ್ನು ನಿರ್ಣಯಿಸಲು ಸ್ವತಂತ್ರವಾದ ಆಧಾರಗಳು ದೊರೆತಿದ್ದರೆ, ಕುಮಾರವ್ಯಾಸನ ಕಾಲದ ಮೇಲಿನ ಎಲ್ಲೆಯನ್ನು ಗೊತ್ತುಪಡಿಸಲು ಸಾಧ್ಯವಾಗುತಿತ್ತು.'[4]–ಎನ್ನುವುದು ಸತ್ಯ. ಆದುದರಿಂದ ಈ ತನಕ ಸಾಗಿಬಂದ ಕುಮಾರವ್ಯಾಸ ಕಾಲವನ್ನು ಆಧರಿಸಿ ಕುಮಾರ ವಾಲ್ಮೀಕಿಯ ಕಾಲವನ್ನು ಗೊತ್ತು ಹಚ್ಚುವ ದಾರಿ ಹಿಡಿಯದೆ, ಇತರ ಆಧಾರಗಳ ಮೇಲೆ ಕುಮಾರ ವಾಲ್ಮೀಕಿಯ ಕಾಲದ ಬಗ್ಗೆ ಒಂದು ನಿರ್ಣಯಕ್ಕೆ ಬರಲು ನಾನು ಪ್ರಯತ್ನಿಸಿದ್ದೇನೆ. ಈ ಪ್ರಯತ್ನವು ಸಾರ್ಥಕವೆನಿಸಿದಲ್ಲಿ, ಕುಮಾರವ್ಯಾಸನ ಕಾಲದ ಬಗ್ಗೆಯೂ, ಒಂದು ನಿರ್ಧಾರದ ಗಡಿಯನ್ನು ತಲುಪುವುದು ಸಾಧ್ಯವಾದೀತು ಎಂದು ಆಶಿಸಿದ್ದೇನೆ.[5]

---

1. ಮಂ. ಅ. ದೊರೆಸ್ವಾಮಿ ಅಯ್ಯಂಗಾರ್–ಕುಮಾರವ್ಯಾಸ–ಜಯಕರ್ಣಾಟಕ, ೧೧-೧೧
2. ಕೆ. ವೆಂಕಟರಾಯಾಚಾರ್ಯ–ಸಾಹಿತ್ಯದ ಹಿನ್ನೆಲೆ ಪು. ೪೦.
3. ತೊರವೆ ರಾಮಾಯಣ ಮತ್ತು ವೈರಾವಣ ಕಾಳಗಗಳು ಏಕ ಕವಿ ಕೃತಿಗಳಲ್ಲ–ಎನ್ನುವ ಸಾಧಾರನ ವಿವೇಚನೆಗೆ ಇದೇ ಅಧ್ಯಾಯದ "ವೈರಾವಣ ಕಾಳಗದ ನರಹರಿಯೇ ಕುಮಾರ ವಾಲ್ಮೀಕಿಯಲ್ಲ" ನೋಡಿ.
4. ರಂ. ಶ್ರೀ. ಮುಗಳಿ–ಕ. ಸಾ. ಚ. ಪು. ೨೩೬
5. ಹೀಗೆ ಇತರ ಸ್ವತಂತ್ರ ಆಧಾರಗಳ ಮೇಲೆ ಕುಮಾರ ವಾಲ್ಮೀಕಿಯ ಕಾಲವನ್ನು ಗೊತ್ತುಮಾಡಿಕೊಂಡ ನಂತರ. ಅದನ್ನು ಅವಲಂಬಿಸಿ, ಕುಮಾರವ್ಯಾಸನ ಕಾಲದ ಈಚಿನ ಎಲ್ಲೆಯನ್ನು ಗುರುತಿಸುವಾಗ ಅದಕ್ಕೆ ಹೊಂದುವಂತಹ ವಿದ್ವಾಂಸರ ಅಭಿಮತ, ಆಧಾರಗಳೇನಾದರೂ ಇವೆಯೇ?–ಎನ್ನುವುದನ್ನು ಇದೇ ಅಧ್ಯಾಯದ ಕೊನೆಯಲ್ಲಿ ಪರಿಶೀಲಿಸಲಾಗಿದೆ.

## ಶ್ರೀ ಮಧ್ವಾಚಾರ್ಯರ ಕಾಲ

ಕುಮಾರ ವಾಲ್ಮೀಕಿಯು ತನ್ನ ಕೃತಿಯ ಮೊದಲ ಸಂಧಿಯಲ್ಲಿ ಗಣೇಶಸ್ತುತಿಯಾದ ಮೇಲೆ, 'ನಿರುಪಮ ತತ್ವ ವಿದ್ಯಾಶರಧಿ ಸಲಹುಗೆ ನಮ್ಮ ಮಧ್ವಾಚಾರ್ಯ ಗುರುರಾಯ' ಎಂದು ವಂದಿಸಿದ್ದಾನೆ.[1]

ಮಧ್ವಾಚಾರ್ಯರ ಕಾಲವು ಕ್ರಿ.ಶ. ೧೧೯೯–೧೨೭೮ ಎಂದೂ,[2] ಕ್ರಿ.ಶ. ೧೨೩೮–೧೩೧೭ ಎಂದೂ[3]–ಮುಖ್ಯವಾಗಿ ಎರಡು ಅಭಿಪ್ರಾಯಗಳು ವಿದ್ವಾಂಸರಲ್ಲಿ ಪ್ರಚಲಿತವಾಗಿವೆ.

ಕುಮಾರ ವಾಲ್ಮೀಕಿಯ ಕಾಲನಿರ್ಣಯಕ್ಕೆ ಮಧ್ವಾಚಾರ್ಯರ ಕಾಲದ ಕುರಿತಾಗಿರುವ ಈ ಎರಡು ಅಭಿಮತಗಳಿಂದಲೂ ತೊಡಕಾಗುವುದಿಲ್ಲವಾದ್ದರಿಂದ, ಆ ಭಿನ್ನಾಭಿಪ್ರಾಯಗಳ ವಿವರವಾದ ಪರಿಶೀಲನೆ ಮತ್ತು ವಿಶ್ಲೇಷಣೆ ನಮ್ಮ ಉದ್ದೇಶಕ್ಕೆ ಹೊರತಾದುದು.

ಆಚಾರ್ಯರ ಪ್ರಭಾವವು ಇಂದಿನ ಬಿಜಾಪುರದ ಸುತ್ತಮುತ್ತಲೂ ಹರಡಿದ್ದು, ಅದರ ನೆನಪು ಇನ್ನೂ ಮಾಸದಿರುವ ಮುನ್ನವೇ ಕುಮಾರ ವಾಲ್ಮೀಕಿಯು ಬಾಳಿರಬೇಕು. ತನ್ನ ಕೃತಿಯಲ್ಲಿ ಮಧ್ವಾಚಾರ್ಯರು ವಾಯುವಿನ ಅವತಾರ ಎನ್ನುವ ನಂಬಿಕೆಯನ್ನೂ, ಮಾಧ್ವತತ್ವದ ವಿಷ್ಣು ಸರ್ವೋತ್ತಮತ್ವ, ವಾಯು ಜೀವೋತ್ತಮತ್ವ, ತಾರತಮ್ಯ ತತ್ವ,[4]–ಮೊದಲಾದ ಅಂಶಗಳನ್ನೂ ತನ್ನ ಕೃತಿಯಲ್ಲಿ ಅಳವಡಿಸಿಕೊಂಡ, ಕಥಾವಸ್ತುವಿನಲ್ಲಿಯೂ ಮಧ್ವಾಚಾರ್ಯರ ಕೃತಿಗಳ ಪ್ರಭಾವಕ್ಕೊಳಗಾದ[5] ಈ ಕವಿಯು ಶ್ರೀ ಆಚಾರ್ಯರ ಕಾಲದ ಸಮೀಪವರ್ತಿಯಾಗಿದ್ದಿರಬೇಕು.

ಮಧ್ವಾಚಾರ್ಯರ ಜೀವನದ ಎರಡು ಘಟನೆಗಳು ಪ್ರಾದೇಶಿಕತೆಯ ಕಾರಣದಿಂದಲೂ ಕುಮಾರ ವಾಲ್ಮೀಕಿಯ ಮೇಲೆ ಹೆಚ್ಚಿನ ಪ್ರಭಾವ ಬೀರಿದ್ದಿರಬೇಕೆಂದು ಊಹಿಸಬಹುದಾಗಿದೆ.

೧. ಗೋದಾವರಿ ತಟದಲ್ಲಿ ಶೋಭನಭಟ್ಟರನ್ನು ವಾದದಲ್ಲಿ ಜಯಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡುದು–ಆಚಾರ್ಯರ ಜೀವನದ ಮಹತ್ವದ ಘಟನೆಗಳಲ್ಲೊಂದು :

> ತತ್ರದೇವಮಭಿವಂದ್ಯಯಾತವಾನ್
> ಸ್ವಾಮಿನೋ ವಚನ ಗೌರವಾದ್ದ್ರುತಮ್
> ಸಾನುಗೋ ವಿವಿಧ ಭೂರತೀತ್ಯ ಗೋ
> ದಾವರೀ ತಟಮಗಾದಲೇಶಧೀಃ[6]

---

1. ತೊ. ರಾ. 1. ೧–೭.

ಟಿ. ಎನ್ ಕೃಷ್ಣಯ್ಯ ಶೆಟ್ಟಿ ಪ್ರಕಾಶನ (೧೯೩೫)ದ ತೊರವೆ ರಾಮಾಯಣದ ಪೀಠಿಕಾ ಸಂಧಿಯ ೯ನೆಯ ಪದ್ಯದಲ್ಲಿ 'ಸಲಹುಗೆ ನಮ್ಮ ಭಾರದ್ವಾಜ ಗುರುರಾಯ' ಎಂದಿದೆ. ಆದರೆ, ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಿದ 'ತೊರವೆ ರಾಮಾಯಣ'ಕ್ಕೆ ಆಧಾರವಾದ ೮ ತಾಳೆ ಓಲೆ ಪ್ರತಿಗಳಲ್ಲೂ, 'ಮಧ್ವಾಚಾರ್ಯಗುರುರಾಯ' ಎಂದೇ ಇದೆ. ನಾನು ಪ್ರತ್ಯೇಕವಾಗಿ ಪರಿಶೀಲಿಸಿದ ತಾಳೆ ಓಲೆಪ್ರತಿಗಳಲ್ಲೂ ಮಧ್ವಸ್ತುತಿಯೇ ಇದೆ.

ಕುಮಾರ ವಾಲ್ಮೀಕಿಯ ಕಾವ್ಯದಲ್ಲಿ 'ಮಾಧ್ವದರ್ಶನ'ವು ಸ್ಪಷ್ಟವಾಗಿ ಒಡಮೂಡಿದೆ. ಇದರ ಪರಿಶೀಲನೆಯನ್ನು ಇದೇ ಪ್ರಬಂಧದ 'ಕೃತಿಯಲ್ಲಿ ತತ್ವ ದರ್ಶನ'–ಪ್ರಕರಣದಲ್ಲಿ ನೋಡಬಹುದು. ಹೀಗಾಗಿ ಕುಮಾರ ವಾಲ್ಮೀಕಿಯು ಮಧ್ವಾಚಾರ್ಯರನ್ನೇ ಸ್ತುತಿಸಿರಬೇಕು ಎನ್ನುವುದು ನಿಸ್ಸಂದೇಹ.

2. ಕ್ರಿ.ಶ. ೧೧೯೯–೧೨೭೮ ಎಂಬ ಅಭಿಮತದವರು.
   ಅ) ಆರ್. ನಾಗರಾಜ ಶರ್ಮ
   ಆ) ನಾ. ಶ್ರೀ. ರಾಜಪುರೋಹಿತ
   ಇ) ಮಧುರೆ ಶ್ರೀನಿವಾಸಾಚಾರ್ಯ
   ಈ) ಯಮ್. ಕೃಷ್ಣಮಾಚಾರ್ಯ
   ಉ) ಕೆ ವೆಂಕಟರಾಯಾಚಾರ್ಯ
3. ಕ್ರಿ.ಶ. ೧೨೩೮–೧೩೧೭ ಎನ್ನುವ ಅಭಿಮತದವರು
   ಅ) ಸಿ. ಎಮ್. ಪದ್ಮನಾಭಾಚಾರ್ಯ
   ಆ) ಬಿ. ಎ. ಸಾಲೆತ್ತೂರು
   ಇ) ಬಿ. ಎನ್. ಕೃಷ್ಣಮೂರ್ತಿಶರ್ಮ
   ಈ) ಎಂ. ಗೋವಿಂದ ಪೈ
4. ಇದೇ ಪ್ರಬಂಧದ 'ಕೃತಿಯಲ್ಲಿ ತತ್ತ್ವ ದರ್ಶನ' ಪ್ರಕರಣ ನೋಡಬಹುದು.
5. ಇದೇ ಪ್ರಬಂಧದ 'ಕೃತಿಯ ಕಥಾವೈಶಿಷ್ಟ್ಯಗಳು–ತುಲನಾತ್ಮಕ ವಿವೇಚನೆ' ಪ್ರಕರಣ ನೋಡಬಹುದು.
6. ನಾರಾಯಣ ಪಂಡಿತ–ಸುಮಧ್ವವಿಜಯ ಸರ್ಗ ೯, ಶ್ಲೋಕ ೧೪.

ಆಚಾರ್ಯರು ಗೋದಾವರಿ ತೀರಕ್ಕೆ ಬಂದಾಗ, ಅಲ್ಲಿ ಒಂದು ಪಂಡಿತ ಶ್ರೇಷ್ಠರ ಸಭೆ ನೆರೆದಿತ್ತು. ಅಲ್ಲಿ ಅವರು (ಮಧ್ವಾಚಾರ್ಯರು) ಆರು ಮತಗಳ ಪಂಡಿತರನ್ನು ಖಂಡಿಸಿ ಆಯಾ ಮತಗಳಲ್ಲಿರುವ ದೋಷಗಳನ್ನು ಹೇಳಿದರು.[1]

ಅಲ್ಲದೆ ಅಲ್ಲಿ ಇದ್ದ

ಯಸ್ತ್ರಯೀಸಕಲ ಪಕ್ಷ ಶಿಕ್ಷಕ
ಸ್ತತ್ರ ಸಂಸದಿ ವರಿಷ್ಠ ಸಮ್ಮತಃ
ಶೋಭನೋಪಪದಭಟ್ಟನಾಮಕಃ
ಪೂರ್ಣ ಸಂಖ್ಯಮನಮನ್ಮಹಮ್ಮುದಾ.[2]

ಪ್ರಸಿದ್ಧ ವಿದ್ವಾಂಸರಾದ ಶೋಭನ ಭಟ್ಟರು ಮಧ್ವರನ್ನು ವೇದಶಾಸ್ತ್ರಗಳಲ್ಲಿ ಪರೀಕ್ಷಿಸಿದರು, ಸೋತು ನಮಿಸಿದರು. ಮುಂದೆ ಅವರು ಮಧ್ವರಿಂದ ಪರಮಹಂಸಾಶ್ರಮವನ್ನು ಸ್ವೀಕರಿಸಿ ಮೊದಲನೇ ಶಿಷ್ಯರಾದರು. ಪದ್ಮನಾಭತೀರ್ಥರೆನಿಸಿ, ಮಾಧ್ವಕೃತಿಗಳ ಸುಪ್ರಸಿದ್ಧ ಭಾಷ್ಯಕಾರರೂ ಅದರು. ಈ ಶೋಭನ ಭಟ್ಟರು ಉತ್ತರಕರ್ಣಾಟಕದವರೇ ಎಂದು ಡಾ. ಬಿ. ಎನ್. ಕೆ. ಶರ್ಮರು ಸಾಧಾರವಾಗಿ ನಿರ್ಧರಿಸಿರುತ್ತಾರೆ.[3] ಈ ಘಟನೆಯು ಉತ್ತರ ಕರ್ಣಾಟಕದವನೇ ಆದ ಕುಮಾರ ವಾಲ್ಮೀಕಿಯ ಮೇಲೆ ಖಚಿತ ಪ್ರಭಾವ ಬೀರಿದ್ದಿರಬಹುದು. "ನಿಗಮೋತ್ಕರ ಕಲಾಪಾನಿಂದ್ಯ, ಭೂನುತ ಮುನಿಜನೋತ್ತುಂಗ, ಶರಣುಜನಸುರಪಾಲನಾಯತ ಪರಿಧಿ, ನಿರುಪಮ ತತ್ತ್ವ ವಿದ್ಯಾಶರಧಿ"[4] ಎಂದು ಕುಮಾರ ವಾಲ್ಮೀಕಿಯು ಮಧ್ವಾಚಾರ್ಯರನ್ನು ನಮಿಸಿರುವುದಕ್ಕೆ, ಅವರು ಪ್ರಸಿದ್ಧ ವಿದ್ವಾಂಸರ ಸಭೆಯಲ್ಲಿ 'ಉತ್ತುಂಗ' ಮೆರೆದುದೂ, ಅವರಿಗೆ ಶೋಭನ ಭಟ್ಟರು 'ಶರಣು' ಆದುದೂ ಪ್ರೇರಕವಾಗಿರಬಹುದು.[5]

**ಇನ್ನೊಂದು ಘಟನೆ**

ಕ್ವಚಿದೀಶ್ವರದೇವಮೇಷ ಭೂಪಂ
ಖನನಂ ಪಾಂಥಜನೈರ್ವಿ (ಜನಂ ವಿ) ಧಾಪಯಂತಮ್
ಸ್ವಮಪಿ ಪ್ರತಿಚೋದಯಂತಮೂಚಿ
ಕ್ರಿಯಯಾ ನೋ ಕುಶಲಾನ್ ಪ್ರಬೋಧಯೇತಿ.[6]

"ಶ್ರೀಮದಾಚಾರ್ಯರು ಶಿಷ್ಯ ಸಹಿತ ಉಡುಪಿಯಿಂದ ಉತ್ತರಕ್ಕೆ ಹೋಗುತ್ತಿರುವ ಮಾರ್ಗದಲ್ಲಿ ದೇವಗಿರಿಯೆಂಬ ಪಟ್ಟಣದಲ್ಲಿ ಈಶ್ವರ ದೇವನೆಂಬ (ಮಹದೇವ) ರಾಜನು ಆಳುತ್ತಿದ್ದನು. ಅವನು ತನ್ನ ರಾಜ್ಯದಲ್ಲಿ ಹಾದಿ ಹಿಡಿದು ಹೋಗುವ ಮಾರ್ಗಸ್ಥರನ್ನು 'ಬಿಟ್ಟಿ' ಹಿಡಿದು, ಕೆರೆ ತೋಡಿಸುತ್ತಿದ್ದನು. ಅವನು ಮಧ್ವರನ್ನು ತಡೆದು, ಕೆರೆ ತೋಡಲು ಹೇಳಲಾಗಿ, ಆ ರಾಜನನ್ನು ಪ್ರೇರಿಸಿ, ನೆಲ ಅಗೆಯಲು ತೊಡಗಿಸಿ, ತಾವು ಉತ್ತರ ದಿಕ್ಕಿಗೆ ನಡೆದರು"[7] ಈ ಈಶ್ವರ ದೇವನು ದೇವಗಿರಿಯ ಸೇವುಣ (ಯಾದವ) ವಂಶದ ಮಹದೇವನೇ (ಕ್ರಿ.ಶ. ೧೨೬೧–೧೨೭೦)

---

1. ನಾರಾಯಣ ಪಂಡಿತ–ಸುಮಧ್ವವಿಜಯ ೯-೧೫.
2. ಇದೇ. ೯-೧೭.
3. ಬಿ. ಎನ್. ಕೆ. ಶರ್ಮ–A History of the Dvaita School of Vedanta and its Literature Vol. I p. 292.
4. ತೊ. ರಾ. ೧-೭.
5. ಇದರಂತೆಯೇ ಮಧ್ವಾಚಾರ್ಯರ ಪ್ರಭಾವಲಯಕ್ಕೆ ಒಳಗಾಗಿ ಅವರ ಶಿಷ್ಯತ್ವವನ್ನು ವಹಿಸಿದ–ಒರಿಸ್ಸಾದ ಗಂಜಾಂ ಜಿಲ್ಲೆಯ ಶ್ರೀ ಕೂರ್ಮ ದೇವಾಲಯ ಮತ್ತು ವಿಶಾಖಪಟ್ಟಣ ಶಾಸನಗಳಲ್ಲಿ.ಹೆಸರಿಸಲ್ಪಟ್ಟ ಶ್ರೀ ನರಹರಿ ತೀರ್ಥರ ವಿಚಾರವನ್ನು ಇಲ್ಲಿ ಸ್ಮರಿಸಬಹುದು.
6. ನಾರಾಯಣ ಪಂಡಿತ–ಸುಮಧ್ವವಿಜಯ ೧೦-೪.
7. ಶ್ರೀ ಸುಮಧ್ವವಿಜಯ ಭಾವಾರ್ಥ–ಪು. ೩೮೧-೩೮೨ ಮತ್ತು ೩೯೭-೩೯೮.

ಎಂದು ತಿಳಿಯಲಾಗಿದೆ.[1] ಇದು ವಾಸ್ತವವಾಗಿದ್ದಲ್ಲಿ ದೇವಗಿರಿಯ ಅರಸರ ಹೆಸರನ್ನು ತನ್ನ ಕೃತಿಯಲ್ಲಿ ತಂದ[2] ಕುಮಾರ ವಾಲ್ಮೀಕಿಗೆ ಈ ಘಟನೆಯೂ ತಿಳಿದಿದ್ದು, ಅವನ ಮೇಲೆ ಮಾಧ್ವಪ್ರಭಾವವಾಗುವುದಕ್ಕೆ ಇದೂ ಒಂದು ಹಿನ್ನೆಲೆಯನ್ನೊದಗಿಸಿರಬೇಕು.

ದಾರ್ಶನಿಕರ, ಸುಧಾರಕರ ಪ್ರಭಾವವು ಸಮಕಾಲೀನ ಸಾಹಿತ್ಯದಲ್ಲೂ ಒಡಮೂಡುವುದು ಐತಿಹಾಸಿಕ ಸತ್ಯವಾಗಿದೆ. ಬಸವೇಶ್ವರರ ಕಾಲದ 'ವೀರಶೈವ' ಸಾಹಿತ್ಯವು ಇದಕ್ಕೊಂದು ಜ್ವಲಂತ ಉದಾಹರಣೆ. ಈ ಶತಮಾನದ ಕನ್ನಡದ ಮಹಾಕಾವ್ಯವಾದ 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಈ ಶತಮಾನದ ಪ್ರಸಿದ್ಧ ದಾರ್ಶನಿಕ ಮಹರ್ಷಿ ಅರವಿಂದರ ತತ್ತ್ವವು ಧ್ವನಿಸುವುದನ್ನು ಇಲ್ಲಿ ಸ್ಮರಿಸಬಹುದು.[3] ಹೀಗಾಗಿ; 'ಮಾಧ್ವ ದರ್ಶನವೇ' ಧ್ವನಿಯಾಗಿ ಉಳ್ಳ ಕುಮಾರ ವಾಲ್ಮೀಕಿಯ "ತೊರವೆ ರಾಮಾಯಣ"ದ ಕಾಲವನ್ನು ನಿರ್ಣಯಿಸುವಲ್ಲಿ, ಮಧ್ವಾಚಾರ್ಯರ ಕಾಲಮಾನ ಮತ್ತು ಅವರ ಜೀವನದ ಒಂದೆರಡು ಪ್ರಭಾವಶಾಲಿ ಘಟನೆಗಳ ಪರಾಮರ್ಶೆಯು ಪೂರಕವಾಗುವುದು ಸಹಜ. ಮಾಧ್ವ ತತ್ತ್ವವು ಇನ್ನೂ ತನ್ನ ಹೊಸ ಕಳೆಯನ್ನು ಕಳೆದುಕೊಳ್ಳದ ಕಾಲದಲ್ಲಿ, ಎಂದರೆ ೧೪ನೆ ಶತಮಾನದಲ್ಲಿ ಕುಮಾರ ವಾಲ್ಮೀಕಿಯು ಇದ್ದಿರಬೇಕು ಎಂದು ಈ ಸಮಾಲೋಚನೆಯಿಂದ ಕಂಡುಕೊಳ್ಳಬಹುದು. ಈ ಅಂಶವನ್ನು ಸಮರ್ಥಿಸುವ ಇತರ ಆಧಾರಗಳೇನಾದರೂ ಇವೆಯೇ?–ಎಂದು ಈ ಮುಂದೆ ಪರ್ಯಾಲೋಚಿಸಲಾಗಿದೆ.

## 'ವೈರಾವಣ ಕಾಳಗ'ದ ಕವಿಯ ಹೇಳಿಕೆ

ಕುಮಾರ ವಾಲ್ಮೀಕಿಯ ಕಾಲದ ಈಚೆಗಿನ ಎಲ್ಲೆಯನ್ನು ನಿರ್ಣಯಿಸುವಲ್ಲಿ 'ವೈರಾವಣ ಕಾಳಗ'ದ ಕವಿ ನರಹರಿಯ ಹೇಳಿಕೆಗೆ ಆದ್ಯತೆ ಸಲ್ಲಬೇಕು. 'ವಿದ್ಯಾಶಂಕರ'ರನ್ನು ಸ್ತುತಿಸಿದ ಇವನ ಕಾಲವು–ವಿದ್ಯಾಶಂಕರರ ಕಾಲವಾದ ೧೨೨೮–೧೩೩೩ ಎಂದೂ[4] ಹೆಚ್ಚೆಂದರೆ ೧೪ನೆ ಶತಕದ ಉತ್ತರಾರ್ಧವೆಂದೂ ನಿರ್ಣಯಿಸಲು ಯಾವ ಆತಂಕವೂ ಇರದು.

ವೈರಾವಣಕಾಳಗವನ್ನು ಬರೆದ ನರಹರಿಯೇ ತೊರವೆ ರಾಮಾಯಣ ರಚಿಸಿದ ಕುಮಾರ ವಾಲ್ಮೀಕಿಯಾಗಿದ್ದಿದ್ದರೆ ಅವನ ಕಾಲನಿರ್ಣಯದಲ್ಲಿ ಹೆಚ್ಚಿನ ತೊಡಕು ಇರುತ್ತಿರಲಿಲ್ಲ. ಆದರೆ ಈ ನರಹರಿಯೇ ಕುಮಾರ ವಾಲ್ಮೀಕಿಯಲ್ಲವೆಂದೂ, ಆದರೆ ಅವನ ಸಮಕಾಲೀನ ಅಥವಾ ಒಂದೆರಡು ದಶಕ ಈಚಿನವನೆಂದೂ ತೋರುತ್ತದೆ.

## ವೈರಾವಣ ಕಾಳಗದ ಕವಿ ನರಹರಿಯೇ ಕುಮಾರ ವಾಲ್ಮೀಕಿಯಲ್ಲ

'ತೊರವೆ ರಾಮಾಯಣದ ಮೊದಲನೆಯ ಮತ್ತು ಎರಡನೆಯ ಸಂಪುಟಗಳ ಸಂಪಾದಕರಿಬ್ಬರೂ, ವೈರಾವಣ

---

1. ಬಿ. ಎ. ಸಾಲೆತ್ತೂರು-Ancient Karnataka. ಸಂ. ೧-೪೩೮.
   ಶ್ರೀ ವಾದಿರಾಜಸ್ವಾಮಿಗಳು ತಮ್ಮ 'ಮಧ್ವಸುವ್ವಾಲಿ'ಯಲ್ಲಿ
   ಕೇರಳಾ ಭೂಮಿಯನ್ನು ತೋಡು ಅಗಳು ಎಂದರೆ,
   ನೀ ತೋಡಿಸಿಕೊಟ್ಟರೆ ನಾ ತೋಡುವೆನೆಂದರು (೬೭)
ಎಂದಿದ್ದಾರೆ. ಇದರಿಂದ ಕ್ರಿ.ಶ. ೧೨೩೪–೧೨೬೫ರ ಕಾಲದಲ್ಲಿ ಕರ್ನಾಟಕ ಹಾಗೂ ಕಣ್ಣಾನೂರುಗಳಲ್ಲಿ ಆಳಿದ ಹೊಯ್ಸಳ ಸೋಮೇಶ್ವರದೇವನೇ 'ಮಧ್ವವಿಜಯ'ದಲ್ಲಿ ಸೂಚಿತನಾದ ಈಶ್ವರದೇವನೆಂಬ ಅಭಿಮತವೂ ಇದೆ. ಕೆ. ವೆಂಕಟರಾಯಾಚಾರ್ಯ-'ಸಾಹಿತ್ಯದ ಹಿನ್ನೆಲೆ'ಯಲ್ಲಿ 'ಶ್ರೀ ಮಧ್ವಾಚಾರ್ಯರ ಕಾಲಮಾನ ವಿಚಾರ ಎಂಬ ಲೇಖನ' ಪು. ೪೭.
2. ತೊ. ರಾ. ೧-೧೨-೨೯, ೪-೧೦-೪, ೪-೧೦-೫, ೬-೨೮-೬೬.
3. ಕೋ. ಚೆನ್ನಬಸಪ್ಪ-ಶ್ರೀ ರಾಮಾಯಣದರ್ಶನಂ ಮಹಾಕಾವ್ಯ ಸಮೀಕ್ಷೆ-ಯಲ್ಲಿ 'ಶ್ರೀರಾಮಾಯಣ ದರ್ಶನದಲ್ಲಿ ಶ್ರೀ ಅರವಿಂದ ದರ್ಶನ' ಪ್ರಕರಣ. ಪು. ೩೮-೫೪.
4. ವೆಂಕಟರಾಮನ್-The Throne of Transcendental Wisdom. p. 21
   ನಾ. ಶ್ರೀ. ರಾಜಪುರೋಹಿತ–ಶ್ರೀಮತ್ ಸುರೇಶ್ವರಾಚಾರ್ಯರ ಚರಿತ್ರೆ–ಪು. ೬೯.
   ಕ. ಕ. ಚರಿತಕಾರರು ವಿದ್ಯಾಶಂಕರರ ಕಾಲವನ್ನು ಉಲ್ಲೇಖಿಸಿಯೂ ನರಹರಿಯ ಕಾಲವಿಚಾರದ ಸತ್ಯವನ್ನು ನಿರಾಕರಿಸಿದ್ದು ಸ್ಪಷ್ಟವಿದೆ. ಕ. ಕ. ಚ. ೨-೧೪೬.

ಕಾಳಗ ಮತ್ತು ತೊರವೆ ರಾಮಾಯಣಗಳ ಶೈಲಿಗಳಲ್ಲಿನ ವ್ಯತ್ಯಾಸದ ಆಧಾರದ ಮೇಲೆ ಅವೆರಡರ ಏಕಕರ್ತೃತ್ವ ವಿಚಾರದಲ್ಲಿ ಸಂದೇಹ ವ್ಯಕ್ತಪಡಿಸಿದ್ದಾರೆ.[1] ಆದರೆ ಅವೆರಡೂ ಒಬ್ಬ ಕವಿಯಿಂದಲೇ ರಚಿತವಾದವುಗಳೆಂದೂ, ಕುಮಾರ ವಾಲ್ಮೀಕಿ ಮತ್ತು ನರಹರಿ-ಎರಡೂ ಒಬ್ಬ ಕವಿಯವೇ ಹೆಸರುಗಳು-ಎಂದೂ ಹೇಳಿಕೆಗಳಿವೆ.[2] ಈ ಅಭಿಪ್ರಾಯದ ಸತ್ಯಾಸತ್ಯತೆಯನ್ನು ಪರಿಶೀಲಿಸುವುದು ಅನಿವಾರ್ಯವಾಗಿದೆ.

ಅವೆರಡು ಕೃತಿಗಳೂ ಏಕಕವಿಕೃತವಾಗಿರಬೇಕು ಎನ್ನುವುದಕ್ಕೆ ಕೊಡಲಾದ ೪ ಕಾರಣಗಳನ್ನು ಈಗ ಪರಿಶೀಲಿಸಬೇಕಾಗಿದೆ. (ಹೀಗೆ ಕಾರಣಗಳನ್ನು ನೀಡಿದವರು ಮೈ. ರಾ. ಕಾಳಗದ ಸಂಪಾದಕರಾದ ಶ್ರೀ ರಾಮಾನುಜ ಅಯ್ಯಂಗಾರರು)[3]

(೧) ತೊರವೆ ರಾಮಾಯಣದ ಗ್ರಂಥಕರ್ತನು ಈ ನರಹರಿಯೇ ಎಂದು ಊಹಿಸುವುದಕ್ಕೆ ತೊ. ರಾ. ದ ಪೀಠಿಕಾ ಸಂಧಿಯ ಈ ಪದ್ಯವೇ ಬಲುಮಟ್ಟಿಗೆ ಕಾರಣ :

ಚಾರುತರ ಕರ್ಣಾಟಕದ ವಿ
ಸ್ತಾರರಾಮಾಯಣಕೆ ಕರ್ತೃ ಕು
ಮಾರ ವಾಲ್ಮೀಕಿಯೆ ಕಥಾಪತಿ ತೊರವೆಯಧಿನಾಥ
ವೀರನರಹರಿಯೆನಲು ಮೆಚ್ಚದ
ರಾರು ಸತ್ಕವಿತಾವಿಲಾಸದ
ಸೂರಿಗಳ ಹೃದಯಾಕರುಷಣ ಕಥಾಕುತೂಹಲವ[4]

"ನರಹರಿಯನ್ನು ಕಥಾಧಿಪತಿ" ಎಂದು ಕರೆದುಕೊಂಡದ್ದರಿಂದಲೇ-ಕುಮಾರವ್ಯಾಸನ ಹೆಸರು ನಾರಣಪ್ಪ ಎಂಬ ನಂಬಿಕೆಯ ಜಾಡು ಹಿಡಿದು-ಕುಮಾರ ವಾಲ್ಮೀಕಿಯ ನಿಜನಾಮವು 'ನರಹರಿ' ಯಾಗಿರಬೇಕು. ಇದು ಕೇವಲ ಊಹೆ ಮಾತ್ರ, ತರ್ಕಮಾತ್ರ. ವಿನಯಶೀಲನೂ ದೈವಭಕ್ತನೂ ಆದ ಕವಿಯು ತನ್ನ ಅಧಿದೇವತೆಯಾದ ನರಹರಿಯನ್ನು 'ಕಥಾನಾಯಕ'ನೆಂದು ಮಾತ್ರ ಸಾರಿರುವನಲ್ಲದೆ, ಎಲ್ಲೂ ತನ್ನ ಹೆಸರು ಅದೇ ಎಂದು ಸೂಚಿಸಿಯೂ ಇಲ್ಲ. ಅದು ಅವನ ಮನೋಧರ್ಮಕ್ಕೆ ಅನುಗುಣವಾದುದು ಎಂದೆನಿಸುವುದಿಲ್ಲ.

ತನ್ನ ಒಂದು ಕೃತಿಯಲ್ಲಿ (ಮೈ. ರಾ. ಕಾಳಗದಲ್ಲಿ) ತಾನು "ನರಹರಿ" ಎಂದು ಸ್ಪಷ್ಟವಾಗಿ ಹೇಳಿಕೊಂಡವನು, ಇನ್ನೊಂದು ಕೃತಿಯಲ್ಲಿ ಹಾಗೆಯೇ ಹೇಳಿಕೊಳ್ಳದಿರುವುದಕ್ಕೆ ಕಾರಣವಾದರೂ ಏನು ?

ಅಷ್ಟಲ್ಲದೆ, ಮೈರಾವಣಕಾಳಗದ,

ಧರೆಯೊಳಗೆ ರಾಮಾಯಣಾಖ್ಯೆಯ
ವರಕಥೆಯನೊಲವಿಂದೆ ಜನಗಳ
ದುರಿತನಾಶನವೆಂದೊರೆದ ವಾಲ್ಮೀಕಿ ಮುನಿರಾಯ.

---

1. ತೊ. ರಾ. ಸಂಪುಟ ೧. ಪೀಠಿಕೆ ೧೪.
   ಅದೇ. ಸಂಪುಟ ೨ ಪೀಠಿಕೆ ೧೫.
2. ಅ) ಆರ್ ನರಸಿಂಹಾಚಾರ್ಯ-ಕ. ಕ. ಚ. ೨-೧೪೧.
   ಆ) ಮಂ. ಆ. ರಾಮಾನುಜಯ್ಯಂಗಾರ್-ಮೈರಾವಣಕಾಳಗದ ಪೀಠಿಕೆ ಪು. ೧.
   ಇ) ರಂ. ಶ್ರೀ. ಮುಗಳಿ-ಕ. ಸಾ. ಚ. ಪು. ೨೬೬.
   ಈ) ಕೆ. ವೆಂ. ಆಚಾರ್ಯ-ಸಾಹಿತ್ಯದ ಹಿನ್ನೆಲೆ-ಪು. ೬೯.
3. ಮಂ. ಆ. ರಾಮಾನುಜ ಅಯ್ಯಂಗಾರ್ಯ-ಮೈರಾವಣಕಾಳಗದ ಪೀಠಿಕೆ ಪು. ೧-೨.
4. ತೊ. ರಾ. I ೧-೯.

ವರ ಮುನೀಶನ ಕರುಣೆಯಿಂದಲಿ
ವಿರಚಿಸಿದ ಬುಧನಂಶಜನು ನರ
ಹರಿಯೆನಿಸಿಪನಿಳೆಯೊಳಗೆ ಮೈರಾವಣನ ಕಾಳಗವ[1]

ಈ ಪದ್ಯವು, ರಾಮಾಯಣವನ್ನು ಬರೆದ ಕವಿ ಬೇರೊಬ್ಬನೆಂದೂ, ಅವನ ದಯೆಯಿಂದ ತಾನು ಕಾವ್ಯ ಬರೆದುದಾಗಿಯೂ ತಿಳಿಸುತ್ತದೆ. ಇವನೇ ರಾಮಾಯಣವನ್ನೂ ಬರೆದಿರುತ್ತಿದ್ದರೆ ಹೀಗೆ ಹೇಳುತ್ತಿರಲಿಲ್ಲ. ಈ ಪದ್ಯದಲ್ಲಿನ "ವಾಲ್ಮೀಕಿ ಮುನಿರಾಯ" ಎನ್ನುವುದು ಕುಮಾರ ವಾಲ್ಮೀಕಿಗೆ ಸಂಬಂಧಿಸಿದ್ದಿರಬಹುದು.[2] ತನಗೆ ಮಾರ್ಗದರ್ಶನ ನೀಡಿದ ಕವಿಯ ಕುರಿತಾಗಿರುವ ಗೌರವಭಾವನೆ ಇಲ್ಲಿ ವ್ಯಕ್ತವಾಗುತ್ತದೆ.

ಅದಲ್ಲದೆ, ಮೇಲೆ ಉಲ್ಲೇಖಿಸಿದ ಮೈ. ರಾ. ಕಾ. ದ ಷಟ್ಪದಿಯು, ತೊ. ರಾ. ದ

ಧರೆಯೊಳಗ್ಗದ ರಾಘವೇಂದ್ರನ
ಚರಿತ ಶತಕೋಟಿ ಪ್ರವಿಸ್ತರ
ವರಮಹಾ ಚಾರಿತ್ರ ರಚನಾ ಸುಪ್ರಬಂಧದಲಿ
ಪರಮ ಭಕ್ತಿಯೊಳಾವನೊಂದ
ಕ್ಷರವ ಕೇಳ್ದನರಂಗೆ ಪಾತಕ
ಹರೆವುದೆಂದು ಕುಮಾರರಿಗೆ ವಾಲ್ಮೀಕಿಮುನಿ ನುಡಿದ[3]

ಎಂಬ ಪದ್ಯದಿಂದ ಪ್ರಭಾವಿತವಾದಂತೆ ತೋರುತ್ತದೆ.

ತೊ. ರಾ. ದ ಅಭ್ಯಾಸದಿಂದ 'ನರಹರಿ'ಗೆ ಮೈರಾವಣ ಕಾಳಗ ರಚಿಸಲು ಸ್ಫೂರ್ತಿ ಮೂಡಿರಬಹುದು. ಈ ಅಂಶವನ್ನು ಸ್ಪಷ್ಟಪಡಿಸುವುದಕ್ಕಾಗಿ—ಮೈ. ರಾ. ಕಾ. ದ ಮೇಲೆ ತೊ. ರಾ. ದ ಪ್ರಭಾವವನ್ನು ಖಚಿತಗೊಳಿಸುವ—ಈ ಮುಂದಿನ ಕೆಲವು ಪದ್ಯಗಳನ್ನು ಹೋಲಿಸಿಕೊಡಲಾಗಿದೆ.

| | ತೊರವೆ ರಾಮಾಯಣ | ಮೈರಾವಣ ಕಾಳಗ |
|---|---|---|
| (ಅ) | ಚರಣಕಾಂತಿಗಳಿಂದ ನೂಪುರ | ಚರಣಯುಗಳದ ನೇವುರಂಗಳ |
| | ಗುರುನಿತಂಬದ ಕಾಂಚಿ ಕೋಮಲ | ಕರದ ಕಂಕಣ ತೋಳಬಳೆಗಳ |
| | ಕರದಿ ಕಂಕಣ ಬೆರಳಿನಿಂದುಂಗುರವು ಕೊರಳಿಂದ.[4] | ಬೆರಳಮುದ್ರಿಕೆಹಾರ ಪದಕದ ರತ್ನದೋಲೆಗಳ.[5] |
| (ಆ) | ಕರದತಲೆಗಿಂಬಿನಲಿ ನಿದ್ರೆಯ | ಚಾಲನನು ತಲೆಗಿಂಬನೆಸಗುತೆ |
| | ಭರದಲಿರ್ದನು ನೀಲಗಿರಿಯನು....[6] | ನೀಲಗಿರಿ ಪವಡಿಸಿದ ತೆರದಲಿ....[7] |
| (ಇ) | ಹಾರಿದುವು ಹಂಸೆಗಳು ತುಂಬಿಗ | ಹಾರಿದುವು ಹಂಸೆಗಳು ಲತೆಗಳ |
| | ಳೇರಿದವು ಮೊರೆದಭ್ರದಗಲಕೆ | ನೇರಿದುವು ಚಕ್ರಾಂಕ ಶಿರಗಳ |
| | ಚೀರಿದವು ಕೊಂಚೆಗಳು ಬಕಶುಕಪಿಕ | ನೂರಿ ಮುಳುಗುತ ತಡಿಗೆ ಸಾರ್ದುವು |
| | ಮಯೂರಚಯ | ಹಂಸಪಕ್ಷಿಗಳು |

---

1. ಮೈ. ರಾ. ಕಾ. I ೭.
2. ತೊ. ರಾ. ಕ್ಕೆ 'ವಾಲ್ಮೀಕಿ ರಾಮಾಯಣ' ಎಂದೇ ತಾಳೆಗರಿ ಪ್ರತಿಗಳಲ್ಲಿದೆ.
3. ತೊ. ರಾ. ೧-೧-೧೩, ೬-೫-೬೯.

| | ತೊ. ರಾ. | | | | ಮೈ. ರಾ. ಕಾಳಗ | |
|---|---|---|---|---|---|---|
| | ಕಾಂ. | ಸಂ. | ಪ. | | ಸಂ. | ಪ. |
| 4. | ೧ | ೧೪ | ೧೬ | 5. | ೨ | ೩೨ |
| 6. | ೫ | ೨ | ೩೮ | 7. | ೩ | ೩೩ |

| | ತೊ. ರಾ. | ಮೈ. ರಾ. ಕಾ. |
|---|---|---|
| | ಜಾರಿದವು ಜಂಗಾಯ್ಲದಲಿ ಕಪಿ<br>ಕೇರಿದವು ವನಮೃಗನಿಚಯ ಮೈ<br>ದೋರಿದವು ದೂರದಲಿ ಕಾಲ್ದುಳಿಗನಿಲನಂದನನ[1] | ಚೀರಿದುದು ಕೊಳರ್ವಕ್ಕಿ ಮರಗಳ<br>ನೇರಿಕೊಂಡವು ಗೂಗೆ ಶುಕಪಿಕ<br>ಬೀರಿದುದು ಪರಿಮಳವ ಮಾರುತ ತನಯನಿದಿರಿನಲಿ[2] |
| (ಈ) | ಕರಡಿಗಳೆ ಕರಿಘಟೆಗಳಾ, ಮುಸುಗಳೆ ತುರಂಗ<br>ಚಯ....ಕರಿಯ ಕಪಿಗಳೆ ತೇರುಗಳು....[3] | ಕರಡಿಗಳ ಕರಿಘಟೆಯ ಮುಸುಗಳ<br>ತುರಗಗಳ....[4] |
| (ಉ) | ಕರುಣದಲಿ ಕೈವಿಡಿದವೊಲು ತವ<br>ಚರಣಕಮಲವನೆನ್ನ ಶಿರದೊಳ....ಗಿರಿಸಿ....[5] | ನಿನ್ನ ಪಾದವ ಕರುಣದಿಂದಲಿ<br>ಯೆನ್ನ ಶಿರದೊಳಗಿರಿಸಿ....[6] |
| (ಊ) | ಕರಿಯ ಕರಿಯಿಂದಿಟ್ಟು ತುರಗವ<br>ತುರಗದಿಂದಪ್ಪಳಿಸಿ....ರಥದಿಂ<br>ದುರುವರೂಥವನುರುಬಿ....[7] | ಇಟ್ಟನಾನೆಯನಾನೆಯಿಂದಲಿ–<br>ಯಿಟ್ಟ ಕುದುರೆಯ ಕಾಲಕಟ್ಟುತ<br>ಮೆಟ್ಟಿಮುರಿದನು ತೇರುಗಳ....[8] |
| (ಎ) | ....ಅರುಣ ಜಲಾಜ್ಯಧಾರೆಯ ನರದ ದರ್ಭೆಗಳ<br>ಬೆರಳ ಸಮಿಧೆಯಲಿ....[9] | ಬೆರಳುಗಳ ಸಮಿಧೆಗಳ<br>....ರಕ್ತಾಜ್ಯದಲಿ ನರದ ದರ್ಭೆಯ ಪವಿತ್ರದಲಿ[10] |
| (ಏ) | ಹನುಮ....ಜೀವಾಂಶುಗನಲಾ....<br>ನಮ್ಮಂತರಂಗದ....[11] | ಹನುಮ....ನಮಗಹನು<br>ಮುಖ್ಯ ಪ್ರಾಣನಿದು ನಿಜವು[12] |

ಇಂತಹ ಉದಾಹರಣೆಗಳ ಪಟ್ಟಿಯನ್ನು ಇನ್ನಷ್ಟು ಉದ್ದ ಬೆಳೆಸಬಹುದಾದರೂ, ಇಷ್ಟರಿಂದಲೇ ನರಹರಿಯು ಕುಮಾರ ವಾಲ್ಮೀಕಿಗೆ ಎಷ್ಟು ಋಣಿಯಾಗಿದ್ದಾನೆ ಎಂಬ ಅಂಶ ಸ್ಪಷ್ಟವಾದೀತು.

(೨) ಮೈರಾವಣ ಕಾಳಗದಲ್ಲಿ ಸ್ತುತನಾದ 'ವಿದ್ಯಾಶಂಕರೋತ್ತಮ'[13] ಮತ್ತು ತೊ. ರಾ. ದಲ್ಲಿ ನಮಿತನಾದ "ಭಾರದ್ವಾಜ ಗುರುರಾಯ"[14] ಇಬ್ಬರೂ ಒಬ್ಬ ಗುರುವೇ ಆಗಿರಬೇಕು ; ಒಬ್ಬ ಗುರುವಿಗೆ ಅವೆರಡೂ ಪರ್ಯಾಯ ಪದಗಳಾಗಿರಬಹುದು–ಎಂದು ತರ್ಕಿಸಲಾಗಿದೆ.[15]

ತನ್ನ ಕೃತಿಯಲ್ಲಿ 'ಮಧ್ವದರ್ಶನ'ವನ್ನು[16] ಪಡಿಮೂಡಿಸಿದ ತೊರವೆ ರಾಮಾಯಣದ ಕವಿಯು ಮಧ್ವಾಚಾರ್ಯರನ್ನೇ ಸ್ತುತಿಸಿದ್ದಾನೆ ಎನ್ನುವುದು ಸೂರ್ಯ ಪ್ರಕಾಶದಷ್ಟು ಸತ್ಯವಾಗಿದೆ. ಪ್ರತಿಕಾರರ ಕೈವಾಡದಿಂದ ಯಾವುದೋ ತೊ. ರಾ. ಪ್ರತಿಯಲ್ಲಿ "ಭಾರದ್ವಾಜಗುರುರಾಯ" ಎಂದಾಗಿರಬೇಕು. ಶೃಂಗೇರಿಯ ಯತಿಪರಂಪರೆಯಲ್ಲಿ ಸುಪ್ರಸಿದ್ಧರಾದ

---

| | ತೊ. ರಾ. ಕಾಂ. | ಸಂ, | ಪ. | | ಮೈ. ರಾ. ಕಾಳಗ ಸಂ. | ಪ. |
|---|---|---|---|---|---|---|
| 1. | ೫ | ೪ | ೧೬ | 2. | ೩ | ೭೦ |
| 3. | ೬ | ೧ | ೧೦ | 4. | ೩ | ೩೦ |
| 5. | ೬ | ೩ | ೨೬ | 6. | ೩ | ೪೮ |
| 7. | ೬ | ೧೩ | ೩೭ | 8. | ೪ | ೨೮ |
| 9. | ೬ | ೩೫ | ೬ | 10. | ೨ | ೪೨ |
| 11. | ೬ | ೫೫ | ೪೪ | 12. | ೪ | ೧೧೭ |

13. ಮೈ. ರಾ. ಕಾ. ೧-೬
14. ತೊ. ರಾ. I ೧-೭.
15. ಮಂ. ಆ. ರಾಮಾನುಜ ಅಯ್ಯಂಗಾರ್ಯ–ಮೈ. ರಾ. ಕಾ. ಪೀಠಿಕೆ ಪು. ೨.
16. ಇದೇ ಪ್ರಬಂಧದ 'ಕೃತಿಯಲ್ಲಿ ತತ್ತ್ವ ದರ್ಶನ' ಪ್ರಕರಣ ನೋಡಬಹುದು.

'ವಿದ್ಯಾಶಂಕರ'ರನ್ನು ಸ್ತುತಿಸಿದ ಕವಿಯು, ತಾನೇ ರಾಮಾಯಣವನ್ನು ಬರೆದಿರುತ್ತಿದ್ದರೆ ಅದರಲ್ಲಿ ಮತ್ತೊಬ್ಬ ಗುರುವನ್ನು ಏಕೆ ಸ್ತುತಿಸುತ್ತಿದ್ದನು ?

ಶೈವರೂ, ಅದ್ವೈತ ಮತಪ್ರವರ್ತಕರೂ ಆದ 'ವಿದ್ಯಾಶಂಕರ' ಮತ್ತು ವೈಷ್ಣವರೂ, ದ್ವೈತ ಮತಪ್ರವರ್ತಕರೂ ಆದ 'ಮಧ್ವಾಚಾರ್ಯ'–ಇವರಿಬ್ಬರ ವಿಶಿಷ್ಟವಾದ ಪ್ರಸಿದ್ಧಿ, ಮಹತ್ವಗಳನ್ನು ಗಮನಿಸದೆ, ಅವರಿಬ್ಬರೂ–ನಾಮಾಂತರದಿಂದ–ಒಬ್ಬ ಗುರುವನ್ನೇ ಸ್ತುತಿಸಿರಬೇಕು ಎನ್ನುವುದು ಉಚಿತವಲ್ಲ.[1]

(೩) ತೊ. ರಾ. ಮತ್ತು ಮೈ. ರಾ. ಕಾಳಗಗಳಲ್ಲಿ ಅನುಕ್ರಮವಾಗಿ ಅಂಕಿತ ರೂಪದಲ್ಲಿ ಬರುವ 'ತೊರವೆಯ ನರಹರಿ' ಮತ್ತು 'ತೊರವೆಯ ರಘುನಾಥ' ಗಳಲ್ಲಿನ ವ್ಯತ್ಯಾಸವು ಈ ಗ್ರಂಥಕರ್ತರು ಬೇರೆ ಬೇರೆ ಎಂದು ಊಹಿಸುವುದಕ್ಕೆ ಅವಕಾಶವುಂಟುಮಾಡಿದೆ ಎಂದು ಮೈ. ರಾ. ಕಾ. ದ ಸಂಪಾದಕರೇ ಸಮ್ಮತಿಸಿದ್ದಾರೆ. ಆದರೂ, "ಅವೆರಡೂ ಪರ್ಯಾಯ ಪದಗಳಾದುದರಿಂದ ಅವರು ಭಿನ್ನ ಕರ್ತೃಗಳೆಂದು ಉಪಪಾದಿಸಲಾಗುವುದಿಲ್ಲ"–ಎನ್ನುವುದು ಅವರ ತರ್ಕ.

"ತೊರವೆ" (ತೊರವೆ ರಾಮಾಯಣವು ?)ಯು ಆ ಇಬ್ಬರು ಕವಿಗಳನ್ನೂ ಒಂದುಗೂಡಿಸಿರಬಹುದು. ಆದರೆ, ಈ ಹಿಂದೆ ವಿವೇಚಿಸಿದಂತೆ ಆ ಇಬ್ಬರು ಕವಿಗಳು ಬೇರೆ ಬೇರೆ ಗುರುಗಳ ಶಿಷ್ಯರು–ಎನ್ನುವ ಅಂಶವನ್ನು ಪೋಷಿಸಿ, ಅವರ ಕಾವ್ಯಗಳಲ್ಲಿನ 'ಅಂಕಿತ'ಗಳೂ, ಆ ಕೃತಿಗಳ ಭಿನ್ನ ಕರ್ತೃತ್ವವನ್ನೇ ಸ್ಥಾಪಿಸುತ್ತವೆ.[2]

೪. 'ಮೈರಾವಣಕಾಳಗದಲ್ಲಿ ಕವಿಯು ತನ್ನ ಬಿರುದನ್ನು ಹೇಳಿಕೊಳ್ಳದೆ ಇರುವುದರಿಂದ, ಆತನು ರಾಮಾಯಣ ರಚಿಸುವುದಕ್ಕೆ ಮೊದಲು ಬರೆದ ಗ್ರಂಥ ಇದಾಗಿರಬಹುದು'–ಎನ್ನುವುದು ಮೈ. ಕಾ. ಸಂಪಾದಕರ ಇನ್ನೊಂದು ಊಹೆ. ಕುಮಾರ ವಾಲ್ಮೀಕಿಗೆ ಯಾವ ಬಿರುದನ್ನೂ, ಯಾರೂ ಕೊಟ್ಟಂತಿಲ್ಲ. ಆದಿಕವಿ ವಾಲ್ಮೀಕಿಯನ್ನು 'ಕವಿ ರಾಜ ಹಂಸ'ನೆಂದು ಸ್ತುತಿಸಿದ ಕುಮಾರ ವಾಲ್ಮೀಕಿಯು, ಕಾವ್ಯದ ಕೊನೆಯಲ್ಲಿ ತಾನೂ (ಕುಮಾರ) ವಾಲ್ಮೀಕಿಯೆಂಬ ಆತ್ಮ ವಿಶ್ವಾಸದ ಭರದಲ್ಲಿ ತನ್ನನ್ನೂ 'ರಾಜಹಂಸ'ನೆಂದು ಕರೆದುಕೊಂಡಿರಬೇಕು. ಇದು ಕವಿಯು ಸಂಪಾದಿಸಿಕೊಂಡ ಬಿರುದು ಆಗಿದ್ದಿದ್ದರೆ, ಅವನನ್ನು ಸ್ಮರಿಸಿದ ಬಬ್ಬೂರ ರಂಗ ಮೊದಲಾದವರು ಅದನ್ನು ಉಲ್ಲೇಖಿಸದೆ ಇರುತ್ತಿರಲಿಲ್ಲ.

ಅಲ್ಲದೆ, ಕವಿಯು ತನ್ನ ಎರಡನೆಯ ಕೃತಿಯಲ್ಲಿ, ಮೊದಲನೆಯದರ ಸೂಚನೆಯನ್ನಾದರೂ ನೀಡದೆ ಇರುತ್ತಿರಲಿಲ್ಲ. ಹಾಗಾಗಿ ಅವೆರಡೂ ಏಕಕವಿಕೃತಿಗಳಲ್ಲ.

## ಇನ್ನೂ ಒಂದು ವಿಚಾರ

'ಬತ್ತಲೇಶ್ವರ' ವಿರಚಿತ 'ರಾಮಾಯಣ'ದ ೩೯ ಮತ್ತು ೪೦ನೇ ಸಂಧಿಗಳಲ್ಲಿ 'ಐರಾವಣ ಕಾಳಗದ ಕಥೆ'

---

1. "ಮೈ. ರಾ. ಕಾಳಗವನ್ನು ಬರೆದಾಗ 'ವಿದ್ಯಾಶಂಕರರನ್ನು' ಸ್ತುತಿಸಿದ ಕವಿಯು ತನ್ನ ಶ್ರದ್ಧೆಯನ್ನು ಬದಲಾಯಿಸಿ–ಮತ್ತೆ ಮಧ್ವಾಚಾರ್ಯರನ್ನು ನಮಿಸಿರಬಹುದೇ ?–ಎಂಬ ಪ್ರಶ್ನೆ ತಲೆಯೆತ್ತಬಹುದು. ಕನಕದಾಸರು ಮೊದಲು ಶ್ರೀರಾಮಾನುಜಮತದ ಶ್ರೀ ವೈಷ್ಣವ ತತ್ವವನ್ನು ಸ್ವೀಕರಿಸಿ ಮೋಹನ ತರಂಗಿಣಿ, ಮೊದಲಾದ ಗ್ರಂಥಗಳನ್ನು ಬರೆದವರು, ತನ್ನ ಹರಿಭಕ್ತಿಸಾರದಲ್ಲಿಯೂ, ಉಳಿದ ಪದ ಪದ್ಯಗಳಲ್ಲಿಯೂ, ಮಾಧ್ವಸಂಪ್ರದಾಯದ ಪ್ರಮೇಯಗಳನ್ನು ಎತ್ತಿ ಹಿಡಿದಿದ್ದಾರೆ"–ಎಂಬ ಹೇಳಿಕೆಯಿದೆ (ರಾ. ಸ್ವಾ. ಪಂಚಮುಖಿ–ಹರಿದಾಸ ಸಾಹಿತ್ಯ–ಪು. ೬೬) ಆದರೆ, ಗುರು ತತ್ತ್ವ ವಿಚಾರಗಳನ್ನು ಬಿಡು, ತಮ್ಮ ಹೆಸರು, ಅಂಕಿತ, ಕಾವ್ಯಶೈಲಿ, ಪ್ರಭಾವಗಳನ್ನು ಗಮನಿಸಿದರೆ–ಶ್ರದ್ಧಾಂತರಕ್ಕೆ ಯಾವ ಪೋಷಣೆಯೂ ದೊರೆಯದು.

2. 'ಅಷ್ಟ ಪರ್ವಭಾರತ'ವು ತಿಮ್ಮಣ್ಣನದೇ ಆದರೂ, 'ಸ್ತ್ರೀಪರ್ವ'ವು ಶ್ರೀನಿವಾಸನೆಂಬ ಇನ್ನೊಬ್ಬ ಕವಿಯದಾಗಿದೆ–ಎನ್ನುವುದನ್ನು ಇಲ್ಲಿ 'ವಿಚಾರ ಸಾದೃಶ್ಯ' ಕಾರಣದಿಂದ ಸ್ಮರಿಸಬಹುದು.

ಇದೇ ಸಂದರ್ಭದಲ್ಲಿ, ಕುಮಾರ ವಾಲ್ಮೀಕಿಯು, ಕುಮಾರವ್ಯಾಸನನ್ನು ಅನುಸರಿಸಿ ವಸ್ತುಕ, ವರ್ಣಕಗಳೆರಡನ್ನೂ ಬರೆದಿರಬಹುದು–ಎನ್ನುವ ವಿಚಾರಕ್ಕೆ ಅವಕಾಶವಿದೆ. ಇದರ ಒಂದು ಸೂಚನೆಯು, ತೊ. ರಾ. ದ IV ೫೫-೬೭ರಲ್ಲಿ ದೊರೆಯುತ್ತದೆ. ಆದರೆ ಕುಮಾರ ವಾಲ್ಮೀಕಿಯ ಇನ್ನೊಂದು ಕೃತಿಯು "ಮೈರಾವಣ ಕಾಳಗ"ವಾಗಿರಲಾರದು ಎನ್ನುವುದು ಸ್ಪಷ್ಟ. ಕುಮಾರವ್ಯಾಸನ ಇನ್ನೊಂದು ಕೃತಿ 'ಐರಾವತ' ಎಂಬ ಪ್ರತೀತಿಯ ಪರ ಮತ್ತು ವಿರೋಧ ಅಭಿಪ್ರಾಯಗಳನ್ನು ಇಲ್ಲಿ ನೆನಪಿಸಬಹುದು (ರಂ. ಶ್ರೀ. ಮುಗಳಿ. ಕ. ಸಾ. ಚ. ಪು. ೨೪೮ ನೋಡಿ.)

ಯಿದೆ.[1] ಈ ಕಥೆಯನ್ನು ಹೇಳುವ ಒಟ್ಟು ೯೭ ಷಟ್ಪದಿಗಳಲ್ಲಿ[2] ೭೫ಕ್ಕೂ ಮಿಕ್ಕಿ 'ನರಹರಿ' ರಚಿತ 'ಮೈರಾವಣ ಕಾಳಗ'ದ ಷಟ್ಪದಿಗಳೇ ಇವೆ. ತೊರವೆ ರಾಮಾಯಣದ ಕೆಲವು ತಾಳೆಗರಿ ಪ್ರತಿಗಳಲ್ಲಿ[3] ಸಿಗುವ 'ಮೈರಾವಣಕಾಳಗ'ದಲ್ಲಿನ ಪದ್ಯಗಳಲ್ಲಿ ಬಹುಪಾಲು 'ನರಹರಿ ಕೃತ'ವೆಂದೇ ಸ್ಪಷ್ಟವಾಗುತ್ತದೆ. ಇದರಿಂದ 'ಮೈರಾವಣ ಕಾಳಗ'ವು ಪ್ರತ್ಯೇಕ ಕೃತಿಯಾಗಿದ್ದು, ಪ್ರತಿಕಾರರು ತೊರವೆ ಮತ್ತು ಬತ್ತಲೇಶ್ವರ ರಾಮಾಯಣಗಳಲ್ಲಿ ಸಂದರ್ಭೋಚಿತವಾಗಿ ಅದನ್ನು ತುರುಕಿಸಿರಬೇಕು. ಏಕೆಂದರೆ ಮೈರಾವಣ ಕಾಳಗವು ರಾಮಾಯಣದ ಪ್ರತಿಗಳಲ್ಲಿ ಬರುವ ಸಂದರ್ಭಗಳಲ್ಲಿ ಸಾಮ್ಯವಿಲ್ಲ. ಮೈ. ರಾ. ಕಾ. ದ ಕವಿಯೇ 'ರಾಮಾಯಣ'ವನ್ನೂ ಬರೆದಿದ್ದರೆ, ಅದನ್ನು ನಿಶ್ಚಿತವಾದ ಸನ್ನಿವೇಶದಲ್ಲೇ ಸೇರಿಸುತಿದ್ದು, ಇಂತಹ ವೈಷಮ್ಯವು ತಪ್ಪುತಿತ್ತು.

ತೊರವೆ ರಾಮಾಯಣದ ಕೆಲವು ಪ್ರತಿಗಳಲ್ಲಿ, 'ಮೈರಾವಣ ಕಾಳಗ'ದಂತೆ 'ಕಪೋತ ಚರಿತೆ'ಯೂ[4] ಸೇರಿಸಲ್ಪಟ್ಟಿದೆ. ಕಥೆಗೆ ಪೂರಕವಾಗಿದೆ ಎಂಬ ಕಾರಣದಿಂದ ಪ್ರತಿಕಾರರು ಇದನ್ನೂ ಕಾವ್ಯದ ಕೊನೆಯಲ್ಲಿ ಬರೆದಿರಬೇಕು. ಅಷ್ಟೆ.[5] ಮೈ. ರಾ. ಕಾ. ದಂತೆ ಇದನ್ನೂ ಕುಮಾರ ವಾಲ್ಮೀಕಿ ಕೃತ ಎಂದರೆ ಹೇಗಾದೀತು?

ಈ ವಿಶ್ಲೇಷಣೆಯಿಂದ, ವಿದ್ಯಾಶಂಕರರ ಶಿಷ್ಯ, ಮೈರಾವಣ ಕಾಳಗದ ಕವಿ ನರಹರಿಯು ಕುಮಾರ ವಾಲ್ಮೀಕಿಯ ಕಾಲದ ಈಚೆಗಿನ ಎಲ್ಲೆ ಎಂದು ನಿರ್ಣಯಿಸಬಹುದು. ಎಂದರೆ ೧೪ನೆ ಶತಮಾನದಲ್ಲಿ (ಮಧ್ಯಭಾಗದಲ್ಲಿ) ಕುಮಾರ ವಾಲ್ಮೀಕಿಯು ಇದ್ದಿರಬೇಕು. ಇದಕ್ಕೆ ಹಿನ್ನೆಲೆಯಾಗಿ, ಈ ಮೊದಲೇ ವಿವರಿಸಿದ 'ಮಧ್ವಾಚಾರ್ಯರ ಪ್ರಭಾವದ' ಅಂಶವೂ ಸರಿಹೊಂದಿಕೊಳ್ಳುತ್ತದೆ.

## ಕುಮಾರ ವಾಲ್ಮೀಕಿಯು ೧೪ನೆಯ ಶತಕದವನು ಎಂಬುದಕ್ಕೆ ಪೂರಕವಾಗಿ

೧. ಪುರಂದರದಾಸರ ತೊರವೆಯ ನರಹರಿಯ ಕುರಿತಾದ ಕೀರ್ತನೆಯಲ್ಲಿ 'ಗಾನವಿನೋದಿ ನಮ್ಮ ತೊರವೆಯ ನರಸಿಂಹ'–ಎಂದಿದೆಯಷ್ಟೆ.[6] ಇಲ್ಲಿ ಗಾನ ವಿನೋದಿ ಎಂದರೆ– ಕುಮಾರ ವಾಲ್ಮೀಕಿಯ 'ರಾಮಾಯಣ ಗಾನದಿಂದ ಪ್ರಸನ್ನನಾದ ನರಸಿಂಹ ಎಂಬ ಭಾವ ಇರಬಹುದೇ? ವಾಲ್ಮೀಕಿಯು ತನ್ನ ಕಾವ್ಯವನ್ನು 'ಗಾನ' ಎಂದೇ ಸೂಚಿಸಿದ್ದಾನೆ.[7] ತೊರವೆ ರಾಮಾಯಣದ ಕಾರಣದಿಂದ ಸ್ವತಃ ಕವಿಗಳೂ ಆದ ಪುರಂದರದಾಸರು 'ತೊರವೆ'ಯಿಂದ ಆಕರ್ಷಿತರಾಗಿದ್ದಿರಬಹುದೇ? ಅಂತೂ, ಪುರಂದರದಾಸರಿಗಿಂತ ಮೊದಲೇ ಕುಮಾರ ವಾಲ್ಮೀಕಿಯ ರಾಮಾಯಣಗಾನವು ನರಹರಿಯ ಸನ್ನಿಧಿಯಲ್ಲಿ ಸೃಷ್ಟಿಯಾಗಿತ್ತೆಂಬ ನಿರ್ಣಯಕ್ಕೆ ಇದು ಪೂರಕವಾಗಿದೆ.

---

1. ಈ ಕುರಿತಾದ ವಿಸ್ತಾರವಾದ ವಿವೇಚನೆಗೆ ಇದೇ ಲೇಖಕನು 'ಯುಗಪುರುಷ–ಪ್ರಜಾಪ್ರಭುತ್ವ ವಿಶೇಷಾಂಕ ೧೯೭೪ರಲ್ಲಿ ಬರೆದ 'ಬತ್ತಲೇಶ್ವರ ಕೃತ ಕೌಶಿಕ ರಾಮಾಯಣ–ಕೆಲವು ಸಮಸ್ಯೆಗಳು' ಲೇಖನ ನೋಡಬಹುದು.
2. ಬತ್ತಲೇಶ್ವರ ಕೃತ 'ಕೌಶಿಕ ರಾಮಾಯಣ' ಸಂ : ಶಿವರಾಮಕಾರಂತ. ಸಂಧಿ ೩೯-೬೦ ಪದ್ಯಗಳು<br>ಸಂಧಿ ೪೦-೩೬ ಪದ್ಯಗಳು.
3. ಮೈ. ವಿಶ್ವವಿದ್ಯಾನಿಲಯದ ಪ್ರಕಟಣೆಗೆ ಉಪಯೋಗಿಸಿಕೊಂಡ 'ಚ' ಮತ್ತು 'ಣ' ಪ್ರತಿಗಳು ಮತ್ತು ನಾನು ಪ್ರತ್ಯೇಕವಾಗಿ ಪರಿಶೀಲಿಸಿದ ೩ ತಾಳೆಗರಿ ಪ್ರತಿಗಳು.
4. ಕಪೋತ ಚರಿತೆಯು ೧೨೦ ಷಟ್ಪದಿಗಳುಳ್ಳ ಒಂದು ನಿರೂಪಕ ಕಾವ್ಯ. ಇದು ಇನ್ನೂ ಅಚ್ಚುಗೊಂಡಿಲ್ಲ. ಮೈ. ವಿ. ದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಡಾ. ಹಾ. ಮಾ. ನಾಯಕರ ಕೃಪೆಯಿಂದ ಈ ಕೃತಿಯ ತಾಳೆಗರಿ ಪ್ರತಿಗಳ ಪರಿಶೀಲನೆ ನನಗೆ ಸಾಧ್ಯವಾಯಿತು. ಈ ಕಾವ್ಯವು ತೊ. ರಾ. ಕ್ಕಿಂತ ಇತ್ತೀಚಿನ ರಚನೆಯಾಗಿದ್ದು, ಅದು ಹೊಂದಿದ ಪ್ರಭಾವಕ್ಕೆ 'ತೊರವೆ ರಾಮಾಯಣದ ಪ್ರಭಾವ ದರ್ಶನ' ಪ್ರಕರಣ ನೋಡಿರಿ.
5. 'ಬತ್ತಲೇಶ್ವರ, ರಾಮಾಯಣದ'ದ ಕೆಲವು ಪ್ರತಿಗಳಲ್ಲಿ ಕೌಸಲ್ಯಾ ವಿವಾಹ–ರಾಮಾಯಣ–ಮೂಲಕಾ ಸುರ ಕಾಳಗಗಳು ಸೇರಿಕೊಂಡಿವೆ. ಎಸ್. ಎನ್ ಕೃಷ್ಣಜೋಯಿಸ–'ಕೌಸಲ್ಯಾ ವಿವಾಹ–ವರದ ವಿಠಲ ರಾಮಾಯಣ'–ಪ್ರಬುದ್ಧ ಕರ್ನಾಟಕ, ೪೫-೨. ತೊ. ರಾ. ದ ಪ್ರತಿಗಳಲ್ಲಿ ಕಪೋತಚರಿತೆ ಮತ್ತು ಮೈ. ರಾ. ಕಾಳಗಗಳು ಸೇರಿಕೊಂಡದ್ದರ ಸಾದೃಶ್ಯವನ್ನು ಇಲ್ಲಿ ಗುರುತಿಸಬಹುದು.
6. ಪುರಂದರದಾಸರ ಕೀರ್ತನೆಗಳು ಭಾಗ ೧.
7. ವಾಲ್ಮೀಕಿರಾಮಾಯಣ. ಬಾಲಕಾಂಡ. ಸರ್ಗ ೪, ಶ್ಲೋಕ ೮, ೯, ೧೭, ೨೦.

೨. ಕುಮಾರ ವಾಲ್ಮೀಕಿಯ ಕೃತಿಯಿಂದ ಸ್ಪಷ್ಟ ಪ್ರಭಾವ ಹೊಂದಿದ ರಾಮಾಯಣದ ಕವಿ ಬತ್ತಲೇಶ್ವರನ ಕಾಲವನ್ನು, ಈ ಕೃತಿಯ ಸಂಪಾದಕರಾದ ಡಾ. ಶಿವರಾಮ ಕಾರಂತರು 'ಕ್ರಿ.ಶ. ೧೫೦೦ರ ಪೂರ್ವಕ್ಕೆ ಸರಿಯಿಸಬಹುದು' ಎಂದಿದ್ದಾರೆ.[1] ಇದು ವಾಸ್ತವವಾಗಿದ್ದರೆ, ತೊರವೆ ರಾಮಾಯಣದ ಕಾಲವು ಕ್ರಿ.ಶ. ೧೪ನೆ ಶತಮಾನವೆಂಬ ನಮ್ಮ 'ಕಾಣ್ಕೆ'ಗೆ ಇನ್ನೊಂದು ಪ್ರಬಲ ಆಧಾರ ದೊರೆತಂತಾಗುತ್ತದೆ. ಶ್ರೀ. ಎಸ್. ಎನ್. ಕೃಷ್ಣ ಜೋಯಿಸರು ಬತ್ತಲೇಶ್ವರ ಕಾಲವನ್ನು ೧೭ನೇ ಶತಕದ ಆದಿಭಾಗ ಎಂದಿದ್ದಾರೆ.[2] ಇದೇ ಸತ್ಯವಾಗಿದ್ದರೂ, ಕುಮಾರ ವಾಲ್ಮೀಕಿಯ ಪ್ರಾಚೀನತೆಯ ನಿರ್ಣಯಕ್ಕೆ ಆತಂಕವಾಗುವುದಿಲ್ಲ.

೩. ಮೈ. ರಾ. ಕಾಳಗ, ಬತ್ತಲೇಶ್ವರ ರಾಮಾಯಣಗಳಂತೆಯೇ, ಕೆಲವು ದಾಸರ ಕೀರ್ತನೆಗಳು ಸುಬ್ರಹ್ಮಣ್ಯ ಕವಿ ವಿರಚಿತ 'ಹನೂಮದ್ರಾಮಾಯಣಂ,' ಕಪೋತ ಚರಿತೆ, ಮತ್ತು ಬಹುಮಟ್ಟಿಗೆ ರಾಮಾಯಣ ಕಥಾನಕಗಳುಳ್ಳ ಎಲ್ಲಾ ಯಕ್ಷಗಾನ ಪ್ರಸಂಗಗಳು[3]–ಇವೆಲ್ಲವುಗಳ ಮೇಲೆ ಪ್ರಭಾವಬೀರಿದ ತೊರವೆ ರಾಮಾಯಣದ ಸೃಷ್ಟಿಯ ಕಾಲವು ೧೪ನೇ ಶತಮಾನ ಮಧ್ಯಭಾಗವೆಂದರೆ ಆ ಕಾಲದ ಪರಿಸ್ಥಿತಿಯಲ್ಲಿ ಪರಿಣಾಮ, ಪ್ರಭಾವಗಳ ವ್ಯಾಪ್ತಿಗೆ ಅಗತ್ಯವಾದ ಕಾಲಾವಕಾಶವೂ ದೊರೆತಂತಾಗುತ್ತದೆ.[4]

೪. ಇಂದು ತೊರವೆಯ ದೇವಾಲಯದಲ್ಲಿ ನರಸಿಂಹ ಮೂರ್ತಿಯು ಸುಮಾರು ೧೦ ಅಡಿ ಆಳದಲ್ಲಿ ಗುಹಾವಾಸಿಯಾಗಿದೆ.[5] ಆದರೆ, ಕುಮಾರ ವಾಲ್ಮೀಕಿಯ ಕಾಲದಲ್ಲಿ ಹೀಗಿರಲಿಲ್ಲವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಕುಮಾರ ವಾಲ್ಮೀಕಿಯು ನರಹರಿಯನ್ನು ಒಂದಡೆಯೂ 'ಗುಹಾವಾಸಿ' ಎಂದು ಉಲ್ಲೇಖಿಸಿಲ್ಲ. ಅವನು ನರಹರಿದೇವಾಲಯದ ವೈಭವದ ಕಾಲದಲ್ಲಿಯೆ ಕಾವ್ಯ ರಚನೆಮಾಡಿದಂತೆ ತೋರುತ್ತದೆ.[6] ತೊರವೆಯ ಪುರವರ, ತೊರವೆಯಧಿಪತಿ ಎನ್ನುವಲ್ಲಿಯೂ, ಅಯೋಧ್ಯೆಯ ವೈಭವವನ್ನು ವರ್ಣಿಸುತ್ತಾ 'ಹಿರಣ್ಯಕಭಂಗನಂತರ್ಗೃಹದವೊಲು ಲಕ್ಷ್ಮೀ ವಿಲಾಸಮಯ'[7] ಎನ್ನುವಲ್ಲಿಯೂ ತೊರವೆಯ ಸಮೃದ್ಧ ಸ್ಥಿತಿಯು ಸೂಚಿತವಾಗುತ್ತದೆ, ದೇವಾಲಯದ 'ಶ್ರೀ ನಿಲಯತ್ವ'ವೂ ಧ್ವನಿತವಾಗುತ್ತದೆ. ಸು. ೧೫–೧೬ನೇ ಶತಮಾನಗಳಲ್ಲಿ ಬಿಜಾಪುರದಲ್ಲಿ ಮುಸಲ್ಮಾನರ ಆಳ್ವಿಕೆ, ಚಟುವಟಿಕೆಗಳು ಬಲಗೊಂಡ ಕಾಲ.[8]

---

1. ಶಿವರಾಮ ಕಾರಂತ-ಬತ್ತಲೇಶ್ವರ ವಿರಚಿತ ಕೌಶಿಕ ರಾಮಾಯಣ, ಮೊದಲಮಾತು ಪು. ೧೫

2. ಎಸ್. ಎನ್. ಕೃಷ್ಣ ಜೋಯಿಸ್-ಬತ್ತಲೇಶ್ವರ ರಾಮಾಯಣ ರಚನಾ ಕಾಲವನ್ನು ಕುರಿತು-ಪ್ರಬುದ್ಧ ಕರ್ನಾಟಕ ೪೮-೧.

3. ಈ ಎಲ್ಲಾ ಕೃತಿಗಳ ಮೇಲೆ ತೊ. ರಾ. ದ ಪ್ರಭಾವವನ್ನು ಇದೇ ಪ್ರಬಂಧದ 'ಕೃತಿಯ ಪ್ರಭಾಮಂಡಲ' ಎನ್ನುವ ಪ್ರಕರಣದಲ್ಲಿ ಸೋದಾಹರಣೆಯಾಗಿ ವಿವರಿಸಲಾಗಿದೆ.

4. 'ತಾಳಮದ್ದಳೆ' ಎಂಬ ಪದವು ಮೊದಲಬಾರಿಗೆ, ಬಳ್ಳಾರಿ ತಾಲೂಕಿನ ಸೋಮಸಮುದ್ರ ಎಂಬಲ್ಲಿನ ಲಕ್ಷ್ಮೀನಾರಾಯಣ ದೇವಾಲಯದ ಗೋಡೆಯಲ್ಲಿನ ಅಪೂರ್ಣ ಶಾಸನ (ಸಂಖ್ಯೆ ೬೬೨-ಎ. ಆರ್. ಸಂ. ೨೧೨-ಕ್ರಿ.ಶ. ೧೫೫೬ ಜೂನ್ ೧೮ನೇ ಗುರುವಾರದ್ದು)ದ ೧೩ನೇ ಸಾಲಿನಲ್ಲಿ ಸಿಗುತ್ತದೆ.

ಡಾ. ಶಿವರಾಮಕಾರಂತ-ಯಕ್ಷಗಾನ ಬಯಲಾಟ-ದ್ವಿತೀಯಾವೃತ್ತಿ-ಪರಿಶಿಷ್ಟ, ೭೦ರಲ್ಲಿ ಉದ್ಧೃತ ಅಲ್ಲದೆ, ಶಿವರಾಮ ಕಾರಂತರು, ರಾಮಾಯಣ ಪ್ರಸಂಗಗಳ ರಚನೆ ಕ್ರಿ.ಶ. ೧೬೦೦ಕ್ಕಿಂತಲೂ ಪೂರ್ವದಲ್ಲಿ ನಡೆದಿರಬೇಕೆಂದು ಸೂಚಿಸುತ್ತಾರೆ-ಯಕ್ಷಗಾನ ಬಯಲಾಟ-ಪು. ೧೮೬. ಇದರಿಂದ ರಾಮಾಯಣ ಕಥಾನಕವುಳ್ಳ ಬಹುತೇಕ ಪ್ರಸಂಗಗಳಿಗೆ ಕನ್ನಡದಲ್ಲಿ ವಸ್ತು ಮತ್ತು ಇತರ ರೀತಿಗಳಲ್ಲಿ ಪ್ರಭಾವ ಬೀರಿದ ಕುಮಾರ ವಾಲ್ಮೀಕಿಯು ಅಂದಿಗಿಂತ ಹಿಂದೆಯೇ ಇದ್ದಿರಬೇಕು-ಎನ್ನುವ ಅಂಶವು ಸಾಧಿತವಾಗುತ್ತದೆ.

5. ಅರ್ವಾಚೀನ ರಚನೆಯೊಂದು ತೊರವೆಯ ನರಹರಿಯನ್ನು ಹೀಗೆ ಸ್ತುತಿಸುತ್ತದೆ:

ಶ್ರೀಮದ್ ವೃಂದಾರಕವೃಂದ ವಂದಿತ ಪದದ್ವಂದ್ವ ಶೋಭಿತ ಇಂದಿರಾರಮಣ ತ್ವರಿತಾಲಯ ಕ್ಷೇತ್ರಗುಪ್ತ ಗಂಗಾತೀರ ಹರಿತೀರ್ಥವರಗುಹಾವಾಸ ರಾಜಾಧಿರಾಜ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿನ್ ಭೋ ಪರಾಕ್-ತ್ವರಿತಾಲಯ (ತೊರವಿ) ಕ್ಷೇತ್ರ ಮಹಿಮೆ-ಪು. ೧೧.

6. ನರಸಿಂಹ ದೇವಾಲಯವು ರಾಜಾಶ್ರಯ ಪಡೆದ ಪ್ರಸಿದ್ಧ ಕ್ಷೇತ್ರವಾಗಿತ್ತು ಎನ್ನುವುದನ್ನು ಈ ಹಿಂದೆಯೇ ಹೇಳಿದೆ.

7. ತೊ. ರಾ. I ೯-೭

8. Muzumdar: The Delhi Sultanate. p. 318.

ಆ ಕಾಲದಲ್ಲಿ ಮೂರ್ತಿಭಂಜಕರ ಭಯದಿಂದ ನರಹರಿಯನ್ನು ಗುಹಾವಾಸಕ್ಕೊಳಪಡಿಸಿರಬೇಕು ; ಹೊರಗಡೆಯಿಂದ ದೇವಸ್ಥಾನ ಸೂಚಕವಾದ ಶಿಖರವಿಲ್ಲದಂತೆ ಮಾಡಿರುವುದೂ ಈ ಕಾಲದಲ್ಲಿಯೇ ಇರಬೇಕು. ಈ ಕಾಲಕ್ಕೆ ಮೊದಲೇ ತೊರವೆಯ ದಿನಗಳಲ್ಲಿ–ಎಂದರೆ ೧೪ನೆ ಶತಕದ ಮಧ್ಯಭಾಗದಲ್ಲಿ ಕವಿಯು ಕಾವ್ಯರಚನೆ ಮಾಡಿರಬೇಕು.

೫. ದಶರಥನು ನಡೆಸಿದ ಯಜ್ಞಗಳಿಗೆ ನೆರೆದವರಲ್ಲಿ–ವೈಷ್ಣವ, ಶೈವ, ಕಾಪಾಲಿಕರೊಂದಿಗೆ ಬೌದ್ಧರೂ ಇದ್ದರು–ಎನ್ನುತ್ತಾನೆ ಕುಮಾರ ವಾಲ್ಮೀಕಿ.[1]

ಇದರಿಂದ ಕುಮಾರವಾಲ್ಮೀಕಿಯ ಕಾಲದಲ್ಲಿ ಬೌದ್ಧಧರ್ಮವು ಕನ್ನಡನಾಡಿನಲ್ಲಿ ಸ್ವಲ್ಪಮಟ್ಟಿಗಾದರೂ ಇದ್ದಿರಬೇಕು ಎಂದು ಊಹಿಸಬಹುದು. ಕನ್ನಡನಾಡಿನಲ್ಲಿ ಬೌದ್ಧ ಧರ್ಮವು ತನ್ನ ಅಸ್ತಿತ್ವವನ್ನುಳಿಸಿಕೊಂಡ ಕಾಲದ ಕೊನೆಯ ಗಡುವೆಂದರೆ ೧೪ನೇ ಶತಮಾನ.[2] ಇದರಿಂದಲೂ ಕುಮಾರ ವಾಲ್ಮೀಕಿಯ ಕಾಲವನ್ನು ೧೪ನೇ ಶತಮಾನವೆಂದು ಹೇಳಬಹುದಾಗುತ್ತದೆ.

ಅಷ್ಟಲ್ಲದೆ–ಜಂಗಮ, ಜೋಗಿ,[3] ಸವಣ, ತಲೆಬೋಳಿಸಿಕೊಂಡ ಸನ್ಯಾಸಿ,[4] ದಿಗಂಬರ[5]–ಇವರ ಕುರಿತು ಕವಿಯು ತನ್ನ ಕಾವ್ಯದಲ್ಲಿ ಸೂಚಿಸಿದ್ದಾನೆ.[6] ವಾಲ್ಮೀಕಿ ರಾಮಾಯಣದಲ್ಲಿ ಶಿಖಿ ಧರಿಸಿದ ತ್ರಿ-ದಂಡಿ ರಾವಣ ಸನ್ಯಾಸಿಯ ವರ್ಣನೆಯಿದ್ದರೆ,[7] ಕುಮಾರ ವಾಲ್ಮೀಕಿಯು ಅದೇ ಸನ್ನಿವೇಶದಲ್ಲಿ ' ಶಿರವಮುಂಡನ 'ದ ಸನ್ಯಾಸಿಯನ್ನು ಚಿತ್ರಿಸಿದ್ದಾನೆ.[8]

ಈ ಉಲ್ಲೇಖಗಳಿಂದ ಕವಿಯ ಕಾಲದಲ್ಲಿ ಜೈನ ಧರ್ಮವು ಸಾಕಷ್ಟು ಪ್ರಚಾರದಲ್ಲಿದ್ದಿರಬೇಕು ಎಂದು ತಿಳಿಯಬಹುದು. ಕ್ರಿ.ಶ. ೧೨ರಿಂದ ೧೪ನೇ ಶತಮಾನಗಳ ಸೇವುಣರ ಕಾಲದಲ್ಲಿ ಜೈನಧರ್ಮವು ಇಂದಿನ ಬಿಜಾಪುರದ ಸುತ್ತಮುತ್ತಲೂ ಪ್ರಬಲವಾಗಿತ್ತು ಎನ್ನುವ ಅಂಶ ಇತಿಹಾಸದಿಂದ ತಿಳಿಯುತ್ತದೆ[9] ಈ ವಿಚಾರವೂ ಕವಿಯ ಕಾಲವು ೧೪ನೇ ಶತಮಾನವಿರಬೇಕು ಎನ್ನುವ ನಿರ್ಣಯವನ್ನು ದೃಢಪಡಿಸುತ್ತದೆ.

೬. ತೊರವೆ ರಾಮಾಯಣದಲ್ಲಿ ಉಕ್ತವಾದ ಬಿರುದುಗಳಲ್ಲಿ ಕೆಲವು ೧೨–೧೪ನೇ ಶತಮಾನಗಳ ಶಾಸನಗಳಲ್ಲೂ ದೊರೆಯುತ್ತವೆ. ಈ ಅಂಶವೂ ಕವಿಯ ಕಾಲವಿಚಾರಕ್ಕೆ ಪೋಷಕವಾಗಿದೆ.

| ಕಾವ್ಯದಲ್ಲಿನ ಬಿರುದುಗಳು | ಶಾಸನಗಳಲ್ಲಿನ ಬಿರುದುಗಳು |
|---|---|
| ರಘುಕುಲ ಸಮುದ್ರೋದ್ಧರಣ[10] | ಚತುಸ್ಸಮಯ ಸಮುದ್ರೋದ್ಧರಣ.[11] |
| ಮಲೆವ ರಿಪುನೃಪಸೂರೆಕಾರ[12] | ಮಲೆವರಿಪುನೃಪಸೂರೆಕಾರ....[13] |

---

1. ತೊ. ರಾ. ಬಾಲಕಾಂಡ ೭-೨೨.
2. ಗೋವಿಂದ ಪೈ-ಕುಮಾರವ್ಯಾಸನ ಕಾಲವಿಚಾರ-ಕುಮಾರವ್ಯಾಸ ಪ್ರಶಸ್ತಿ, ಪು. ೧-೨೦ (ಪು. ೩)
3. ತೊ. ರಾ. ಸುಂ. ಕಾಂಡ ೮-೫೩.
4. ಸವಣ–ತೊ. ರಾ. IV ೫-೧೮.
   ಸನ್ಯಾಸಿ-ತೊ. ರಾ. VI ೨೫-೨೭.
5. ತೊ. ರಾ. VI. ೪೭-೩೦.
6. ವಾ. ರಾ. ದಲ್ಲಿ ಇಂತಹ ವಿಷಯಗಳು ಇಲ್ಲವೇ ಇಲ್ಲ
7. ಶ್ಲಕ್ಷ್ಣ ಕಾಷಾಯ ಸಂವೀತಃ ಶಿಖೀ ಛತ್ರೀ ಉಪಾನಹೀ
   ವಾಮೇ ಚಾಂಸೇs ವಸಜ್ಯಾಥ ಶುಭೇಯಷ್ಟಿಕಮುಂಡಲೂ.
   ವಾ. ರಾ. ಅರಣ್ಯಕಾಂಡ. ೪೬-೩
8. ತೊ. ರಾ. III ೯-೧೭.
9. (1) A. V. Narasimha Murthy–The Sevunas of Devagiri, p. 176-177:
   (2) Ed. Muzumdar–The struggle for Empire. p. 429-430.
10. ತೊ. ರಾ. II ೧-೫.
11. ಕ್ರಿ.ಶ. ೧೧೨೫ನೇ ಶಾಸನ, ಎಸ್. ಐ. ಐ. ೧೧-೨-೧೭೭ನೇ ಶಾಸನ.
12. ತೊ. ರಾ. VI ೧೦-೪೫.
13. ೬. ಹೊಯ್ಸಳ ರಾಜರ ಬಿರುದುಗಳು, ಎಸ್. ಐ. ಐ. ೧೧-೨-೨೦೭ನೇ ಶಾಸನ.

ಮಲೆಪ ಸುಭಟರ ಗಂಡ....[1]　　　　ಮಲೆಪ ಸುಭಟರ ಗಂಡ....[2]
ಅರಿದಿಶಾಪಟ ಮಲ್ಲ....[3]　　　　ಅರಿದಿಶಾಪಟಮಲ್ಲ....[4]

೭. ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ ಬಳಸಿದ ನಿಯೋಗಿ, ಮನ್ನೆಯ ; ಅಷ್ಟಾದಶಮಹಾಪ್ರಜೆ, ಮಂಡಳೇಶ್ವರ, ಸಂಧಿವಿಗ್ರಹಿ, ನಾಯಕವಾಡಿ, ಸಾಮಂತ-ಇಂತಹ ಅಧಿಕಾರ ಸೂಚಕ ಪದಗಳು, ಪದವಿಗಳು ಸೇವುಣ, ಹೊಯ್ಸಳರ ಕಾಲದಲ್ಲಿ ಪ್ರಚಲಿತವಿದ್ದವುಗಳೇ ಆಗಿವೆ.[5]

ಅಷ್ಟಲ್ಲದೆ, ಈ ಕಾವ್ಯದಲ್ಲಿ ಬರುವ, ಕೊಂಕಣ, ಕುಂತಳ-ರಾಜ್ಯಗಳ ಹೆಸರುಗಳೂ ಸೇವುಣರ ಕಾಲದಲ್ಲಿ ಇದ್ದವುಗಳಾಗಿ ತಿಳಿದುಬರುತ್ತದೆ.[6]

## ೮. ಉತ್ತರಾದಿ ಮಠದ ಸ್ಥಾಪನೆಯ ಮುನ್ನವೇ

ತೊರವೆಯಲ್ಲಿ, ಪ್ರಕೃತ ಮಾಧ್ವ ಶಾಖೆಯಾದ ಉತ್ತರಾದಿ ಮಠದ ಶಿಷ್ಯರೇ ಇದ್ದಾರೆ. ಮಧ್ವಾಚಾರ್ಯರ ನಂತರ ಪ್ರವೃತ್ತವಾದ ಶಾಖೆಗಳ ವಿಕಾಸವನ್ನು ಹೀಗೆ ಸೂಚಿಸಬಹುದು.




ಮೇಲಿನ ತಖ್ತೆಯಿಂದ ತಿಳಿಯುವಂತೆ-ಉತ್ತರಾದಿಮಠದ ಕವಲು ಮೂಡುವ ಮುನ್ನವೇ-ಎಂದರೆ ಕ್ರಿ.ಶ. ೧೫ನೇ ಶತಮಾನಕ್ಕೆ ಮುನ್ನವೇ-ಕುಮಾರ ವಾಲ್ಮೀಕಿ ಇದ್ದಿರಬೇಕು.

---

1. ತೊ. ರಾ. VI ೨೦-೨೨.
2. ಇದೇ. ಎಸ್. ಐ. ಐ. ೧೧-೨-೨೦೭ನೇ ಶಾಸನ
3. ಇದೇ. VI|೩೩-೧೦ (ಅರಿದಿಶಾಪಟಪಟಪರಾಕ್ರಮಿ)
4. ಕ್ರಿ.ಶ. ೧೧೨೪ನೆ ಶಾಸನ, ಎಸ್. ಐ. ಐ. ೧೧-೨.
5. ಈ ಪದಗಳ ವಿವರಣೆ, ಐತಿಹಾಸಿಕ ವಿವೇಚನೆಗಳು ಇದೇ ಪ್ರಬಂಧದ 'ಕೃತಿಯ ಸಾಮಾಜಿಕ ಅಧ್ಯಯನ' ಪ್ರಕರಣದಲ್ಲಿವೆ.
6. A. V. Narasimha murthy. The Sevunas of Devagiri. p. 253.
7. ಈ ತಖ್ತೆಯನ್ನು, ಡಾ. ಬಿ. ಎನ್. ಕೆ. ಶರ್ಮ ಇವರ A History of Dvaita School of Vedanta and its Literature. Vol. I ಗ್ರಂಥದ ಪು. ೨೭೪ರಿಂದ ಸಂಗ್ರಹಿಸಲಾಗಿದೆ.

ಇಷ್ಟೆಲ್ಲ ಬಾಹ್ಯ, ಆಂತರಿಕ ಪ್ರಮಾಣಗಳ ವಿವೇಚನೆಯಿಂದ–ಕುಮಾರ ವಾಲ್ಮೀಕಿಯು ಕ್ರಿ.ಶ. ೧೪ನೇ ಶತಮಾನದ ಮಧ್ಯಭಾಗದಲ್ಲಿದ್ದು ಕಾವ್ಯರಚನೆ ಮಾಡಿದವನು ಎಂದು ನಿರ್ಣಯಿಸಬಹುದು.

ಕುಮಾರ ವಾಲ್ಮೀಕಿಯ ಕಾಲವನ್ನು ಹೀಗೆ ನಿರ್ಣಯಿಸಿಕೊಂಡ ಮೇಲೆ, ಈ ಕವಿಯು ಸ್ಮರಿಸಿದ ಕುಮಾರವ್ಯಾಸನು ಇವನ ಕಾಲಕ್ಕೆ ಮೊದಲೇ–ಎಂದರೆ ೧೪ನೇ ಶತಮಾನದ ಮಧ್ಯಭಾಗಕ್ಕಿಂತ ಮೊದಲೇ ಇದ್ದವನು ಎಂದು ಗೊತ್ತು ಮಾಡಬಹುದು. ಈ ನಿರ್ಣಯಕ್ಕೆ ಪೂರಕವೂ, ಪೋಷಕವೂ ಆಗಿರುವ ಕೆಲವು ವಿದ್ವಾಂಸರ ಅಭಿಮತಗಳನ್ನು ಇಲ್ಲಿ ಉಲ್ಲೇಖಿಸಬಹುದು:

### ೧. ಗೋವಿಂದ ಪೈ

ಪ್ರಕೃತದ ಈ ಲೇಖಕನ ವಿಚಾರಗಳನ್ನುಳಿದು, ಬೇರೆ ಹಿನ್ನೆಲೆ ಮತ್ತು ದೃಷ್ಟಿಕೋನಗಳಿಂದ ಸಾಧಾರವಾಗಿ ವಿವೇಚಿಸಿದ ಸುಪ್ರಸಿದ್ಧ ಸಂಶೋಧಕ ಶ್ರೀ ಗೋವಿಂದಪೈಯವರು ೧೨ ಕಾರಣಗಳನ್ನು ಕೊಟ್ಟು–'ಕುಮಾರವ್ಯಾಸನು ೧೩ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದಿರಬೇಕೆಂದು ನಿಷ್ಪನ್ನವಾಗುತ್ತದೆ'[1]—ಎಂದಿದ್ದಾರೆ.

### ೨. ಮಂ. ಆ. ದೊರೆಸ್ವಾಮಿ ಅಯ್ಯಂಗಾರ್

"....ಕುಮಾರವ್ಯಾಸನ ಕಾಲವನ್ನು ೧೪ನೆಯ ಶತಮಾನದ ಪ್ರಾರಂಭಕ್ಕೆ ಹಾಕಬಹುದೆಂದು ತೋರುತ್ತದೆ."[2]

### ೩. ಕವಿಭೂಷಣ ಕೆ. ಪಿ. ವೆಂಕಪ್ಪಶೆಟ್ಟಿ

"ಕವಿ ನಾರಣಪ್ಪನು (ಕುಮಾರವ್ಯಾಸನು) ಕ್ರಿ.ಶ. ೧೩ನೇ ಶತಮಾನದವನು"[3]

### ೪. ರಂ. ಶ್ರೀ. ಮುಗಳಿ

"ಸದ್ಯದ ಮಟ್ಟಿಗೆ, ಕುಮಾರವ್ಯಾಸನ ಕಾಲವು ೧೪ನೆಯ ಶತಮಾನದ ಉತ್ತರಾರ್ಧ ಹಾಗೂ ೧೫ನೆಯ ಶತಮಾನದ ಪೂರ್ವಾರ್ಧದಲ್ಲಿರಬಹುದೆಂದು ನಾವು ತಿಳಿಯುತ್ತೇವೆ"[4] ಅಲ್ಲದೆ; 'ಕುಮಾರ ವಾಲ್ಮೀಕಿಯ ಕಾಲವನ್ನು ನಿರ್ಣಯಿಸಲು, ಸ್ವತಂತ್ರ ಆಧಾರಗಳು ದೊರೆತಿದ್ದರೆ, ಕುಮಾರವ್ಯಾಸನ ಮೇಲಿನ ಎಲ್ಲೆಯನ್ನು ಗೊತ್ತುಪಡಿಸಲು ನೆರವಾಗುತ್ತಿತ್ತು'[5] ಎಂದೂ, ಕುಮಾರ ವಾಲ್ಮೀಕಿಯ ಕುರಿತಾಗಿ "ಹೆಚ್ಚು ಸಂಶೋಧನೆ ನಡೆದರೆ ಚರಿತ್ರೆ ತಿಳಿಯಬಹುದಾಗಿದೆ."[6] ಎಂದೂ ಮಾರ್ಗದರ್ಶನ ಮಾಡಿರುತ್ತಾರೆ. ನನ್ನ ಪ್ರಯತ್ನವೂ ಅದೇ ದಾರಿಯಲ್ಲಿ ಸಾಗಿದೆ ಎಂದು ಭಾವಿಸಿದ್ದೇನೆ.

### ೫. ಕೆ. ವೆಂಕಟರಾಯಾಚಾರ್ಯ

"ಕುಮಾರವ್ಯಾಸನು ೧೩ನೆ ಶತಕದ ಉತ್ತರಾರ್ಧದಲ್ಲಿ ಇದ್ದನೆಂದು ಇತ್ಯರ್ಥಿಸಬಹುದು."[7]

### ೬. ವ. ಅ. ದಿವಾಣಜಿ

"ಕುಮಾರವ್ಯಾಸನು ಪುರಂದರದಾಸನನ್ನು ಸಂದರ್ಶಿಸಿದನು ಎಂದು ಹೇಳಲಾಗುವ ಸುಳಾದಿಯು ಕುಮಾರವ್ಯಾಸನನ್ನು ಕುರಿತಾಗಿರದೆ, ಗದುಗಿನ ನಾರಾಯಣನನ್ನು ಕುರಿತು ಇದೆ. ಪುರಂದರದಾಸರು ಹುಟ್ಟುವುದಕ್ಕಿಂತಲೂ

---

1. ಗೋ. ಪೈ.–ಕುಮಾರವ್ಯಾಸ ಪ್ರಶಸ್ತಿ, ಪು. ೨೬.
2. ಮಂ. ದೊ.–ಕುಮಾರವ್ಯಾಸ, ಜ. ಕ. ೧೦-೧೧.
3. ಕೆ. ಪಿ. ವೆಂಕಪ್ಪಶೆಟ್ಟಿ–ಯಕ್ಷಗಾನ, ಪೀ. ಪು. ೪.
4. ರಂ. ಶ್ರೀ. ಮುಗಳಿ–ಕ. ಸಾ. ಚರಿತ್ರೆ, ಪು. ೨೪೯.
5. ಇದೇ. ಪು. ೨೩೬.
6. ಇದೇ. ಪು. ೨೬೬.
7. ಕೆ. ವೆಂಕಟರಾಯಾಚಾರ್ಯ–ಸಾಹಿತ್ಯದ ಹಿನ್ನೆಲೆ, ಪು. ೪೧.

ಮೊದಲು ಕುಮಾರವ್ಯಾಸನು ಆಗಿಹೋಗಿರುವನು. ಕುಮಾರವ್ಯಾಸನ ಕಾಲವು ಕ್ರಿ.ಶ. ೧೪ನೆಯ ಶತಮಾನಕ್ಕೆ ಹೋಗಿ ತಲುಪುತ್ತದೆ."[1]

೨. ಕುಮಾರವ್ಯಾಸನ ಹೆಸರನ್ನು ಉಲ್ಲೇಖಿಸುವ ಗದುಗಿನ ಶಿಲಾಶಾಸನ (ಕ್ರಿ.ಶ. ೧೫೩೯)ದ ಸಾಲು ೯ರಲ್ಲಿ 'ಕುಮಾರವ್ಯಾಸಂಗೆ ಪ್ರಸಂನನಾದ ಗದುಗಿನ ಶ್ರೀ ವೀರನಾರಾಯಣನ ಸಂನಿಧಿಯಲ್ಲಿ....' ಎಂದಿದೆ.[2] ಈ ಕಾಲಕ್ಕಾಗಲೇ ಕುಮಾರವ್ಯಾಸನ ಪ್ರಸಿದ್ಧಿಯನ್ನು ಕಂಡರೆ–ಆ ಕಾಲದ ಸೀಮಿತ ಸಂಪರ್ಕ ಸೌಲಭ್ಯಗಳನ್ನು ಗಮನಿಸಿ–ಕವಿಯು ಅದಕ್ಕಿಂತಲೂ ಹಲವು ದಶಕಗಳ ಮೊದಲೇ-ಎಂದರೆ ೧೪ನೇ ಶತಕದ (ಪೂರ್ವಭಾಗ)ದಲ್ಲಿ ಇದ್ದಿರಬೇಕೆಂದು–ಇತರ ಆಧಾರಗಳಿಗೆ ಪೋಷಕವಾಗಿ ಹೇಳಬಹುದು.

**ಕವಿಯ ಹೆಸರು : ಕೇವಲ ಒಂದು ಊಹೆ.**

ತನ್ನ ಕಾವ್ಯದ ಅಧಿಪತಿಯು ತೊರವೆಯ ನರಹರಿ ಎಂದು ಸಾರಿ ಹೇಳಿದ[3] ಕುಮಾರ ವಾಲ್ಮೀಕಿಯು ತಾನೇ 'ನರಹರಿ' ಎಂದು ಹೇಳಿಕೊಂಡಿಲ್ಲ. ಹಾಗೆ ಹೇಳಿರದಿರುವುದು, ಭಾವಿಸದಿರುವುದು ಕವಿಯ ನರಹರಿಕಿಂಕರ ಮನೋಭಾವಕ್ಕೆ ಒಪ್ಪುವಂತಹುದೇ. ಕುಮಾರವ್ಯಾಸನ ನಿಜನಾಮದ ಕುರಿತಾದ ಊಹೆಯಂತೆ ಇವನ ಹೆಸರೂ ನರಹರಿ ಆಗಿರಬೇಕು ಎಂದು ನಿರ್ಧರಿಸುವುದು ಸಾಧುವಾಗದು, ಸಾಧಾರವಾಗಲಾರದು.

ಹಾಗಿದ್ದರೆ, ಕವಿಯ ಹೆಸರೇನು ಆಗಿದ್ದಿರಬಹುದು ?–ಎಂಬ ಪ್ರಶ್ನೆಗೆ ಉತ್ತರದ ಸ್ಪಷ್ಟ ಸುಳಿವು ಎಲ್ಲೂ ದೊರೆಯುವಂತಿಲ್ಲ. ಆದರೂ, ಅವನ ಕೃತಿಯಲ್ಲಿ ನಾಲ್ಕೆಂಟು ಕಡೆಗಳಲ್ಲಿ ಕವಿಯ ಹೆಸರು ಅಥವಾ ಅವನ ಹಿಂದಿನ ಆಧಿದೈವದ ಬಗ್ಗೆ ಸೂಚನೆಗಳು ಒಡಮೂಡಿವೆಯೇನೋ–ಎಂಬ ಊಹೆಗೆ ಅವಕಾಶವಿದೆ.

'ಮಂಗಳ ಶ್ರೀಮೂರ್ತಿ ನರಕೇಸರಿಯ ಕಾವ್ಯದಲಿ,' ಶ್ರೀರಮಣ, ಲಕ್ಷ್ಮೀನಿವಾಸ; ಶ್ರೀನಿವಾಸ, ಶ್ರೀವರ....[4] ಎಂದು ಮುಂತಾಗಿ 'ಶ್ರೀನಿವಾಸ'ನ ಉಲ್ಲೇಖಗಳು–ಶ್ರೀನಿವಾಸನ ಭಕ್ತನಾಗಿದ್ದ ಕವಿಯು ತೊರವೆ ನರಹರಿಯ ಆಕರ್ಷಣೆಗೊಳಗಾಗಿ 'ರಾಮಾಯಣ' ರಚಿಸಿರಬಹುದೇ ? ಎಂಬ ಪ್ರಶ್ನೆಗೆ ಕಾರಣವಾಗಿವೆ. ಅಥವಾ ಶ್ರೀನಿವಾಸ ಎನ್ನುವುದೇ ಕವಿಯ ಹೆಸರಾಗಿದ್ದು, ಅದು ಶ್ರೀ ರಾಮಕಥೆಯಲ್ಲಿ ಹೀಗೆ ಧ್ವನಿತವಾಗಿರಬಹುದೇ ?

ಲವಕುಶರು ಕಥೆ ಹೇಳು ವಾಲ್ಮೀಕಿಯನ್ನು ಪ್ರಶ್ನಿಸುತ್ತಾ 'ಐಸೆ, ಮತ್ತೀನೆಲೆ ತಪೋ-ಲಕ್ಷ್ಮೀಶ[5] ಎಂದು ಸಂಬೋಧಿಸುವಲ್ಲಿಯೂ ಮತ್ತೆ ಅದೇ ಊಹೆಗೆ ಪ್ರಚೋದನೆ ದೊರೆತಂತಾಗುತ್ತದೆ. ಸಾಮಾನ್ಯ ಅರ್ಥದಲ್ಲಿ ಅದು ವಾಲ್ಮೀಕಿಯ ತಪಸ್ವಿ ವ್ಯಕ್ತಿತ್ವದ ವಿಶೇಷಣವಂತೆ ಕಂಡರೂ' ವ್ಯಂಗ್ಯವಾಗಿ ಅದು ಕವಿಯ ಜನ್ಮನಾಮ 'ಶ್ರೀನಿವಾಸಕ್ಕೆ' ಸಂಬಂಧಪಟ್ಟದ್ದಿರಬಹುದೇ ?

ಕ. ಕ. ಚರಿತಕಾರರು, ಸೌಂದರ ವಿಳಾಸವನ್ನು ಬರೆದ ಅಣ್ಣಾಜಿಯು (ಸು. ೧೬೦೦) 'ಕ್ಷೋಣಿಯೊಳು ಕವಿರಾಜಮುಕುಟಮಣಿ ಶ್ರೀನಾಥ'ನನ್ನು ಸ್ತುತಿಸಿದ್ದನ್ನು ಉಲ್ಲೇಖಿಸಿದ್ದಾರೆ. ಆದರೆ ಆ ಕವಿಯ ಕಾವ್ಯವೊಂದೂ ಲಭ್ಯವಾಗಿಲ್ಲ ಎನ್ನುತ್ತಾರೆ.[6]

---

1. ವ. ಅ. ದಿವಾಣಜಿ–ಪ್ರಸಾದ ಯೋಗ, ಪು. ೩೬.
2. ಈ ಶಾಸನದ ಪೂರ್ಣಪಾಠವು ಪಿ. ಬಿ. ದೇಸಾಯಿಯವರಿಂದ Journal of the Karnatak University-Humanities, vol. VII (1963) ಪು. ೨೮೧ರಲ್ಲಿ ಪ್ರಕಟಿತವಾಗಿದೆ.
3. ತೊ. ರಾ. I ೧–೯.
4. ಇದೇ. I ೭-೪೫, ೮-೮೧, ೧೦-೨೦, ೧೭-೪೫, ೨. ೬-೩೫, ೩. ೧೨-೩೬, ೪. ೧೦-೩೧, ೬. ೫೩-೬೯, ೬. ೫೩-೧೦೬, ೫೫-೬೫, ೬೪.
5. ಇದೇ. I ೮-೧೨.
6. ಆರ್. ನರಸಿಂಹಾಚಾರ್ಯ–ಕ. ಕ. ಚ. ೨-೧೫೨.

'ಭಾರತದ ಸ್ತ್ರೀಪರ್ವವನ್ನು ರಚಿಸಿದ ಶ್ರೀನಿವಾಸಕವಿ (ಸು. ೧೭೦೦)ಯ ವಿಚಾರವನ್ನು ಕ. ಕ. ಚರಿತಕಾರರು ಪ್ರತ್ಯೇಕವಾಗಿ ಪ್ರಸ್ತಾವಿಸಿದ್ದಾರೆ–ಕ. ಕ. ಚ. ೨-೫೫೦.

ತೊರವೆ ರಾಮಾಯಣದ ಕಥೆಗೆ ಪೂರಕವಾಗಿರುವ–ಕಪೋತಚರಿತೆಯ ಕವಿಯು ಕುಮಾರ ವಾಲ್ಮೀಕಿಗೆ ತುಂಬಾ ಋಣಿಯಾಗಿದ್ದಾನೆ.[1] ಅವನು ತನ್ನ ಕಾವ್ಯದಲ್ಲಿ 'ವೆಂಕಟಾಚಲವಾಸ'ನ ದಯದಿ ಎಂದಿದ್ದಾನೆ. ವೆಂಕಟಾಚಲವಾಸ ಎನ್ನುವುದು ತನ್ನ ಕಾವ್ಯಗುರು ಕುಮಾರ ವಾಲ್ಮೀಕಿಯನ್ನು ಅಥವಾ ಇಷ್ಟದೈವವನ್ನು ಸೂಚಿಸುತ್ತಿರಬಹುದೇ ?

ಈ ಊಹೆ, ಪ್ರಶ್ನೆಗಳಿಗೆ–ಇನ್ನಷ್ಟು ಆಂತರಿಕ, ಬಾಹ್ಯ ಪ್ರಮಾಣಗಳು ಸಿಕ್ಕದೆ–ಏನನ್ನೂ ಉತ್ತರಿಸುವಂತಿಲ್ಲ. ಹೀಗಿದ್ದರೂ, ಅಸ್ಪಷ್ಟವಾದ ಈ ಹಿನ್ನೆಲೆಯಲ್ಲಿ. ತೊರವೆ ರಾಮಾಯಣದ ಕವಿಯು ಮೊದಲು ಶ್ರೀನಿವಾಸನಾಗಿದ್ದೋ, ಶ್ರೀನಿವಾಸನ ಭಕ್ತನಾಗಿದ್ದೋ–ಆಮೇಲೆ ಕುಮಾರ ವಾಲ್ಮೀಕಿಯೆಂಬ ವಿಶೇಷಣದೊಂದಿಗೆ ರಾಮಾಯಣವನ್ನು ಕನ್ನಡಿಸಿರ ಬಹುದು ಎಂದು ಊಹಿಸಿದರೆ ಅಸಾಧುವಾಗಲಾರದೇನೋ.[2]

ಕುಮಾರ ವಾಲ್ಮೀಕಿಯ ಕಾಲವಾಗಿ ೬ ಶತಕಗಳೇ ಕಳೆದುಹೋಗಿದ್ದು, ನಡುವೆ ಮುಸಲ್ಮಾನರ ಆಳ್ವಿಕೆಯ ಕಾಲ ದಲ್ಲಿ ಕಾವ್ಯ, ಪುರಾಣಗಳ ದುಸ್ಥಿತಿ, ಪ್ರತಿಗಳ ನಾಶ, ಸ್ಥಳಾಂತರಗಳು ನಡೆದಿರಬೇಕೆಂದು ತೋರುತ್ತದೆ.[3] ರಾಜಕೀಯ ವಿಪ್ಲವ ಕಾಲದಲ್ಲಿ ತೊರವೆ ರಾಮಾಯಣದ ಹಸ್ತಪ್ರತಿಗಳು ವಿಜಯನಗರದ ದಾರಿಯಾಗಿ ಮಲೆನಾಡುಗಳತ್ತ ಸಂಚಲಿಸಿ ದಂತೆ ತರ್ಕಿಸಬಹುದು. ಮಲೆನಾಡು, ಕರಾವಳಿಗಳಲ್ಲಿ ತೊರವೆ ರಾಮಾಯಣದ ಪ್ರತಿಗಳು ಸಾಪೇಕ್ಷವಾಗಿ ಹೆಚ್ಚು ಸಂಖ್ಯೆಯಲ್ಲಿ ದೊರೆಯುತ್ತಿರುವುದೂ, ಇದರ ಪ್ರಭಾವದಿಂದ ಕೆಲವಾರು ಯಕ್ಷಗಾನ ಪ್ರಸಂಗಗಳು ಸೃಷ್ಟಿಗೊಂಡುದೂ ನಮ್ಮ ಗಮನಕ್ಕೆ ಬರುತ್ತದೆ.

### ಈ ವಿವೇಚನೆಯಿಂದ ತಿಳಿದು ಬರುವ ಮುಖ್ಯಾಂಶಗಳು

೧. 'ತೊರವೆ' ಹೆಸರು ೭ನೆಯ ಶತಮಾನದಷ್ಟು ಪ್ರಾಚೀನವಾದುದು.

೨. ತೊರವೆಯ ನರಹರಿ ಕ್ಷೇತ್ರವು ೧೨ನೆಯ ಶತಕದಲ್ಲೇ ಜಾಗೃತಸ್ಥಾನವೆನಿಸಿತ್ತು, ಭಕ್ತರನ್ನು ತನ್ನೆಡೆಗೆ ಆಕರ್ಷಿಸಿತ್ತು ; ರಾಜಾಶ್ರಯವನ್ನೂ ಹೊಂದಿತ್ತು.

೩. ಮೈರಾವಣ ಕಾಳಗದ ಕವಿ ನರಹರಿಯೇ ತೊರವೆ ರಾಮಾಯಣದ ಕವಿ ಕುಮಾರ ವಾಲ್ಮೀಕಿಯಲ್ಲ.

೪. ಮಧ್ವ ಶಿಷ್ಯನಾದ ಕುಮಾರ ವಾಲ್ಮೀಕಿಯು ಕ್ರಿ.ಶ. ೧೪ನೇ ಶತಕದ ಮಧ್ಯಭಾಗದವನು.

೫. ತೊರವೆ ರಾಮಾಯಣದಲ್ಲಿ ಸೇವುಣ–ಹೊಯ್ಸಳರ ಕಾಲದ ಸಮಾಜದ ಸುಳಿವು–ಹೊಳವು ಸಿಕ್ಕುತ್ತದೆ.

೬. ಇದರಿಂದ, ಕುಮಾರವ್ಯಾಸನ ಕಾಲವು ಕ್ರಿ.ಶ. ೧೪ನೆಯ ಮಧ್ಯಭಾಗಕ್ಕಿಂತ ಹಿಂದಿನದಾಗಿರಬೇಕು.

## ಕೃತಿಯ ಪರಿಸರದ ಪರಿಚಯ

### ರಾಜಕೀಯ, ಧಾರ್ಮಿಕ, ಸಾಹಿತ್ಯಿಕ ಹಿನ್ನೆಲೆ–ಪ್ರೇರಣೆಗಳು

ಕುಮಾರ ವಾಲ್ಮೀಕಿಯ ಕಾಲದ ಬಗ್ಗೆ ಒಂದು ನಿರ್ಣಯಕ್ಕೆ ಬಂದಮೇಲೆ, ಕೃತಿಯು ಮೂಡಿಬಂದ ಪರಿಸರದ

---

1. ಮೈ. ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯವರು ಕೃಪೆಯಿಟ್ಟು ನನಗೆ ಒದಗಿಸಿದ ತಾಳೆಗರಿ ಪ್ರತಿ–ಕಪೋತಚರಿತೆ, ಪದ್ಯ. ೧೨೬.

ತೊರವೆ ರಾಮಾಯಣದ ಪ್ರಭಾವವು ಕಪೋತಚರಿತೆಯ ಮೇಲಾಗಿರುವ ವಿವರಣೆಗೆ ಇದೇ ಪ್ರಬಂಧದ 'ಕೃತಿಯ ಪ್ರಭಾಮಂಡಲ' ಎಂಬ ಪ್ರಕರಣ ನೋಡಬಹುದು.

2. ಬಹಳ ಹಿಂದೆ ಬೇರೊಂದೆಡೆಯ ವ್ಯಕ್ತಿಯೊಬ್ಬರಿಗೆ ಶ್ರೀನರಸಿಂಹನ ಸ್ವಪ್ನ ಸೂಚನೆಯಾಗಿ, ಅವರು ತೊರವೆಯ ನರಹರಿಯ ಸನ್ನಿಧಿಗೆ ಬಂದು 'ರಾಮಾಯಣ' ರಚಿಸಿ ಮತ್ತೆ ಮರೆಯಾದರು ಎಂಬ ಪ್ರತೀತಿ ಇದೆ.'–ಎಂದು ನನಗೆ ತೊರವೆಯ ವಯೋವೃದ್ಧರೊಬ್ಬರು ತಿಳಿಸಿದರು.

3. (ಅ) ಈ ಅಂಶವು ಕವಿಯ ಕಾಲದ ಪ್ರಾಚೀನತೆಗೆ ಪೂರಕವಾಗಿದೆ.

(ಆ) ತೊರವೆಯಲ್ಲಾಗಲಿ, ಸುತ್ತಮುತ್ತಲಲ್ಲಾಗಲೀ ತೊರವೆ ರಾಮಾಯಣದ ಪ್ರತಿಗಳು ದೊರೆಯದಿರುವುದು 'ಸ್ಥಳಾಂತರ'ವನ್ನು ಸಮರ್ಥಿಸುತ್ತದೆ. ಹುಬ್ಬಳ್ಳಿಯಲ್ಲಿ 'ತೊರವೆಗಲ್ಲಿ'ಯೇ ಇರುವುದೂ ಈ ಸಂಗತಿಯನ್ನು ಪೋಷಿಸುವಂತಿದೆ.

ಪರಿಚಯಕ್ಕಾಗಿ, ಆ ಕಾಲದ ರಾಜಕೀಯ, ಧಾರ್ಮಿಕ (ಸಾಮಾಜಿಕ), ಸಾಹಿತ್ಯಿಕ ಸನ್ನಿವೇಶಗಳ ಕಡೆಗೆ ನಮ್ಮ ದೃಷ್ಟಿ ಹರಿಸುವುದು ಅಗತ್ಯವಾಗಿದೆ.

**ರಾಜಕೀಯ**

ರಾಜಕೀಯ ಶಕ್ತಿಯು ಯಾವುದೇ ನಾಡಿನ ಜನಜೀವನದ ಪರಿವರ್ತನೆಯಲ್ಲಿ ದೀರ್ಘವ್ಯಾಪೀ ಪ್ರಭಾವವನ್ನು ಬೀರಬಲ್ಲುದೆನ್ನುವುದು ಗಮನಾರ್ಹವಾದುದು. ೧೩ನೆಯ ಶತಮಾನದವರೆಗಿನ ಕನ್ನಡನಾಡಿನ ರಾಜಕೀಯ ಇತಿಹಾಸವು ಚಾಳುಕ್ಯ, ರಾಷ್ಟ್ರಕೂಟ, ಯಾದವ ಅರಸುಮನೆತನಗಳ ಉದಯಾಸ್ತಮಾನಗಳ ಘಟನಾವಳಿಗಳಿಂದ ತುಂಬಿದೆ. ದಕ್ಷಿಣ ಭಾರತದ ರಾಜಕೀಯ ಕ್ಷೇತ್ರದಲ್ಲಿ ೧೩ನೆಯ ಶತಕದ ಕೊನೆಯ ದಶಕದಲ್ಲಿ ಸಂಭವಿಸಿದ ಅಲ್ಲಾವುದ್ದೀನ ಖಿಲ್ಜಿಯ ದೇವ ಗಿರಿಯ ಆಕ್ರಮಣವು ಒಂದು ಮಹತ್ತ್ವದ ಘಟನೆಯೇ ಸರಿ.[1] ಉತ್ತರ ಭಾರತದ ಈ ಮುಸ್ಲಿಂ ಆಕ್ರಮಣವನ್ನು ನಿರೀಕ್ಷಿಸಿರದ ದೇವಗಿರಿಯ ಸೇವುಣರಾಜನಾದ ರಾಮಚಂದ್ರನು (೧೨೭೧–೧೩೧೨) ಧಾಳಿಗೆ ಶರಣಾಗಬೇಕಾಗಿ ಬಂದುದು ದುರದೃಷ್ಟದ ಸಂಗತಿ.[2]

ಮುಂದೆ ಉತ್ತರದ ಮುಸ್ಲಿಂ ಸೇನೆಯು ಮಲ್ಲಿಕಾಫರನ ನಾಯಕತ್ವದಲ್ಲಿ (೧೩೦೭ರಲ್ಲಿ) ದಕ್ಷಿಣ ಭಾರತದ ಮೇಲೆ ದಂಡಯಾತ್ರೆ ನಡೆಸಿತು. ಇದರಿಂದಾಗಿ ದೇವಗಿರಿಯ ಸೇವುಣರು, ವಾರಂಗಲ್ಲಿನ ಕಾಕತೀಯರು, ದ್ವಾರಸಮುದ್ರದ ಹೊಯ್ಸಳರು, ಮಧುರೆಯ ಪಾಂಡ್ಯರು–ಒಬ್ಬೊಬ್ಬರಾಗಿ ಪರಕೀಯರ ಆಕ್ರಮಣಕ್ಕೆ ಬಲಿಯಾಗಬೇಕಾಯಿತು. ಬಡಗಿನ ದೇವಗಿರಿಯಲ್ಲಿ, ತೆಂಕಣ ಮಧುರೆಯಲ್ಲಿ ಆಕ್ರಮಣಕಾರರ ನೆಲೆಗಳು ಸ್ಥಾಪನೆಗೊಂಡವು.

ಇದರ ಪರಿಣಾಮವಾಗಿ, ಕರ್ನಾಟಕದಲ್ಲಿ ರಾಜಕೀಯ ಭದ್ರತೆಯು ಮರೆಯಾಗಿ, ಜನಜೀವನವು ಅಸ್ತವ್ಯಸ್ತ ಗೊಂಡಿತು. ಜನತೆಯಲ್ಲಿ ಸ್ವಾಭಿಮಾನ, ಕೆಚ್ಚುಗಳು ಅಳಿದುವೇ–ಎಂಬ ಸಂದೇಹ ಮೂಡುವಂತಹ ಪರಿಸ್ಥಿತಿ ಆಗಿನ ದಾಗಿತ್ತು. ವಿಜಯನಗರದ ಬುಕ್ಕರಾಯನ ಸೊಸೆ ಗಂಗಾದೇವಿಯ 'ವೀರಕಂಪಣರಾಯಚರಿತಂ' ಎಂಬ ಸಂಸ್ಕೃತ ಕಾವ್ಯದಲ್ಲಿ ಇಂತಹ ಜನಜೀವನದ ದಾರುಣವಾದ ಒಂದು ಚಿತ್ರ ಮೂಡಿಬಂದಿದೆ. "ದೇಶವು ಅನ್ಯರ ಪಾಲಾಯಿತು.... ಇದನ್ನು ಹೇಗೋ ಸಹಿಸಬಹುದು. ನಮ್ಮ ಗಿಳಿಗಳು ಯವನರ ಅರಮನೆಯ ಬಂಧನದಲ್ಲಿದ್ದು, ಫಾರಸೀಭಾಷೆಯನ್ನು ಮಾತನಾಡಲು ಕಲಿಯುವ ಸನ್ನಿವೇಶವನ್ನು ಸಹಿಸುವುದು ಹೇಗೆ?"[3]

ಹೀಗೆ ಕೆಲವು ದಿನಗಳ ಕಾಲ ಮಂಕಾಗಿದ್ದ ಕ್ಷಾತ್ರತೇಜವನ್ನು ಪುನಃ ಉಜ್ವಲಗೊಳಿಸಿದ ಶ್ರೇಯಸ್ಸು ವಿಜಯ ನಗರ ಸಾಮ್ರಾಜ್ಯಕ್ಕೆ ಸೇರುತ್ತದೆ. ಇಂತಹ ಹಿರಿದಾದ ಸಂಘಟನೆಗೆ ಪ್ರೇರಕವಾದ ವಿಲಕ್ಷಣ ರಾಜಕೀಯ ಜಾಗೃತಿಯ ಪ್ರವಾಹವೊಂದು ಕನ್ನಡನಾಡಿನಲ್ಲಿ ಗುಪ್ತಗಾಮಿನಿಯಾಗಿಯಾದರೂ ಹರಿಯುತ್ತಿತ್ತೆನ್ನುವುದು ಹೆಮ್ಮೆಯ ವಿಷಯವೇ.

**ತೊರವೆ (ಬಿಜಾಪುರ) : ರಾಜಕೀಯ ಪರಿಸ್ಥಿತಿ**

ಈಗಿನ ಬಿಜಾಪುರವಿರುವ ಪ್ರದೇಶಕ್ಕೆ ಐತಿಹಾಸಿಕ ಉಲ್ಲೇಖಗಳಲ್ಲಿ ಕರ್ಣಪುರ, ಕನ್ನಪುರ[4] ವಿಜಯಪುರ ಮತ್ತು ಬಿಜ್ಜನ ಹಳ್ಳಿಗಳೆಂಬ ಹೆಸರುಗಳಿದ್ದಂತೆ ತೋರುತ್ತದೆ.[5] ಬಾದಾಮಿಯಲ್ಲಿ ರಾಜ್ಯವಾಳಿದ ಚಾಲುಕ್ಯ ಮಂಡಲೇಶ್ವರನೊ ಬ್ಬನು ವಿಜಯಪುರವನ್ನು ಕಟ್ಟಿಸಿರಬಹುದೆಂದು ತಿಳಿದುಬರುತ್ತದೆ. ದೇವಗಿರಿಯ ಸೇವುಣರ ಕಾಲದಲ್ಲಿ ಅವರ ಆಡಳಿತ ಕ್ಕೊಳಪಟ್ಟ ತರ್ದೇವಾಡಿಯ ೧೦೦೦ದಲ್ಲಿ ಇಂದಿನ ವಿಜಾಪುರವು ಅಡಕವಾಗಿತ್ತು. ಸೇವುಣರಾಜರಿಂದ ಇಲ್ಲಿನ ನರ ಸಿಂಹನಿಗೆ ದತ್ತಿಗಳು ಕೊಡಲ್ಪಟ್ಟಿದ್ದವು–ಎನ್ನುವ ವಿವರಣೆಯನ್ನು ಇದೇ ಪ್ರಬಂಧದ ಹಿಂದಿನ ಪುಟಗಳಲ್ಲಿ ಶಾಸನಾಧಾರ ಸಹಿತ ಕೊಡಲಾಗಿದೆ.[6]

---

1. K. A. Nilakanta Sastri–A History of South India, p. 227.
2. A. V. Narasimha Murthy–The Sevunas of Devagiri, p. 139.
3. ಸ. ಸ. ಮಾಳವಾಡ–'ಸಾಹಿತ್ಯ ಸಂಗಮ' ಪು. ೩೨ರಲ್ಲಿ ಉದ್ಧೃತ.
4. Altekar-Rastrakutas and their Times, p. 136.
5. ಎಚ್. ಪದ್ಮರಾಜ್–ವಿಜಾಪುರದ ವೈಭವದರ್ಶನ, ಪು. ೧೪.
6. ಇದೇ ಪ್ರಬಂಧದ ಪು. ೯೫-೯೭ ನೋಡಿರಿ.

ಅಭಿನವ ಪಂಪನೆಂದು ಪ್ರಸಿದ್ಧನಾದ ಕನ್ನಡದ ಕವಿ ನಾಗಚಂದ್ರನು (ಕ್ರಿ.ಶ. ೧೧೦೦[1] ಕ್ರಿ.ಶ. ೧೨ನೆ ಶತಮಾನದ ಪೂರ್ವಾರ್ಧ[2]) ವಿಜಯಪುರದಲ್ಲಿ ಮಲ್ಲಿನಾಥ ಜಿನಾಲಯವನ್ನು ಕಟ್ಟಿಸಿದ ಉಲ್ಲೇಖ ದೊರೆಯುತ್ತದೆ.[3] ಈ ವಿಜಯ ಪುರವು ಇಂದಿನ ಬಿಜಾಪುರವಾಗಿರಬೇಕು.[4] ಕುಮಾರ ವಾಲ್ಮೀಕಿಯ ಕೃತಿಯ ಮೇಲೆ ನಾಗಚಂದ್ರನ ರಾಮಚಂದ್ರಚರಿತ ಪುರಾಣದ (ಪಂಪರಾಮಾಯಣದ) ಪ್ರಭಾವವು ಸ್ಪಷ್ಟವಾಗಿ ಗೋಚರವಾಗುತ್ತದೆ.[5] ಇದರಿಂದಲೂ ಈ ಇಬ್ಬರೂ ಒಂದೇ ಪ್ರದೇಶದವರಾಗಿರಬೇಕು ಎನಿಸುತ್ತದೆ. ಇದರಿಂದ ನಾಗಚಂದ್ರನು ಪ್ರಸ್ತಾವಿಸಿದ "ವಿಜಯಪುರವು" ಇಂದಿನ ಬಿಜಾಪುರವೇ ಆಗಿರಬೇಕು ಎಂಬ ವಿಚಾರಕ್ಕೆ ಬಲ ದೊರೆಯುತ್ತದೆ.

ಮುಂದೆ ದೇವಗಿರಿಯ ಸೇವುಣರ ಕೊನೆಯ ಅರಸನನ್ನು ಮಲ್ಲಿಕಾಫರನು ಕೊಲ್ಲಿಸಿದ ನಂತರ, ವಿಜಾಪುರವು ಡಿಲ್ಲಿಯ ಆಡಳಿತಕ್ಕೊಳಪಟ್ಟು, ಕ್ರಮೇಣ ಬಹಮನಿ ಅರಸರ ವಶವಾಯಿತು. ಹೀಗೆ, ದೇವಗಿರಿಯ ಸೇವುಣರ ಉದ ರಾಶ್ರಯದಲ್ಲಿ ಅಭಿವೃದ್ಧಿ ಹೊಂದಿ, ಮೆರೆದ ನರಸಿಂಹನ ಸನ್ನಿಧಿಯಲ್ಲಿ ಆ ದೇವಾಲಯವು ಪರಕೀಯರ ಕ್ರೂರ ದೃಷ್ಟಿಗೆ ಬೀಳುವ ಮುನ್ನವೇ ಕುಮಾರ ವಾಲ್ಮೀಕಿಯು ರಾಮಾಯಣ ರಚನೆಮಾಡಿದಂತೆ ಕಾಣುತ್ತದೆ. ಪ್ರಚಲಿತ ರಾಜಕೀಯದ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ದೈವವನ್ನೇ ಮರೆಹೊಕ್ಕ ಕವಿಯು ತನ್ನ ಕಾವ್ಯಾರಾಧನೆಯಿಂದಲೇ ಆತ್ಮಶಾಂತಿ ಹೊಂದಿರ ಬೇಕೆಂದು ಊಹಿಸಬಹುದು.

## ಧಾರ್ಮಿಕ ಸನ್ನಿವೇಶ

'ಮಧ್ಯಕಾಲೀನ ಭಾರತದ ಇತಿಹಾಸವೆಂದರೆ, ಒಂದು ಅರ್ಥದಲ್ಲಿ, ಅಲ್ಲಿನ ಸಂತರ ಇತಿಹಾಸವೇ ಆಗಿದೆ.'[6] ಈ ಹೇಳಿಕೆಯು ಜನಜೀವನದ ಮೇಲೆ ಸಂತರ ಪ್ರಭಾವದ ಹಿರಿಮೆಯನ್ನು ನಿರ್ದೇಶಿಸುತ್ತದೆ. ಹನ್ನೆರಡನೆಯ ಶತಮಾನ ದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮಾಜಿಕ ಸುಧಾರಣೆಯ ಸ್ವರೂಪದ ಧಾರ್ಮಿಕ ಕ್ರಾಂತಿಯ ಫಲವಾಗಿ, ೧೪ನೆಯ ಶತಮಾನದ ಹೊತ್ತಿಗೆ ವೀರಶೈವಧರ್ಮವು ಕನ್ನಡನಾಡಿನಲ್ಲಿ ವ್ಯಾಪಕವಾಗಿ ಹರಡಿತ್ತು. ಈ ವೀರಶೈವ ಕ್ರಾಂತಿಯ ಸಫಲತೆಯಿಂದಾಗಿ, ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಪ್ರಚಾರದಲ್ಲಿದ್ದ ಜೈನಧರ್ಮವು ಪುನಃ ಚೇತರಿಸಿಕೊಳ್ಳಲು ಯತ್ನಿಸಿತು. ವೈದಿಕ ಮತಗಳೂ, ತಮ್ಮ ತಮ್ಮ ಶುಷ್ಕ ಆಚಾರ, ಸಂಪ್ರದಾಯಗಳನ್ನು ದೂರವಿ ರಿಸಿ, ಪುನರ್ವ್ಯವಸ್ಥೆಗೆ ಮುಂದಾಗಿ, ಸಮನ್ವಯ, ಸಾಮರಸ್ಯಗಳಲ್ಲಿ ಸ್ವಾರಸ್ಯವನ್ನು ಕಾಣತೊಡಗಿದುದೂ ಈ ಕಾಲದ ವಿಶಿಷ್ಟತೆಯೆನ್ನಬೇಕು. ಜ್ಞಾನದೇವ, ನಾಮದೇವ, ಚಕ್ರಧರ, ಮಧ್ವಾಚಾರ್ಯ–ಇವರಿಂದ ಭಕ್ತಿಪಂಥದ ಪ್ರಚಾರವು ವ್ಯಾಪಕವಾಗಿ ನಡೆದದ್ದೂ ಭಕ್ತಕವಿ ಕುಮಾರ ವಾಲ್ಮೀಕಿಯು ಬಾಳಿದ ಸಮಾಜದ ಧಾರ್ಮಿಕ ಸನ್ನಿವೇಶದ ಮಹತ್ವ ಪೂರ್ಣ ಅಂಶಗಳಲ್ಲಿ ಒಂದಾಗಿದೆ.

---

1. ಆರ್. ನರಸಿಂಹಾಚಾರ್ಯ–ಕ. ಕ. ಚ. ೧-೧೦೧.
2. ಡಿ. ಎಲ್. ಎನ್.–ಪಂಪರಾಮಾಯಣ ಸಂಗ್ರಹ, ಪೀಠಿಕೆ, ೧೬.
3. ನಾಗಚಂದ್ರ : ಮಲ್ಲಿನಾಥಪುರಾಣ, ೧-೨೫.
4. ಈ ಕುರಿತಾದ ವಿಶ್ಲೇಷಣೆಗೆ ಕೆಳಗಿನ ಗ್ರಂಥಗಳನ್ನು ನೋಡಬಹುದು :
   (ಅ) ಕ. ಕ. ಚ. ೧-೧೨೧.
   (ಆ) ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ.
   (ಇ) ಪಂ. ರಾ. ಸಂಗ್ರಹ–ಪೀಠಿಕೆ.
   (ಈ) ಗೋವಿಂದ ಪೈ–ಅಭಿನವ ಪಂಪ.
   (ಉ) ರಂ. ಶ್ರೀ. ಮುಗಳಿ–ಕ. ಸಾ. ಚ. ಪು. ೧೨೬.
5. ಈ ವಿಚಾರದ ವಿಶ್ಲೇಷಣೆಗೆ ಇದೇ ಪ್ರಬಂಧದ "ಕೃತಿಯಲ್ಲಿ ಪರಂಪರೆಯ ಸತ್ವ" ನೋಡಿರಿ.
6. 'The history of mediaeval India, in a sense, is the history of its saints,- M. Sheshadri-foreword to 'The Sevunas of Devagiri' by A. V. N.

## ವೈಷ್ಣವ ಭಕ್ತಿ ಪಂಥಗಳು

ಹದಿಮೂರನೆ ಶತಮಾನದ ಕೊನೆಯಲ್ಲಿ ಬಾಳಿದ ಜ್ಞಾನದೇವನು ಪರಮಾತ್ಮ ಮತ್ತು ಪರಸ್ಪರಪ್ರೇಮ–ಎಂಬೆರಡು ಅಂಶಗಳನ್ನು ಧಾರ್ಮಿಕ ಜೀವನದ ಮುಖ್ಯಸೂತ್ರಗಳಾಗಿ ಸಾರಿದನು. ಜ್ಞಾನದೇವನ 'ಜ್ಞಾನೇಶ್ವರಿ' ಎಂಬ ಗ್ರಂಥವು ಮಹಾರಾಷ್ಟ್ರದ ಬೈಬಲ್ ಎಂದು ಪ್ರಸಿದ್ಧಿಗೊಂಡಿದೆ.[1] ಭಕ್ತಿಯೊಂದೇ ದುಃಖ ನಿವಾರಕವೆಂದು ಸಾರಿದ ಜ್ಞಾನದೇವನು, ವಿಷ್ಣುಭಕ್ತಿಯನ್ನು ಜನಪ್ರಿಯಗೊಳಿಸಿದನು. ಪಂಡರಾಪುರದ ವಿಠಲಭಕ್ತನಾದ ಇವನಿಂದಾಗಿ ಆ ಕ್ಷೇತ್ರವು ಸಂತರ ಭಕ್ತಿ ಕೇಂದ್ರವಾದುದಲ್ಲದೆ, ರಾಜಾಶ್ರಯವನ್ನೂ ಪಡೆಯಿತು.[2]

ಒಂದು ಸಂಪ್ರದಾಯದಂತೆ, ಭಕ್ತಿ ಪಂಥದ ಇನ್ನೊಬ್ಬ ಸಂತ ನಾಮದೇವನು ಜ್ಞಾನದೇವನ ಸಮಕಾಲೀನನು. ಆದರೆ ಇತ್ತೀಚಿನ ಸಂಶೋಧನೆಯಂತೆ, ನಾಮದೇವನು ೧೪ನೆಯ ಶತಮಾನದ ಉತ್ತರಾರ್ಧದವನೆಂದು ತಿಳಿಯಲಾಗಿದೆ.[3]

## ಮಹಾನುಭಾವ ಚಳವಳಿ

ವೈಷ್ಣವ ಭಕ್ತಿಯ ಇನ್ನೊಂದು ಸ್ವರೂಪವು 'ಮಹಾನುಭಾವ ಪಂಥವಾಗಿ'ವಾಗಿ ಕಾಣಿಸಿಕೊಂಡಿತು.[4] ಈ ಪಂಥದ ಸ್ಥಾಪಕರು ಚಕ್ರಧಾರಿ. ಹದಿಮೂರು ಸ್ತ್ರೀಯರನ್ನೊಳಗೊಂಡ ಸುಮಾರು ೫೦೦ ಭಕ್ತರಿದ್ದ ಚಕ್ರಧರರ ಶಿಷ್ಯ ಸಮೂಹವು 'ಮಹಾನುಭಾವ'ರೆಂದು ಪ್ರಸಿದ್ಧರಾದರು.

ಕೃಷ್ಣನನ್ನುಳಿದು ಇನ್ನಾರನ್ನೂ 'ಮಹಾನುಭಾವ'ರು ದೇವರೆಂದು ನಂಬುವುದಿಲ್ಲ. ಕೃಷ್ಣನ 'ಗೀತೆ'ಯನ್ನು ಮಾತ್ರ ಅವರು 'ದೈವವಾಣಿ' ಎಂಬ ಪೂಜ್ಯದೃಷ್ಟಿಯಿಂದ ಕಾಣುತ್ತಿದ್ದರೂ, ನಂತರ ಕೃಷ್ಣನ ಜೀವನಘಟನಾವಳಿಗಳಿಂದ ಕೂಡಿದ 'ಭಾಗವತ'ದ ಭಾಗವನ್ನು ಗೌರವಿಸತೊಡಗಿದರು. ಕೃತಯುಗದಲ್ಲಿ 'ಹಂಸ', ತ್ರೇತಾಯುಗದಲ್ಲಿ 'ದತ್ತ', ದ್ವಾಪರದಲ್ಲಿ 'ಕೃಷ್ಣ' ಮತ್ತು ಕಲಿಯುಗದಲ್ಲಿ 'ಚಕ್ರಧರ'–ಇವು ಪರಮಾತ್ಮನ ಅವತಾರಗಳೆಂದು ಇವರ ನಂಬಿಕೆ.[5] ಮಾಯೆ ಮತ್ತು ಅವಿದ್ಯೆಗಳಿಂದ ಪಾರಾಗಲು ಜ್ಞಾನಕ್ಕಿಂತಲೂ ಭಕ್ತಿಯೇ ಶ್ರೇಷ್ಠವೆನ್ನುವುದು ಮಹಾನುಭಾವ ಪಂಥದ ತತ್ತ್ವ.

ದೇವಗಿರಿಯ ಸೇವುಣರಾಜರಾದ ಕೃಷ್ಣ (೧೨೪೭–೬೧) ಮತ್ತು ಮಹಾದೇವ (೧೨೬೧-೧೨೭೦)ರು ತಾವು ಅನ್ಯ ಶ್ರದ್ಧೆಯವರಾಗಿದ್ದರೂ, ಸಂತ ಚಕ್ರಧರರನ್ನು ಸಂದರ್ಶಿಸಿ ಗೌರವ ಸೂಚಿಸಿದರೆಂದು ಹೇಳಲಾಗಿದೆ. ಸೇವುಣ ರಾಜ ಪರಿವಾರದಲ್ಲಿ ಹಲವರು ಮಹಾನುಭಾವ ಪಂಥದಲ್ಲಿ ಒಲವುಳ್ಳವರಾಗಿದ್ದರು. ಮಹಾದೇವನ ರಾಣಿ ವೈಜೈ ಮತ್ತು ರಾಮಚಂದ್ರ (೧೨೭೧–೧೩೧೧)ನ ಪತ್ನಿ ಕಮಾಯಿ–ಇವರು ಮಹಾನುಭಾವ ಪಂಥಕ್ಕೆ ಆಶ್ರಯನೀಡಿ, ನಾಗದೇವಾಚಾರ್ಯ, ಗೋಪಾಲ ಪಂಡಿತರೆಂಬ ಸಂತರ ಶಿಷ್ಯೆಯರಾಗಿದ್ದರು.[6]

## ಮಧ್ವಾಚಾರ್ಯ

ಹದಿನಾಲ್ಕನೆಯ ಶತಮಾನದ ಧಾರ್ಮಿಕ ಕ್ಷೇತ್ರದ ಪರಿಶೀಲನೆಯಲ್ಲಿ ತೊಡಗಿದಾಗ, ಇದಿರಾಗುವ ಇನ್ನೊಂದು ಹೆಸರು ಮಧ್ವಾಚಾರ್ಯರದು.[7] ಮಧ್ವಾಚಾರ್ಯರ ತತ್ತ್ವದ ಮುಖ್ಯಾಂಶಗಳಾದ ಜಗತ್ಸತ್ಯತೆ ಮತ್ತು ಹರಿಭಕ್ತಿಯ ಹಿರಿಮೆಗಳು ಆ ಕಾಲದಲ್ಲಿ ಜನತೆಯನ್ನು ತಮ್ಮ ಕಡೆಗೆ ಸೆಳೆಯುವಲ್ಲಿ ಯಶಸ್ವಿಯಾದವು.

ನಾರಾಯಣಪಂಡಿತಾಚಾರ್ಯರಿಂದ ರಚಿತವಾದ 'ಮಧ್ವ ವಿಜಯ'ವು ಆಚಾರ್ಯರ ಜೀವನ ಚರಿತ್ರೆಯನ್ನು

---

1. Teachings of Jnaneshwari, p. 1.
2. A. V. Narasimha Murthy, The Sevunas of Devagiri. p. 185.
3. *Ibid.* p. 186.
4. ಮಹಿಮಭಟ್ಟನ 'ಲೀಲಾಚರಿತ'ವು ಪವಾಡಮಯವಾದ ಚಕ್ರಧಾರಿಗಳ ಜೀವನಚರಿತ್ರೆಯನ್ನು ತಿಳಿಸುತ್ತದೆ.
5. Pangarkar-Marathi Vanmayacha Ithihas, p. 416.
6. A. V. N–The Sevunas of Devagiri, p. 186-188.
7. ಮಧ್ವಾಚಾರ್ಯರ ಕಾಲವಿಚಾರವಾಗಿರುವ ಎರಡು ಅಭಿಮತಗಳ ಬಗ್ಗೆ ಇದೇ ಅಧ್ಯಾಯದಲ್ಲಿ ಹಿಂದೆ ಬಂದಿದೆ.

ತಿಳಿಸುವ ಸಮಕಾಲೀನ ಕೃತಿಯಾಗಿದೆ. ಸಂನ್ಯಾಸ ಜೀವನ, ಭಾರತ ಸಂಚಾರ, ಶಿಷ್ಯತ್ವ ಸಂಪಾದನೆ, ಉಡುಪಿಯಲ್ಲಿ ಶ್ರೀ ಕೃಷ್ಣದೇವಾಲಯ ಮತ್ತು ಅಷ್ಟಮಠಗಳ ಸ್ಥಾಪನೆ–ಇವು ಆಚಾರ್ಯರ ಜೀವನದ ಮುಖ್ಯ ಘಟನೆಗಳು. ಅವರು ನಡೆಸಿದ ವಿಷ್ಣುಭಕ್ತಿ ಪ್ರಚಾರದ ಪ್ರಭಾವವು ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದ ಇತರಡೆಗಳಲ್ಲೂ ಹರಡಿತ್ತು. ಬಂಗಾಳದ ಚೈತನ್ಯಪಂಥವು ಮಧ್ವಾಚಾರ್ಯರ ತತ್ತ್ವಗಳಿಂದ ಪ್ರಭಾವಿತವಾದ ವಿಚಾರ ಸರ್ವಮಾನ್ಯವಾಗಿದೆ. ಆಚಾರ್ಯರ ಶಿಷ್ಯರಾದ ತ್ರಿವಿಕ್ರಮ ಪಂಡಿತ, ಪದ್ಮನಾಭತೀರ್ಥ,[1] ನರಹರಿತೀರ್ಥರೇ–ಮೊದಲಾದವರು ನಾಡಿನ ಉದ್ದಗಲಗಳಲ್ಲಿ ಮಾಧ್ವ ತತ್ತ್ವ ಮತ್ತು ವಿಷ್ಣುಭಕ್ತಿಗಳನ್ನು ಹರಡುವುದರಲ್ಲಿ ಮುಂದಾದರು. ಮಧ್ವಾಚಾರ್ಯರ ಸಾಕ್ಷಾತ್ ಸೇವೆಯನ್ನು ಮಾಡಿದ ನರಹರಿತೀರ್ಥರಿಂದಲೇ ದಾಸಮಾರ್ಗದ ಕನ್ನಡ ಭಕ್ತಿಪಂಥವು ತಲೆಯೆತ್ತಿತು.

ಮಧ್ವಾಚಾರ್ಯರು ಧಾರ್ಮಿಕ ಕ್ಷೇತ್ರದ ಸಂಪ್ರದಾಯಗಳಲ್ಲಿ ಕೆಲವು ಸುಧಾರಣೆಗಳನ್ನು ರೂಢಿಗೆ ತಂದಿರುವುದು ಉಲ್ಲೇಖನೀಯ. ಯಜ್ಞಗಳಲ್ಲಿ ಪ್ರಾಣಿಗಳಬದಲಾಗಿ, ಪಿಷ್ಟಪಶುವನ್ನು ಬಳಸುವ ಪದ್ಧತಿಯೂ, ಏಕಾದಶಿಯಂದು ಉಪವಾಸವ್ರತಾಚರಣೆಯನ್ನು ಪ್ರಚಾರಕ್ಕೆ ತಂದುದೂ ಮುಖ್ಯವಾದವುಗಳು.[2]

ಕುಮಾರ ವಾಲ್ಮೀಕಿಯು ಮಧ್ವರ ಶಿಷ್ಯನಾಗಿದ್ದು, ಆಚಾರ್ಯರು ಸಾರಿದ ತತ್ತ್ವವಾದದ ಕೆಲಸಂಶಗಳನ್ನು ತನ್ನ ಕೃತಿಯಲ್ಲಿ ಅಳವಡಿಸಿಕೊಂಡನು.[3] ರಾಜಕೀಯ ಅಸ್ಥಿರತೆ, ಪರಕೀಯರ ಆಕ್ರಮಣದ ಭೀತಿಗಳಿಂದ ಜನತೆ ತತ್ತರಿಸಿಹೋದ ಆ ಪರಿಸ್ಥಿತಿಯಲ್ಲಿ ಸಂತರ ಭಕ್ತಿಮಾರ್ಗವೊಂದು ಆಶಾಕಿರಣದಂತೆ ಬೆಳಕುಬೀರಿತೆನ್ನಬೇಕು. ಅಂತಹ ಬೆಳಕನ್ನು ಕಂಡು ಬೆಳಗಿದ ಪುಣ್ಯಜೀವಿಗಳಲ್ಲಿ ಕುಮಾರವಾಲ್ಮೀಕಿಯೂ ಒಬ್ಬನು.

## ಸಾಹಿತ್ಯ ಕ್ಷೇತ್ರ

ಒಂದು ನಾಡಿನ ಸಮಾಜಿಕ ಸ್ಥಿತಿಗಳ ಸುಳಿವು–ಹೊಳವುಗಳನ್ನು ನಾವು ಆ ಕಾಲದ ಸಾಹಿತ್ಯದಲ್ಲಿ ಗುರುತಿಸಬಹುದಾಗುತ್ತದೆ. ಹದಿನಾಲ್ಕನೆಯ ಶತಮಾನದ ಕನ್ನಡ ಸಾಹಿತ್ಯದ ಇತಿಹಾಸವೂ ಇದಕ್ಕೆ ಹೊರತಾಗಿಲ್ಲ. ಈ ಕಾಲದಲ್ಲಿ ದೇಸೀ ಕಾವ್ಯವು ಕನ್ನಡ ಸಾಹಿತ್ಯದಲ್ಲಿ ಒಂದು ಪ್ರತಿಷ್ಠಿತ ಸ್ಥಾನವನ್ನು ಹೊಂದಿತ್ತು. ಹರಿಹರ, ರಾಘವಾಂಕರು ಪ್ರವರ್ತಿಸಿದ ಕಾವ್ಯಮಾರ್ಗದಲ್ಲಿ ಸಾಕಷ್ಟು ಕೃಷಿ ನಡೆದು, ಕುಮಾರವ್ಯಾಸ, ಭೀಮಕವಿ, ಪದ್ಮಣಾಂಕ–ಈ ಕವಿಗಳು ಅಚ್ಚಗನ್ನಡದ ಛಂದಸ್ಸಾದ ಷಟ್ಪದಿಯಲ್ಲಿ ಕಾವ್ಯರಚಿಸಿದರು. ವೀರಶೈವ ಕವಿಗಳು ಐತಿಹಾಸಿಕ ಮಹಾಪುರುಷರನ್ನು ಕಾವ್ಯ–ನಾಯಕರನ್ನಾಗಿಸ ತೊಡಗಿದರು. ಇದರ ಪ್ರಭಾವವು ಜೈನ, ಬ್ರಾಹ್ಮಣ ಕವಿಗಳ ಮೇಲೂ ಆಗದಿರಲಿಲ್ಲ. ಚೌಂಡರಸನ 'ಅಭಿನವ ದಶಕುಮಾರ ಚರಿತೆ', ನಾಗರಾಜನ 'ಪುಣ್ಯಾಸ್ರವ,' ವೃತ್ತವಿಲಾಸನ 'ಧರ್ಮ ಪರೀಕ್ಷೆ'–ಇವುಗಳು ಚಂಪೂ ರೂಪದಲ್ಲಿದ್ದರೂ ಲೌಕಿಕ ಕಥೆಗಳನ್ನು ಹೇಳುತ್ತವೆಂಬುದನ್ನು ಗಮನಿಸಬಹುದು. ಪೂರ್ವ ಪರಂಪರೆಯನ್ನೇ ಅನುಸರಿಸಿದ ಚೌಂಡರಸನ 'ನಳಚರಿತ್ರೆ', ಹಸ್ತಿಮಲ್ಲನ 'ಪೂರ್ವಪುರಾಣ'ಗಳೂ–ಕಾವ್ಯದೃಷ್ಟಿಯಿಂದ ಯುಗಧರ್ಮವನ್ನು ಹೊಂದದೆ ಹೋಗಲಿಲ್ಲ.

ಕವಿಚರಿತಕಾರರ ಪ್ರಕಾರ ೧೪ನೇ ಶತಮಾನದ ಕವಿಗಳ ಸಂಖ್ಯೆ ೩೬ರಷ್ಟು ಆಗುತ್ತದೆ. ಅವರಲ್ಲಿ ಬ್ರಹ್ಮದೇವ (೧೩೨೦),[4] ನೃಸಿಂಹ (೧೩೮೮),[5] ವಜ್ರ (೧೩೯೩)[6]–ಇವರು ಮೂವರು ಶಾಸನಕಾರರು. ರಚಿಸಿದ ಗ್ರಂಥಗಳು ಗೊತ್ತಾಗದ, ಇಲ್ಲವೆ ಹಿಂದಿನ ಕಾವ್ಯಗಳ ಪ್ರತಿಮಾಡಿದ ಲೇಖಕರ ಹೆಸರುಗಳೂ ಈ ೩೬ರಲ್ಲಿ ಸೇರಿಕೊಂಡಿವೆ.

ಇವರಲ್ಲಿ ಜೈನಶ್ರದ್ಧೆಯ ಕವಿಗಳ ಸಂಖ್ಯೆಯೇ ದೊಡ್ಡದು. ಆದರೆ ವೀರಶೈವ, ಬ್ರಾಹ್ಮಣ ಕವಿಗಳ ಸಂಖ್ಯೆಯು ಹಿಂದಿನ ಶತಮಾನಕ್ಕಿಂತ ಹೆಚ್ಚಾಗಿರುವುದು ಗಮನಾರ್ಹ. ಈ ಶತಮಾನದ ಬ್ರಾಹ್ಮಣ ಕವಿಗಳೂ ಲೌಕಿಕ ಕಾವ್ಯ

---

1. ಇವರ ವಿಚಾರ ಈ ಮೊದಲೇ ಇದೇ ಪ್ರಬಂಧದ 'ಶ್ರೀ ಮಧ್ವಾಚಾರ್ಯರ ಕಾಲ' ಪ್ರಕರಣದಲ್ಲಿ ಬಂದಿದೆ.
2. B. N. K. Sharma-Madhva's Teachings-in his own words, p. 9.
3. ಈ ವಿಚಾರ ವಿಶ್ಲೇಷಣೆಗೆ ಇದೇ ಪ್ರಬಂಧದ 'ಕೃತಿಯಲ್ಲಿ ತತ್ತ್ವ ದರ್ಶನ' ಪ್ರಕರಣ ನೋಡಬಹುದು.
4. ಆರ್. ನರಸಿಂಹಾಚಾರ್ಯ ಕ. ಕ. ಚ. ೧-೪೬೩.
5. ಇದೇ. ೧-೪೮೫.
6. ಇದೇ. ೧-೪೯೪.

ವನ್ನು ರಚಿಸಿರುವುದಕ್ಕೆ ಚೌಂಡರಸನ 'ಅಭಿನವ ದಶಕುಮಾರ ಚರಿತೆ'ಯೇ ಸಾಕ್ಷಿ. ಈ ಕಾಲದ 'ವೀರಶೈವ ಕವಿಗಳು ಮುಂದಿನ ಶತಮಾನಪಲ್ಲಿಯ ಸಾಹಿತ್ಯದ ವಸಂತ–ಕಾಲವನ್ನು ಉಗ್ಗಡಿಸುವ ಕೋಗಿಲೆಯಂತಿದ್ದಾರೆನ್ನಬಹುದು.'[1]

ಹೀಗೆ ವಸ್ತು, ರೀತಿಗಳ ದೃಷ್ಟಿಯಿಂದ ಯುಗಧರ್ಮಕ್ಕೊಳಗಾದ ಈ ಕಾಲದ ಸಾಹಿತ್ಯ ಸೃಷ್ಟಿಯಲ್ಲಿ ಭಾಷಾ ಶೈಲಿಯ ದೃಷ್ಟಿಯಿಂದಲೂ ಸಂಕ್ರಮಣಾವಸ್ಥೆಯ ಲಕ್ಷಣಗಳು ಕಾಣಿಸಿಕೊಂಡಿವೆ. 'ಹಳಗನ್ನಡದಿಂದ ಹೊಸಗನ್ನಡಕ್ಕೆ ಪರಿವರ್ತನೆ ಹೊಂದುತ್ತಿರುವ ಕಾಲದ ಪ್ರಾಯೋಗಿಕ ಶೈಲಿಯ ಸಂಕೀರ್ಣತೆ, ವೈವಿಧ್ಯಗಳು ಈ ಕಾಲದಲ್ಲಿ ತಲೆದೋರಿವೆ. ಕನ್ನಡ ವರ್ಣಮಾಲೆಯಲ್ಲಿದ್ದ ಱ, ೞ ಅಕ್ಷರಗಳು ಉಚ್ಚಾರದಲ್ಲಿಯೂ, ಬರವಣಿಗೆಯಲ್ಲಿಯೂ ಲೋಪಹೊಂದಿರಬೇಕೆಂಬ ಸೂಚನೆ ಈ ಯುಗದಲ್ಲಿ ದೊರೆಯುತ್ತದೆ........ಹರಿಹರನು ಈ ವಿಷಯದಲ್ಲಿ ಅನೇಕ ಕವಿಗಳಿಗೆ ಮಾರ್ಗದರ್ಶಿಯಾದನು.'[2]

ಈ ಕಾಲದಲ್ಲಿ ಜ್ಞಾನದೇವ, ನಾಮದೇವ, ಚಕ್ರಧರ, ಮಧ್ವಾಚಾರ್ಯ ಮೊದಲಾದ ಸಂತರ ಪ್ರಭಾವದ ಪರಿಣಾಮವಾಗಿ–ಸಾಹಿತ್ಯವು ಆಧ್ಯಾತ್ಮಿಕತೆ, ಅನುಭಾವಗಳ ಮಾಧ್ಯಮವಾಗಿ, ಭಕ್ತಿಯ ಅಭಿವ್ಯಕ್ತಿಗೆ ಪ್ರಮುಖ ಸಾಧನವಾದಂತೆಯೂ ತೋರುತ್ತದೆ.

ಈ ಹಿನ್ನೆಲೆಯಲ್ಲಿ ಭಕ್ತಕವಿಯಾದ ಕುಮಾರ ವಾಲ್ಮೀಕಿಯು ಆದಿಕವಿಯ ಕಾವ್ಯವನ್ನು ಸರಳವೂ, ದೇಸೀನಿಷ್ಠವೂ ಆದ ಭಾಮಿನಿ ಷಟ್ಪದಿ ಛಂದಸ್ಸಿನಲ್ಲಿ ಕನ್ನಡಿಸಿದನು. ಕುಮಾರ ವಾಲ್ಮೀಕಿಯೇ ವಾಲ್ಮೀಕಿ ರಾಮಾಯಣವನ್ನು ಸಮಗ್ರವಾಗಿ ಕನ್ನಡಕ್ಕಿಳಿಸಿದವರಲ್ಲಿ ಮೊತ್ತಮೊದಲಿಗನಾದನು. ಆದರೂ ಕನ್ನಡದಲ್ಲಿ ರಾಮಕಥಾಸಾಹಿತ್ಯವೇ ಇರಲಿಲ್ಲವೆನ್ನುವಂತಿಲ್ಲ. ಕುಮಾರ ವಾಲ್ಮೀಕಿಯ ಕಾಲದವರೆಗಿನ ಕನ್ನಡ ಸಾಹಿತ್ಯದ 'ಹಕ್ಕಿನೋಟ' ದಿಂದ ಈ ಅಂಶವು ಸ್ಪಷ್ಟವಾಗುತ್ತದೆ.

## ೧೪ನೆಯ ಶತಮಾನದವರೆಗಿನ ಕನ್ನಡ ಸಾಹಿತ್ಯದಲ್ಲಿ ರಾಮಕಥೆ

### ಕವಿರಾಜಮಾರ್ಗದಲ್ಲಿ

"ಕವಿರಾಜಮಾರ್ಗ"ವು ಎಲ್ಲ ದೃಷ್ಟಿಗಳಿಂದಲೂ ಕನ್ನಡದ ಆದ್ಯ ಗ್ರಂಥವಾಗಿದೆ; ಮೊದಲನೆಯ ಉಪಲಬ್ಧ ಗ್ರಂಥ, ಮೊದಲನೆಯ ಅಲಂಕಾರಗ್ರಂಥ ಎಂದಲ್ಲದೆ ಅದು ವಿಚಾರಸಂಪತ್ತಿಯಿಂದ ಕೂಡಿದ ಬೆಲೆಯುಳ್ಳ ಕೃತಿಯಾಗಿದೆ[3]. ಈ ಕೃತಿಯ ಕರ್ತೃ ಮತ್ತು ಕಾಲವಿಚಾರವಾಗಿ ಸಾಕಷ್ಟು ಮಥನ ನಡೆದಿದೆ.[4]

ಈ ಕೃತಿಯಲ್ಲಿ ರಾಮಾಯಣ ಕಥೆಗೆ ಸಂಬಂಧಿಸಿದ ೧೪ ಲಕ್ಷ್ಯಪದ್ಯಗಳಿವೆ.[5] ಅವುಗಳಲ್ಲಿ ಜೈನ ರಾಮಾಯಣ ಸಂಪ್ರದಾಯದ ಕುರುಹುಗಳಿವೆ. ಯಾವುದೋ ಪೂರ್ವ ಜೈನ ರಾಮಾಯಣದಿಂದ ಆ ಪದ್ಯಗಳನ್ನು ಕವಿರಾಜಮಾರ್ಗಕಾರನು ಉದ್ಧರಿಸಿರಬೇಕೆಂಬ ಊಹೆಯಿದೆ. ಆದರೆ ಈ ಲಕ್ಷ್ಯ ಪದ್ಯಗಳು ಕವಿರಾಜಮಾರ್ಗದ ಗ್ರಂಥಕರ್ತನಿಂದಲೇ ರಚಿತವಾದ ಸ್ವತಂತ್ರವಾದ ಲಕ್ಷ್ಯ ಪದ್ಯಗಳೆಂದು ವಿವೇಚನೆಯೂ ನಡೆದಿದೆ.[6]

---

1. ಸ. ಸ. ಮಾಳವಾಡ–ಸಾಹಿತ್ಯಸಂಗಮ, ಪು. ೪೦.
2. ರಂ. ಶ್ರೀ. ಮುಗಳಿ–ಕ. ಸಾ. ಚರಿತ್ರೆ, ಪು. ೧೫೦.
3. ರಂ. ಶ್ರೀ ಮುಗಳಿ–ಕ. ಸಾ. ಚರಿತ್ರೆ, ಪು. ೫೪.
4. (ಅ) ಆರ್. ನರಸಿಂಹಾಚಾರ್–ಕ. ಕ. ಚ. I ಪು. ೧೭–೧೯.
   (ಆ) ಮು. ತಿಮ್ಮಪ್ಪಯ್ಯ–ಕವಿರಾಜಮಾರ್ಗವಿವೇಕ, ಪು. ೮೭–೯೪.
   (ಇ) ರಂ. ಶ್ರೀ ಮುಗಳಿ–ಕ. ಸಾ. ಚ. ಪು. ೫೦–೫೪.
5. ಕವಿರಾಜಮಾರ್ಗ–ಪರಿಚ್ಛೇದ ೩–೩೪, ೪೦, ೪೩, ೪೯, ೯೦, ೯೩, ೯೬, ೧೩೪, ೧೩೫, ೧೩೭ ಮತ್ತು ೧೭೦ನೇ ಪದ್ಯಗಳು. ೩–೧೪೯, ೧೯೦, ೧೯೪ನೇ ಪದ್ಯಗಳು.
6. ಎಂ. ವಿ. ಸೀತಾರಾಮಯ್ಯ–ಕವಿರಾಜಮಾರ್ಗದಲ್ಲಿನ ರಾಮಾಯಣ ಪದ್ಯಗಳು, ಕ. ಸಾ. ಪ. ಡಿಸೆಂಬರ್ ೧೯೬೬.

ಈ ಲಕ್ಷ್ಯ ಪದ್ಯಗಳಲ್ಲಿ ಸೂಚಿತವಾಗಿರುವ ರಾಮಕಥಾಂಶಗಳು :

(ಅ) ಸೀತಾಹರಣ, ಜಟಾಯುಹನನ.[1]

(ಆ) ರಾಮ–ಹನುಮ ಸಂದರ್ಶನ.[2]

(ಇ) ಸೀತೆಯ ತರಲು ಕರೆ.[3]

(ಈ) ಹನುಮನ ಸಮುದ್ರ ತರಣ, ಲಂಕಾ ಭಂಜನ.[4]

(ಉ) ಹನುಮಂತನ ಸೀತಾದರ್ಶನ.[5]

(ಊ) ಸೀತೆಯೊಡನೆ ಹನುಮನ ನುಡಿಗಳು.[6]

(ಎ) ಹನುಮನಿಗೆ ಸೀತೆಯ ನುಡಿಗಳು.[7]

(ಏ) ಸೇತು ಬಂಧನ.[8]

(ಐ) ರಾಮ–ರಾವಣಯುದ್ಧ.[9]

(ಒ) ರಾವಣ ವಧೆ.[10]

**ಪೊನ್ನನ (ರಾಮಾಭ್ಯುದಯ) : ಭುವನೈಕ ರಾಮಾಭ್ಯುದಯ (ಕ್ರಿ.ಶ. ಸು. ೯೫೧)[11]**

ಪೊನ್ನನು ತನ್ನ 'ಶಾಂತಿಪುರಾಣ'ದಲ್ಲಿ

ಪ್ರಕಟಂ ಲೋಕೋತ್ತರ ಲೌ
ಕಿಕ ಪರಿಣತಿ ಪೊನ್ನಿಗಂಗೆ ಶಾಂತೀಶ್ವರ ರಾ–
ಮಕಥಾ ಪ್ರಶಸ್ತಿಯಿಂದಾ
ದಕೃತಿಗಳ್....[12]

ಎನ್ನುವುದರಿಂದ, 'ಶಾಂತಿಪುರಾಣ'ವು ಅವನ ಧಾರ್ಮಿಕ ಗ್ರಂಥವಾದರೆ, 'ರಾಮಕಥೆ'ಯು ಅವನ ಲೌಕಿಕ ಕೃತಿಯೆಂದು ತಿಳಿಯುತ್ತದೆ.

ವಿದಿತ ಭುವನೈಕ ರಾಮಾ
ಭ್ಯುದಯಕ್ಕಂ ಬೆಲೆಗಮಾವುದಂತರಮಿಂತೀ
ಪದಿನಾಲ್ಕು ಭುವನಂಗಳ್
ಪದಿನಾಲ್ಕಾಶ್ವಾಸರಚನೆಗಂ ಬೆಲೆಯಕ್ಕುಂ[13]

---

1. ಕ. ರಾ. ಮಾ. ೨-೯೪.
2. ಇದೇ. ೨-೩೮, ೮೯-೯೧.
3. ಇದೇ. ೨-೧೩೦.
4. ಇದೇ. ೨-೧೯೦.
5. ಕವಿರಾಜಮಾರ್ಗ-ಪರಿಚ್ಛೇದ, ೨-೪೦.
6. ಇದೇ. ೨-೪೨.
7. ಇದೇ. ೨-೧೨೪, ೧೨೫.
8. ಇದೇ. ೨-೧೨೭.
9. ಇದೇ. ೨-೯೩, ೯೬.
10. ಇದೇ. ೩-೧೮೯.
11. (ಅ) ಆರ್. ನರಸಿಂಹಾಚಾರ್–ಕ. ಕ. ಚ. ೧-೪೦.
    (ಆ) ರಂ. ಶ್ರೀ ಮುಗಳಿ-ಕ. ಸಾ. ಚ. ಪು. ೧೦೧.

12-13. ಪೊನ್ನ-ಶಾಂತಿಪುರಾಣ, ೧೨-೬೫, ೬೬.

ಹೀಗೆ ಪೊನ್ನನು ತನ್ನ "ಭುವನೈಕ ರಾಮಾಭ್ಯುದಯ"ವೆಂಬ ರಾಮಕಥೆಯಲ್ಲಿ ೧೪ ಅಶ್ವಾಸಗಳುಂಟೆಂದೂ, ಅವಕ್ಕೆ ೧೪ ಲೋಕಗಳ ಬೆಲೆಯೆಂದೂ ಹೇಳಿಕೊಂಡಿದ್ದಾನೆ. 'ಕಾವ್ಯಾವಲೋಕನ' ಮತ್ತು 'ಶಬ್ದಮಣಿದರ್ಪಣ' ಗಳಲ್ಲಿ ಉದಾಹೃತವಾದ ಪದ್ಯಗಳಲ್ಲಿ ಬರುವ 'ಭುವನೈಕರಾಮ' ಎಂಬ ಪದದಿಂದ ಅವು, ಪೊನ್ನನ 'ಭುವನೈಕ ರಾಮಾಭ್ಯುದಯ' ಇಲ್ಲವೆ 'ರಾಮಕಥೆ' ಯಿಂದ ಉದ್ಧೃತವಾಗಿರಬೇಕೆಂದು ಊಹಿಸಲಾಗಿದೆ.[1] ಅಲ್ಲದೆ, ಪೊನ್ನನ 'ರಾಮಕಥೆ'ಯು 'ಭುವನೈಕ ರಾಮ'ನೆಂಬ ಬಿರುದನ್ನು ಪಡೆದಿದ್ದ ಶಂಕರಗಂಡನಿಗೆ ಅಂಕಿತಮಾಡಲ್ಪಟ್ಟ ಒಂದು ಕಾವ್ಯವಿರಬೇಕೆಂದೂ ತರ್ಕಿಸಲಾಗಿದೆ.[2]

ಇದೇನೇ ಇದ್ದರೂ, "ಭುವನೈಕ ರಾಮಾಭ್ಯುದಯ"ವು ಪಂಪನ ಲೌಕಿಕವಾದ ಭಾರತದಂತೆ, ಪೊನ್ನನ ಲೌಕಿಕ ರಾಮಾಯಣವಾಗಿರಬೇಕು; ನೇರವಾದ ಇತಿಹಾಸ ಕಾವ್ಯವಾಗಲಾರದು ಎಂದು ನಮಗೆ ತೋರುತ್ತದೆ"[3] ಇದುವೇ ವಾಸ್ತವವಾಗಿದ್ದಲ್ಲಿ ಪೊನ್ನನಿಂದ ಲೌಕಿಕದೃಷ್ಟಿಯ ಜೈನರಾಮಾಯಣವೊಂದು ಸೃಷ್ಟಿಯಾಗಿರಬೇಕೆಂದು ಮಾತ್ರವೇ ಸದ್ಯ ಹೇಳಬಹುದು.

## ಚಾವುಂಡರಾಯನ 'ಚಾವುಂಡರಾಯ ಪುರಾಣ' (ಸು. ೯೭೮)[4]

ಚಾವುಂಡರಾಯನು ತನ್ನ ಕೃತಿಯನ್ನು 'ತ್ರಿಷಷ್ಟಿ ಲಕ್ಷಣ ಮಹಾಪುರಾಣ'ವೆಂದು ಕರೆದಿದ್ದರೂ ಅದು "ಚಾವುಂಡ ರಾಯಪುರಾಣ"ಎಂದೇ ಪ್ರಸಿದ್ಧವಾಗಿದೆ. ಕನ್ನಡದ ಗದ್ಯಶೈಲಿಗೆ ಹೆಸರಾದ ಆ ಗ್ರಂಥದಲ್ಲಿ–ಗುಣಭದ್ರನ 'ಉತ್ತ ಪುರಾಣ'ಕ್ಕನುಗುಣವಾದ ರಾಮಕಥೆ ಇದೆ. ಇಲ್ಲಿ ವರ್ಣಿತರಾದ ಬಲದೇವ, ವಾಸುದೇವ, ಪ್ರತಿವಾಸುದೇವರಲ್ಲಿ ರಾಮ, ಲಕ್ಷ್ಮಣ, ರಾವಣರು ಪ್ರಸಿದ್ಧರಾದವರು.

ಈ ಕೃತಿಯಲ್ಲಿ ಸೀತಾಪಹಾರದ ಸನ್ನಿವೇಶ ಹೀಗೆ ಚಿತ್ರಿತವಾಗಿದೆ: "ರಾವಣಂ (ರಾಮ) ವೇಷಧರನಾಗಿ, ಸೀತೆ ಯಲ್ಲಿಗೆವಂದು, ಮಣಿಮಯ ಮೃಗ ಪೋತಕಮಂ ಪಿಡಿದು ಪೊಳಲ್ಗಟ್ಟಿದೆನೀಗಳಸ್ತಮಯ ಸಮಯಮಾದುದು, ಪೊಳಲ್ಗೆ ಪೋಪಂ, ಸಿಬಿಗೆಯನೇರೆಂದು ಶಿಬಿಕಾಕಾರಮಾಗಿರ್ದ ಪುಷ್ಪಕ ವಿಮಾನನನೇರಿಸಿ, ಸಿಬಿಗೆಯ ಕೆಲದೊಳ್ ತಾನುಂ ತುರಗಾರೂಢನಾಗಿ ಬರ್ಪಂದವಂ ಮಾಯೆಯಿಂ ಮಾಡಿ, ತನಗೆ ಮೃತ್ಯು ದೇವತೆಯನುಯ್ವಂತುಯ್ದು ಲಂಕೆಯ ನೆಯ್ದಿ....[5]

ಹೀಗೆ, ಸೀತಾಪಹಾರಕ್ಕಾಗಿ ರಾವಣನು ರಾಮವೇಷಧಾರಿಯಾಗಿ ಬರುವ ಸನ್ನಿವೇಶವು ವಾಲ್ಮೀಕಿಯ ಕೃತಿಗೆ ಅನುಸಾರಿಯಾಗಿಲ್ಲ, ಗುಣಭದ್ರನ ಉತ್ತರಪುರಾಣಾನುಸಾರಿಯಾಗಿದೆ.

## ನಾಗಚಂದ್ರನ 'ರಾಮಚಂದ್ರಚರಿತ ಪುರಾಣ' (ಅಭಿನವ ಪಂಪನ 'ರಾಮಾಯಣ')
### (ಕ್ರಿ.ಶ. ೧೨ನೆಯ ಶತಮಾನದ ಪೂರ್ವಾರ್ಧ)

"ಅಭಿನವ ಪಂಪ"ನೆಂದು ಪ್ರಸಿದ್ಧನಾದ ನಾಗಚಂದ್ರನು ವಿಮಲ ಸೂರಿಯ 'ಪಉಮ ಚರಿಯ'ವನ್ನನುಸರಿಸಿ, "ರಾಮಚಂದ್ರಚರಿತ ಪುರಾಣ"ವನ್ನು ರಚಿಸಿದನು. ಈ ಕಾವ್ಯವು 'ಪಂಪರಾಮಾಯಣ'ವೆಂದು ಜನಜನಿತವಾಗಿದೆ. 'ಜೈನದೃಷ್ಟಿಗೆ ವಾಲ್ಮೀಕಿ ರಾಮಾಯಣದಲ್ಲಿರುವ (ಕಾಣುವ) ದೋಷ, ನ್ಯೂನತೆಗಳನ್ನು ವಿಮಲ ಸೂರಿಯು ತೆಗೆದು,

---

1. ದ. ರಾ. ಬೇಂದ್ರೆ–ಪೊನ್ನನ ರಾಮಾಭ್ಯುದಯ,' ಪ್ರ. ಕ. ೧೩-೪.
2. ಡಿ. ಎಲ್. ಎನ್.–ಪೊನ್ನನ ಭುವನೈಕ ರಾಮಾಭ್ಯುದಯ, ಪ್ರ. ಕ. ೧೫-೪ ಮತ್ತು ಎಂ. ಬಿ. ಜೋಯಿ–ಭುವನೈಕ ರಾಮಾಭ್ಯುದಯ–ಕರ್ನಾಟಕ ಭಾರತಿ III, 2 ಪು. ೨೯-೪೬.
3. ರಂ. ಶ್ರೀ ಮುಗಳಿ, ಕ. ಸಾ. ಚ. ಪು. ೧೦೩.
4. (ಅ) ಅದೇ. ಪು. ೭೯.
   (ಆ) ಆರ್. ನರಸಿಂಹಾಚಾರ್ಯ, ಕ. ಕ. ಚ. ೧-೫೧.
5. ಚಾವುಂಡರಾಯ ಪುರಾಣ, ೭೯.

ರಾಮರಾವಣರ ಯುದ್ಧದ ಕಥೆಯನ್ನು ಜಿನಧರ್ಮದ ಕಥೆಯನ್ನಾಗಿ ಅಳವಡಿಸಿದನು. ಆ ಸಂಪ್ರದಾಯವನ್ನೇ ನಾಗಚಂದ್ರನು ಅನುಸರಿಸಿದನು."[1]

ನಾಗಚಂದ್ರನು ವಿಮಲಸೂರಿಯ ಪಉಮಚರಿಯದೊಂದಿಗೆ ರವಿಷೇಣನ 'ಪದ್ಮಪುರಾಣ'ವನ್ನೂ ಅಭ್ಯಾಸ ಮಾಡಿದಂತೆ ತೋರುತ್ತದೆ.[2]

ವಾಲ್ಮೀಕಿ ರಾಮಾಯಣಕ್ಕೂ, ನಾಗಚಂದ್ರನ ರಾಮಾಯಣಕ್ಕೂ ಇರುವ ಹಲವು ಕಥಾವ್ಯತ್ಯಾಸಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸಂಗ್ರಹಿಸಬಹುದು.[3]

(ಅ) ರಾಮನು ವಿಷ್ಣುವಿನ ಅವತಾರವಲ್ಲ; ಮನುಷ್ಯ. ರಾಮಲಕ್ಷ್ಮಣರು ಬಲಾಚ್ಯುತರು ; ಕಾರಣಪುರುಷರು. ರಾಮ ಧರ್ಮನಾಯಕ, ಅಹಿಂಸಾವ್ರತಿ ; ಲಕ್ಷ್ಮಣನು ವೀರನಾಯಕ, ಇವನಿಗೆ ಕೃಷ್ಣ, ಕೇಶವ, ವಾಸುದೇವ ಎಂಬ ಹೆಸರುಗಳೂ ಇವೆ.

(ಆ) ಅಶ್ವಮೇಧ, ಪುತ್ರಕಾಮೇಷ್ಟಿಗಳ ಪ್ರಸ್ತಾಪವಿಲ್ಲ. ವಿಶ್ವಾಮಿತ್ರ, ಪರಶುರಾಮ, ಮಂಥರೆಯರಿಲ್ಲ.

(ಇ) ರಾಮನ ತಾಯಿ ಅಪರಾಜಿತೆ, ಶತ್ರುಘ್ನನ ತಾಯಿ ಸುಪ್ರಭೆ, ಸುಮಿತ್ರೆಗೆ ಲಕ್ಷ್ಮಣನೊಬ್ಬನೇ ಮಗ. ರಾಮನ ವರ್ಣ ಬಿಳುಪು, ಲಕ್ಷ್ಮಣನದು ಕಪ್ಪು.

(ಈ) ಸೀತೆಯು ಅಯೋನಿಜೆಯಲ್ಲ, ಜನಕನ ರಾಣಿಯ ಗರ್ಭಸಂಭವೆ, ಪ್ರಭಾಮಂಡಲ ಆಕೆಯ ಅಣ್ಣ.

(ಉ) ರಾಮಲಕ್ಷ್ಮಣರ ವೈಭವಕ್ಕೆ ಭರತನು ವಿಷಾದಪಟ್ಟದ್ದಕ್ಕಾಗಿ, ಕೈಕೇಯಿ ಅವನಿಗಾಗಿ ರಾಜ್ಯವನ್ನು ಬೇಡುವಳು ; ರಾಮನು ಸಂತೋಷದಿಂದ ಕೊಡುವನು.

(ಊ) ಲಕ್ಷ್ಮಣನಿಗೆ ಅನೇಕ ಬಾರಿ ಮದುವೆಗಳಾಗುತ್ತವೆ.

(ಎ) ರಾವಣ ಮುಂತಾದವರು ರಾಕ್ಷಸರಲ್ಲ, ಭೀಮರಾಕ್ಷಸ ಎಂಬ ರಾಜನ ವಂಶದವರು. ರಾವಣನಿಗೆ ಹತ್ತು ತಲೆಗಳಿಲ್ಲ, ವಿಶೇಷವಾದ ಕನ್ನಡಿಯಲ್ಲಿ ಅವನ ತಲೆಗಳು ಒಂಬತ್ತಾಗಿ ಪ್ರತಿಬಿಂಬಿಸಿದ್ದರಿಂದ ದಶವದನನೆಂಬ ಹೆಸರು ಬಳಕೆಗೆ ಬಂದಿತು.

(ಏ) ಸ್ವರ್ಣಮೃಗದ ವೃತ್ತಾಂತವಿಲ್ಲ.

(ಐ) ಖರ-ಚಂದ್ರನಖಿಯರ ಮಗ ಶಂಭುಕನೆಂಬವನನ್ನು ಲಕ್ಷ್ಮಣನು ಕೊಂದುದೇ ರಾಮರಾವಣಯುದ್ಧಕ್ಕೆ ಮೂಲಕಾರಣ.

(ಒ) ವಾಲಿಸುಗ್ರೀವಾದಿಗಳು ಕಪಿಗಳಲ್ಲ, ಕಪಿಧ್ವಜರು. ವಾಲಿಯನ್ನು ರಾಮನು ಕೊಲ್ಲುವ ಕಥೆಯಿಲ್ಲ.

(ಓ) ಸೇತು ಬಂಧನವಿಲ್ಲ, ಸೈನ್ಯವೆಲ್ಲವೂ ಆಕಾಶಗಾಮಿನೀ ವಿದ್ಯೆಯಿಂದ ಸಾಗುತ್ತದೆ.

(ಔ) ಹನುಮಂತನು ರಾವಣನ ತಂಗಿಯ ಅಳಿಯ. ರಾವಣನ ಕೆಟ್ಟ ಕೆಲಸಕ್ಕೆ ಹೇಸಿ ರಾಮಮಿತ್ರನಾದನು. ಅವನು ತನ್ನ ವಿದ್ಯಾಬಲದಿಂದ ಲಂಕೆಯನ್ನು ಸುಡುತ್ತಾನೆ.

(ಅಂ) ಲಕ್ಷ್ಮಣನೇ ರಾವಣನನ್ನು ಕೊಲ್ಲುತ್ತಾನೆ ; ಅದಕ್ಕಾಗಿ ಅವನು ನರಕಭಾಗಿಯಾಗುತ್ತಾನೆ.

(ಅಃ) ಸೀತೆಯು ಲವಕುಶ ಜನನಾನಂತರ ಅಗ್ನಿಪ್ರವೇಶಮಾಡಿ ಜಿನದೀಕ್ಷೆಯನ್ನು ಸ್ವೀಕರಿಸುತ್ತಾಳೆ. 'ಪಂಪ

---

1. ಬಿ. ಎಂ. ಶ್ರೀ–ಕನ್ನಡ ಕೈಪಿಡಿ ಭಾಗ ೫ ಪು. ೬೪೫.
2. ಡಿ. ಎಲ್. ಎನ್. ಪಂಪರಾಮಾಯಣ ಸಂಗ್ರಹ, ಪೀಠಿಕೆ ಪು. ೨೯.
3. (ಅ) ವಾಲ್ಮೀಕಿ ರಾಮಾಯಣ ಮತ್ತು ಜೈನ ರಾಮಾಯಣಗಳಲ್ಲಿನ ಕಥಾವ್ಯತ್ಯಾಸಗಳ ಸಮಗ್ರ ವಿವರಣೆಗೆ– ಡಾ. ಬುಲ್ಕೆ-'ರಾಮಕಥಾ' (ಹಿಂದಿ) ಗ್ರಂಥದ ಪು. ೬೫-೭೯ ನೋಡಬಹುದು.

(ಆ) ಕ. ಕ. ಚರಿತಕಾರರೂ, ಪಂಪರಾಮಾಯಣದ ಸಂಪಾದಕರೂ, ಬಿ. ಎಂ. ಶ್ರೀಯವರೂ, (ಕನ್ನಡ ಕೈಪಿಡಿ ಭಾಗ ೫) ಪಂಪರಾಮಾಯಣಸಂಗ್ರಹದ ಸಂಪಾದಕರಾದ ಡಿ. ಎಲ್. ಎನ್. (ಪೀಠಿಕೆಯಲ್ಲಿ) ಈ ಕುರಿತು ಬರೆದಿದ್ದಾರೆ.

ರಾಮಾಯಣದ ರಾವಣ ಪಾತ್ರವು ವೈಶಿಷ್ಟ್ಯಪೂರ್ಣವಾಗಿದೆ. ಪರಾಂಗನಾವಿರತಿವ್ರತನಾದ, ಉದಾತ್ತನಾದ ರಾವಣನು ದುರ್ವಿಧಿವಶದಿಂದ ಸೀತೆಯನ್ನು ಕಾಮಿಸಿ ದುರಂತಕ್ಕೊಳಗಾಗುತ್ತಾನೆ; ಸೀತೆಯ ಅಚಲ ಪತಿಭಕ್ತಿಯನ್ನು ನೋಡಿ ಪಶ್ಚಾತ್ತಾಪದಿಂದ ಪುನೀತನಾಗುತ್ತಾನೆ.

ವಿಮಲಸೂರಿಯ ಮತ್ತು ನಾಗಚಂದ್ರರ ರಾವಣಪಾತ್ರಗಳನ್ನು ತುಲನಾತ್ಮಕವಾಗಿ ವಿವೇಚಿಸುತ್ತಾ, ನಾಗಚಂದ್ರನ ಚಿತ್ರಣವು (ವಿಮಲಸೂರಿಯ) ಮೂಲಕೃತಿಯನ್ನು ಬಹುಮಟ್ಟಿಗೆ ಹೋಲುತ್ತದೆ; ಆದರೆ, ಮೂಲದಲ್ಲಿರುವಷ್ಟು 'ಸೌಂದರ್ಯವಿಲ್ಲ, ಗಾಂಭೀರ್ಯವಿಲ್ಲ, ದುರಂತತೆಯ ಬೃಹತ್ಪ್ರಮಾಣವಿಲ್ಲ. ತುಪ್ಪದ ಹನಿ ಅಲ್ಲಲ್ಲಿ ಹತ್ತಿದ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ ಆ ಚಿತ್ರವಿದೆ; ಆದರೂ ಮನೋಹರವಾಗಿದೆ.'[1] ಎಂಬ ಅಭಿಪ್ರಾಯವಿದೆ.

ಆದರೂ, ರಾವಣನು ದುರಂತನಾಯಕನಾಗಿ–ವಿಮಲಸೂರಿಯಂತೆ–'ಪಂಪರಾಮಾಯಣದಲ್ಲಿ' ತಲೆದೋರುತ್ತಾನೆ. 'ವಿಮಲಸೂರಿಯಲ್ಲಿ ಆಗಲಿ, ನಾಗಚಂದ್ರನಲ್ಲಿ ಆಗಲಿ, ರಾವಣನ ದುರಂತತೆಗೆ ಪರಿಣಾಮ ರಮಣೀಯವಾದ ಕರುಣ ಸ್ವರೂಪವಿದೆ. ಯಾಕೆಂದರೆ ಅವನು ಮರಣಹೊಂದಿದರೂ, ಪಶ್ಚಾತ್ತಾಪದಿಂದ ಪುನೀತನಾಗುತ್ತಾನೆ, ದುರಂತತೆಗೆ ಕಾರಣವಾದ ವ್ಯಾಮೋಹದಿಂದ ಮುಕ್ತನಾಗುತ್ತಾನೆ.[2]

"ಜೈನರ ನೀತಿಪ್ರಧಾನವಾದ ಸಂಸ್ಕೃತಿಯಲ್ಲಿ ಬೆಳೆದ ನಾಗಚಂದ್ರನಿಗೆ, ದುರಂತ ರಾವಣನನ್ನು ತೋರಿಸಿ, ಮಾನವ ದೌರ್ಬಲ್ಯದ ಬಗ್ಗೆ ಕರುಣೆ ಹುಟ್ಟಿಸುವ ದೃಷ್ಟಿಯಿರಲಿಲ್ಲ. ಚಕ್ರವರ್ತಿಗಳೆಂಬ ಗರ್ವದಲ್ಲಿ ಅಸದಾಗ್ರಹವನ್ನೇ ಮುಂದುವರಿಸುವವರ ದೌರಾತ್ಮ್ಯವನ್ನು ಖಂಡಿಸಿ, ಅವರ ದಾರುಣ ಮರಣದಿಂದ ಭಯವನ್ನು ಹುಟ್ಟಿಸುವುದಾಗಿತ್ತು'–ಎನ್ನುವ ಅಭಿಮತವೂ ಇದೆ.[3]

ಈ ಅಭಿಮತಕ್ಕೆ ಪ್ರತಿಕ್ರಿಯೆಯಾಗಿ; ರಾವಣನ ಕೊನೆಯನ್ನು ಕಂಡು ಭಯವನ್ನು ಹುಟ್ಟಿಸುವುದೇ ಕವಿಯ ಉದ್ದೇಶವಾಗಿದ್ದರೆ–"ರಾವಣನಲ್ಲಿ ಪಶ್ಚಾತ್ತಾಪವನ್ನೇಕೆ ಹುಟ್ಟಿಸಲಾಯಿತು? ಉದಾತ್ತನಾದ ವ್ಯಕ್ತಿ ಒಂದು ವ್ಯಾಮೋಹಕ್ಕೆ ಹೇಗೋ ವಶನಾಗಿ, ಕಡೆಗೆ ಅದರಿಂದ ಹೊರಬಿದ್ದನೆಂಬುದೇ ರಾವಣನ ಒಟ್ಟು ಚಿತ್ರವಲ್ಲವೇ? ಕಿಡಿಮಸಿಯಾದ ಅವನ ವ್ಯಾಮೋಹ ಕಥೆ ದುರಂತವಲ್ಲವೇ? ಅದರಿಂದ ಕರುಣೆ–ಸಹಾನುಭೂತಿಗಳು ಹುಟ್ಟಿದರೂ, ಅವು ನೈತಿಕ ಮೌಲ್ಯಗಳನ್ನು ಮೇಲೆ ಕೆಳಗು ಮಾಡಬೇಕಾಗಿಲ್ಲ'[4] ಎನ್ನುವ ವಿಚಾರಧಾರೆಯೂ ಇದೆ.

ನಾಗಚಂದ್ರನ ಕಾವ್ಯೋದ್ದೇಶ, ಅದರ ಪರಿಣಾಮದ ಸ್ವರೂಪ ಯಾವುದೇ ಇದ್ದರೂ, ಅವನು ಚಿತ್ರಿಸಿದ ರಾವಣನ ಪಾತ್ರವು ಸಾಕಷ್ಟು ವಿಶಿಷ್ಟವಾಗಿದೆ, ಸಹೃದಯರನ್ನು ತನ್ನೆಡೆಗೆ ಸೆಳೆದಿದೆ. ಕುಮಾರ ವಾಲ್ಮೀಕಿಯೂ ನಾಗಚಂದ್ರನ 'ರಾವಣಪಾತ್ರ'ದಿಂದ ಪ್ರಭಾವಿತನಾದಂತೆ ತೋರುತ್ತದೆ.[5]

### ವಾದಿ ಕುಮುದಚಂದ್ರನ ರಾಮಾಯಣ (ಸು. ೧೧೦೦)

ವಾದಿ ಕುಮುದಚಂದ್ರನು ಒಂದು ರಾಮಾಯಣವನ್ನೂ ಬರೆದಿರುತ್ತಾನೆ ಎನ್ನುವುದಕ್ಕೆ, ದೇವಚಂದ್ರನು ತನ್ನ 'ರಾಮಕಥಾವತಾರ'ದಲ್ಲಿ (ಕ್ರಿ.ಶ. ೧೮೪೭) 'ಪಂಪ ರಾಮಾಯಣ'ದ ವಿಷಯವಾಗಿ ಹೇಳಿದ ಈ ಮಾತುಗಳೇ ಆಧಾರ:

"ಶ್ರೀ ಮೂಲಸಂಘ ಬಲೋತ್ಕಾರಗಣ ಶ್ರೀ ಮಾಘಣಂದಿ ಸಿದ್ಧಾಂತ ಚಕ್ರವರ್ತಿ ಸುತ ಚತುರ್ವಿಧ ಪಾಂಡಿತ್ಯ ಶ್ರೀ ವಾದಿ ಕುಮುದ ಚಂದ್ರ ಪಂಡಿತದೇವರಚಿತ ರಾಮಾಯಣ ಸಮಾನವಾದ ಶ್ರೀಮದಭಿನವ ಪಂಪರಚಿತ ರಾಮಾಯಣಂ"[6]

---

1. ಡಿ. ಎಲ್. ಎನ್–ಪಂ. ರಾ. ಸಂಗ್ರಹ. ಪೀಠಿಕೆ, ಪು. ೫೮.
2. ರಂ. ಶ್ರೀ. ಮುಗಳಿ–ಕ. ಸಾ. ಚ. ೧೩೨.
3. ದ. ರಾ. ಬೇಂದ್ರೆ–ಪಂಪರಾಮಾಯಣ ಸಂಗ್ರಹ ವಿಮರ್ಶೆ, ಪ್ರ. ಕರ್ನಾಟಕ. ೧೯-೧.
4. ರಂ. ಶ್ರೀ. ಮುಗಳಿ–ಕನ್ನಡ ಸಾಹಿತ್ಯ ಚರಿತ್ರೆ, ಪು. ೧೩೨.
5. ಈ ಕುರಿತಾದ ವಿವೇಚನೆಯು ಇದೇ ಪ್ರಬಂಧದ 'ಕೃತಿಯಲ್ಲಿ ಪರಂಪರೆಯ ಸತ್ತ್ವ' ಪ್ರಕರಣದಲ್ಲಿದೆ.
6. ಆರ್. ನರಸಿಂಹಾಚಾರ್–ಕ. ಕ. ಚ. ೧-೧೩೬.

ಇಂದು ವಾದಿ ಕುಮುದಚಂದ್ರನ ಕೃತಿ ಉಪಲಬ್ಧವಿಲ್ಲ. ಜೈನ ಸಂಪ್ರದಾಯಾನುಸಾರಿಯಾದ ರಾಮಕಥೆ ಆ ಕೃತಿಯಲ್ಲಿ ಇರಬಹುದು ಎಂದು ನಾವು ತರ್ಕಿಸುವುದು ಮಾತ್ರ ಶಕ್ಯವಾಗಿದೆ.

## ನಾಗವರ್ಮನ ಕಾವ್ಯಾವಲೋಕನದಲ್ಲಿ ರಾಮಕಥೆ

ಕನ್ನಡದಲ್ಲಿ ಅಲಂಕಾರ ಶಾಸ್ತ್ರಕ್ಕೆ ಕವಿರಾಜಮಾರ್ಗಕಾರನಂತೆ, ಛಂದಸ್ಸಿಗೆ ೧ನೇ ನಾಗವರ್ಮನಂತೆ, ವ್ಯಾಕರಣ ಶಾಸ್ತ್ರಕ್ಕೆ ೨ನೇ ನಾಗವರ್ಮನೇ ಮೊದಲಿಗನು.[1] ಇವನು ಭಾಷಾಭೂಷಣ, ಕಾವ್ಯಾವಲೋಕನ ಮತ್ತು ವಸ್ತು ಕೋಶಗಳ ಕರ್ತೃ. ಇವನ ಕಾಲ ಸು. ೧೧೫೦. 'ಶಬ್ದಸ್ಮೃತಿ'ಯೆ ಮೊದಲ ಅಧಿಕರಣವಾಗಿ ಉಳ್ಳ 'ಕಾವ್ಯಾವಲೋಕನ'ದ ಪ್ರಯೋಗಗಳಲ್ಲಿ 'ರಾಮಕಥೆ'ಗೆ ಸಂಬಂಧಿಸಿದವುಗಳು ಕೆಲವು ಇವೆ.

## ಹನುಮಂತನ ಸಾಹಸ

ಮನದಿಂ ಬೇಗಂ ಮುಟ್ಟಿದ
ನನೂನ ಫಲ ಕುಸುಮ ಪಲ್ಲವ ಭ್ರಾಜಿತಮಂ
ಬನದೊಳಗೆ ಪವನನಂದನ
ನನಿಂದ್ಯಗುಣನೆಸೆವಶೋಕಾಧಾತ್ರೀರುಹಮಂ[2]

ಹಾಗೆಯೇ, ದಶಾನನಪ್ರತಾಪ,[3] ಸೀತಾ ವಿಲಾಪ,[4] ಭುವನೈಕರಾಮನ ವಿಜಯ,[5] ಪರಶುರಾಮನ ಮಹಿಮೆ,[6] ದಶರಥನ ಹಿರಿಮೆಗಳನ್ನು ವರ್ಣಿಸುವ ಪ್ರಯೋಗಗಳು ದೊರೆಯುತ್ತವೆ.

ವಾಲ್ಮೀಕಿರಾಮಾಯಣದ,

ದರ್ಶಯಂತಿ ಶರನ್ನದ್ಯಃ ಪುಲಿನಾನಿಶನೈಶ್ಶನೈಃ
ನವಸಂಗಮ ಸವ್ರೀಡಾ ಜಘನಾನೀವ ಯೋಷಿತಃ[7]

ಈ ಶ್ಲೋಕದ ಅನುವಾದವಾಗಿ 'ಕಾವ್ಯಾವಲೋಕನ'ದಲ್ಲಿರುವ ಪದ್ಯ ಹೀಗಿದೆ:

ತೊರೆಗಳ ಪುಳಿನ ತಳಂಗಳ
ತೆರೆವುಗಳರೆದೆರೆದುಪೋಲ್ತುವೆರ್ದೆವೆರೆದಿರೆ ನಾ–
ಣೆರಕದಿನರೆದೆರೆದೋಪಳ
ಮಿರುಗುವ ಘನ ಜಘನ ತಳತೆರಪಿನ ತೆರದಿಂ[8]

---

1. ನಾಗವರ್ಮರು ಎಷ್ಟುಮಂದಿ ?-ಎಂಬ ವಾದದಲ್ಲಿ ಪಾಲ್ಗೊಂಡವರು :
   1) ಆರ್. ನರಸಿಂಹಾಚಾರ್-ಕ. ಕ.ಚ. ೧-ಪು. ೫೩-೫೬.
   2) ವೆಂಕಟಸುಬ್ಬಯ್ಯ-ಕೆ. ಕ. ಜೀ. ೧೫೨-೧೬೧.
   3) ಗೋವಿಂದ ಪೈ-ಕ. ಸಾ. ಚ. ೨೦-೧,೨.
   4) ಟಿ. ಎಸ್. ವೆಂಕಣ್ಣಯ್ಯ-ಕ. ಕಾ. ಸಂಗ್ರಹ ಪೀ.
   5) ರಂ. ಶ್ರೀ. ಮುಗಳಿ-ಕ. ಸಾ. ಚ. ಪು. ೮೧-೮೨.
2. ಕಾವ್ಯಾವಲೋಕನ-ಶಬ್ದಸ್ಮೃತಿ ಸೂತ್ರ ೨೨. ಪ್ರ. ೧೦೬.
3. ಇದೇ. ೨೦-೧೦೦, ೩೮-೧೬೮, ೬೫-೩೦೧, ೨೦೩-೮೧೭.
4. ಇದೇ. ೨೯-೧೨೯.
5. ಇದೇ. ೩೯-೧೭೩, ೧೭೩-೧೪೨.
6. ಇದೇ. ೨೦೩-೮೧೮.
7. ಇದೇ. ೧೭೧-೭೩೦.
8. ಇದೇ. ೬-೨೪.

ಹಾಗೆಯೇ ಕಾವ್ಯಾವಲೋಕನದಲ್ಲಿ ಕಾಳಿದಾಸನ 'ರಘುವಂಶ'ದ ಹಲವು ಶ್ಲೋಕಗಳ ಅನುವಾದವನ್ನು ಕಾಣಬಹುದು.

| ರಘುವಂಶ | | ಕಾವ್ಯಾವಲೋಕನ | |
| --- | --- | --- | --- |
| ಸರ್ಗ | ಶ್ಲೋಕ | ಸೂತ್ರ | ಪ್ರಯೋಗ |
| ೭ | ೧೫ | ೩೭ | ೧೫೮ |
| ೧ | ೧೬ | ೫೪ | ೨೪೯ |
| ೮ | ೯ | ೧೧೩ | ೪೮೦ |
| ೯ | ೭೮ | ೨೦೨ | ೮೧೫ |
| ೧೧ | ೮೬ | ೨೦೩ | ೮೧೮ |
| ೬ | ೫೧ | ೨೨೬ | ೮೯೩ |
| ೧೩ | ೪೭ | ೨೩೦ | ೯೦೭ |
| ೧೩ | ೩೦ | ೨೩೧ | ೯೨೦ |

**ರುದ್ರಭಟ್ಟನ 'ಜಗನ್ನಾಥ ವಿಜಯ'ದಲ್ಲಿ** (ಕ್ರಿ.ಶ. ೧೧೮೦)

ಈ ಕೃತಿಯಲ್ಲಿ 'ರಾಮಾಯಣ' ಕಥೆಯ ಸೂಚನೆಗಳು ಹೀಗಿವೆ :

ಅ) ಕತೆಯಂ ಕೇಳಿಲೆಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನ
ಸ್ಥಿತನಾದಂ ಗುರು ಪೇಳೆ ಹುಂ ದಶಶಿರಂ ಕೊಂಡುಯ್ದನಾ ರಾಮನಾ
ಸತಿಯಂ ತಾನೆನೆ ಪೂರ್ವಮಂ ನೆನೆಯುತುಂ ಹುಂ ಕೊಳ್ಳದುತ್ಕೋಪಹುಂ
ಕೃತಿಯಂ ಮಾಡುತುಮಪ್ಪೊಂಡುಗರ್ಚಿ ಕಿಸುಗಣ್ಪಿಟ್ಟಚ್ಯುತಂ ರಂಜಿಕುಂ[1]

ಆ) ಇದರಂತೆಯೇ 'ಆನಂದರಾಮಾಯಣ'ದಲ್ಲಿ ಬರುವ ಐರಾವಣನ ಉಲ್ಲೇಖವಿರುವ ಒಂದು ಕಂದಪದ್ಯವೂ ದೊರೆಯುತ್ತದೆ.[2]

**ಬಂಧುವರ್ಮನ 'ಜೀವ ಸಂಬೋಧನೆ'** (ಕ್ರಿ.ಶ. ಸು. ೧೨೦೦)

ಬಂಧುವರ್ಮನು 'ಹರಿವಂಶಾಭ್ಯುದಯ' ವೆಂಬ ಚಂಪೂ ಕಾವ್ಯವನ್ನು ಬರೆದಿರುವುದರೊಂದಿಗೆ, ಕಂದ, ವೃತ್ತ, ರಗಳೆಗಳ ನವೀನ ಅನುಕ್ರಮರೀತಿಯಲ್ಲಿ 'ಜೀವಸಂಬೋಧನೆ' ಎಂಬ ಇನ್ನೊಂದು ಕೃತಿಯನ್ನು ರಚಿಸಿದ್ದಾನೆ. 'ಜೀವ ಸಂಬೋಧನೆ'ಯು ೧೨ ಅಧಿಕಾರಗಳಲ್ಲಿ ಒಂದು ರಾವಣ ಕಥೆಯನ್ನು ಹೇಳುತ್ತದೆ. ೩ ವಚನಗಳು ೨ ವೃತ್ತಗಳು, ೨ ಕಂದಗಳು ಮತ್ತು ಒಂದು ರಗಳೆಯಲ್ಲಿ 'ರಾವಣವೃತ್ತಾಂತವನ್ನು' ಸಂಗ್ರಹಿಸಿದ್ದಾನೆ. ಉದಾಹರಣೆಗಾಗಿ, ರಾಕ್ಷಸ ವಂಶದ ವಿದ್ಯಾಧರ ಚಕ್ರವರ್ತಿ ರಾವಣನ ಅದ್ವಿತೀಯ ರೂಪ ಸೌಂದರ್ಯ, ಪರಾಕ್ರಮ, ಸಂಪತ್ತುಗಳ ವರ್ಣನೆಯು ಒಂದೇ ಕಂದಪದ್ಯದಲ್ಲಿ ಅಡಕವಾಗಿದೆ. ಒಂದೇ ವೃತ್ತದಲ್ಲಿ, ರಾವಣನಿಂದ ಸೀತಾಪಹಾರ, ರಾಮವಾನರ ಸಂಬಂಧ, ಸಮುದ್ರತರಣ, ರಾಮವಿಭೀಷಣ ಸಂದರ್ಶನ ಮತ್ತು ರಾವಣ ವಧೆಗಳನ್ನು ಹೇಳಲಾಗಿದೆ.[3]

**ಕುಮುದೇಂದುವಿನ 'ರಾಮಾಯಣ'** (ಸು. ಕ್ರಿ.ಶ. ೧೨೭೫)[4]

"ವಿವಿಧ ಜಾತಿಯ ಷಟ್ಪದಿಗಳಿಂದಲೂ, ಅಲ್ಲಲ್ಲಿ ರಗಳೆಗಳಿಂದಲೂ, ಕೂಡಿದ ಈ ರಾಮಾಯಣದ ವೈಶಿಷ್ಟ್ಯವು

1. ರುದ್ರಭಟ್ಟನ ಜಗನ್ನಾಥವಿಜಯ (ಸಂ. ಆರ್. ಶಾಮಾಶಾಸ್ತ್ರಿ) ಆಶ್ವಾಸ, ೩-೬೧.
2. ಅದೇ. ೪-೬೭.
3. ಜೀವ ಸಂಬೋಧನೆ–ಪ್ರ : ಬ್ರಹ್ಮಸೂರಯ್ಯ, ಮೈಸೂರು ೧೯೩೭.
4. ಆರ್. ನರಸಿಂಹಾಚಾರ್ಯ–ಕ. ಕ. ಚ. ೧-೪೪೩. ಮತ್ತು ಎ. ವೆಂಕಟಸುಬ್ಬಯ್ಯ-ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ, ಪು. ೬೫–೭೦.

ಅದರ ಛಂದೋವ್ಯೈವಿಧ್ಯದಲ್ಲಿದೆ. ಜೈನ ಕವಿಗಳಿಂದ ರಚಿತವಾದ ಷಟ್ಪದಿ ಕಾವ್ಯಗಳಲ್ಲಿ ಇದೇ ಮೊದಲನೆಯದು."–ಎನ್ನಲಾಗಿದೆ.[1] ಈ ಕೃತಿಯು ಅಸಮಗ್ರವಾಗಿ ಮಾತ್ರ ದೊರೆತಿದ್ದು, ೧-೮ ಸಂಧಿಗಳ ಒಂದು ಭಾಗ ಪ್ರಕಟವಾಗಿದೆ.

ಕಾವ್ಯದ ಕೊನೆಯಲ್ಲಿ ಕವಿಯ ನಾಮ, ಅಂಕಿತ ಇತ್ಯಾದಿ ಹೇಳದ್ದರಿಂದ, ಕವಿಯು ಕಾವ್ಯ ಸಮಾಪ್ತಿ ಮಾಡುವುದರೊಳಗಾಗಿ ನಿಧನ ಹೊಂದಿರಬಹುದೆಂಬ ಊಹೆಯಿದೆ.[2]

ಕುಮುದೇಂದುವಿನ ಕೃತಿಯಲ್ಲಿ ರಾವಣವಧೆಯನಂತರ ಅಯೋಧ್ಯೆಯಲ್ಲಿ, ರಾಮನು ಸೀತೆ, ಲಕ್ಷ್ಮಣ ಮೊದಲಾದವರಿಗೆ ಆ ಹಿಂದೆ ನಡೆದ ಕಥೆಯನ್ನು ಹೇಳಿದಂತಿದೆ; 'ವಿಮಲಸೂರಿ'ಯ ಸಂಪ್ರದಾಯಕ್ಕೆ ಸೇರಿದ ಈ ರಾಮಾಯಣವು ಕನ್ನಡದ 'ಪಂಪರಾಮಾಯಣ'ವನ್ನು ಅನುಸರಿಸಿದಂತಿದೆ ಆದರೂ, ಕೆಲವು ಕಥಾನ್ಯತ್ಯಾಸಗಳನ್ನು ಈ ಕೃತಿಯಲ್ಲಿ ಗುರುತಿಸಬಹುದು.

ಅ) ಸೀತೆ ಮತ್ತು ಪ್ರಭಾಮಂಡಲರ ಜನ್ಮದಿಂದ ತೊಡಗಿ, ಸೀತಾಸ್ವಯಂವರದ ತನಕದ ಘಟನೆಗಳ ವಿಚಾರವನ್ನು ದಶರಥನು ಜನಕನ ದೂತನಿಂದ ತಿಳಿಯುತ್ತಾನೆ.

ಆ) ದಶರಥನು ಸರ್ವಭೂತಿಯಿಂದ ಕೇಳಿದ ಘಟನೆಗಳಲ್ಲಿ 'ಪಂಪ ರಾಮಾಯಣ'ದಲ್ಲಿ ಉಕ್ತವಾಗದವುಗಳೂ ಇವೆ.[3]

ಇ) ಶಬರ ಸೇನೆಯು ರಾಮ ಲಕ್ಷ್ಮಣರ ಹೆಸರುಗಳನ್ನು ಕೇಳಿದೊಡನೆಯೇ ಓಡಿಹೋಗುತ್ತದೆ. ಯುದ್ಧ ಮಾಡುವುದಿಲ್ಲ.

ಈ) ಜನಕನ ಸೋದರ ಕನಕನು ತನ್ನ ಕನ್ಯೆಯರಾದ ಊರ್ಮಿಲಾ ಮತ್ತು ಕನಕಪ್ರಭಾರನ್ನು ಅನುಕ್ರಮವಾಗಿ, ಲಕ್ಷ್ಮಣ ಮತ್ತು ಭರತರಿಗೆ ವಿವಾಹಮಾಡಿಕೊಡುತ್ತಾನೆ.

ಉ) ವಜ್ರಾವರ್ತ, ಸಾಗರಾವರ್ತ ಹೆಸರುಗಳ ಧನುಸ್ಸುಗಳು ನಮಿ, ವಿನಮಿಯರಿಗೆ ದೊರೆತುದಾಗಿ ಹೇಳಲಾಗಿದೆ.

ಊ) ಇಲ್ಲಿ ಜಟಾಯು ಸಂಬಂಧಿತವಾಗಿ ಹೇಳಿದ ಕಥೆಯೂ ಬೇರೆ ತೆರನಾಗಿದೆ.

**ಕೇಶಿರಾಜನ 'ಶಬ್ದಮಣಿದರ್ಪಣ'ದಲ್ಲಿ ರಾಮಕಥೆ** (ಕ್ರಿ.ಶ. ಸು. ೧೨೬೦)[4]

ಮಾರ್ಗಕಾವ್ಯದ ಪ್ರಯೋಗಗಳಲ್ಲಿ ನಂಬುಗೆಯಿಟ್ಟವನಂತೆಯೂ, ಸ್ಥಿತಿಪ್ರಿಯ ಶಾಸ್ತ್ರಕಾರನಂತೆಯೂ ತೋರುವ ಕೇಶಿರಾಜನ 'ಶಬ್ದಮಣಿದರ್ಪಣ'ವು 'ಸಿರಿಗೀಕ್ಷಿಪರಸಚಿತ್ರಂ, ಸರಸತಿಗೆರಡನೆಯಬೀಣೆ'–ಎಂದು ಬುಧರು ವರ್ಣಿಸಿದ್ದರಲ್ಲಿ ಅರ್ಥವಿದೆ. 'ಕನ್ನಡ ಭಾಷೆಯಲ್ಲಿ ಕರ್ನಾಟಕ ಶಬ್ದಶಾಸ್ತ್ರವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥವು ಇದೊಂದೇ'[5] ಎಂಬ ಮನ್ನಣೆಗೂ ಶಬ್ದಮಣಿದರ್ಪಣವು ಪಾತ್ರವಾಗಿದೆ.

ಪ್ರಯೋಗಗಳ ಆಯ್ಕೆಯಲ್ಲಿ ಸರಸತೆಯನ್ನು ಮೆರೆದವನು ಕೇಶಿರಾಜ.[6] ಅವನು ಉದಾಹರಿಸಿದ ಪ್ರಯೋಗಗಳಲ್ಲಿ–ಅವುಗಳಲ್ಲಿ ಕೆಲವು 'ಶಬ್ದ ಸ್ಮೃತಿ'ಯವೇ ಆದರೂ–ರಾಮಾಯಣ ಕಥಾನಕದ ಸಂದರ್ಭಗಳ ಸೂಚನೆ, ವಿವರಣೆಗಳಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು.

---

1. ಡಿ. ಎಲ್. ಎನ್-ಕುಮುದೇಂದು ರಾಮಾಯಣ ಪರಿಷ್ಕರಣ ವಿಚಾರ, ಕ. ಸಾ. ಪ. ೨೪-೩.
2. ಕುಮುದೇಂದು ರಾಮಾಯಣ, ಪೀಠಿಕೆ, ಪು. ೮.
3. ಕುಮುದೇಂದು ರಾಮಾಯಣ, ೪-೯.
4. ಕ. ಕ. ಚ. ೧-೪೪ರಲ್ಲಿ ಕಾಲ ಸು. ೧೨೬೦ ಎನ್ನಲಾಗಿದೆ.
   ಕ. ಸಾ ಚ. (ಶ್ರೀ ಮುಗಳಿ)ದ ಪು. ೧೪೫ರಲ್ಲಿ ಸು. ೧೨೭೫ ಎನ್ನಲಾಗಿದೆ.
5. ಆರ್. ನರಸಿಂಹಾಚಾರ್-ಕ. ಕ. ಚ. ೧-೪೪೧.
6. ಕೇಶಿರಾಜನ ರಸಿಕ ದೃಷ್ಟಿಯ ಕುರಿತಾದ ವಿವೇಚನೆಗೆ ಇದೇ ಲೇಖಕನ-'ವ್ಯಾಕರಣದಲ್ಲಿ-ಪ್ರಯೋಗ ಸ್ವಾರಸ್ಯ (ಯುಗಪುರುಷ-ದಸರಾಂಕ ೧೯೭೧) ಲೇಖನ ನೋಡಬಹುದು.

೧) ಭುವನೈಕ ರಾಮನ[1] ಉಲ್ಲೇಖ[2]
೨) ಬಲನಾರಾಯಣರಿರ್ವರು[3]
೩) ಪರಶುರಾಮ ಪ್ರಸಂಗ.[4]
೪) ಸೀತೆಯ ಪ್ರಲಾಪ[5]
೫) ರಾಮವಿಲಾಪ[6]
೬) ರಾವಣ ಪ್ರತಾಪ[7]
೭) ಜಟಾಯು ಸಂಗತಿ[8]
೮) ಹನುಮಂತನ ಸಾಹಸ[9]

**ನಾಗರಾಜನ 'ಪುಣ್ಯಾಸ್ರವ'** (ಕ್ರಿ.ಶ. ೧೩೩೧)

ನಾಗರಾಜನ 'ಪುಣ್ಯಾಸ್ರವ'ವು ಚಂಪೂ ರೂಪದಲ್ಲಿರುವ– ಸಂಸ್ಕೃತದಿಂದ ಅನುವಾದಿತವಾದ–ಕೃತಿ. ಇದರಲ್ಲಿ ಗುಣಭದ್ರನ 'ಉತ್ತರಪುರಾಣ' ವನ್ನನುಸರಿಸಿದ ರಾಮಕಥೆಯಿದೆ. ಕಥೆಗಿಂತಲೂ, ತತ್ತ್ವ ನಿರೂಪಣೆಗೆ ಇಲ್ಲಿ ಪ್ರಾಧಾನ್ಯ.[10]

---

1. ಈ 'ಭುವನೈಕರಾಮನು'ನು ಪೊನ್ನನ 'ಭುವನೈಕರಾಮಾಭ್ಯುದಯ'ದವನೇ? ಎಂಬ ವಿಶ್ಲೇಷಣೆಗೆ ನೋಡಿರಿ.
   ಅ) ದ. ರಾ. ಬೇಂದ್ರೆ-ಪೊನ್ನನ ಭುವನೈಕ ರಾಮಾಭ್ಯುದಯ, ಪ್ರ. ಕ. ೧೫-೪.
   ಆ) ಡಿ. ಎಲ್. ಎನ್. ಇದೇ.
   ಇ) ರಂ. ಶ್ರೀ ಮುಗಳಿ-ಕ. ಸಾ. ಚ. ಪು. ೧೦೩.
2. ಕೇಶಿರಾಜ-ಶಬ್ದಮಣಿದರ್ಪಣ–ಸೂತ್ರ ೧೩೦ ಪ್ರ.೧.
3. ಇದೇ. ೨೩೮ ಪ್ರ. ೭.
4. ಇದೇ. ೧೯೯ ಪ್ರ. ೬,
5. ಇದೇ. ಸೂ. ೨೦-ಪ್ರ. ೩, ೬೬-೧೨, ೧೦೦-೧.
6. ಇದೇ. ೧೩೭-೪.
7. ಇದೇ. ೭೬-೬.
8. ಇದೇ. ೨೦೬-೫.
9. ಇದೇ. ೧೧೮-೪, ೧೫೭ ೨.
10. ಅ) ಪ್ರಬುದ್ಧ ಕರ್ಣಾಟಕದ ೪೯-೨ರಲ್ಲಿ ಶ್ರೀ ಗೋವಿಂದ ಪೈ ಯವರು, ಪಾರಿಶ (ಪಾರ್ಶ್ವನಾಥ) ಕೃತ·ಶ್ರೀರಾಮ ವಿಜಯ (ರಾಮಾಕ್ಷರಮಾಲೆ) ಎಂಬ ೪೦ ಕಂದ ಪದ್ಯಗಳಿಂದ ಕೂಡಿದ ಒಂದು ಕೃತಿಯ ಪರಿಚಯ (ಮೂಲ ಸಹಿತ) ಮಾಡಿಸಿದ್ದಾರೆ. ಕಾಲ ತಿಳಿಯದು ಎಂದಿದ್ದಾರೆ. ಇದರಲ್ಲಿ :
    ೧) ಮಂಥರೆಯ ಪ್ರಸ್ತಾಪವಿಲ್ಲ.
    ೨) ಶೂರ್ಪನಖಿಯಿಂದ ಕಾಮಯಾಚನೆಯಿಲ್ಲ.
    ೩) ಶಂಬುಕ ವಧೆ (ಕಂದ-೯)
    ೪) ಲಕ್ಷ್ಮಣರೇಖೆ (ಕಂದ–೧೨)
    ೫) ರಾಮನಿಂದ ರಾವಣವಧೆ (ಕಂದ-೩೧)

    ಪ್ರತಿ ಕಂದವೂ, ಅನುಕ್ರಮವಾಗಿ, ಅಕ್ಷರಮಾಲೆಯ ವರ್ಣದಿಂದ ಆರಂಭಗೊಳ್ಳುವುದು ಈ ಕೃತಿಯ ವೈಶಿಷ್ಟ್ಯ. ಕವಿಯು ಜೈನ ಶ್ರದ್ಧೆಯವನೆಂಬುದು ಖಚಿತ.

    ಆ) 'ಗದುಗಿನ ವೀರನಾರಾಯಣನ ಅಂಕಿತ' ವಿರುವ.ಒಟ್ಟು ೧೫ ಭಾಮಿನೀ ಷಟ್ಪದಿಗಳಿಂದ ಕೂಡಿದ ಒಂದು ಕೃತಿಯನ್ನು ಶ್ರೀ ಪುಂಡೂರು ವೆಂಕಟರಾಜ ಪುಣಿಂಚತ್ತಾಯರು ಪ್ರಕಟಿಸಿದ್ದಾರೆ. ಭಾಷೆ, ಶೈಲಿಗಳಿಂದ ಅದು ಅರ್ವಾಚೀನ ಕೃತಿ ಎನಿಸುತ್ತದೆ. 'ಅಂಕಿತ'ದ ಕಾರಣದಿಂದ ಅದನ್ನು ಮಹಾಕವಿ ಕುಮಾರವ್ಯಾಸನದೆನ್ನುವುದು ಉಚಿತವಲ್ಲ. ವಾಲ್ಮೀಕಿ ರಾಮಾಯಣದ ಅತಿ ಸಂಕ್ಷಿಪ್ತ ಕಥೆ ಇದರಲ್ಲಿದೆ.

## ಕನ್ನಡ ಶಾಸನಗಳಲ್ಲಿ ರಾಮಕಥೆ–ಕೆಲವು ಉಲ್ಲೇಖಗಳು

"ಒಂದು ನಾಡಿನ ಇತಿಹಾಸ ರೂಪಿಸುವುದರಲ್ಲಂತೂ ಶಾಸನಗಳೇ ಪ್ರಮುಖ ಆಧಾರ....ಭಾರತೀಯರ ಜೀವನ ಮತ್ತು ಆಲೋಚನೆಗಳ ಬೇರೆ ಬೇರೆ ಕೋನಗಳನೇಲೆ ಅವು ಸಾಕಷ್ಟು ಬೆಳಕನ್ನು ಬೀರುತ್ತವೆ....ಪ್ರಾಚೀನ ಭಾರತದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಅಭ್ಯಾಸಿಗಳು ತಮ್ಮ ಜ್ಞಾನದ ಕೊರತೆಯನ್ನು ಶಾಸನಗಳ ಅಭ್ಯಾಸದಿಂದ ಹೋಗಲಾಡಿಸಿಕೊಳ್ಳಬಹುದು"[1] ಇಂತಹ ಶಾಸನಗಳಲ್ಲಿ ದೊರೆಯುವ ವಿಷಯಗಳು ಜನ ಜೀವನದಲ್ಲಿ ಪ್ರಚಲಿತವಾದ ಕಥೆ, ಮೌಲ್ಯಗಳನ್ನೇ ಪ್ರತಿಬಿಂಬಿಸುತ್ತವೆ. ಈ ದೃಷ್ಟಿಯಿಂದ ಕನ್ನಡ ನಾಡಿನ ಜನತೆಯಲ್ಲಿ ಒಂದು ಅವಿಭಾಜ್ಯ ಅಂಗವೇ ಎಂಬಂತಾಗಿರುವ ರಾಮಕಥೆಯ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುವುದನ್ನು ನಾವು ಗಮನಿಸಬಹುದು.

### ರಾಮನ ಕುರಿತಾಗಿ

ಇದಿರಾನ್ತ ವಿರೋಧಿಗೆ ರಾಮಚಂದ್ರನೆಂಬುದು[2]
ಭೀಮ ಪರಾಕ್ರಮನಭಿನವ ರಾ (ಮಂ)[3], ಸಂಗ್ರಾಮರಾಮ[4]

### ಸೀತೆ

ವಿಖ್ಯಾತ ಕಲಿಕಾಲ ಸೀತೆ[5]
ಸೀತೆಗೆಣೆಗುಣಗಣದೊಳ್[6]
ಸೀತೆ ತಾನೆಯ್ದೆ[7]

### ಆಂಜನೇಯ

(ಶೌ) ಸೌಚಾಂಜನೇಯ[8]

### ರಾವಣ

ಪಗೆವಿನ ಪೆಸರೊಳ್ ರಾವಣಂ ಬರ್ಕೆ, ಜೆನ್ನಿತ್ತರಿಯ.[9]
ಅವನಿವನೇವನೆಂಬನದಟಂ ಕುಳಿಕಾಹಿಯ ಪಲ್ಗಳಂ ಕಳಲ್ಚುವನನಿದಿರಾಗಿ ರಾವಣನು
ಮಂ ನೆಲಕಿಕ್ಕು (ವನು)[10]

---

1. ಚಿದಾನಂದ ಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ.ಅಧ್ಯಯನ, ಪು. ೨೭
2. ಎಸ್. ಐ. ಐ. ಸಂಪುಟ ೯-೧, ೭೪ನೇ ಶಾಸನ ಕ್ರಿ.ಶ. ೧೦೪೧.
3. ಇದೇ. ೮೩ನೇ ಶಾಸನ ಕ್ರಿ.ಶ. ೧೦೪೮.
4. ಇದೇ. ೮೬ ,, ೧೦೫೦.
5. ಇದೇ. ೯೨ ,, ೧೦೫೪.
   ಇದೇ. ೬೫ ,, ೧೦೨೮.
6. ಇದೇ. ೮೪ ,, ೧೦೪೯.
7. ಇದೇ. ಸಂ. ೧೧-೨, ೧೭೭ನೇ ಶಾಸನ ಕ್ರಿ.ಶ. ೧೧೨೫.
8. ಇದೇ. ಸಂಪುಟ ೧೧-೧ ಸಂಖ್ಯೆ ೪೭ನೇ ಶಾಸನ ಕ್ರಿ.ಶ. ೧೦೨೮.
   ಇದೇ. ೬೫ನೇ ಶಾಸನ ಕ್ರಿ.ಶ. ೯೯೫.
9. ಇದೇ. ೭೮ನೇ ,, ೧೦೪೫.
10. ಕರ್ನಾಟಕ ಇನ್ಸ್ಕ್ರಿಪ್ಷನ್ಸ್ ಸಂಪುಟ ೫-೧ ೩೭ನೇ ಶಾಸನ ಕ್ರಿ.ಶ. ೧೧೬೨.

9

## ಋಷ್ಯಶೃಂಗನ ಕಥೆ

ವಾಲ್ಮೀಕಿ ರಾಮಾಯಣ[1] ಮತ್ತು ಮಹಾಭಾರತ[2] ಗಳಲ್ಲಿ ಈ ಕಥೆ ದೊರೆಯುತ್ತದೆ. ಈ ಉಪಾಖ್ಯಾನವು ಇತರ ಗ್ರಂಥಗಳಲ್ಲೂ ವಿವಿಧ ರೂಪಗಳಲ್ಲಿ ದೊರೆಯುತ್ತದೆ.[3]

## ಬೆಳಗಾಂ ಜಿಲ್ಲೆಯ ಸೌದತ್ತಿ ತಾಲ್ಲೂಕು ಶಿರಸಂಗಿಯ ಶಾಸನ (ಕ್ರಿ.ಶ. ೧೧೮೬)

ಋಷ್ಯಶೃಂಗನ ಕಥೆಯನ್ನು ಹೆಚ್ಚು ವಿಸ್ತಾರವಾಗಿ, ಅರ್ಥಪೂರ್ಣವಾಗಿ ಕನ್ನಡದಲ್ಲಿ ಹೇಳುವ ಈ ಶಾಸನದ ಪೂರ್ಣ ಪಾಠ ಪ್ರಕಟವಾಗಿದೆ.[4] ಇದು ಒಂದು ಸಣ್ಣ ಕಾವ್ಯದಂತೆಯೇ ಇದೆ. ಈ ಶಾಸನ ದೊರೆತದ್ದು ಬೆಳಗಾವಿ ಜಿಲ್ಲೆಯ ಶಿರಸಂಗಿಯಲ್ಲಿ. "ಶಿರಸಂಗಿಯು ಸಂಸ್ಕೃತಜ್ಞರ ಕೈಯಲ್ಲಿ ಋಷ್ಯಶೃಂಗಪುರವಾಯಿತು."[5] ಶಾಸನದ ಕೆಲವು ಸಾಲುಗಳನ್ನು ಉದಾಹರಣೆಗಾಗಿ ಕೊಡಲಾಗಿದೆ:

| ಸಾಲು | ಶಾಸನ ಪಾಠ |
|---|---|
| ೧೫. | ....ಅ ಸ್ಥಳದಾದಿ ಪ್ರಪಂಚವೆಂತೆಂದೊಡೆ, ಹಿಮವತ್ಪರ್ಬ್ಬತವಿಂಧ್ಯಶೈಳಪತಿ ಕಿಷ್ಕಿಂಧಾದ್ರಿಯಿಾ ಭೂಪ್ರಮ ಪೂರ್ವಾಪರವಾರ್ಧಿಯಂಕೆ ನಿಜವಿಸ್ತಾರಕ್ಕೆನಲ್ ನಿಳ್ದವಾ ಹಿಮವದ್ವಿಂಧ್ಯಧರಾಧರಗಳೆರಡಕ್ಕಂ.... |
| ೧೬. | ತಾನೆ ಮೇಲಾದುದುತ್ತಮ ಕಿಷ್ಕಿಂಧ ಗಿರೀಂದ್ರಮುತ್ತಮಜನೌಘಂ ತನ್ನೊಳೊಪ್ಪುತ್ತಿರಲ್, ಅವರಾರೆನೆ ತರದಿಂ ಬಾಲಿ ಮರುತ್ಸುತಾಂಗದ ದಿನೇಶಾಪತ್ಯ ತಾರಾಮನೋಹರಿ ವಿಪ್ರರ್ಷಿ ಮತಂಗ ಹಂಸ. |
| ೧೭. | ಕಪಿಲಶ್ರೀ ಶೌನಕಾಗಸ್ತ್ಯ ಸಚ್ಚರಿತೋದ್ವಾಸಿ ವಿಭಾಂಡಕ ಪ್ರಿಯಸುತ ಶ್ರೀ ಋಷ್ಯಶೃಂಗ ಪ್ರತೀಶ್ವರಗಾರ್ಯಾತ್ತಾದಾಶ್ರಮನಂತದೆಂಬೆನೆರಿಯೆಂ ಕಿಷ್ಕಿಂಧಮಂ ಬಣ್ಣಿಸಲ್ ಆ ನಗಪತಿಯ ಜಗನ್ನುತ ಸಾನುವಿನೊಳು ಕಂದಮೂಲ ಫಲ ಸಂಕುಳ. |
| ೧೮. | ದೊಳ್ ಭೂನುತ ವಿಭಾಂಡಕಮುನಿತಾನಿಪ್ಪಂ ಸಕಳ ವೇದ ವೇದಾಂಗವಿದಂ ಮೃಗ ಖಗ ಸರೀಸೃಪ ಪ್ರಾಣಿಗಳಲ್ಲಿ ನಿಸರ್ಗವೈರಮಂ ತೊರೆದಾ ಸಾನುಗಳೊಳು ಚರಿಯಿಪುವೆನಲಾಜ್ಞೆಗೆ ಶಾಂತಿಗೆ ನೋಂತರಾರ್ವಿಭಾಂಡಕ ಮುನಿವೋಲ್, ಏಕಾ |

ಇಂತಹ ಒಟ್ಟು ೩೬ ಸಾಲುಗಳಿವೆ. ಈ ಸಾಲುಗಳನ್ನು ವೃತ್ತ ಕಂದಗಳಾಗಿ ವಿಭಾಗಿಸಲು ಶಕ್ಯವಿದೆ.

---

1. ವಾಲ್ಮೀಕಿ ರಾಮಾಯಣ ಬಾಲಕಾಂಡ ಸರ್ಗ ೯-೧೦.
2. ಮಹಾಭಾರತ–ಅರಣ್ಯಪರ್ವ-೧೧೦.
3. (ಅ) ಹರಿವಂಶ ಪುರಾಣ, ೧-೩೧-೪೬.
   ವಾಯುಪುರಾಣ, ೮೮-೧೦೩.
   ಬ್ರಹ್ಮಪುರಾಣ, ೧೩-೪೦.
   ವಿಷ್ಣುಪುರಾಣ, ೪-೧೮-೧೮.
   ಸ್ಕಾಂದಪುರಾಣ–ನಾಗರ ಖಂಡ, ಅಧ್ಯಾಯ ೧೮.
   ಪದ್ಮಪುರಾಣ–ಗೌಡೀಯ-ಪಾತಾಲ ಖಂಡ, ಅಧ್ಯಾಯ ೧೨.
   ಆನಂದರಾಮಾಯಣ, ೧-೧೬-೧೭.
   ಬುದ್ಧ ಜಾತಕದ ೫೨೩ ಮತ್ತು ೫೨೬ನೇ ಜಾತಕಗಳ ಗಾದೆಗಳಲ್ಲಿ.

   (ಆ) ಈ ಕುರಿತಾದ ಕಥೆಯ ಮೂಲರೂಪ ಮತ್ತು ಅದು ವಿಕಾಸಗೊಂಡಿರಬಹುದಾದ ವಿಶ್ಲೇಷಣೆಯ ಸಮರ್ಥ ಮತ್ತು ಸಾಧಾರ ವಿವೇಚನೆಗೆ:
   ಕಾಮಿಲ್ ಬುಲ್ಕೆಯವರ 'ರಾಮಕಥಾ (ಹಿಂದೀ)', ಪು. ೨೯೧-೩೦೧ ನೋಡಬಹುದು.
4. ಕರ್ನಾಟಕ ಇನ್‌ಸ್ಕ್ರಿಪ್ಶನ್ಸ್-ಸಂಪುಟ ೨ ಪು. ೪೧, ಸಂಖ್ಯೆ ೨೫ನೇ ಶಾಸನ.
5. ಶ್ರೀನಿವಾಸ ರಿತ್ತಿ-ಶಾಸನ ಸಾಹಿತ್ಯದಲ್ಲಿ ಋಷ್ಯಶೃಂಗ (ಲೇಖನ)-ಜರ್ನಲ್ ಆಫ್ ದಿ ಕರ್ನಾಟಕ ಯೂನಿವರ್ಸಿಟಿ-ಹ್ಯುಮಾನಿಟೀಸ್, ಸಂಪುಟ ೯ (೧೯೬೫) ಪು. ೨೦೪-೨೧೯ರಲ್ಲಿ ವಿವೇಚನೆಮಾಡಲಾಗಿದೆ.

## ಈ ಹಿನ್ನೆಲೆಯಲ್ಲಿ ಕುಮಾರ ವಾಲ್ಮೀಕಿಯ ಕಾವ್ಯರಚನೆಗೆ ಪ್ರೇರಣೆಗಳು

೧. ಈ ಮೊದಲು ನಡೆಸಿದ ೧೪ನೆಯ ಶತಮಾನದವರೆಗಿನ ಕನ್ನಡ ಸಾಹಿತ್ಯದ ವಿಹಂಗಮಾವಲೋಕನದಿಂದ, ಕನ್ನಡದಲ್ಲಿ ಜೈನ ರಾಮಾಯಣಗಳು ಹಲವು ಸೃಷ್ಟಿಯಾಗಿದ್ದರೂ, ಆದಿಕವಿ ವಾಲ್ಮೀಕಿಯ ಕೃತಿಯ ಸಮಗ್ರವಾದ ಕನ್ನಡಾನುವಾದದ ಕೊರತೆಯು ಎದ್ದು ತೋರುವಂತಿದೆ.[1] ಈ ಕೊರತೆಯನ್ನು ಕುಮಾರ ವಾಲ್ಮೀಕಿಯು ಮನಗಂಡಿರಬೇಕು. ತನಗಿಂತ ಮೊದಲಿನವನಾದ ಕುಮಾರವ್ಯಾಸನು ಮೊತ್ತಮೊದಲು ವ್ಯಾಸಭಾರತವನ್ನು ಸರಳಸುಂದರವಾಗಿ ಕನ್ನಡಿಸಿ ಯಶಸ್ವಿಯಾದ ಆದರ್ಶ ಕುಮಾರ ವಾಲ್ಮೀಕಿಯ ಕಣ್ಮುಂದೆ ಇದ್ದಿರಬೇಕು. ಆ ಆದರ್ಶದಿಂದ ಪ್ರೇರಿತನಾದ ಕವಿಯು ವಾಲ್ಮೀಕಿ ರಾಮಾಯಣವನ್ನು ಕನ್ನಡಿಸಲು ಮುಂದಾಗಿರಬೇಕು. ಬಹುಶಃ ಇದರಿಂದಲೇ ಕುಮಾರ ವಾಲ್ಮೀಕಿಯು ಕುಮಾರವ್ಯಾಸನ ಹೊರತು ಇನ್ನಾವ ಕವಿಗಳನ್ನೂ ಸ್ತುತಿಸಿಲ್ಲ, ಸ್ಮರಿಸಿಲ್ಲ. ಇವನಿಗೆ ಆದಿಕವಿ ವಾಲ್ಮೀಕಿಯೇ ವಂದನೀಯನಾದ ಕಾವ್ಯ–ಗುರು.[2] ಕುಮಾರವ್ಯಾಸನೇ ಸ್ಮರಣೀಯನಾದ ಮಾರ್ಗದರ್ಶಿ.[3] ಉಳಿದವರ ಲಕ್ಷ್ಯ ಅವನಿಗಿರಲಿಲ್ಲ.

೨. ತಾನು ಬದುಕಿದ ರಾಜಕೀಯ ಅಸ್ಥಿರತೆಯ ಕಾಲದಲ್ಲಿ[4] ಶಾಶ್ವತವಾದ ಜೀವನ ಮೌಲ್ಯಗಳನ್ನು, ಆದರ್ಶವನ್ನು ಪ್ರತಿಪಾದಿಸಲು ರಾಮಾಯಣಕ್ಕಿಂತ ಉತ್ತಮ ಕೃತಿ ಇನ್ನೊಂದಿಲ್ಲ ಎಂದು ಕವಿಯು ಮನಗಂಡಿರಬೇಕು. ಪ್ರಕ್ಷುಬ್ಧವಾದ ಅಂತರಂಗಕ್ಕೆ ರಾಮನ ದಿವ್ಯಕಥಾಮೃತದಿಂದ ಶಾಂತಿ, ಸಾಂತ್ವನ ಎಂಬ ಶ್ರದ್ಧಾ–ಭಕ್ತಿ ಕವಿಯಲ್ಲಿದ್ದು, ಆ ಮಹಾಕಾರ್ಯಕ್ಕೆ ಮನಮಾಡಿರಬೇಕು.

೩. ಭಕ್ತಿಪಂಥದ ಪ್ರಭಾವಕ್ಕೊಳಗಾದ ಕವಿಗೆ ಕಾವ್ಯಯೋಗವು ಭಕ್ತಿಯೋಗವೂ ಆಗಿತ್ತು ; ಅವನ ಕಾವ್ಯಕರ್ಮದಲ್ಲಿ ದಿವ್ಯಾನುಗ್ರಹ ಸಂಪಾದನಾ ದೃಷ್ಟಿಯೇ[5] ಮುಖ್ಯವಾಗಿದ್ದಂತೆ ತೋರುತ್ತದೆ.

೪. ಮಧ್ವಾಚಾರ್ಯರನ್ನು 'ಗುರುರಾಯ' ನೆಂದು ವಂದಿಸಿದ ಕವಿಗೆ ಆಚಾರ್ಯರ 'ತತ್ತ್ವ'ದಲ್ಲಿ ಅಪಾರ ಶ್ರದ್ಧೆಯಿದ್ದಂತೆ ತೋರುತ್ತದೆ.

ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಂ
ಮೂಲ ರಾಮಾಯಣಂಚೈವ ಪುರಾಣಂ ಚೈತದಾತ್ಮಕಮ್[6]

ಎಂಬ ಆಚಾರ್ಯವಾಣಿಯಿಂದ ಕವಿಯು ರಾಮಾಯಣದ 'ಆಗಮ ಸ್ವರೂಪ'ವನ್ನು ಕಂಡುಕೊಂಡಿರಬಹುದು. ಅಲ್ಲದೆ,

---

1. ಇದರಿಂದ, ಆದಿಕವಿ ವಾಲ್ಮೀಕಿಯ ರಾಮಾಯಣದ ಪರಿಚಯವೇ ಕನ್ನಡ ಜನತೆಗೆ ಇರಲಿಲ್ಲ–ಎಂದು ಅರ್ಥವಲ್ಲ. ಕನ್ನಡ ಕಾವ್ಯಗಳಲ್ಲೂ, ಶಾಸನಗಳಲ್ಲೂ ವಾಲ್ಮೀಕಿ ರಾಮಾಯಣದ ಕಥಾಪ್ರಕರಣಗಳು ನಮಗೆ ದೊರೆಯುತ್ತವೆ ಎನ್ನುವುದನ್ನು ಈ ಮೊದಲೇ ಪರಿಶೀಲಿಸಲಾಗಿದೆಯಷ್ಟೆ. ಕ್ರಿ.ಶ. ೧೧೨೧ರ ಲಕ್ಕುಂಡಿ ಶಾಸನ (ಎಸ್. ಐ. ಐ. ೧೧-೨ರಲ್ಲಿ ಸಿಗುವ ೧೭೩ನೇ ಶಾಸನ) ದಿಂದ ಗೊತ್ತಾಗುವಂತೆ, 'ಪುರಾಣಮಂ ಕೇಳ್ವ ಮಹಾಜನಂಗಳು' ಕನ್ನಡದಲ್ಲಿದ್ದು, ಅವರು ವಾಲ್ಮೀಕಿ ರಾಮಾಯಣವನ್ನು ಕೇಳಿ ತಿಳಿದಿರಬೇಕು. ಜಾನಪದ ಹಾಡುಗಳ ರೂಪದಲ್ಲಿಯೂ ರಾಮಕಥೆ, ರಾಮಮಹಿಮೆಗಳು ಕನ್ನಡದಲ್ಲಿ ಜನಜನಿತವಾಗಿದ್ದಿರಬೇಕು. ಕನ್ನಡದಲ್ಲಿ ವಾಲ್ಮೀಕಿ ರಾಮಾಯಣದ ಸಮಗ್ರ ಕೃತಿಯಿರಲಿಲ್ಲ ಎಂದುಮಾತ್ರ ಅಭಿಪ್ರಾಯ.
2. ತೊ. ರಾ. ೧-೧-೪.
3. ತೊ. ರಾ. ೬-೫೫-೬೭, ೬೮.
4. ಈ ಕುರಿತುಮೊದಲೇ 'ಈ ಕೃತಿಯ ಪರಿಸರದ ಪರಿಚಯ'ದಲ್ಲಿ ಸೂಚಿಸಿದೆ.
5. "ಶ್ರೀಮದ್ರಾಮಾಯಣ ವಿಷಯದಲ್ಲಿ ಎರಡು ದೃಷ್ಟಿಗಳು ಸಾಧ್ಯವಾಗಿವೆ"...ಮೊದಲನೆಯದು ಅನುಗ್ರಹಾಪೇಕ್ಷೆಯ ದೃಷ್ಟಿ ; ಎರಡನೆಯದು ಅರ್ಹತಾ ಸಂಪಾದನಾ ದೃಷ್ಟಿ, ಡಿ. ವಿ. ಜಿ. ರಾಮಾಯಣ I ಮುನ್ನುಡಿ (ಬಾಲಕಾಂಡ).
6. ಮಧ್ವಾಚಾರ್ಯ-ವಿಷ್ಣುತತ್ತ್ವನಿರ್ಣಯ, I ೩.

ವೇದಾಂಶ್ಚ ಪಂಚರಾತ್ರಾಣಿ ಸೇತಿಹಾಸಪುರಾಣಕಾನ್
ಜ್ಞಾತ್ವಾ ವಿಷ್ಣುಪರಾನೇವ ಮುಚ್ಯತೇ ನಾನ್ಯಥಾ ಕ್ವಚಿತ್[1]

"ಇತಿಹಾಸ (ರಾಮಾಯಣ, ಭಾರತ) ಪುರಾಣಗಳನ್ನೂ, ವೇದಗಳನ್ನೂ, ಪಂಚರಾತ್ರಗಳನ್ನೂ ವಿಷ್ಣುಪರವಾಗಿ ತಿಳಿದಾಗ ಮುಕ್ತಿ ಪ್ರಾಪ್ತವಾಗುತ್ತದೆ" ಎಂಬ ಆದರ್ಶವೂ ಕವಿಯ ಮುಂದಿರಬಹುದು. ತಾನು ಕಂಡುಕೊಂಡ 'ತತ್ತ್ವ'ದ ಪ್ರಚಾರಕ್ಕಾಗಿಯೂ ಕಾವ್ಯವನ್ನು ಬಳಸಿಕೊಳ್ಳುವ ಉದ್ದೇಶವೂ[2] ಕುಮಾರ ವಾಲ್ಮೀಕಿಗೆ ಇದ್ದುದು ಸ್ಪಷ್ಟವಾಗುತ್ತದೆ.

೫. ಕುಮಾರ ವಾಲ್ಮೀಕಿಯು ದೇಸಿಗೆ ಮನಸೋತ ಕವಿ. ಅವನ ಕಾಲಕ್ಕಾಗಲೇ ಮಾರ್ಗ ಕಾವ್ಯದ ವ್ಯಾಮೋಹವು ಕಡಮೆಯಾಗುತ್ತಾ ಬಂದಿತೆನ್ನುವುದಕ್ಕೆ ಕುಮುದೇಂದು (ಜೈನ ಕವಿ)ವು ಷಟ್ಪದಿಯಲ್ಲಿ ಕಾವ್ಯರಚಿಸಿರುವುದೇ ಸಾಕ್ಷಿ. ಕುಮಾರ ವಾಲ್ಮೀಕಿಯ ಕಾಲಕ್ಕಾಗಲೇ ಷಟ್ಪದಿಯಲ್ಲಿ ಸಾಕಷ್ಟು ಕೃಷಿ ನಡೆದಿತ್ತು. ಕುಮಾರವ್ಯಾಸನ ಭಾಮಿನೀ ಷಟ್ಪದಿ ಮಾರ್ಗವು ಇವನಿಗೆ ಹೆದ್ದಾರಿಯಾಗಿ ಕಂಡಿರಬೇಕು. ಕಾವ್ಯ ರೀತಿ (ಛಂದಸ್ಸು)ಯ ವಿಚಾರದಲ್ಲಿ ಅವನಿಗೆ ಮತ್ತೆ ಶ್ರಮಿಸುವ ಅಗತ್ಯವಿರಲಿಲ್ಲ. ಇದರಿಂದ ಕುಮಾರ ವಾಲ್ಮೀಕಿಗೆ ಕನ್ನಡದಲ್ಲಿ ರಾಮಾಯಣ ರಚನೆಯು ಸಾಕಷ್ಟು ಸುಗಮ ಎನಿಸಿರಬೇಕು. ಅವನ ಕಾವ್ಯದ ಸರಳತೆ ಮತ್ತು ಅದು ಗಳಿಸಿದ ಜನಪ್ರಿಯತೆಗಳು ಆ ಸುಗಮತೆಯನ್ನು ದೃಢೀಕರಿಸುತ್ತವೆ.

ಹೀಗೆ, ಕನ್ನಡ ಕಾವ್ಯ ಕ್ಷೇತ್ರಕ್ಕೆ–ಹೊಸದಾದ ವಸ್ತು ; ಹೃದಯಕ್ಕೊಪ್ಪುವ ಭಕ್ತಿಪ್ರಧಾನವಾದ 'ತತ್ತ್ವ' ; ಇಷ್ಟನ್ನು ಹೇಳಲು ತೆರವಾಗಿ ನಿಂತ ಷಟ್ಪದೀ ಛಂದಸ್ಸಿನ ಸರಳತೆ ಇವೆಲ್ಲವೂ ಕುಮಾರ ವಾಲ್ಮೀಕಿಯನ್ನು ರಾಮಾಯಣ ಸೃಷ್ಟಿಗೆ ಕೈಮಾಡಿ ಕರೆದವು ಎನ್ನಬೇಕು.

ಕುಮಾರ ವಾಲ್ಮೀಕಿಯು ಮೂವರ ಹರಕೆಯ ಶಿಶು. ಕಾವ್ಯದ ವಸ್ತುದೃಷ್ಟಿಯಿಂದ ಆದಿಕವಿ ವಾಲ್ಮೀಕಿ ; ಕಾವ್ಯ–ರೀತಿಯ ದೃಷ್ಟಿಯಿಂದ ಕುಮಾರವ್ಯಾಸ ; ತತ್ತ್ವದ ದೃಷ್ಟಿಯಿಂದ ಮಧ್ವಾಚಾರ್ಯ–ಹೀಗೆ. ಈ ಮೂವರು ಮಹಾಪುರುಷರ ಕರುಣೆಯ ಕೂಸು "ತೊರವೆ ರಾಮಾಯಣ".

---

1. ಮಧ್ವಾಚಾರ್ಯ-ಭಾರತ ತಾತ್ಪರ್ಯನಿರ್ಣಯ, I ಅ.
2. ಜೈನಕವಿಗಳು ತಮ್ಮ ತತ್ತ್ವಪ್ರಚಾರಕ್ಕಾಗಿ–ಕಾವ್ಯವನ್ನು ಬಳಸಿಕೊಂಡದ್ದನ್ನೂ ಕವಿಯು ಗಮನಿಸಿರಬಹುದು.

# ಅಧ್ಯಾಯ ೩

## ಕೃತಿಯ ವಿಶ್ಲೇಷಣಾತ್ಮಕ ಅಧ್ಯಯನ

### ೧. ತೊರವೆ ರಾಮಾಯಣದ ಕಥಾವೈಶಿಷ್ಟ್ಯಗಳು : ತುಲನಾತ್ಮಕ ವಿವೇಚನೆ

ಈ ಮೊದಲೇ ಪರಿಶೀಲಿಸಿದಂತೆ, ಆದಿಕವಿ ವಾಲ್ಮೀಕಿಯ ಮಹಾಕೃತಿ ರಾಮಾಯಣವನ್ನು 'ಕರ್ನಾಟಕ ವಿಸ್ತಾರ ರಾಮಾಯಣ ಪ್ರಬಂಧಕೃತಿ' ಯಾಗಿ[1] ಪ್ರಪ್ರಥಮವಾಗಿ ಕನ್ನಡಿಸಿದವನು ಕುಮಾರ ವಾಲ್ಮೀಕಿ. ಆದರೂ, 'ತೊರವೆ ರಾಮಾಯಣ'ವು ಆದಿಕಾವ್ಯದ 'ತದ್ವತ್ ಅನುವಾದ'ವಾಗಿ ಪಡಿಮೂಡಿಲ್ಲ. ಕನ್ನಡದ ಕವಿಯು ತನ್ನ ಮನೋಧರ್ಮಕ್ಕನುಗುಣವಾಗಿ ಕೆಲವು (ಹಲವು?) ಕಥಾವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಇವನು ಆದಿಕಾವ್ಯವನ್ನು ಅನುಸರಿಸದ ಸಂದರ್ಭಗಳಲ್ಲಿ ಬೇರೆಯೇ ಆಕರ, ಆಧಾರಗಳು ಕವಿಯ ಕಣ್ಮುಂದೆ ಇದ್ದಿರಬೇಕು; ಅಲ್ಲಲ್ಲಿ ಅಭಿಜಾತವಾದ ಕಲ್ಪನೆಗಳನ್ನು ಮೆರೆದು ಕವಿಯು 'ಸ್ವಂತಿಕೆ'ಯನ್ನು ಪ್ರದರ್ಶಿಸಿದ್ದಾನೆ. ಈ ಅಂಶಗಳನ್ನು ತುಲನಾತ್ಮಕವಾಗಿ ಸಮಾಲೋಚಿಸುವುದು ಪ್ರಕೃತದ ಉದ್ದೇಶವಾಗಿದೆ.

### ಕುಮಾರ ವಾಲ್ಮೀಕಿಯ ಕಥಾದೃಷ್ಟಿ

ಆದಿಕವಿ ವಾಲ್ಮೀಕಿಯ ರಾಮಾಯಣದಲ್ಲಿ ಪ್ರತ್ಯಕ್ಷವಾಗಿಯೂ, ಪರ್ಯಾಯವಾಗಿಯೂ ರಾಮನ ದಿವ್ಯತೆಯು ಧ್ವನಿತವಾಗಿದೆ. "ರಾಮನ ದಿವ್ಯತೆಯನ್ನು ಸೂಚಿಸುವ ರಾಮಾಯಣದ ಪ್ರಸಂಗಗಳೂ, ಹೇಳಿಕೆಗಳೂ ಪ್ರಕ್ಷಿಪ್ತವೆಂದು ಹೇಳುವುದಾದರೆ ಹಿಂದೂಧರ್ಮದ ಅವತಾರತತ್ತ್ವವನ್ನೇ ತಿರಸ್ಕರಿಸಿದಂತೆ; ಮತ್ತು ಭಾರತೀಯ ಕಾವ್ಯ ತಂತ್ರದ ಧ್ವನಿಯನ್ನು ಅಲ್ಲಗಳೆದಂತೆಯೇ"[2]

ವಾಲ್ಮೀಕಿ ರಾಮಾಯಣದಲ್ಲಿ ರಾವಣ ಸಂಹಾರಕ್ಕಾಗಿ ಶ್ರೀ ವಿಷ್ಣುವು ಭೂಮಿಯಲ್ಲಿ ಜನಿಸುವ ನಿರ್ಧಾರದ ಸೂಚನೆ ಇದೆ.[3] ಈ ಪ್ರಕರಣವನ್ನು ಪ್ರಕ್ಷಿಪ್ತವೆಂದು ನಿರಾಕರಿಸಿದರೆ, ದಶರಥನು ಕೈಗೊಂಡ ಅಶ್ವಮೇಧ, ಪುತ್ರಕಾಮೇಷ್ಟಿಗಳ ಕಥೆಯನ್ನೂ[4] ಅಲ್ಲಗಳೆಯಬೇಕಾಗುತ್ತದೆ. ಬಾಲಕಾಂಡದ ಬಹುಭಾಗವೆಲ್ಲ ಪ್ರಕ್ಷಿಪ್ತವೆನ್ನುವ ಅಭಿಪ್ರಾಯವೂ ಇದೆ.[5] ಇದನ್ನು ಒಮ್ಮೆಗೆ ಒಪ್ಪಿಕೊಂಡರೂ, ರಾಮಾಯಣದ ಮುಂದಿನ ಕಾಂಡಗಳಲ್ಲಿ ಹಲವು ಸನ್ನಿವೇಶಗಳಲ್ಲಿ ರಾಮನ ದಿವ್ಯತೆಯ ಬಗ್ಗೆ ಉಲ್ಲೇಖಗಳು ದೊರೆಯುವುದನ್ನು[6] ಅಲಕ್ಷಿಸುವಂತಿಲ್ಲ.

ವಾಲ್ಮೀಕಿಯು, ಕಾವ್ಯಾರಂಭದಲ್ಲಿ ನಾರದನೊಡನೆ ಆದರ್ಶಮಾನವನ ಕುರಿತು ಪ್ರಶ್ನಿಸಿದ್ದೇನೋ[7] ನಿಜ. ಅವನು ಕೇಳಿದ ಪ್ರಶ್ನೆಯಲ್ಲಿ ಬರುವ ಆದರ್ಶಮಾನವನ ಗುಣಲಕ್ಷಣಗಳ ಪಟ್ಟಿಯೇ ಸಾಕಷ್ಟು ದೀರ್ಘವಾಗಿದ್ದು, ಆ ಪಟ್ಟಿಯು ನಾರದನ ಮಾತುಗಳಲ್ಲಿ ಇನ್ನೂ ದೀರ್ಘತರವಾಗುತ್ತದೆ.

---

1. ತೊ. ರಾ. I ೧-೯, ೧೧.
2. 'To reject these passages as interpolations is to refuse to understand the Hindu theory of Incarnation (Avatara) and the Hindu poetic technique of indirect Suggestion (Dhvani)'
   K. S. Ramaswamy Sastri-'Studies in Ramayana' p. 2.
3. ವಾ. ರಾ. I. ೧೫-೨೮-೩೧.
4. ವಾ. ರಾ. I. ೧೪ ಮತ್ತು ೧೫ನೇ ಸರ್ಗಗಳು.
5. ಬುಲ್ಕೆ–ರಾಮಕಥಾ, ಪು. ೧೨೮.
6. ವಾ. ರಾ. ಅಯೋಧ್ಯಾಕಾಂಡ ೧-೭, ೪೪-೧೬, ಅರಣ್ಯಕಾಂಡ ೫-೩೩, ೭-೧೪, ೬೮-೩೦.
ಕಿಷ್ಕಿಂಧಾಕಾಂಡ ೨೪-೩೨, ಸುಂದರಕಾಂಡ ೧೧-೪೧-೪೪, ೧೩-೬೦, ೨೭-೧೮-೨೦,
ಯುದ್ಧಕಾಂಡ ೧೮-೨೩, ೨೧-೨೨, ೩೫-೩೬, ೫೦-೫೭, ೫೯-೧೧೧, ೧೧೨, ೭೨-೧೧. ೯೪-೩೮, ೧೧೪-೧೪-೧೬, ೧೩೧-೧೫.
7. ವಾ. ರಾ. ಬಾ. ಕಾಂ. ೧-೨, ೫.

ಬಹವೋ ದುರ್ಲಭಾಶ್ಚೈವ ಯೇ ತ್ವಯಾ ಕೀರ್ತಿತಾ ಗುಣಾಃ

"ನೀವು ಹೇಳಿದ ಗುಣಗಳು ಬಹಳ, ಅವುಗಳೆಲ್ಲವೂ ಒಬ್ಬನಲ್ಲಿ ದುರ್ಲಭ" ಎಂದು ಸೂಚಿಸಿ,

ಮುನೇವಕ್ಷ್ಯಾಮ್ಯಹಂ ಬುದ್ಧ್ವಾ ತೈರ್ಯುಕ್ತಃ ಶ್ರೂಯತಾಂ ನರಃ[1]

ಆದರೂ, ಅಂಥ ಗುಣವಂತನಾದ ಪುರುಷನೊಬ್ಬನಿದ್ದಾನೆ-ಎನ್ನುತ್ತಾ 'ಇಕ್ಷ್ವಾಕು ವಂಶದ' ರಾಮನ ಕಥೆಗೆ ನಾರದನು ತೊಡಗುತ್ತಾನೆ.[2]

ವಾಲ್ಮೀಕಿಯು ಬಯಸಿದ ಆದರ್ಶಗಳೆಲ್ಲ ಒಬ್ಬ ಮಾನವನಲ್ಲಿರಬೇಕಾಗಿದ್ದರೆ ಅವನು ನರರೂಪದ ಪರಮಾತ್ಮನೇ ಆಗಿದ್ದಿರಬೇಕೆಂದು ಭಾವುಕರು ತರ್ಕಿಸಿದರೆ, ಅದು ಸಹಜವೇ ಆಗಿದೆ. ಇಷ್ಟಲ್ಲದೆ ಶ್ರೀ ಕೃಷ್ಣನು,

ರಾಮಃ ಶಸ್ತ್ರಭೃತಾಮಹಮ್-[3]

ಎಂದಪ್ಪದ್ದು ಇದೆ. ಹೀಗೆ, ರಾಮಾಯಣದ ಕಾವ್ಯನಾಯಕ ರಾಮನನ್ನು 'ಅವತಾರಪುರುಷ'ನೆಂದು ಭಕ್ತಿಯಿಂದ ಕಾಣುವ ಸಂಪ್ರದಾಯವು ಬೆಳೆದು ಬಂದಿರುವಂತೆಯೇ,[4] ರಾಮಾಯಣವನ್ನಾಗಲೀ, ರಾಮನ ವ್ಯಕ್ತಿತ್ವವನ್ನಾಗಲೀ ಮಾನವೀಯ ದೃಷ್ಟಿಕೋನದಿಂದ ಕಂಡಾಗಲೇ ಅದರ ಸೌಂದರ್ಯ ಹೆಚ್ಚುತ್ತದೆ, ವಾಲ್ಮೀಕಿಯ ಕಾವ್ಯದ ಹಿರಿಮೆಯು ಅದರಲ್ಲೇ ಅಡಗಿದೆ-ಎನ್ನುವ ವಿವೇಚನಾ ದೃಷ್ಟಿಯೂ ಸಾಗಿ ಬಂದಿದೆ.[5]

ಕುಮಾರ ವಾಲ್ಮೀಕಿಯಂತೂ, ಶ್ರೀರಾಮನನ್ನು ದಿವ್ಯಪುರುಷನನ್ನಾಗಿಯೇ, ದೇವೋತ್ತಮನನ್ನಾಗಿಯೇ ಕಂಡವನು.[6] ಈ ದೃಷ್ಟಿಯಿಂದ ರಸಿಕ, ಸಹೃದಯರಿಗೆ ನಷ್ಟವಾಗಲೀ, ಲಾಭವಾಗಲೀ-ಆ ಕುರಿತು ಇವನು ಯೋಚಿಸಿದವನಲ್ಲ, ಪಾಪನಿವಾರಕ, ಭಕ್ತೋದ್ಧಾರಕವಾದ[7] ರಾಮನ 'ದಿವ್ಯಕಥೆ'ಯನ್ನು ಕನ್ನಡಿಸುವುದರಲ್ಲಿಯೇ ಅವನಿಗೆ ಸಾರ್ಥಕತೆ, ಧನ್ಯತೆ. ಈ ಕಾರಣದಿಂದ ಆದಿಕವಿಯ ಕಥೆಯ ಚೌಕಟ್ಟಿನೊಳಗೆ, ರಾಮಮಹಿಮೆಯನ್ನು ಪ್ರಧಾನವಾಗಿರಿಸಿಕೊಂಡ, ಅಧ್ಯಾತ್ಮ ರಾಮಾಯಣ, ಆನಂದ ರಾಮಾಯಣ, ಭಾರತ ತಾತ್ಪರ್ಯನಿರ್ಣಯದ ರಾಮಕಥಾ ಪ್ರಕರಣ-ಇವುಗಳಿಂದ ತನ್ನ ದೃಷ್ಟಿಗೊಪ್ಪುವ ಅಂಶಗಳನ್ನು ತುಂಬಿಕೊಂಡವನು ಕುಮಾರ ವಾಲ್ಮೀಕಿ. ಇವನು ಪುರಾಣದೃಷ್ಟಿಯ ಕವಿಯೇ

---

1. ವಾ. ರಾ. I ೧-೭.
2. ವಾ. ರಾ. I ೧-೮ರಿಂದ.
3. ಭಗವದ್ಗೀತಾ, ೧೦-೩೧.
4. ಆದಿಕವಿಯ ದೃಷ್ಟಿಯಲ್ಲಿ ರಾಮನು ದಿವ್ಯಪುರುಷನಾಗಿದ್ದಾನೆ ಎಂಬ ಸಮರ್ಥನೆಗೆ:
   ಅ) ಕೆ. ಎಸ್. ರಾಮಸ್ವಾಮಿ ಶಾಸ್ತ್ರಿ–ಸ್ಟಡೀಸ್ ಇನ್ ರಾಮಾಯಣ ಮತ್ತು ರಿಡ್ಲ್ಸ್ ಆಫ್ ರಾಮಾಯಣ.
   ಆ) ಯನ್. ಚಂದ್ರಶೇಖರ ಅಯ್ಯರ್-ಇಂಡಿಯನ್ ಇನ್‌ಹೆರಿಟೆನ್ಸ್, ಭಾಗ ೧ ಪು. ೩೭.
   ಇ) ರಾಮಾಶ್ರಯ ಶರ್ಮ-ಎ ಸೋಶಿಯೋ-ಪೊಲಿಟಿಕಲ್ ಸ್ಟಡಿ ಆಫ್ ರಾಮಾಯಣ, ಪು. ೧೦-೧೨.
   ಈ) ದೇವುಡು ನರಸಿಂಹಶಾಸ್ತ್ರಿ-ರಾಮಾಯಣವೂ, ಭಗವದ್ಗೀತೆಯೂ, ಪು. ೧೪, ೬೦.
5. ರಾಮಾಯಣವು ಲೌಕಿಕಕಾವ್ಯವೇ, ರಾಮ ದಿವ್ಯತೆಯನ್ನು ಸಾರುವ ಭಾಗಗಳೆಲ್ಲವೂ ಪ್ರಕ್ಷಿಪ್ತ–ಎನ್ನುವವರು:
   1) ಮಾಸ್ತಿ ವೆಂಕಟೇಶ ಅಯ್ಯಂಗಾರರು-ಆದಿಕವಿ ವಾಲ್ಮೀಕಿ, ಪು. ೨-೫.
   2) ಬುಲ್ಕೆ-ರಾಮಕಥಾ, ಪು- ೧೨೮. (ಹಿಂದೀ)
   3) Monier Williams-Indian wisdom. p. 320-337. The Epiic poem-Ramayan.
   4) Jaeobi-Das Ramayana-Eng. Tr. Ghoshal. S. N. p. 50, 95-96.
   5) Winternitz-A History of Indian literature-vol. I-496.
   6) V. S. Srinivasa Sastri-Lectures on the Ramayana, p. 9-10.
   7) Krishna Chaitanya-A New history of S. Literature p. 184-185.
   8) C. Kunhan Raja- Survey of Sanskrit Literature, 71. (Bharatiya vidya Bhavana, Bombay. 1962) ...'the god element is kept in the back ground.' p. 71.
6. ತೊ. ರಾ. I ೮-೬, ೬೬, ೧-೯, ೧೦-೨೦, ೧೧-೨೩–ಮತ್ತು ಅನೇಕ ಸಂದರ್ಭಗಳಲ್ಲಿ.
7. ಇದೇ. I ೧-೧೪, ೧೫, ೬. ೫೫-೬೯, ೭೦, ೭೦.

ಆಗಿದ್ದರೂ, ಮಹಾಕವಿ ಕಾಳಿದಾಸನ ‘ರಘುವಂಶ’ದಂತಹ ಮಹಾಕಾವ್ಯವನ್ನು ಅಲಕ್ಷಿಸಿದವನಲ್ಲ ಎನ್ನುವುದು ಇವನ ಕೃತಿವಿಶ್ಲೇಷಣೆಯಿಂದ ತಿಳಿಯುತ್ತದೆ.

## ಉತ್ತರಕಾಂಡವಿಲ್ಲ

ವಾಲ್ಮೀಕಿ ರಾಮಾಯಣದಲ್ಲಿ ನಾರದನು ರಾಮಚರಿತೆಯನ್ನು ತಿಳಿಸುತ್ತಾ–

> ದಶವರ್ಷ ಸಹಸ್ರಾಣಿ ದಶವರ್ಷ ಶತಾನಿಚ
> ರಾಮೋ ರಾಜ್ಯಮುಪಾಸಿತ್ವಾ ಬ್ರಹ್ಮಲೋಕಂ ಪ್ರಯಾಸ್ಯತಿ.[1]

ಶ್ರೀರಾಮನು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಭಾರಮಾಡಿ ಬ್ರಹ್ಮಲೋಕವನ್ನೈದುವನು–ಎಂದು ಭವಿಷ್ಯತ್ಕಾಲವನ್ನೇ ಬಳಸಿದ್ದಾನೆ. ಆಗ ಉತ್ತರಕಾಂಡದ ಕಥೆ ನಡೆದಿರಲಿಲ್ಲ, ಆದ್ದರಿಂದ ಅದನ್ನು ನಾರದನು ಹೇಳಲಿಲ್ಲ ಎಂದು ನಿರ್ಣಯಿಸಬಹುದಾಗುತ್ತದೆ.

ವಾಲ್ಮೀಕಿಯ ಕೃತಿಯನ್ನು ಹಾಡಿಕೊಂಡು ಬಂದ ಕುಶೀಲವರು ರಾಮನೆದುರಿಗೆ ಹಾಡಿದ್ದು ೬ ಕಾಂಡಗಳನ್ನು ಮಾತ್ರ.[2] ಈ ಕುಶೀಲವರು ರಾಮನ ಮಕ್ಕಳು ಎಂಬ ಸೂಚನೆ ಅಲ್ಲಿ ಎಲ್ಲೂ ಇಲ್ಲ, ಇವರೇ ಮುಂದೆ ಸೀತೆಯ ಮಕ್ಕಳೆಂದಾದುದು, ಅಥವಾ ಸೀತೆಯ ಮಕ್ಕಳಿಗೆ ಈ ಹೆಸರುಗಳು ಬಂದುದು ಉತ್ತರಕಾಂಡ ರಚನೆಯ ಕಾಲದಲ್ಲಿ ಮಾತ್ರ.

ಮೊದಲಿನ ೫ ಕಾಂಡಗಳ ಕೊನೆಯಲ್ಲಿ ಬಾರದ ಕಾವ್ಯಫಲ ವಿಚಾರ, ಮಂಗಲವಾಚನ, ಕಾವ್ಯಪ್ರಶಸ್ತಿ ಇತ್ಯಾದಿಗಳೆಲ್ಲ ೬ನೇ ಕಾಂಡದ ಕೊನೆಯಲ್ಲಿ ಬರುವುದನ್ನು ಕಂಡರೆ[3] ವಾಲ್ಮೀಕಿಯು ತನ್ನ ಕೃತಿಯನ್ನು ೬ನೇ ಕಾಂಡದ ಕೊನೆಯಲ್ಲಿ ಮುಗಿಸಿರಬೇಕೆನ್ನುವುದು ಸ್ಪಷ್ಟವಾಗುತ್ತದೆ. ರಾಮನು ರಾಜ್ಯವಾಳುತ್ತಿದ್ದ ಕಾಲದಲ್ಲಿ ರಚಿತವಾದ ರಾಮಕೃತಿಯಲ್ಲಿ ಅನಾಗತವಾದುದನ್ನು–ರಾಮನ ಸಮಕಾಲೀನನಾದ ವಾಲ್ಮೀಕಿಯು ಬರೆದಿದ್ದನಾದರೆ[4]–೬ನೇ ಕಾಂಡದ ಕೊನೆಯಲ್ಲಿ ಮಂಗಳ ವಾಚನ ಮಾಡದೆ, ರಾಮನ ಚರಿತ್ರೆಯನ್ನೆಲ್ಲ ಮುಗಿಸಿಯೇ ‘ಕಾವ್ಯ ಸಮಾರೋಪ’ ಮಾಡುತ್ತಿದ್ದನು.

ಅಷ್ಟಲ್ಲದೆ, ರಾಮಾಯಣದ ಪಾರಾಯಣವೆಂದರೆ ಮೊದಲ ೬ ಕಾಂಡಗಳ ಪಾರಾಯಣ ಮಾತ್ರ. ೭ನೆಯ ‘ಉತ್ತರ ಕಾಂಡ’ವನ್ನು ಪಾರಾಯಣ ಮಾಡುವ ಪದ್ಧತಿಯಿಲ್ಲ.

ಇಷ್ಟೆಲ್ಲ ಕಾರಣಗಳಿಂದ ಪ್ರಕೃತದ “ಉತ್ತರ ಕಾಂಡ”ವು ವಾಲ್ಮೀಕಿ ಕೃತವಲ್ಲವೆಂದೇ ಹೇಳಬೇಕು. ಕುಮಾರ ವಾಲ್ಮೀಕಿಯು ಸೀತಾ ಪರಿತ್ಯಾಗ, ಲವಕುಶ ಜನನದ ಕಥೆಯ ಸೂಚನೆಯನ್ನು ಕಾವ್ಯಾರಂಭದಲ್ಲಿ ನೀಡಿದ್ದಾನೆ.[5] ಆದರೆ, ನಾರದನು ಹೇಳಿದ ರಾಮನ ಸಂಕ್ಷಿಪ್ತ ಕಥೆಯಲ್ಲಿ ಈ ಸಂಗತಿಗಳಿಲ್ಲ.[5] ಶ್ರೀರಾಮಪಟ್ಟಾಭಿಷೇಕದೊಂದಿಗೆ ಕವಿಯು ಕೃತಿಗೆ ಮಂಗಲ ಹಾಡುತ್ತಾನೆ. ‘ಉತ್ತರ ಕಾಂಡ’ದಲ್ಲಿ ರಾವಣ ಪ್ರತಾಪ, ಪೂರ್ವಕಥೆ ಇತ್ಯಾದಿ ಪುನರಾವರ್ತನೆಗಳಿರುವುದರಿಂದ–ಶ್ರೀ ರಾಮ ಮಹಿಮೆಯನ್ನು ಹೇಳಹೊರಟ ಕವಿಗೆ ಆ ಕುರಿತು ಆಸಕ್ತಿಯಿದ್ದಂತಿಲ್ಲ ; ೬ ಕಾಂಡಗಳ ರಚನೆಯಿಂದಲೇ ಇವನು ತೃಪ್ತ.

ಇದರೊಂದಿಗೆ, ಧರ್ಮರಾಜನ ಪಟ್ಟಾಭಿಷೇಕದೊಂದಿಗೆ ತನ್ನ ಕೃತಿಗೆ ಮಂಗಲ ಹಾಡಿದ ಕುಮಾರವ್ಯಾಸನ ‘ದಶಪರ್ವ ಭಾರತ’ದ ಆದರ್ಶವೂ ಕವಿಯ ಮುಂದೆ ಇದ್ದಿರಬಹುದು.

## ಈಶ್ವರನು ಗಿರಿಜೆಗೆ ಹೇಳಿದ ಕಥೆ

“ವಾಸುದೇವ ಸ್ತುತಿ ಪರಾಯಣೆ”ಯಾದ ಗಿರಿಜೆಗೆ ಮಹೇಶನು ರಾಮನಾಮ ಮಹಿಮೆಯನ್ನು ವಿವರಿಸುವ

---

1. ವಾ. ರಾ. I ೧-೯೭
2. ವಾ. ರಾ. I ಸರ್ಗ ೩ ಮತ್ತು ೪.
3. ಇದೇ. VI ೧೩೦-೧೩೮-೧೨೪.
4. Winternitz, M. Williams, Bulke, C. V. Vaidya ರೂ ಸಮ್ಮತಿಸುತ್ತಾರೆ.
5. ತೊ. ರಾ. I ೩–೩–೧೦ ಮತ್ತು I ೨-೧೯-೨೩.

ಶ್ರೀ ರಾಮ ಕಥೆಯನ್ನು ಹೇಳಿದ ಕೊರಚೆ ರಾಮಾಯಣದ ಪ್ರಕರಣಕ್ಕೆ ವಾಲ್ಮೀಕಿ ರಾಮಾಯಣದಲ್ಲಿ ಯಾವ ಆಧಾರವೂ ದೊರೆಯುವುದಿಲ್ಲ. ಕುಮಾರ ವಾಲ್ಮೀಕಿಯು ವಿಷ್ಣು ಸರ್ವೋತ್ತಮತ್ವವನ್ನೂ, ಅವನು ರಾಜಶೇಖರ ವಿನುತನೆನ್ನುವುದನ್ನೂ[1] ಪ್ರತಿಪಾದಿಸುವ ದೃಷ್ಟಿಯಿಂದ, ಬ್ರಹ್ಮಪುರಾಣದ ಉತ್ತರ ಖಂಡದಲ್ಲಿ ಬರುವ ಅಧ್ಯಾತ್ಮ ರಾಮಾಯಣ[2] ಮತ್ತು ಆನಂದ ರಾಮಾಯಣಗಳನ್ನು[3] ಅನುಸರಿಸಿ ಈ ಕಥೆಯನ್ನು ಹೇಳಿದಂತಿದೆ.

ರಾಮಃ ಪರಾತ್ಮಾ ಪ್ರಕೃತೇರನಾದಿರಾನಂದ ಏಕಃ ಪುರುಷೋತ್ತಮೋಹಿ–ಎಂಬ ಅಧ್ಯಾತ್ಮರಾಮಾಯಣದ ಮಹಾದೇವನ ಹೇಳಿಕೆಯೂ.[4]

ಕಥಯಾಮಿ ಸವಿಸ್ತಾರಂ ಮಹಾಮಂಗಲಕಾರಕಮ್–ಎನ್ನುವ ಆನಂದ ರಾಮಾಯಣದ ಶಿವನ ಮಾತೂ[5] ಕುಮಾರ ವಾಲ್ಮೀಕಿಗೆ ಆಧಾರವಾಗಿರಬೇಕು. ಅಧ್ಯಾತ್ಮ ರಾಮಾಯಣ ಮತ್ತು ಆನಂದ ರಾಮಾಯಣಗಳೆರಡೂ–ಪ್ರತಿಸರ್ಗಾಂತ್ಯದಲ್ಲೂ ಶ್ರೀಮದಾದಿ ಕವಿ ವಾಲ್ಮೀಕಿ ವಿರಚಿತ ಎಂಬ ಉಲ್ಲೇಖಯುಕ್ತವಾಗಿರುವುದರಿಂದ, ಅವು ವಾಲ್ಮೀಕಿ ಕೃತಿಗಳೆಂಬ ವಿಶ್ವಾಸ ಕುಮಾರ ವಾಲ್ಮೀಕಿಗಿದ್ದಿರಬಹುದು. ಕುಮಾರ ವಾಲ್ಮೀಕಿಯು ರಾಮಾಯಣವನ್ನು 'ಶತಕೋಟಿ ಪ್ರವಿಸ್ತರ' ಎಂದು ಕರೆದಿದ್ದಾನೆ.[6] ಇದಕ್ಕೆ, ಆನಂದ ರಾಮಾಯಣದ ಪ್ರತಿ ಸರ್ಗಾಂತ್ಯದಲ್ಲೂ "ಇತಿ ಶತಕೋಟಿ ರಾಮಚರಿತಾಂತರ್ಗತ" ಎಂದಿರುವುದೇ ಆಧಾರ.

### ವಾಲ್ಮೀಕಿಯ ಪೂರ್ವ ಕಥೆ

ಕುಮಾರ ವಾಲ್ಮೀಕಿಯು ಹೇಳುವ "ಬೇಡನು ವಾಲ್ಮೀಕಿಯಾದ ಕಥೆ" ಆದಿಕಾವ್ಯದಲ್ಲಿಲ್ಲ. ರಾಮಾಯಣದ ಉತ್ತರ ಕಾಂಡದಲ್ಲಿ ತಾನು ಪ್ರಚೇತಸನ ಹತ್ತನೆಯ ಮಗನೆಂದು ಹೇಳಿಕೊಂಡ ವಾಲ್ಮೀಕಿಯು :

ಮನಸಾ ಕರ್ಮಣಾ ವಾಚಾ ಭೂತಪೂರ್ವಂ ನಕಿಲ್ಬಿಷಮ್–[7]

ಎಂದು ಯಾವುದೇ ರೀತಿಯ ಪಾಪ ಕಾರ್ಯವನ್ನು ಮಾಡಿದವನಲ್ಲ ಎನ್ನುತ್ತಾನೆ. ಅಷ್ಟಲ್ಲದೆ ಅವನು ದಶರಥನ ಮಿತ್ರನೆಂದೂ, 'ವಿಪ್ರ' ಎಂದೂ ಹೇಳಲಾಗಿದೆ.[8]

ಆದಿಕಾವ್ಯದ ಅಯೋಧ್ಯಾಕಾಂಡದಲ್ಲಿ ರಾಮನು ಚಿತ್ರಕೂಟಕ್ಕೆ ತೆರಳುತ್ತಾ ವಾಲ್ಮೀಕಿಯ ಆಶ್ರಮಕ್ಕೆ ಹೋದ ವಿಚಾರವಿದೆ.[9] ಆದರೆ ಕಿರಾತನು ಕವಿಯಾದ ಪ್ರಸಂಗ ಅಲ್ಲಿ ಬರುವುದಿಲ್ಲ.

ಈ ಕಥೆಯು ಮೊದಲು ಸಿಗುವುದು ಅಧ್ಯಾತ್ಮ ರಾಮಾಯಣದಲ್ಲಿ.[10] ತನ್ನ ದರ್ಶನಕ್ಕೆ ಬಂದ ರಾಮಾದಿಗಳನ್ನು ದ್ದೇಶಿಸಿ, ವಾಲ್ಮೀಕಿಯು :

ಅಹಂ ಪುರಾ ಕಿರಾತೇಷು ಕಿರಾತೈಃ ಸಹವರ್ಧಿತಃ
ಜನ್ಮ ಮಾತ್ರದ್ವಿಜತ್ವಂ ಮೇ ಶೂದ್ರಾಚಾರರತಃ ಸದಾ.

---

1. ತೊ. ರಾ. ೧-೧-೧.
2. ಅ. ರಾ. ಬಾ. ಕಾಂ. ೧-೫೬.
3. ಅ. ರಾ. ಸಾರಕಾಂಡ, 1 ೩-೬.
4. ಅ. ರಾ. I ೧-೧೭.
5. ಆನಂದ ರಾ. ೧-೬.
6. ತೊ. ರಾ. ೧-೧-೧೩.

(ನಾನಾ ಪುರಾಣಾಗಮಾದಿನಿಷ್ಠ ತತ್ತ್ವ ಸಂಗ್ರಹ ಭೂತೇ ತತ್ತ್ವಸಂಗ್ರಹ ರಾಮಾಯಣ–ಇದರಲ್ಲಿಯೂ, ಪಾರ್ವತಿಯ ಪ್ರಶ್ನೆ, ಉತ್ತರ ರೂಪವಾಗಿ ಶಿವನಿಂದ ರಾಮಕಥಾ ಕಥನಗಳಿವೆ-ತ. ಸಂ. ರಾ. ೧-೭ನೇ ಸರ್ಗ ೨೦-೨೧.)

7. ರಾಮಾಯಣ-ಉತ್ತರಕಾಂಡ, ೯೬-೨೧.
8. ರಾಜಾ ದಶರಥಸ್ಯೈಷ್ಯ ಪಿತುರ್ಮೇ ಮುನಿಪುಂಗವಃ ಸಖಾ। ಪರಮಕೋವಿಪ್ರೋ ವಾಲ್ಮೀಕಿಸ್ಸುಮಹಾಯಶಾಃ ಉತ್ತರ ಕಾಂಡ, ೪೭-೧೬.
9. ವಾ. ರಾ. II ೫೬-೧೬, (ತೊ. ರಾ. II ೪/೨೬)
10. ಅ.ರಾ. ೨-೬-೪೨-೮೮. (ಉ. ಕಾಂಡ ೪೭–೧೬)

ತಾನು ದ್ವಿಜನಾಗಿದ್ದರೂ ಶೂದ್ರಾಚಾರನಿರತನಾಗಿದ್ದು, ಸಪ್ತರ್ಷಿಗಳ ಬಟ್ಟೆಯನ್ನು ಸೆಳೆಯ ಹೋದೆನೆಂದೂ ಆಗ ಅವರು, ಪಾಪ–ಪುಣ್ಯಗಳ ವಿಚಾರವೆತ್ತಿ ಅವರಲ್ಲಿ ತಾನೇ ವಿನಾ ಹೆಂಡತಿ ಮಕ್ಕಳು ಪಾಲುಗಾರರಾಗರು ಎಂಬುದನ್ನು ಖಚಿತ ಪಡಿಸಿ,

ಇತ್ಯುಕ್ತ್ವಾ ರಾಮ ತೇನಾಮಂ ವ್ಯತ್ಯಸ್ತಾಕ್ಷರಪೂರ್ವಕಮ್
ಏಕಾಗ್ರಮನಸಾತ್ರೈವ ಮರೇತಿ ಜಪ ಸರ್ವದಾ.[1]

"ರಾಮ" ಶಬ್ದವನ್ನು ವ್ಯತ್ಯಸ್ತಗೊಳಿಸಿ ಬೋಧಿಸಿದರೆಂದೂ, ರಾಮನಾಮ ಮಹಿಮೆಯಿಂದ ತಾನು ಬ್ರಹ್ಮರ್ಷಿಯಾದೆನೆಂದೂ ತಿಳಿಸುತ್ತಾನೆ.[2]

'ಆನಂದ ರಾಮಾಯಣ'ವಲ್ಲೂ ಇಂತಹ ಕಥೆಯಿದೆ.[3] "ತತ್ತ್ವ ಸಂಗ್ರಹ ರಾಮಾಯಣ"ವೂ

ವ್ಯತ್ಯಸ್ತಂ ವ್ಯಾಗೃಣನ್. ನಾಮ ವಾಲ್ಮೀಕಿ ರಭವದ್ದ್ವಿಜಃ[4]

ಎಂದು ವಾಲ್ಮೀಕಿಯು ವ್ಯತ್ಯಸ್ತವಾಗಿ ರಾಮನಾಮವನ್ನು ಜಪಿಸಿದರೂ, ಆ ವ್ಯಾಧನು ತನ್ನ ಶರೀರದಿಂದಲೇ ಬ್ರಾಹ್ಮಣ್ಯವನ್ನು ಪಡೆದನು–ಎನ್ನುತ್ತದೆ. ಇಂತಹ ಪವಾಡ ಸದೃಶವಾದ ಘಟನೆಯ ಮೂಲ ರೂಪವನ್ನು ಮಹಾಭಾರತದ ಒಂದೆರಡು ಅವತರಣಿಕೆಗಳಲ್ಲಿ ಕಾಣಬಹುದು. ವಾಲ್ಮೀಕಿಯು ಅನುಶಾಸನಪರ್ವದಲ್ಲಿ ಯುಧಿಷ್ಠಿರನಿಗೆ ಹೇಳುತ್ತಾನೆ:

ವಾಲ್ಮೀಕಿಶ್ಚಾಹ ಭಗವಾನ್ ಯುಧಿಷ್ಠಿರಮಿದಂ ವಚಃ
ವಿವಾದೇ ಸಾಗ್ನಿ ಮುನಿಭಿರ್ಬ್ರಹ್ಮಘ್ನೋ ವೈಭವಾನಿತಿ
ಉಕ್ತಃ ಕ್ಷಣೇನ ಚಾವಿಷ್ಟಸ್ತೇನಾಧರ್ಮೇಣ ಭಾರತ
ಸೋಹಮಿಶಾನಮನಘಂ ಅಮೋಘಂ ಶರಣಂ ಗತಃ
ಮುಕ್ತಶ್ಚಾಸ್ಮಿ ತತೋ ಪಾಪೈಃ....[5]

"ಅಗ್ನಿಪೂಜಕರಾದ ಮುನಿಗಳೊಡನೆ ನಾನು ವಿವಾದ ಮಾಡಿದ್ದರಿಂದ 'ನೀನು ಬ್ರಹ್ಮಘ್ನ' ಎಂದುಬಿಟ್ಟರು. ಕೂಡಲೆ ನಾನು ಅಧರ್ಮಾವಿಷ್ಟನಾದೆ. ಕಡೆಗೆ ಈಶ್ವರನ ಶರಣು ಹೋಗಿ ಪಾಪಮುಕ್ತನಾದೆ."

'ಮಹಾಭಾರತ'ದ ಪ್ರಕಾರ 'ಭಾರ್ಗವ'ನಾದ ವಾಲ್ಮೀಕಿಯೇ ರಾಮಚರಿತೆಯನ್ನು ಬರೆದವನೆಂದೂ ತಿಳಿದು ಬರುತ್ತದೆ.[6] ಭೃಗುವಿನ ಮೊಮ್ಮಗ ವಾಲ್ಮೀಕಿ, : (ಭೃಗುವಿನ ಮಗನಾದ ಚ್ಯವನನ ಮಗ) ಇಷ್ಟರಿಂದ–ವಾಲ್ಮೀಕಿಯು ಜನ್ಮತಃ ಬ್ರಾಹ್ಮಣನಾಗಿದ್ದು ಅಧರ್ಮಮಾರ್ಗ ಪ್ರವೃತ್ತನಾದಾಗ ದೈವಾನುಗ್ರಹನಿಂದ ಪಾಪಮುಕ್ತನಾದನು–ಎಂದು ಮಾತ್ರ ಹೇಳಬಹುದು.[7]

---

1. ಅ. ರಾ. II ೬-೮೦.
2. ಈ 'ವ್ಯತ್ಯಸ್ತಾಕ್ಷರ' ಎನ್ನುವ ಕಾರಣದಿಂದಲೇ–ಪುರಂದರದಾಸರ- "ಅಮರ ಈ ಮರ ಧ್ಯಾನಿಸುತ್ತಿರುವಾಗ ...."ಎಂಬ ರಾಮನಾಮ ಮಹಿಮೆಯನ್ನು ಸಾರುವ ಕೀರ್ತನೆಯು ಮೂಡಿಬಂದಿರಬೇಕು. ಅದರೊಂದಿಗೆ ಆ ಬೇಡ (ವಾಲ್ಮೀಕಿ) ನು ಕನ್ನಡಿಗನೆಂಬ ಪ್ರತೀತಿಯೂ ಹುಟ್ಟಿಕೊಂಡಿತು.
3. ಆನಂದ ರಾಮಾಯಣ-ರಾಜ್ಯಕಾಂಡ-ಉತ್ತರಾರ್ಧ ಸರ್ಗ ೧೪-೧೨೧-೧೪೯.
4. ತತ್ತ್ವ ಸಂಗ್ರಹ ರಾಮಾಯಣ I ೧೪-೫೩.
5. ಮಹಾಭಾರತ, ಅನುಶಾಸನಪರ್ವ. ಅಧ್ಯಾಯ ೪೯, (ಕೆ. ಕೃಷ್ಣಮೂರ್ತಿ-ಸಂಸ್ಕೃತಕಾವ್ಯ, ಪು. ೫೨ರಿಂದ ಉದ್ಧೃತ).
6. ಶ್ಲೋಕಶ್ಚಾಯಂ ಪುರಾಗೀತೋ ಭಾರ್ಗವೇನ ಮಹಾತ್ಮನಾ। ಆಖ್ಯಾತೇ ರಾಮಚರಿತೇ ನೃಪತಿಂ ಪ್ರತಿ ಭಾರತ (ಮಹಾಭಾರತ-ಶಾಂತಿಪರ್ವ ೫೬-೪೦)
7. ಅ) ಕೃತ್ತಿವಾಸರಾಮಾಯಣದಲ್ಲಿ ವಾಲ್ಮೀಕಿಯು ಚ್ಯವನ ಮುನಿಯ ಪುತ್ರನೆಂದೂ, ಆವನ ಮೊದಲ ಹೆಸರು ರತ್ನಾಕರನೆಂದೂ, ದಸ್ಯುವೃತ್ತಿಯವನೆಂದೂ ಹೇಳಿದೆ.

ರಾಮನಾಮ ಮಹಿಮೆಯನ್ನು ಹೇಳಹೊರಟ ಕುಮಾರ ವಾಲ್ಮೀಕಿಗೆ 'ದುರಾತ್ಮ ವ್ಯಾಧನೊಬ್ಬನು ರಾಮನಾಮ ಮಹಿಮೆಯಿಂದ ಮಹಾಮುನಿಯಾದ ಕಥೆ, ಮಹಾಕವಿಯಾದ ಕಥೆ'ಯು ಹೆಚ್ಚು ಆಕರ್ಷಕವೆನಿಸಿರಬೇಕು. ಆದುದರಿಂದ ಅದನ್ನು–ಆದಿಕಾವ್ಯದಲ್ಲಿ ಇಲ್ಲವಾದರೂ–ತನ್ನ ಕೃತಿಯಲ್ಲಿ ಅಳವಡಿಸಿಕೊಂಡಿರಬೇಕು. ಕಾವ್ಯದ ಮೊದಲಲ್ಲೇ ಈ ಕಥೆಯನ್ನು ೨ ಷಟ್ಪದಿಗಳಲ್ಲಿ ಸಂಗ್ರಹಿಸಿ ಹೇಳಿದ್ದೂ[1] 'ಕ್ರೌಂಚಾಟವಿ'[2] ಎಂಬ ಹೆಸರನ್ನು ವಿಶೇಷವಾಗಿ ಸೂಚಿಸಿದ್ದೂ ಕವಿಯ ವೈಶಿಷ್ಟ್ಯ.

## ಶಾಪ ವಾಕ್ಯ

ವಾಲ್ಮೀಕಿ ರಾಮಾಯಣದಲ್ಲಿ ನಾರದನಿಂದ ರಾಮಾಯಣ ಕಥನ,[3] ಕ್ರೌಂಚ ವೃತ್ತಾಂತ[4] ಬ್ರಹ್ಮಾನುಗ್ರಹ–[5] ಇವುಗಳನ್ನು ಅನುಕ್ರಮವಾಗಿ ಹೇಳಲಾಗಿದೆ.

ಕುಮಾರ ವಾಲ್ಮೀಕಿಯು ವಾಲ್ಮೀಕಿಯ ಪೂರ್ವಕಥೆ,[6] ಕ್ರೌಂಚ ವೃತ್ತಾಂತ,[7] ನಾರದಾಗಮನ,[8] ರಾಮಾಯಣ ಕಥನ–[9] ಈ ಕ್ರಮವನ್ನು ಅನುಸರಿಸಿದ್ದಾನೆ. ಬ್ರಹ್ಮಾಗಮನದ ಸ್ಥಾನದಲ್ಲಿ ನಾರದಾಗಮನವನ್ನು ಹೇಳಿರುವುದು ಕುಮಾರ ವಾಲ್ಮೀಕಿಯ ವೈಶಿಷ್ಟ್ಯ.

ಆದಿಕಾವ್ಯದಲ್ಲಿರುವಂತೆ 'ಹಕ್ಕಿಯನ್ನು ಕೊಂದ ಬೇಡನು ಬಹಳ ಕಾಲ ಬದುಕಿರಬಾರದು' ಎಂಬ ಶಾಪವಾಕ್ಯ[10] ಕನ್ನಡದ ಕೃತಿಯಲ್ಲಿಲ್ಲ. 'ಮುನಿನಾಥ ಮರುಕದಲಿ ಹಳವಿಸಿದನು' ಎಂದು[11] ಮಾತ್ರವಿದೆ. ಶಾಪ ಮೂಲವಾದ ಕ್ರೋಧಕ್ಕಿಂತಲೂ, ಶ್ಲೋಕಮೂಲವಾದ ಕವಿಯ ಶೋಕಕ್ಕೆ ಕುಮಾರ ವಾಲ್ಮೀಕಿಯು ಮಹತ್ವ ಕೊಟ್ಟಿರುವುದು ಅನುಚಿತವೇನೂ ಅಲ್ಲ.

## ಲವಕುಶರ ಪ್ರಶ್ನೆ

ಆದಿಕವಿ ವಾಲ್ಮೀಕಿಯು ತಾನು ರಚಿಸಿದ ಕಾವ್ಯವನ್ನು ಕಲಿತು ಯಾರು ಹಾಡಬಲ್ಲರು ಎಂದು ಯೋಚಿಸುತ್ತಿದ್ದಾಗ–

---

ಅ) ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಒಬ್ಬ ವೈಯಾಕರಣಿ ವಾಲ್ಮೀಕಿಯ ಉಲ್ಲೇಖವಿದೆ. ಮಹಾಭಾರತದ ಉದ್ಯೋಗಪರ್ವದಲ್ಲಿ ಗರುಡ ವಂಶದ ವಿಷ್ಣು ಭಕ್ತ ಸುವರ್ಣ ಪಕ್ಷಿಗಳ ಹೆಸರುಗಳಲ್ಲಿ ವಾಲ್ಮೀಕಿ ಎಂಬ ಹೆಸರೂ ದೊರೆಯುತ್ತದೆ.

ಅಷ್ಟಲ್ಲದೆ, ಮಹಾಭಾರತದ ಆದಿಪರ್ವ (೫೦–೧೪) ಸಭಾಪರ್ವ (೬–೧೪) ವನಪರ್ವ (೮೬-೧೦೨) ದ್ರೋಣಪರ್ವ (೧೧೮-೪೮) ಶಾಂತಿಪರ್ವ (೨೦೦-೪) ಗಳಲ್ಲಿ ಮಹರ್ಷಿ ವಾಲ್ಮೀಕಿಯ ವಿಚಾರವಿದೆ. ಆದರೆ ಯಾವ ಸಂದರ್ಭದಲ್ಲೂ ಅವನ ಪೂರ್ವಕಥೆಯನ್ನು ಹೇಳಲಾಗಿಲ್ಲ. (ಕೆ. ಕೃಷ್ಣಮೂರ್ತಿಯವರು ಉಲ್ಲೇಖಿಸಿದ ಕಥೆಯು- ಈ ಹಿಂದಿನ ಪುಟದಲ್ಲಿ ಉದ್ಧೃತ–ಅವರೇ ಹೇಳಿದಂತೆ ಮಹಾಭಾರತದ ಕೆಲವೇ ಅವತರಣಿಕೆಗಳಲ್ಲಿ ದೊರೆಯುತ್ತದೆ)

1. ತೊ. ರಾ. I ೨-೧೧, ೧೨.
2. ಕುಮಾರ ವಾಲ್ಮೀಕಿಯನ್ನು ಅನುಸರಿಸಿದ ಬತ್ತಲೇಶ್ವರನ ರಾಮಾಯಣದಲ್ಲಿ 'ಕ್ರೌಂಚಾರಣ್ಯ' ಎಂದಿದೆ. ವಾ. ರಾ. ದಲ್ಲಿ (ಕಿಷ್ಕಿಂಧಾಕಾಂಡ ೪೬–೩೦) ಕ್ರೌಂಚಗಿರಿಯ ಉಲ್ಲೇಖ ಮಾತ್ರವಿದೆ. (೬–೬೦)
3. ವಾ. ರಾ. I ಸರ್ಗ ೧.
4. ಇದೇ. ೨. ೯-೧೫.
5. ಇದೇ. ೨-೨೪.
6. ತೊ. ರಾ. I ೨–೧೧, ೧೨
7. ಇದೇ. ೨-೧೪-೧೫.
8. ಇದೇ. ೨-೧೬.
9. ಇದೇ. ೨-೧೯ ರಿಂದ ೨೪.
10. ಪ್ರಕೃತದ ವಾ. ರಾ. ದಲ್ಲಿರುವ ಮಾ ನಿಷಾದ.....(ಬಾಲಕಾಂಡ, ೨–೧೫) ಎನ್ನುವ ಶ್ಲೋಕವು ಕೃತಕವಾದ (ಪ್ರಕ್ಷಿಪ್ತವಾದ) ಶ್ಲೋಕ. ಅದು ವಾಲ್ಮೀಕಿಯ ಶೈಲಿಯಲ್ಲಿಲ್ಲ, ಎರಡರ್ಥಗಳು ಸಾಧ್ಯವಾಗಬೇಕೆಂಬ ಉದ್ದೇಶದಿಂದ ತಯಾರಾದದ್ದು–ಡಿ. ವಿ. ಜಿ. (ಬಾಲಕಾಂಡಕ್ಕೆ ಮುನ್ನುಡಿ-ಪುಟ. ೨೧-೨೨),
11. ತೊ. ರಾ. I. ೨-೧೫, ೧೬.

ಕುಶೀಲವೌತು ಧರ್ಮಜ್ಞೌ ರಾಜಪುತ್ರೌಯಶಸ್ವಿನೌ
ಭ್ರಾತರೌ ಸ್ವರಸಂಪನ್ನೌದದರ್ಶಾಶ್ರಮವಾಸಿನೌ[1]

ರಾಜಪುತ್ರರೂ,[2] ಧರ್ಮಜ್ಞರೂ,[3] ಕೀರ್ತಿವಂತರೂ, ಉತ್ತಮ ಕಂಠಧ್ವನಿಯುಳ್ಳವರೂ ಆಶ್ರಮವಾಸಿಗಳೂ ಆದ ಆ ಲವ ಕುಶರು[4] ಬಂದು ವಾಲ್ಮೀಕಿಗೆ ವಂದಿಸುತ್ತಾರೆ. ಆ ಕುಮಾರರಿಗೆ ವಾಲ್ಮೀಕಿಯು ರಾಮಾಯಣವನ್ನು ಕಲಿಸುತ್ತಾನೆ. ಅವರು ಅದನ್ನು ಮಧುರವಾಗಿ ಹಾಡುತಿದ್ದಂತೆ, ಅವರ ಗಾನದ ಕೀರ್ತಿಯು ಅಯೋಧ್ಯೆಯನ್ನು ತಲುಪುತ್ತದೆ. ಶ್ರೀ ರಾಮನು ತನ್ನ ಆಸ್ಥಾನದಲ್ಲಿ ಅವರು ಹಾಡುವಂತೆ ಮಾಡಿ, ಕೇಳತೊಡಗುತ್ತಾನೆ.[5]

ಕುಮಾರ ವಾಲ್ಮೀಕಿಯು-ಸೀತಾಪರಿತ್ಯಾಗ, ವಾಲ್ಮೀಕಿ ಆಶ್ರಮದಲ್ಲಿ ಲವಕುಶ ಜನನ, ಅವರಿಬ್ಬರ ಬಾಲ್ಯ, ಸಂಸ್ಕಾರಗಳನ್ನು ಸಂಕ್ಷೇಪಿಸಿ[6]–ಲವಕುಶರು ಒಂದು ದಿನ ವಾಲ್ಮೀಕಿಯೊಡನೆ 'ನಮ್ಮ ತಂದೆಯಾರು ? ವಂಶಯಾವುದು " ಎಂದು ಪ್ರಶ್ನಿಸಲು ಮುನಿಯು ರಾಮಕಥೆಯನ್ನು ಅವರಿಗೆ ಹೇಳುತ್ತಾನೆ. ಹೀಗೆ, ತೊರವೆ ರಾಮಾಯಣವೆಲ್ಲವೂ– ಲವಕುಶರನ್ನು ಉದ್ದೇಶಿಸಿ ಹೇಳಿದ್ದಾಗಿದ್ದು, ಅದನ್ನೇ ಶಿವನು ಗಿರಿಜೆಗೆ ನಿರೂಪಿಸಿದಂತಿರುವುದು ಇಲ್ಲಿನ ವೈಶಿಷ್ಟ್ಯ. ಈ ಕಥಾವ್ಯತ್ಯಾಸದಿಂದ, ಆದಿಕಾವ್ಯದ 'ಗಾನವಿಶಾರದ' ರಾದ ಲವಕುಶರು, ಇಲ್ಲಿ ಕೇವಲ ಕಥೆ ಕೇಳಿ ಹೂಗುಟ್ಟುವ ಕಿರುಮಕ್ಕಳಂತೆ ತೋರುತ್ತಾರೆ. ರಾಮಮಹಿಮೆಯನ್ನು ವಾಲ್ಮೀಕಿಯಿಂದಲೇ ಹೇಳಿಸುವ ಉದ್ದೇಶವು ಕವಿ ಕುಮಾರ ವಾಲ್ಮೀಕಿಗಿದ್ದಿರಬಹುದು.

## ರಾಮನ ವಂಶವೃಕ್ಷ

| ವಾಲ್ಮೀಕಿ ರಾಮಾಯಣದಲ್ಲಿ ಬರುವ ರಾಮನ (ದಶರಥನ) ವಂಶಪರಂಪರೆ ಹೀಗಿದೆ | ಕುಮಾರ ವಾಲ್ಮೀಕಿಯ ತೊ. ರಾ. ದಲ್ಲಿ ದಶರಥ ವಂಶ ಚಿತ್ರ[7] |
|---|---|
| ಅನಾದಿ–ಅಗೋಚರ ಬ್ರಹ್ಮವಸ್ತು | ಬ್ರಹ್ಮ |
| ಬ್ರಹ್ಮ | ಮರೀಚಿ |
| ಮರೀಚಿ | ಕಶ್ಯಪ |
| ಕಶ್ಯಪ | ಸೂರ್ಯ |
| ವಿವಸ್ವಂತ | ಮನು |
| ಮನು | ಕುಕ್ಷಿ |
| ಇಕ್ಷ್ವಾಕು (ಅಯೋಧ್ಯಾಧಿಪತಿಗಳಲ್ಲಿ ಮೊದಲಿನವನು) | ವಿಕುಕ್ಷಿ |
| ಕುಕ್ಷಿ | ಇಕ್ಷ್ವಾಕು |

1. ವಾ. ರಾ. I. ೪-೫.
2. ಈ ರಾಜಪುತ್ರರು ರಾಮನ ಮಕ್ಕಳೆಂದು ಹೇಳಿಲ್ಲ, ರಾಮನೂ ಅವರ ರಾಜಲಕ್ಷಣಗಳನ್ನು ಗುರುತಿಸುತ್ತಾನೆ.
3. ಅವರು ವಾಲ್ಮೀಕಿ ಆಶ್ರಮದಲ್ಲಿ ಸೀತೆಯು ಹೆತ್ತ ಮಕ್ಕಳು ಎಂಬ ವಿಚಾರವಿಲ್ಲ. ವಾ. ರಾ. I ೪-೩೫.
4. ಲವಕುಶರು-'ಕುಶೀಲವರು' ಎಂಬ ಪ್ರತೀತಿಗೂ ಅವಕಾಶವಿಲ್ಲ. ಇದು ನಂತರ ಹುಟ್ಟಿಕೊಂಡ ಕಥೆ.
5. ವಾ. ರಾ. I. ೪-೨೯, ೩೬.
6. ತೊ. ರಾ. I.
7. ತೊ. ರಾ. I ೩/೧೨-೧೬.

ವಿಕುಕ್ಷಿ
|
ಬಾಣ
|
ಅನರಣ್ಯ
|
ಪೃಥು
|
ತ್ರಿಶಂಕು
|
ಧುಂಧುಮಾರ
|
ಯುವನಾಶ್ವ
|
ಮಾಂಧಾತೃ
|
ಸುಸಂಧಿ
|
ಧ್ರುವಸಂಧಿ — ಪ್ರಸೇನಜಿತ್
|
ಭರತ
|
ಅಸಿತ
|
ಸಗರ
|
ಅಸಂಮಜ
|
ಅಂಶುಮಂತ
|
ದಿಲೀಪ
|
ಭಗೀರಥ
|
ಕಕುತ್ಸ್ಥ
|
ರಘು
|
ಪ್ರವೃದ್ಧ (ಕಲ್ಮಾಷಪಾದ)
|
ಶಂಖಣ
|
ಸುದರ್ಶನ

ದಿಲೀಪ
|
ರಘು
|
ಅಜ
|
ದಶರಥ
|
ಶ್ರೀರಾಮ

ಅಗ್ನಿವರ್ಣ
|
ಶೀಘ್ರಗ
|
ಮರು
|
ಪ್ರಶುಶ್ರುಕ
|
ಅಂಬರೀಷ
|
ನಹುಷ
|
ಯಯಾತಿ
|
ನಾಭಾಗ
|
ಅಜ
|
ದಶರಥ[1]

ಕುಮಾರವಾಲ್ಮೀಕಿಯು–ಕಾಳಿದಾಸನು 'ರಘುವಂಶ'ದಲ್ಲಿ ಹೇಳಿದ ದಿಲೀಪ, ರಘು, ಅಜ, ದಶರಥ–ಇವರು ತಂದೆ ಮಗ ಸಂಬಂಧದಿಂದ ಹೇಳಿರುವುದನ್ನೆ–ಸ್ವೀಕರಿಸಿದ್ದಾನೆ.[2]

### ದಶರಥ ಕಂಡ 'ದರ್ಪಣದ ನೋಟ'

ಬಹುಕಾಲ ಅಯೋಧ್ಯೆಯನ್ನಾಳಿದ ದಶರಥನು ಒಮ್ಮೆ "ದರ್ಪಣದ ನೋಟದಲಿ ಜರಾತಿರೇಕದ ಚಿಹ್ನೆಗಳನ್ನು

1. ವಸಿಷ್ಠರು ಜನಕರಾಜ, ಶತಾನಂದರನ್ನುದ್ದೇಶಿಸಿ ಈ ಪೀಳಿಗೆಯನ್ನು ತಿಳಿಸಿದರು. ವಾ. ರಾ. I ೭೦–೨೦-೪೫.
2. ಕಾಳಿದಾಸನ 'ರಘುವಂಶದ',

ವೈವಸ್ವತೋ ಮನುರ್ನಾಮ ಮಾನನೀಯೋ ಮನೀಷಿಣಾಮ್ ।
ಆಸೀನ್ಮಹೀಕ್ಷಿತಾಮಾದ್ಯಃ ಪ್ರಣವಶ್ಛಂದಸಾಮಿವ ॥
(ರಘುವಂಶ ೧-೧೧)–ಇದನ್ನನುಸರಿಸಿ

ಕುಮಾರ ವಾಲ್ಮೀಕಿಯು,

ಭೂಮಿಯಲಿ ಜನಿಸಿದನು ನಿಗಮ
ಸ್ತೋಮಕಾದಿಪ್ರಣವದೊಲು-
ದ್ದಾಮ ಕುಕ್ಷಿನೃಪಾಲ ಜನಿಸಿದನಾಮಹೀಪತಿಗೆ
(ತೊ. ರಾ. I ೧-೧೩)

ಹೇಳಿ ಆ ಮಹಾಕವಿಯ ಪ್ರಭಾವವನ್ನು ವ್ಯಕ್ತಪಡಿಸಿದ್ದಾನೆ.

ಕಾಳಿದಾಸನು ಹೇಳಿದ 'ವಂಶಾನುಕ್ರಮ'ವು ಹರಿವಂಶಪುರಾಣ (೨೪-೨೬), ಲಿಂಗಪುರಾಣ (೧-೬೧), ಬ್ರಹ್ಮಪುರಾಣ (೮. ೪೫-೪೬), ವಿಷ್ಣುಪುರಾಣ, ಪ್ರತಿಮಾ ನಾಟಕ (ಅಂಕ-೧) ಪದ್ಮಪುರಾಣ ಪಾತಾಳಖಂಡ-ಭವಿಷ್ಯಪುರಾಣ (ಪ್ರತಿಸರ್ಗ ಪರ್ವ ೧, ೨, ೩-೬)ಗಳಲ್ಲಿದೆ.

ಅಗ್ನಿಪುರಾಣದಲ್ಲಿಯೂ ಇದನ್ನನುಸರಿಸಿ ವಂಶಾನುಕ್ರಮವು ಹೀಗಿದೆ:

ಕಕ್ಷುತ್ಸಸ್ಯ ರಘುಸ್ತಸ್ಮಾದಜೋ ದಶರಥಸ್ತತಃ
ಅಗ್ನಿಪುರಾಣ ೬-೩.-೪

(ಎಂದು ಕಕ್ಷುತ್ಸ್ಥ, ರಘು, ಅಜ ದಶರಥ–ಎಂಬ ಅನುಸರಣೆಯಿದೆ)

ಕಂಡು" ತನಗಿನ್ನು ಸಂತತಿ ಪ್ಟುಗೂಡದೆಂದು ಚಿಂತಿಸುತ್ತಾನೆ.[1] ಆದಿಕವಿಯಲ್ಲಿ ಹೀಗಿಲ್ಲ. ಮಕ್ಕಳಿಲ್ಲದ ತಾನು ಸಂತತಿಗೋಸ್ಕರ ಅಶ್ವಮೇಧವನ್ನೇಕೆ ಮಾಡಬಾರದು ?ಎಂದು ದಶರಥನು ಯೋಚಿಸುತ್ತಾನೆ.[2]

ದಶರಥನು ದರ್ಪಣದ ನೋಟದಿಂದ ಚಿಂತೆ ತಾಳುವುದು–ಜೈನಕಾವ್ಯಗಳ ಪ್ರಭಾವದಿಂದಲೇ ಇರಬೇಕು.[3]

## ಯಜ್ಞಭವಿಷ್ಯ

ವಾಲ್ಮೀಕಿ ರಾಮಾಯಣದಲ್ಲಿ ಸುಮಂತ್ರನು–ನೆನಪಿಸಿದ ಸನತ್ಕುಮಾರರ ಭವಿಷ್ಯವಾಣಿಯಂತೆ ದಶರಥನು ಪುತ್ರಕಾಮೇಷ್ಟಿಯನ್ನು ಕೈಗೊಳ್ಳುತ್ತಾನೆ.[4]

ಅಧ್ಯಾತ್ಮ ರಾಮಾಯಣದಲ್ಲಿ ವಸಿಷ್ಠನು ದಶರಥನಿಗೆ ಯಜ್ಞಕೈಗೊಳ್ಳಲು ಸೂಚಿಸುತ್ತಾನೆ.[5] ಇದನ್ನನುಸರಿಸಿ, ಕುಮಾರ ವಾಲ್ಮೀಕಿಯು ವಸಿಷ್ಠನ ಹೇಳಿಕೆಯನ್ನೇ ಉಲ್ಲೇಖಿಸಿದಂತಿದೆ.[6]

ಸುಮಂತ್ರನು ಹೇಳುವ "ತಾಂಡವಪಿತ ಶಾಪದಂತೆ ದಶರಥನಿಗೆ ಪುತ್ರಲಾಭವೆಂಬ" ಸೂಚನೆ,[7] ವರಪಿಂಡ ಪ್ರಸಾದೋತ್ಕರದಲಹರು ಆತ್ಮಜರು ಎಂಬ ಭವಿಷ್ಯ[8]–ಕುಮಾರ ವಾಲ್ಮೀಕಿಯ ಕಲ್ಪನೆಗಳೇ. ಎಲ್ಲವನ್ನೂ ಮೊದಲಾಗಿಯೇ ಹೇಳಿ ಪ್ರಕಟಿಸುವ ಕುಮಾರ ವಾಲ್ಮೀಕಿಯ ಆತುರದಿಂದ ಕಥನದಲ್ಲಿ ಕುತೂಹಲಕ್ಕೆ ಅವಕಾಶ ಕಡಿಮೆಯಾಗಿದೆ.

## ಪಾಯಸ ವಿತರಣೆ

ವಾಲ್ಮೀಕಿ ರಾಮಾಯಣದಲ್ಲಿ, ಪಾಯಸವು ಕೌಸಲ್ಯೆಗೆ 1/2, ಸುಮಿತ್ರೆಗೆ 3/8, ಕೈಕೆಗೆ 1/8 ಅಂಶಗಳಾಗಿ ವಿತರಣೆಯಾದಂತಿದೆ.[9] ಭರತನನ್ನು,

ಸಾಕ್ಷಾದ್ವಿಷ್ಣೋಶ್ಚತುರ್ಭಾಗಃ ಸರ್ವೈಃ ಸಮುದಿತೋಗುಣೈಃ[10]–ಎಂದೂ ; ಲಕ್ಷ್ಮಣ, ಶತ್ರುಘ್ನರನ್ನು ವಿಷ್ಣೋರರ್ಧಸಮನ್ವಿತೌ[11]–ಎಂದೂ ವರ್ಣಿಸುವ ಹೇಳಿಕೆಗಳು ಮೇಲಿನ ಪಾಯಸವಿತರಣೆಯ ಕ್ರಮಕ್ಕೆ ಸರಿಹೊಂದುತ್ತವೆ.[12]

---

1. ತೊ. ರಾ. I ೪-೧.
2. ವಾ. ರಾ. I ೮-೨.
3. (ಅ) ಕುಮಾರ ವಾಲ್ಮೀಕಿಯಿಂದ ಪ್ರಭಾವಿತನಾದ ಬತ್ತಲೇಶ್ವರನು ತನ್ನ ರಾಮಾಯಣದಲ್ಲಿ ದಶರಥನು ಮುಕುರವ ನೋಡಿ ಕೆನ್ನೆಯ ನೆರೆಯ ಕಂಡು, ನಾಚಿ, ಸಾಕಿನ್ನೆನಗೆ ಅರಸುತನವೆನುತ ನಿರ್ಧರಿಸಿ, ರಾಮಪಟ್ಟಾಭಿಷೇಕಕ್ಕೆ ಮನಮಾಡಿದಂತೆ ಹೇಳುತ್ತಾನೆ (ಬತ್ತಲೇಶ್ವರನ 'ಕೌಶಿಕ ರಾಮಾಯಣ' ೩–೨೭)

   (ಆ) ವೆಂಕಾಮಾತ್ಯ ಕವಿ ವಿರಚಿತ "ಶ್ರೀಮದ್ರಾಮಾಯಣದಲ್ಲಿ" ದಶರಥನು 'ಮುಕುರಮಂದಿರ ಕೈದಲಲ್ಲಿ ನಿಜ ಬಿಂಬ ಪೊಳೆಯೆ ನರೆ ನಿರೀಕ್ಷಿಸಿ' ನೊಂದುಕೊಳ್ಳುತ್ತಾನೆ (ಬಾಲಕಾಂಡ, ೫–೬೯)

   (ಇ) ಹಿಂದೀ 'ರಾಮ ಚರಿತಮಾನಸ'ದಲ್ಲಿ–ಕನ್ನಡಿಯ ನೋಟದಿಂದ ದಶರಥನು ತನ್ನ ಕೂದಲು ಬಿಳಿಯಾದುದನ್ನು ಕಂಡು ರಾಮನಿಗೆ ಪಟ್ಟಕಟ್ಟುವ ಕಡೆಗೆ ಮನಹರಿಸುತ್ತಾನೆ (ಸಂಗ್ರಹಾನುವಾದ–ಪು. ೯೬)
4. ವಾ. ರಾ. I ೯–೨., ೧೧ ೧ರಿಂದ ೧೦.
5. ಅ. ರಾ. I ೩-೪, ೫.
6. ತೊ. ರಾ. I ೪-೧೧, ೧೨.
7. ಇದೇ. ೫–೭.
8. ಇದೇ. ೫-೯.
9. ವಾ. ರಾ. I ೧೬-೨೬ ರಿಂದ ೨೮. ಈ ಶ್ಲೋಕಗಳ ಅರ್ಥ, ತಾತ್ಪರ್ಯಗಳ ವಿಸ್ತಾರವಾದ ವಿವೇಚನೆಯನ್ನು ಬಾಲಕಾಂಡ, ಪು. ೧೧೨ ಮತ್ತು ೪೨೪-೪೨೬ರಲ್ಲಿ ಶ್ರೀ ರಂಗನಾಥ ಶರ್ಮರು ನಡೆಸಿರುತ್ತಾರೆ.
10. ವಾ. ರಾ. I ೧೮–೧೩.
11. ಇದೇ. I ೧೮-೧೩-೧೪.
12. ವಾ. ರಾ. ದ ಮೇಲಿನ ಶ್ಲೋಕಗಳಿಗೆ ಗೋವಿಂದರಾಜ ಮತ್ತು ತಿಲಕ ವ್ಯಾಖ್ಯಾನಗಳಲ್ಲಿ ಪರಸ್ಪರ ಭಿನ್ನವಾದ ತಾತ್ಪರ್ಯವನ್ನು ಕೊಡಲಾಗಿದೆ. ತಿಲಕ ವ್ಯಾಖ್ಯಾನವು ದಶರಥನ ನಾಲ್ವರು ಮಕ್ಕಳಲ್ಲಿ ಪ್ರತಿಯೊಬ್ಬನೂ, ಪಾಯಸದ 1/4 ಅಂಶದಿಂದ ಜನಿಸಿದನು ಎನ್ನುತ್ತದೆ. ವಿಶೇಷ ವಿವರಣೆಗೆ K. S. R. Shastri-Studies in Ramayna p. 54-62 ನೋಡಬಹುದು.

ಅಧ್ಯಾತ್ಮ ರಾಮಾಯಣದಲ್ಲಿ ಕೌಸಲ್ಯೆ, ಕೈಕೇಯಿ–ಇವರಿಬ್ಬರಲ್ಲಿ ಪ್ರತಿಯೊಬ್ಬರಿಗೂ 1/4 ಭಾಗದಷ್ಟು ಮತ್ತು ಸುಮಿತ್ರೆಗೆ 1/2 ಭಾಗದಷ್ಟು ಸಂದಿತೆಂದು ಅರ್ಥವಾಗುತ್ತದೆ.[1]

ಕುಮಾರ ವಾಲ್ಮೀಕಿಯು ಇದನ್ನೇ ಅನುಸರಿಸಿದ್ದಾನೆ.

ತರುಣ ಕೇಳ್ಕೈ ಭಾಗವೆರಡರ
ಲೆರಡು ಭಾಗಂಗಳು ಸುಮಿತ್ರಾ
ತರುಣಿಗಾದವು ಸೇರಿದವು ಪೂರ್ಣಾಂಶ ಭಾಗಗಳು
ಹಿರಿಯರಸಿ ಕಿರಿಯರಸಿಯವರಿ
ಬ್ಬರಿಗೆ ಮೂವರಿಗಂತು ನಾಲ್ಕರ
ಪರಿಗಣಿತ ಪರಮಾನ್ನ ಸಂಘಟಿಸಿದುದು ಭಾಗೆಯಲಿ[2]

ರಘುವಂಶದಲ್ಲೂ ಪಾಯಸ ವಿತರಣಾ ಕ್ರಮವು ವಾಲ್ಮೀಕಿ ರಾಮಾಯಣಕ್ಕನುಗುಣವಾಗಿಲ್ಲ.[3] ಅದು ಕುಮಾರ ವಾಲ್ಮೀಕಿಯು ಹೇಳಿದ ರೀತಿಯಲ್ಲಿದೆ. ಇದರಿಂದ ಕುಮಾರ ವಾಲ್ಮೀಕಿಯು ಅಧ್ಯಾತ್ಮ ರಾಮಾಯಣದೊಂದಿಗೆ, ರಘುವಂಶವನ್ನೂ ಗಮನಿಸಿರಬಹುದು ಎನಿಸುತ್ತದೆ.[4]

### ರಾಮ ಜನನ ತಿಥಿ–ಕಾಲ

ವಾಲ್ಮೀಕಿ ರಾಮಾಯಣದಲ್ಲಿ ಹೇಳಲಾದ ರಾಮಜನನ ಕಾಲವನ್ನು[5] ಜ್ಯೋತಿಶ್ಶಾಸ್ತ್ರದ ಪ್ರಕಾರ ಗೊತ್ತುಪಡಿಸಿ, ಜಾತಕವನ್ನು ಸಾಂಪ್ರದಾಯಿಕವಾಗಿ ತಿಳಿಸಿದ್ದಾರೆ.[6]

ವೈವಸ್ವತಮನ್ವಂತರದ ತ್ರೇತಾಯುಗದಲ್ಲಿ ಮೂವತ್ತು ಸಾವಿರ ವರ್ಷಗಳು ಅವಶಿಷ್ಟವಾಗಿರುವಾಗ ಪ್ರಾಪ್ತವಾದ ವಿಳಂಬಿ ನಾಮ ಸಂವತ್ಸರದ ಮೇಷಮಾಸ ಚೈತ್ರಶುಕ್ಲ ನವಮಿ[7] ಬುಧವಾರ ಪುನರ್ವಸು ನಕ್ಷತ್ರ ಮಧ್ಯಾಹ್ನ ಸಮಯ

---

1. ಅಧ್ಯಾತ್ಮ ರಾಮಾಯಣ I ೩–೧೦ ರಿಂದ ೧೨.
2. ತೊ. ರಾ. I ೭–೫೮.
3. ರಘುವಂಶ, ೧೦–೫೪ ರಿಂದ ೫೭.

ರಘುವಂಶದ ವ್ಯಾಖ್ಯಾನಕಾರನಾದ ಮಲ್ಲಿನಾಥನು, ಕಾಳಿದಾಸನ ಈ ವಿತರಣಾಕ್ರಮವು ಆದಿಕಾವ್ಯಕ್ಕನುಗುಣವಾಗಿಲ್ಲ ಎಂದು ಸ್ಪಷ್ಟಪಡಿಸುತ್ತಾನೆ. ಅಲ್ಲದೆ 'ನರಸಿಂಹ ಪುರಾಣ'ದ ಈ ಮಾತನ್ನು ಉದ್ಧರಿಸುತ್ತಾನೆ.

ತೇಪಿಂಡ ಪ್ರಾಶನೇ ಕಾಲೇ ಸುಮಿತ್ರಾಯೈಮಹೀಪತೇಃ
ಪಿಂಡಾಭ್ಯಾಮಲ್ಪ ಮಲ್ಪಂತುಸ್ವಭಗಿನ್ಯೈಪ್ರಯಚ್ಛತಃ

4. ಭೋಜರಾಜನ ಚಂಪು ರಾಮಾಯಣ, ಕ್ಷೇಮೇಂದ್ರನ ರಾಮಾಯಣ ಮಂಜರಿಗಳಲ್ಲೂ ಪಾಯಸ ವಿತರಣಾ ವಿಧಾನ ವಾಲ್ಮೀಕಿಗನುಗುಣವಾಗಿಲ್ಲ, ಕಾಳಿದಾಸಾನುಗುಣವಾಗಿದೆ.

"ವಾಲ್ಮೀಕಿಯ ಶ್ಲೋಕಗಳನ್ನು ಅವರು ಆ ರೀತಿಯಿಂದಲೇ ಅರ್ಥಮಾಡಿಕೊಂಡಿರಬೇಕು–ಎಂದು ಮಾತ್ರ ಊಹಿಸ ಬೇಕಾಗಿದೆ, ಅಲ್ಲದೆ ವಾಲ್ಮೀಕಿಯ ವಿರುದ್ಧವಾದ ಕ್ರಮವನ್ನು ಅವರು ಅನುಸರಿಸುವುದಕ್ಕೆ ವಿಶೇಷವಾದ ಕಾರಣಗಳೇನೂ ಕಂಡು ಬರುವುದಿಲ್ಲ" ರಂಗನಾಥಶರ್ಮ–ಬಾಲಕಾಂಡ ಅನುಬಂಧ ಪು. ೫೬೬.

ಆನಂದರಾಮಾಯಣ (ಸಾರಕಾಂಡ, I ೧೦೨–೧೦೮)ದಲ್ಲಿ ಪಾಯಸದ ಒಂದು ಅಂಶವು ಹನುಮಂತನ ಜನನಕ್ಕೂ ಕಾರಣವಾದಂತೆ ತಿಳಿಸುತ್ತದೆ. ಇದನ್ನು ತೊ. ರಾ. ಸೂಚಿಸುವುದಿಲ್ಲ.

5. ವಾ. ರಾ. I ೧೮, ೮–೧೦.
6. ವಾಲ್ಮೀಕಿ ರಾಮಾಯಣದಲ್ಲಿ ಬರುವ ಜ್ಯೋತಿಶಾಸ್ತ್ರದ ಕುರಿತು–ಜಾನಕಿನಾಥಶರ್ಮರ ಲೇಖನ ನೋಡಬಹುದು.
7. ಮೇಷದಲ್ಲಿ ರವಿಯು ಇದ್ದು, ಚಂದ್ರನು ಪುನರ್ವಸುವಿನ ನಾಲ್ಕನೆಯ ಚರಣ (ಕರ್ಕಾಟಕ)ದಲ್ಲಿರಲು ಅವರ ಅಂತರವು ೯೩ ೧/೩ ಡಿಗ್ರಿಗಳಾಗುತ್ತವೆ. ೧೨ಡಿಗ್ರಿಗೆ ಒಂದು ತಿಥಿಯಂತೆ ೯೩ ೩/೧ ಡಿಗ್ರಿಗೆ ಅಷ್ಟಮಿಯೇ ಕಳೆಯುವುದಿಲ್ಲ. ಹೀಗಿರುತ್ತಾ ಅಂದು ನವಮಿ ಎನ್ನಲು ಗಣಿತವು ಒಪ್ಪುವುದಿಲ್ಲ –ಎಂದು ಜ್ಯೋತಿಃಶಾಸ್ತ್ರದಲ್ಲಿ ಪರಿಣತಿಯುಳ್ಳ ಶ್ರೀ ಮಂದಾರ ಕೇಶವ ಭಟ್ಟರು, ವಿದ್ವಾನ್–ಇವರು ನನಗೆ ಬರೆದು ವಿವರಿಸಿರುತ್ತಾರೆ.

ಕರ್ಕಾಟಕ ಲಗ್ನ ಕರ್ಕಾಟಕ ರಾಶಿಯಲ್ಲಿ ಶ್ರೀ ರಾಮಚಂದ್ರನ ಜನನ. ಆ ಕಾಲದಲ್ಲಿ ಸೂರ್ಯ, ಕುಜ, ಗುರು, ಶುಕ್ರ ಮತ್ತು ಶನಿ–ಈ ಪಂಚಗ್ರಹಗಳು ಉಚ್ಚವಾಗಿದ್ದರು. ಚಂದ್ರನು ಸ್ವಕ್ಷೇತ್ರನಾಗಿಯೂ, ಬುಧನು ನೀಚನಾಗಿಯೂ ಇದ್ದರು. ಜನ್ಮಕಾಲದಲ್ಲಿ ಗುರು ದಶಾಶೇಷ ೪ ವರ್ಷ.[1]

ಕುಮಾರ ವಾಲ್ಮೀಕಿಯು ರಾಮಜನನದ ಕಾಲವನ್ನು ಹೀಗೆ ಸೂಚಿಸಿದ್ದಾನೆ :

ತರಣಿಯೇಕಾದಶದ ದಾನವ
ಗುರು ನಿರೀಕ್ಷೆಯಲಿಂದುವಿನ ಶುಭ
ಕರದವೃಷ್ಟಿಯಲಾಂಗಿರಸ ಸೌಮ್ಯರ ಸುಕೇಂದ್ರದಲಿ
ಪರಮ ಚೈತ್ರದ ಶುದ್ಧ ನವಮಿಯ
ವರಪುನರ್ವಸು ತಾರೆಯಲಿ ಹಿರಿ
ಯರಸಿ ಬೆಸಲಾದಳು ಭವಸ್ಥಿತಿಲಯ ವಿವರ್ಜಿತನ[2]

ರಾಮಜನನವನ್ನು ಹೇಳುವ ಕುಮಾರ ವಾಲ್ಮೀಕಿಯ ಷಟ್ಪದಿಯಲ್ಲಿ ಕೊಡಲಾದ ಅಂಶಗಳಿಂದಲೇ ರಾಮನ ಜಾತಕ ನಿರ್ಣಯಿಸುವುದು ದುಸ್ಸಾಧ್ಯ. ಇಲ್ಲಿನ ಅಪೂರ್ಣತೆ ಮತ್ತು ಅಸಮರ್ಪಕತೆಗಳನ್ನು ಹೀಗೆ ಸಂಗ್ರಹಿಸಬಹುದು :

೧. ಲಗ್ನ ಹೇಳಿಲ್ಲ (ವಾ. ರಾ. I ೧೮-೯ ದಲ್ಲಿ ಕರ್ಕಾಟಕ ಲಗ್ನ ಎಂದಿದೆ)
೨. ಕುಜನ ಸ್ಥಾನವನ್ನು ಹೇಳಿಲ್ಲ (ವಾ. ರಾ. ದಲ್ಲಿ ರವಿ, ಕುಜ, ಶನಿ, ಗುರು, ಶುಕ್ರ–ಈ ಐದು ಗ್ರಹಗಳೂ ಎಂದಿದೆ)
೩. ಕುಮಾರ ವಾಲ್ಮೀಕಿಯು ಹೇಳಿದ ಅಂಶಗಳನ್ನು ಗಮನಿಸಿದರೆ, ಗುರು ಮಾತ್ರ ಉಚ್ಚನಿದ್ದು. ಉಳಿದ ಯಾವ ಗ್ರಹಗಳಿಗೂ ಉಚ್ಚ ಸ್ಥಾನವಿರುವುದಿಲ್ಲ. ಇದರಿಂದ ರಾಜ ಲಕ್ಷಣ ಸೂಚಕವಾದ ಯಾವ ಮಹಾಯೋಗಗಳೂ ಸೂಚಿತವಾಗುವುದಿಲ್ಲ[3]

| ವಾಲ್ಮೀಕಿ ರಾಮಾಯಣದಲ್ಲಿ | ತೊರವೆ ರಾಮಾಯಣದಲ್ಲಿ |
|---|---|
| ಅ) ರವಿಯು ಲಗ್ನದಿಂದ ದಶಮದಲ್ಲಿದ್ದಾನೆ. | ಏಕಾದಶದತರಣಿ |
| ಆ) ಚಂದ್ರನ ಯೋಗವಿದೆ, | ಇಂದುವಿನ ಶುಭಕರದ ದೃಷ್ಟಿ |
| ಇ) ಅಂಗೀರಸನ ಕೇಂದ್ರವಿದೆ. | ಆಂಗೀರಸ ಸೌಮ್ಯರ ಸುಕೇಂದ್ರ |
| ಈ) ಚಕ್ರವರ್ತಿತ್ವ ಸೂಚಕವಾದಮಹಾಯೋಗಗಳು ಇವೆ. | ಮಹಾಯೋಗಗಳ ಸೂಚನೆಯಿಲ್ಲ. |

ಇಷ್ಟರಿಂದ ಕುಮಾರ ವಾಲ್ಮೀಕಿಯು ಜ್ಯೋತಿಃಶಾಸ್ತ್ರದಲ್ಲಿ ಪರಿಣತನಲ್ಲ ಎಂದು ನಿರ್ಣಯಿಸುವುದು ಸಾಧು

---

" ರಾಮಜನ್ಮಕ್ಕೆ ಈ ಸ್ಥಳದಲ್ಲಿ ನಿರೂಪಿಸಿರುವ ಕುಂಡಲಿ ವಾಸ್ತವವಾಗಿ ಸಂಭವನೀಯವಲ್ಲವೆಂದು ದಿವಾನ್ ಬಹದ್ದೂರ್ ಸ್ವಾಮಿಕಣ್ಣು ಪಿಳ್ಳೆಯವರು ಸಿದ್ಧಾಂತಮಾಡಿದ್ದಾರೆ."–ಮಾಸ್ತಿ–ಆದಿಕವಿ ವಾಲ್ಮೀಕಿ, ಪು. ೨೩೨.

1. ರಂಗನಾಥಶರ್ಮ–ರಾ. ಬಾಲಕಾಂಡ, ಅನುಬಂಧ ಪು. ೪೨೮.

2. ತೊ. ರಾ. I ೮-೬.

3. ಈ ವಿಚಾರವಾಗಿ ನನಗೆ ಶಾಸ್ತ್ರೀಯ ವಿವರಗಳನ್ನು ನೀಡಿ ನೆರವಾದವರು ಜ್ಯೋತಿಷಿ ವಿದ್ವಾನ್ ಯಚ್. ವೆಂಕಟ ರಮಣಭಟ್ಟರು.

ತೊರವೆ ರಾಮಾಯಣಕ್ಕನುಗುಣವಾದ (ಅಪೂರ್ಣ) ರಾಮನ ಜನನಕುಂಡಲಿ, ಮತ್ತು ವಾ. ರಾ., ಅ. ರಾ ರಾಮ ಚರಿತಮಾನಸಗಳಿಗನುಗುಣವಾದ ರಾಮಜನನ ಕುಂಡಲಿಗಳನ್ನು ಅನುಬಂಧ ೪ರಲ್ಲಿ ಕೊಡಲಾಗಿದೆ.

ವಾದೀತೇ ? ಅವನ ರಚನೆಯು ಕಾಲಾಂತರದಲ್ಲಿ ವಿಕ್ಷಿಪ್ತಗೊಂಡು, ಇಂದಿನ ವಿರೂಪ ಒದಗಿರಬೇಕು ಎಂದು ತರ್ಕಿಸುವುದೇ ಉಚಿತ.[1]

## ಅಂಗದನಲ್ಲಿ ಇಂದ್ರಾವೇಶ

ಕುಮಾರ ವಾಲ್ಮೀಕಿಯು ರಾಮಾದ್ಯವತಾರಗಳನ್ನು ಹೇಳುತ್ತಾ 'ಪುರಂದರನು ನೆಲೆಗೊಂಡನಂಗದನಂಗಶೋಭೆಯಲಿ' ಎನ್ನುತ್ತಾನೆ.[2] ಇದಕ್ಕೆ ವಾಲ್ಮೀಕಿಯ ಕೃತಿಯಲ್ಲಿ ಆಧಾರವಿಲ್ಲ. ಅಲ್ಲಿ 'ಇಂದ್ರನು ತನ್ನಂತೆ ವೀರನೂ ವಾನರೇಂದ್ರನೂ ಆದ ವಾಲಿಯನ್ನು ಪುತ್ರನನ್ನಾಗಿ ಪಡೆದನು' ಎಂದು ಮಾತ್ರ ಇದೆ.[3]

ಈ ವಿಚಾರದಲ್ಲಿ ಕವಿಯು ತನ್ನ ಗುರು ಮಧ್ವಾಚಾರ್ಯರ 'ಭಾರತ ತಾತ್ಪರ್ಯ–ನಿರ್ಣಯ'ದ ಕೆಳಗಿನ ಹೇಳಿಕೆಯನ್ನು ಅನುಸರಿಸಿದಂತಿದೆ :

> ಇಂದ್ರೋಽಂಗದೇ ಚೈವ ತತೋಂಗದೋಹಿ
> ಬಲೀ ನಿತಾಂತಂ ಸ ಬಭೂವ ಪಶ್ಚಾತ್[4]

"ಇಂದ್ರನು ಅಂಗದನಲ್ಲಿ ಪ್ರವಿಷ್ಟನಾದನು, ಆ ಕಾರಣದಿಂದ ಅಂಗದನೂ ಬಲಿಷ್ಠನಾದನು."

## ಮಾಯಾವತಾರಿಣಿ ಮಂಥರೆ

ಮಂಥರೆಯು ಮಾಯೆಯ ಅವತಾರ ಎನ್ನುವ ಕಲ್ಪನೆ ಕುಮಾರ ವಾಲ್ಮೀಕಿಯದು.[5] ಆದ ಕಾವ್ಯದಲ್ಲಿ ಆಕೆಯ ಕುರಿತಾಗಿ,

ಜ್ಞಾತೀ ದಾಸೀ ಯತೋಜಾತಾ ಕೈಕೇಯಾಸ್ತು ಸಹೋಷಿತಾ[6]–ಎಂದು ಮಾತ್ರ ಇದೆ. ಅವಳು ಎಲ್ಲಿ ಹುಟ್ಟಿದಳೋ, ಯಾರ ಮಗಳೋ ತಿಳಿಯದು. ಇದರಿಂದ 'ಯತೋಜಾತಾ' ಎಂಬ ನುಡಿಗೆ 'ಮಾಯೆಯ ಅವತಾರ' ಎಂದು ವ್ಯಾಖ್ಯಾನ ಮಾಡುವವರೂ ಇರಬಹುದು.[7] ಆದರೆ ವಾಲ್ಮೀಕಿಯು ಆಕೆಯನ್ನು ಕುಬ್ಜೆ ಎಂದೂ, ಪಾಪದರ್ಶಿನೀ–ಎಂದೂ ಸೂಚಿಸಿದ್ದಾನೆ.[8] ಅಲ್ಲಿ ಅವಳು ಕೆಲವು ಮಾನವೀಯ ದೌರ್ಬಲ್ಯಗಳಿಂದ ಕೂಡಿದ ಲೌಕಿಕ ವ್ಯಕ್ತಿಯಾಗಿಯೇ ಗೋಚರಿಸುತ್ತಾಳೆ.

ಇಂತಹ ಸಾಮಾನ್ಯ ಸ್ತ್ರೀ ಮಂಥರೆಯು, ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಅಸಾಮಾನ್ಯಳಾಗಿ, ರಾಮನ ಅವತಾರ ಕಾರ್ಯಕ್ಕೆ ನೆರವಾಗುವ 'ಮಾಯೆ'ಯಾಗಿದ್ದಾಳೆ. ರಾಮನ ಪಟ್ಟಾಭಿಷೇಕ ಸನ್ನಾಹ ಸಂದರ್ಭದಲ್ಲಿ ಈಕೆಯು 'ವಿಜ್ಞಾಸಾರಮುಖದಿಂದ ಆಗತ ಕಾರ್ಯವನರಿದು,' 'ರಾವಣನ ವಧೆಗೆ ಮನು ನಂದನನ ಎಬ್ಬಟ್ಟುವೆನು'[9]

---

1. ಕನ್ನಡದಲ್ಲಿ ತೊ. ರಾ. ದಿಂದ ಪ್ರಭಾವಿತವಾದ ಬತ್ತಲೇಶ್ವರನ 'ರಾಮಾಯಣದಲ್ಲಿ (೧-೬೭) ವಾಲ್ಮೀಕಿ ರಾಮಾಯಣಾನುಸಾರಿಯಾದ ಜನನ ಮುಹೂರ್ತವನ್ನು ಹೇಳಲಾಗಿದೆ. ಕಾವ್ಯ, ಮೃಗ, ವಿನಯ, ಜೂತ-ಮೊದಲಾದ ಶುಕ್ರ, ಮಕರ, ಮೀನ, ತುಲಾಗಳನ್ನು ಸೂಚಿಸುವ ಶಾಸ್ತ್ರಾನುಗುಣವಾದ ಪಾರಿಭಾಷಿಕ ಪದಗಳನ್ನು ಬಳಸಿರುವ ಕವಿಯು ಜ್ಯೋತಿಷದಲ್ಲಿ ಸಾಕಷ್ಟು ಪರಿಣತನೆಂದೇ ಹೇಳಬೇಕು.
2. ತೊ. ರಾ. I ೮-೬೭.
3. ವಾ. ರಾ. I ೧೭-೧೦.
4. ಮಧ್ವಾಚಾರ್ಯ-ಭಾರತ ತಾತ್ಪರ್ಯ.ನಿರ್ಣಯ, ೩-೮೦.
5. ತೊ. ರಾ. I ೮–೭೧.
6. ವಾ. ರಾ. II ೭-೧.
7. ಬಿ. ಎಸ್. ಸಣ್ಣಯ್ಯ–ತೊ. ರಾ. ಸಂಪುಟ ೨–ಪೀಠಿಕೆ, ಪು. ೨೧ರ ಅಡಿಟಿಪ್ಪಣಿ.
8. ವಾ. ರಾ. II ೭–೧೩.
9. ತೊ. ರಾ. II ೧–೨೩.

ಎನ್ನುತ್ತಾ, ಕೈಕೇಯಿಯನ್ನು ತನ್ನ 'ಮಾಯೆಯ ಕಟ್ಟೆಗೊಳಗಾಗಿಸುತ್ತಾಳೆ.' ಇದರಿಂದ ಆಕೆಯ ಕುರಿತಾಗಲೀ, ಮಾಯೆಯ ಪ್ರಭಾವಕ್ಕೊಳಗಾದ ಕೈಕೇಯಿಯ ಕುರಿತಾಗಿಯಾಗಲೀ ಯಾರಿಗೂ ತಿರಸ್ಕಾರ ಮೂಡುವಂತಿಲ್ಲ.

ಕುಮಾರ ವಾಲ್ಮೀಕಿಯು ನಿರೂಪಿಸಿದ ಈ ಕಥಾ ವೈಶಿಷ್ಟ್ಯಕ್ಕೆ ಸಾಕಷ್ಟು ಗಟ್ಟಿಯಾದ ಹಿನ್ನೆಲೆಯಿರುವುದನ್ನು ನಾವು ಗಮನಿಸಬಹುದು.

ವಾಲ್ಮೀಕಿಯ ಮಂಥರೆಯು ತನ್ನ ಸಹಜವಾದ 'ಪಾಪದರ್ಶಿತ್ವ'ಕ್ಕನುಗುಣವಾಗಿಯೇ ಕೈಕೇಯಿಗೆ ದುರ್ಬೋಧನೆ ಮಾಡಿದ್ದರೂ, ಅವಳ ಕೃತ್ಯಕ್ಕೆ ಏನಾದರೊಂದು ವಿಶಿಷ್ಟವಾದ ಕಾರಣವನ್ನು ನಂತರದ ಕವಿಗಳು, ಪುರಾಣಕರ್ತರು ಯೋಜಿಸದೆ ಬಿಡಲಿಲ್ಲ. ಅವರು ಸಂಯೋಜಿಸಿದ ಕಾರಣಗಳನ್ನು ಲೌಕಿಕ, ಅಲೌಕಿಕ–ಎಂದು ವರ್ಗೀಕರಿಸಬಹುದು.

### ಲೌಕಿಕ ಕಾರಣಗಳು

೧. ಒಂದು ಅಪರಾಧಮಾಡಿ ಅದಕ್ಕಾಗಿ ರಾಮನಿಂದ ಶಿಕ್ಷಿತಳಾದ ಮಂಥರೆಗೆ ಅವನ ಮೇಲೆ ವೈರ ಬೆಳೆಯಿತು ಎನ್ನುವುದು ಅಗ್ನಿಪುರಾಣದ ಹೇಳಿಕೆ.[1]

೨. ಕ್ಷೇಮೇಂದ್ರನ 'ರಾಮಾಯಣ ಕಥಾಮಂಜರಿ'ಯಲ್ಲಿ ಇಂತಹುದೇ ಕೋಪ ಕಾರಣದ ಕಲ್ಪನೆಯಿದೆ.[2]

೩. ಕಂಬ ರಾಮಾಯಣ.[3]

೪. ಕುಮಾರ ವಾಲ್ಮೀಕಿಯ ನಂತರದ ಬತ್ತಲೇಶ್ವರನ ರಾಮಾಯಣ.[4]

೫. ಈ ಯುಗದ ಮಹಾಕಾವ್ಯವೆನಿಸಿದ ಶ್ರೀ ರಾಮಾಯಣ ದರ್ಶನಂ.[5]

### ಅಲೌಕಿಕ ಕಾರಣಗಳು

೧. ಮಹಾಭಾರತದಲ್ಲಿ ಬರುವ ರಾಮೋಪಾಖ್ಯಾನದಂತೆ–ಗಂಧರ್ವ ಸ್ತ್ರೀ ಬ್ರಹ್ಮ ಶಾಪದಿಂದ ರಾಮಾವತಾರ ಕಾರ್ಯದಲ್ಲಿ ಸಹಕರಿಸಲು, ಕುಬ್ಜ ರೂಪ ತಳೆದು ಮಂಥರೆಯಾಗಿ ಜನಿಸುತ್ತಾಳೆ.[6]

೨. ಪದ್ಮಪುರಾಣದಲ್ಲಿ ಮಂಥರೆಯು 'ದೇವಾವಿಷ್ಟ ಚಿತ್ತಾ' ಎಂದು ವರ್ಣಿತೆಯಾಗಿದ್ದಾಳೆ.[7]

೩. ಆನಂದ ರಾಮಾಯಣದಲ್ಲಿ–ರಾಮೋಪಾಖ್ಯಾನದ ಅನುಸರಣೆಯಿದೆ.[8]

---

1. ಪಾದಾಗ್ರಹೀತ್ವಾ ರಾಮೇಣ ಕರ್ಷಿತಾ ಸಾಪರಾಧತಃ
   ತೇನ ವೈರೇಣ ಸಾ ರಾಮಂ ವನವಾಸಂ ಚ ಕಾಂಕ್ಷತಿ–ಅಗ್ನಿಪುರಾಣ ೭-೮.
2. ಶೈಶವೇ ಕಿಲ ರಾಮೇಣ ಪುರಾ ಪ್ರಣಯಕೋಪತಃ
   ಚರಣೇನಾಹತಾ ತತ್ರ ಚರಂ ಕೋಪಮುವಾಹ ಸಾ–ರಾಮಾಯಣ ಕಥಾಮಂಜರಿ ೧-೬೬೭.
3. ಕಂಬರಾಮಾಯಣ "ರಾಮನು ಬಾಲ್ಯದಲ್ಲಿ ತನ್ನ ಮೇಲೆ ಮಣ್ಣಿನ ಉಂಡೆಗಳನ್ನು ವಿನೋದಕ್ಕಾಗಿ (೨, ೨, ೪೧, ೫, ೮, ೩೨,) ಎಸೆದುದನ್ನು ಕಂಡು ಮಂಥರೆ ಕೋಪಿಸಿದಳು" (ಕಥಾಸಂಗ್ರಹ, ಪು. ೨೪).
4. ಬತ್ತಲೇಶ್ವರ ಕೃತ 'ಕೌಶಿಕ ರಾಮಾಯಣ'–೨-೭೦, ೭೧; ೩-೩೧-ಇಲ್ಲಿ ಸೀತಾ ಸ್ವಯಂವರ ಮಂಟಪದಲ್ಲಿ ಮಂಥರೆ ಅನುಚಿತ ವರ್ತನೆ ಮಾಡಿದ್ದಕ್ಕಾಗಿ, ರಾಮನಿಂದ ಶಿಕ್ಷಿತಳಾಗುತ್ತಾಳೆ; ವೈರ ಬೆಳೆಯುತ್ತದೆ.
5. ಶ್ರೀ ರಾಮಾಯಣದರ್ಶನಂ–ನಲ್ಲಿ ಮಂಥರೆಯು 'ಮಮತೆಯ ಮೂರ್ತಿ'ಯಾಗಿ, ಭರತನ ಬೆಂಗಡೆಯ ಮಂಗಳಮಯ ಶಕ್ತಿಯೂ ಆಗಿ ಗೋಚರಿಸುತ್ತಾಳೆ.
6. ಪಿತಾಮಹ ವಚಃಶ್ರುತ್ವಾ ಗಂಧರ್ವೀ ದುಂದುಭೀ ತತಃ
   ಮಂಥರಾ ಮಾನುಷೇ ಲೋಕೇ ಕುಬ್ಜಾ ಸಮಭವತ್ ತದಾ.
   ಮಹಾಭಾರತ-ರಾಮೋಪಾಖ್ಯಾನ, ೩-೨೭೬-೧೦.
7. ಪದ್ಮಪುರಾಣ, ಪಾತಾಳಖಂಡ, ಅಧ್ಯಾಯ ೧೫.
8. ಆನಂದ ರಾಮಾಯಣ, ಸಾರಕಾಂಡ, ೨-೨.
   ಮುಂದೆ ಈ ಕುಬ್ಜೆಯು (ಮಂಥರೆಯು) ದ್ವಾಪರ ಯುಗದಲ್ಲಿ ಕುಬ್ಜೆಯಾಗಿ ಜನಿಸುತ್ತಾಳೆ. ಆನಂದರಾಮಾಯಣ ಸಾರಕಾಂಡ, ೨-೩.

೪. ಅಧ್ಯಾತ್ಮ ರಾಮಾಯಣದಲ್ಲಿ, ರಾಮ ಪಟ್ಟಾಭಿಷೇಕವಾರ್ತೆ ತಿಳಿದ ದೇವತೆಗಳು, ಸರಸ್ವತಿಯನ್ನು ಪ್ರಾರ್ಥಿಸಿಕೊಂಡಂತೆ ಅವಳು ಮಂಥರೆಯನ್ನು ಪ್ರವೇಶಿಸುತ್ತಾಳೆ.[1]

೫. ಚಂಪೂ ರಾಮಾಯಣವು ಹೀಗನ್ನುತ್ತದೆ :

ಯಾಮೇ ವಾಹುರ್ನಿಶಿಚರ ಕುಲೋನ್ಮೂಲನೇ ಮೂಲಹೇತುಂ
ಯಾಸ್ಯಾಶ್ಚಿತ್ತಂ ಪ್ರಕೃತಿ ಕುಟಿಲಂ ಗಾತ್ರಮಿತ್ರಂ ಬಭೂವ
ಅಂಭೋಜಿನ್ಯಾಃ ಶಿಶಿರ ಸರಸಃ ಕಾಸರೀ ವಾಚ್ಛಸಂಭಃ
ಕೇಕೇಯ್ಯಾಃ ಸಾಹೃದಯಮುದಯಂ ಮಂಥರಾ ನಿರ್ಮಮಂಥಾ.[2]

೬. ಮಧ್ವಾಚಾರ್ಯರ ಭಾರತತಾತ್ಪರ್ಯನಿರ್ಣಯದಲ್ಲಿ ಮಂಥರೆಯು ಬ್ರಹ್ಮನಿಂದ ಶಪಿತೆಯಾದ ಜ್ಯೇಷ್ಠಾ ನಾಮಕಳು.[3]

೭. "ಸತ್ಯೋಪಾಖ್ಯಾನ"ದಲ್ಲಿ ಮಂಥರೆಯು ವಿರೋಚನನೆಂಬ ದೈತ್ಯನ ಮಗಳು. ವಿಷ್ಣುವಿನ ಆಜ್ಞೆಯಿಂದ ಇಂದ್ರನಿಂದ ಹತಳಾದಳು. ವಿಷ್ಣುವಿನ ಕುರಿತಾದ ಸೇಡು ತೀರಿಸಿಕೊಳ್ಳಲು, ಕೈಕೇಯಿಯ ದಾಸಿಯಾಗುತ್ತಾಳೆ.[4]

೮. ತತ್ವಸಂಗ್ರಹ ರಾಮಾಯಣದಲ್ಲಿ, ದೇವತೆಗಳು ಪ್ರಾರ್ಥಿಸಿದಂತೆ ಸರಸ್ವತಿಯು ಮಂಥರೆಯಲ್ಲಿ ಆವೇಶಳಾಗುತ್ತಾಳೆ.[5]

ಹೀಗೆ ರಾಮಕಥೆಗೆ ಹೊಸ ತಿರುವನ್ನು ಕೊಟ್ಟ ಮಂಥರೆಯ ಪಾತ್ರಕಲ್ಪನೆಯ ವಿವಿಧ ಮುಖಗಳನ್ನು ಗಮನಿಸಿದರೆ, ಕುಮಾರ ವಾಲ್ಮೀಕಿಯು ಅವಳನ್ನು "ಮಾಯೆಯ ಅವತಾರವೆಂದು ಕರೆದು ಅವಳಿಂದ ರಾವಣವಧಾಕಾರ್ಯಕೆ ಸಹಾಯವಾಯಿತೆಂದು ಹೇಳಿರುವುದು" ಸಹಜವೇ ಆಗಿದೆ.[6] ವಿಶಿಷ್ಟವೂ ಹೌದು.

## ವಿಶ್ವಾಮಿತ್ರಾಗಮನ

ಅಯೋಧ್ಯೆಯಲ್ಲಿ, ದಶರಥನು ತನ್ನ ಮಕ್ಕಳಿಗೆ ವಿವಾಹ ಮಾಡಬೇಕೆಂದು ಆಪ್ತರೊಡನೆ ವಿಚಾರಮಾಡುತ್ತಿರುವಷ್ಟರಲ್ಲಿ, ಅಲ್ಲಿಗೆ ವಿಶ್ವಾಮಿತ್ರನು ದಯಮಾಡಿಸುತ್ತಾನೆ.[7] ಅವನ ಆಗಮನದ ಉದ್ದೇಶವನ್ನು ಮೊದಲಾಗಿ ತಿಳಿಸದೆ, ವಾಲ್ಮೀಕಿಯು ನಮ್ಮ ಕುತೂಹಲವನ್ನು ಕೆರಳಿಸುತ್ತಾನೆ.[8]

---

1. ಅ. ರಾ. II ೨-೪.
   'ರಾಮಚರಿತ ಮಾನಸ'ದಲ್ಲಿ ಅಧ್ಯಾತ್ಮರಾಮಾಯಣದ ಕಥಾನುಸರಣೆ ಇದೆ.
2. ಚಂಪೂ ರಾಮಾಯಣ, ಅಯೋಧ್ಯಾ ಕಾಂಡ–೯.
3. ಭಾರತತಾತ್ಪರ್ಯನಿರ್ಣಯ, ೫–೨.
4. ಸತ್ಯೋಪಾಖ್ಯಾನ (ವೆಂಕಟೇಶ್ವರ ಪ್ರೆಸ್) ೧೦–೧೪.
5. ತತ್ತ್ವ ಸಂಗ್ರಹ ರಾಮಾಯಣ I ೬–೨.
6. ಮಂಥರೆಯಿಲ್ಲದೆಯೇ ರಾಮನ ವನವಾಸಗಮನ ಸಂಭವಿಸುವ ಕಥೆ ಭಾಸನ 'ಪ್ರತಿಮಾ' ನಾಟಕದಲ್ಲಿದೆ. ಜೈನ ರಾಮಾಯಣಗಳಲ್ಲೂ 'ಮಂಥರೆ'ಯ ಪ್ರಕರಣವಿಲ್ಲ.
   ಈ ಕುರಿತು ವಿಸ್ತಾರವಾದ ವಿವೇಚನೆಗೆ ಇದೇ ಲೇಖಕನ 'ರಾಮಾಯಣಗಳಲ್ಲಿ ಮಂಥರೆಯ ಬಹುಮುಖಚಿತ್ರಣ' ಎಂಬ ಲೇಖನ ನೋಡಬಹುದು. (ಯುಗಪುರುಷ–ಪರ್ಯಾಯಾಂಕ–೧೯೭೨)
7. ವಾ. ರಾ. I ೧೮-೩೭, ೩೮, ಮದುವೆಯ ವಿಚಾರ ಮಾತನಾಡುತ್ತಿರುವ ಸಂದರ್ಭದಲ್ಲಿ ಕಾಣಿಸಿಕೊಂಡ ವಿಶ್ವಾಮಿತ್ರನು ರಾಮನ ಮತ್ತು ಅವನ ಸೋದರರ ವಿವಾಹವನ್ನು ಏರ್ಪಡಿಸಿ, ಮರೆಯಾಗುತ್ತಾನೆ.
8. ವಿಶ್ವಾಮಿತ್ರನ ಆಗಮನ, ಸಂಪರ್ಕಗಳಿಂದ ರಾಮನಿಗಾದ ಪ್ರಯೋಜನಗಳನ್ನು ಡಿ. ವಿ. ಜಿ. ಯವರು ಬಾಲಕಾಂಡದ 'ಮುನ್ನುಡಿ'ಯಲ್ಲಿ ಪರಿಶೀಲಿಸಿದ್ದಾರೆ (ಪು. ೨೪).
   ಹಾಗೆಯೇ, ಕೆ. ಎಸ್. ರಾಮಸ್ವಾಮಿಶಾಸ್ತ್ರಿಗಳೂ Riddles of the Ramayana-ದ ಪು. ೬೫–೬೮ರಲ್ಲಿ ವಿಚಾರಿಸಿದ್ದಾರೆ.

ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಅಂತಹ ಕುತೂಹಲಕ್ಕೆ ಅವಕಾಶವಿಲ್ಲ. ತನ್ನ ಯಜ್ಞಕ್ಕೆ ರಾಕ್ಷಸರು ಕಂಟಕರಾಗಲು, ವಿಶ್ವಾಮಿತ್ರನು ಆ ಕುರಿತು 'ವನಜ ಗರ್ಭನ ಸಾರಿ ಸವಿನಯ ಬಿನ್ನಹ' ಮಾಡುತ್ತಾನೆ.[1] ಆಗ ಬ್ರಹ್ಮನು ಶ್ರೀವಿಷ್ಣುವೇ ರಾಮಾವತಾರ ಕೈಗೊಂಡಿರುವುದಾಗಿ ತಿಳಿಸಿ, ಅವನ ಸಹಾಯ ಪಡೆಯುವಂತೆ ಸೂಚಿಸಲು, ಮುನಿಯು ಅಯೋಧ್ಯೆಯನ್ನು ಸಾರುತ್ತಾನೆ.[2] ರಾಮನು ವಿಷ್ಣುವಿನ ಅವತಾರವೇ ಎನ್ನುವುದನ್ನು ದೃಢಪಡಿಸಲು ಈ ಪ್ರಸಂಗವನ್ನು ಬಳಸಿಕೊಂಡಿದ್ದರೂ ಅಧ್ಯಾತ್ಮರಾಮಾಯಣದ:

> ಕದಾಚಿತ್ಕೌಶಿಕೋऽಭ್ಯಾಗಾದಯೋಧ್ಯಾಂ ಜ್ವಲನ ಪ್ರಭಃ
> ದ್ರಷ್ಟುಂ ರಾಮಂ ಪರಾತ್ಮಾನಂ ಜಾತಂ ಜ್ಞಾತ್ವಾ ಸ್ವಮಾಯಯಾ[3]

ಎಂದು ಪರಮಾತ್ಮ ಸಂದರ್ಶನಕ್ಕಾಗಿ ಮುನಿಯು ಬಂದನೆಂಬ ಹೇಳಿಕೆಯು ಕುಮಾರ ವಾಲ್ಮೀಕಿಗೆ ಹಿನ್ನೆಲೆಯನ್ನೊದಗಿಸಿರಬೇಕು.[4]

### ಅತ್ತುಂಬ ಹರೆಯದವನು

ರಾಮನನ್ನು ತನ್ನೊಡನೆ ಕಳುಹಿಸಬೇಕೆಂದು ವಿಶ್ವಾಮಿತ್ರನು ಕೇಳಿಕೊಂಡೊಡನೆ ದಶರಥನು ಸ್ವಲ್ಪಹೊತ್ತು ಮೂರ್ಛಿತನಾಗಿದ್ದು, ನಂತರ ಚೇತರಿಸಿಕೊಂಡು,

> ಊನ ಷೋಡಶವರ್ಷೋ ಮೇ ರಾಮೋ ರಾಜೀವ ಲೋಚನಃ
> ನ ಯುದ್ಧಯೋಗ್ಯತಾಮಸ್ಯ ಪಶ್ಯಾಮಿ ಸಹ ರಾಕ್ಷಸೈಃ[5]

"ಕಮಲ ನೇತ್ರನಾದ ನನ್ನ ಮಗ ರಾಮನಿಗೆ ಇನ್ನೂ ಹದಿನಾರು ವರ್ಷ ತುಂಬಿಲ್ಲ,[6] ಅವನಿಗೆ ಇನ್ನೂ ರಾಕ್ಷಸರೊಡನೆ ಯುದ್ಧಮಾಡುವ ಯೋಗ್ಯತೆಯಿಲ್ಲ" ಎಂದು ಬಿನ್ನವಿಸುತ್ತಾನೆ.

ರಾಮನ ವಯಸ್ಸಿನ ಬಗ್ಗೆ ವಾಲ್ಮೀಕಿ ರಾಮಾಯಣದಲ್ಲಿ ಈ ಕೆಳಗಿನ ಸಂದರ್ಭಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ:

| | | ವಾಲ್ಮೀಕಿ ರಾಮಾಯಣ |
|---|---|---|
| ೧. | ದಶರಥನು ತನ್ನ ಮಕ್ಕಳ ಮದುವೆ ಕುರಿತು ಸಮಾಲೋಚನೆ ನಡೆಸುತ್ತಿದ್ದನೆಂಬ ಹೇಳಿಕೆ | ಬಾಲಕಾಂಡ ೧೮-೩೮ |
| ೨. | ಕೌಸಲ್ಯೆಯು ರಾಮನನ್ನು ವನವಾಸಕ್ಕೆ ಬೀಳ್ಕೊಳ್ಳುವಾಗ ಆಡಿದ ನುಡಿಗಳು. | ಅಯೋಧ್ಯಾಕಾಂಡ ೨೦-೪೫ |
| ೩. | ಸೀತೆಯು ಅನಸೂಯೆಯೊಡನೆ ತನ್ನ ವಿವಾಹದ ಕುರಿತು ಹೇಳಿದ ಸಂದರ್ಭ. | ಅಯೋಧ್ಯಾಕಾಂಡ ೧೧೮-೩೪ |

---

1. ತೊ. ರಾ. I ೯-೨.
2. ವಿಶ್ವಾಮಿತ್ರನು ಶಿವನ ಆದೇಶದಂತೆ ಅಯೋಧ್ಯೆಗೆ ತೆರಳಿದ ವಿಚಾರ 'ಸತ್ಯೋಪಾಖ್ಯಾನ' (೧-೧೦)ದಲ್ಲಿದೆ.
3. ಅಧ್ಯಾತ್ಮ ರಾಮಾಯಣ, I ೪-೧.
4. ಆನಂದ ರಾಮಾಯಣದಲ್ಲಿ (ಸಾರಕಾಂಡ, ೩-೧) ವಾಲ್ಮೀಕಿ ರಾಮಾಯಣದಂತೆಯೇ ಈ ಭಾಗವಿದೆ.
5. ವಾ. ರಾ. I ೨೦-೨.
6. ಇದೇ. ೨೦-೨ ಶ್ಲೋಕದ ಬಗ್ಗೆ ೧) ಗೋವಿಂದರಾಜರ ವ್ಯಾಖ್ಯಾನ ಇಂತಿದೆ:
   ಊನಃ ಅಸಂಪೂರ್ಣಃ ಷೋಡಶವರ್ಷೋಯಸ್ಯ ಸತಥೋಕ್ತಃ, ದ್ವಾದಶ ವರ್ಷ ಇತಿ ಯಾವತ್. ಬಾಲೋ ದ್ವಾದಶವರ್ಷೋಽಯಮಕೃತಾಸ್ತ್ರಶ್ಚ ರಾಘವಃ ಇತಿ ವಿಶಿಷ್ಯ ವಕ್ಷ್ಯಮಾಣತ್ವಾತ್.
   ಪರಿಪೂರ್ಣ ಷೋಡಶ ವರ್ಷೋಽಹಿ ಯುದ್ಧಕ್ಷಮೋ ಭವತಿ.
   ೨) ತಿಲಕವ್ಯಾಖ್ಯಾನ: ಊನ ಷೋಡಶ ವರ್ಷಾತ್ವಾದೇವ ಬಾಲತ್ವಸ್ಯ ವ್ಯವಹಾರಃ.

೪. ಮಾರೀಚನು ರಾವಣನೊಡನೆ ದಶರಥ–
ವಿಶ್ವಾಮಿತ್ರ ಸಂಭಾಷಣೆಯನ್ನು ಪ್ರಸ್ತಾವಿಸಿದ್ದು. ಅರಣ್ಯಕಾಂಡ ೩೮-೬

೫. ಸೀತೆಯು ರಾವಣ–ಸಂನ್ಯಾಸಿಯೊಡನೆ
ಆಡಿದ ಮಾತುಗಳು. ಅರಣ್ಯಕಾಂಡ ೪೭–೪, ೫, ೧೦, ೧೧

ಈ ಉಲ್ಲೇಖಗಳಲ್ಲಿ ಮಾರೀಚನ ಮಾತು (ದಶರಥನು ವಿಶ್ವಾಮಿತ್ರನಿಗೆ, 'ಬಾಲೋ ದ್ವಾದಶವರ್ಷೋಽಯ ಮಕೃತಾಸ್ತ್ರಶ್ಚ ರಾಘವಃ–ರಾಮನಿಗೆ ಇನ್ನೂ ಹನ್ನೆರಡು ವರ್ಷ–ಅರಣ್ಯಕಾಂಡ ೩೮-೬) ಗಳಿಗಿಂತ ಉಳಿದ ನುಡಿಗಳಿಗೆ ಪ್ರಾಶಸ್ತ್ಯ ನೀಡಿ ಹೀಗೆ ನಿರ್ಣಯಕ್ಕೆ ಬರಬಹುದಾಗಿದೆ :

ಅ) ವಿಶ್ವಾಮಿತ್ರನೊಡನೆ ರಾಮನು ಕಾಡಿಗೆ ಹೊರಟಾಗ ಅವನ ಪ್ರಾಯ ೧೫ ವರ್ಷ.

ಆ) ನಂತರ ೧೨ ವರ್ಷಗಳಕಾಲ ಅಯೋಧ್ಯೆಯಲ್ಲಿ ಇರುವಿಕೆ.

ಇ) ರಾಮನಿಗೆ (೧೫ ಮತ್ತು ೧೨) ೨೭ ವರ್ಷಗಳಾದಾಗ ವನವಾಸ ಸಂಘಟಿಸಿತು.[1]

ಕುಮಾರ ವಾಲ್ಮೀಕಿಯು ತನ್ನ ರಾಮಾಯಣದಲ್ಲಿ ರಾಮನಿಗೆ ವರುಷ ಹನ್ನೆರಡರಲಿ 'ಗಜ ತುರಗಪೇರಾಟದಲಿ' ಶಿಕ್ಷಣವಾಯಿತೆಂದೂ, ಅವನಿಗೆ ಸುರನರೋರಗರೊಳು ಸರಿಯಿಲ್ಲದ ಪ್ರೌಢಿಮೆ ದೊರೆಯಿತೆಂದೂ'[2] ಹೇಳುತ್ತಾನೆ. ಇಂತಹ ರಾಮನು– ವಿಶ್ವಾಮಿತ್ರನು ಕೇಳಿದಾಗ–ಮುಪ್ಪಿನ ದಶರಥನಿಗೆ 'ಅತ್ತುಂಬ ಹರೆಯದವನಾಗಿ' ಕಾಣಿಸಿಕೊಳ್ಳುತ್ತಾನೆ. ಅತ್ತು–ಕೂಗಿ ಊಟಮಾಡುವ ಎಳೆ 'ಶಿಶು' ರಾಮನಿಂದ ರಾಕ್ಷಸವಧೆಯಾದೀತೇ ?–ಎನ್ನುವಲ್ಲಿ ದಶರಥನ ಪುತ್ರವ್ಯಾಮೋಹದ ಪರಾಕಾಷ್ಠೆಯನ್ನು ಮಾತ್ರ ಗುರುತಿಸಿ, ನಾವು ಸಮಾಧಾನಪಟ್ಟುಕೊಳ್ಳಬೇಕಾಗಿದೆ.

ಆದಿಕಾವ್ಯದಲ್ಲಿ ರಾಮನು ತನ್ನೊಡನೆ 'ಹತ್ತು ರಾತ್ರಿ ಜತೆಯಲ್ಲಿ ಇದ್ದರೆ ಸಾಕು'[3] ಎಂಬ ವಿಶ್ವಾಮಿತ್ರನ ಮಾತು ಇದೆ. ತೊರವೆ ರಾಮಾಯಣದಲ್ಲಿ ಸುಬಾಹು ವಧೆಯಾದ ಮೇಲೂ 'ಭಾಳನೇತ್ರನ ವರದ ಗರುಡಿಯ ಚಾಳಿಯೆನಿತುಂಟನಿತನಿವರಲಿ ನೋಳವಿಸಿದನು–ಮೇಲೆ ತಿಂಗಳು ದಿವಸಕಾಮುನಿಪ[4]–ಎನ್ನಲಾಗಿದೆ. ಇದರಿಂದ ವಾಲ್ಮೀಕಿಯ ಖಚಿತತೆಯನ್ನು ಇಲ್ಲಿ ಕಾಣುವುದು ಸಾಧ್ಯವಿಲ್ಲ.

### ಮಾರೀಚನ ತಾಪಸ ವೇಷ

ವಿಶ್ವಾಮಿತ್ರ ಯಜ್ಞರಕ್ಷಣೆಯ ಪ್ರಸಂಗದಲ್ಲಿ ಮಾರೀಚನು 'ತಾಪಸವೇಷವನಾಂತು, ರಾಮನ ಮುಂದೆ ದೀನನಂತೆ ಅಭಿನಯಿಸಿದ್ದೂ,[4] ಆಗ ಮುನಿಯು "ಅವನು ದುರುಳ, ಸಂಹರಿಸು' ಎಂದು ಎಚ್ಚರಿಸಿದ್ದೂ,[5] ಆದರೂ, 'ಬ್ರಹ್ಮವನು ಮರೆಗೊಂಡೈದಿದರ ವಧಿಸುವುದು ಲೌಕಿಕ, ವೈದಿಕದ ಮತವಲ್ಲ, ಮನುಕುಲದವರ ಪಥವಲ್ಲ' ಎಂದು ಭಾವಿಸಿ, 'ಅನಿಲ ಶರದಿಂದ ಜಲನಿಧಿಯ ತೆಂಕಣತೀರಕ್ಕೆ ಊದಿದ್ದೂ '[6]–ಇವೆಲ್ಲವೂ ಕುಮಾರ ವಾಲ್ಮೀಕಿಯ ಕಥಾವೈಶಿಷ್ಟ್ಯಗಳು.

---

1. ನಾರಾಯಣಾಧ್ವರಿಯು 'ಶ್ರೀರಾಮೋತ್ಸವ ರತ್ನಾಕರ' ಎಂಬ ರಾಮಾಯಣ ಕಥಾ ಸಂದರ್ಭಗಳನ್ನು ದಿನವತ್ತಾಗಿ ನಿರೂಪಿಸುವ ಗ್ರಂಥದಲ್ಲಿ–ವಿಶ್ವಾಮಿತ್ರನೊಂದಿಗೆ ಯಜ್ಞರಕ್ಷಣೆಗೆ ಹೊರಟಾಗ ರಾಮನಿಗೆ ೧೨ ವರ್ಷ ಎಂದಿದ್ದಾನೆ. ರಂಗನಾಥ ಶರ್ಮ–ರಾಮಾಯಣ ಬಾಲಕಾಂಡ–ಅನುಬಂಧ–೪೩೦.

2. ತೊ. ರಾ. I ೮-೫೩. ಕೆಲವು ಪಾಠಗಳಲ್ಲಿ 'ವರುಷಹದಿನಾರರಲಿ' ಎಂದಿದೆ. ವರ್ಷ ೧೨ ಎನ್ನುವುದೇ ಉಚಿತ. ಕ್ಷತ್ರಿಯನಿಗೆ ೧೧ನೇ ವಯಸ್ಸಿನಲ್ಲಿ ಉಪನಯನ, ನಂತರ ಶಿಕ್ಷಣ.

3. ತೊ. ರಾ. I ೧೯-೧೮–

ದಶರಾತ್ರಂ ಹಿ ಯಜ್ಞಸ್ಯ ರಾಮಂ ರಾಜೀವ ಲೋಚನಮ್
ನಾತ್ಯೇತಿ ಕಾಲೋ ಯಜ್ಞಸ್ಯ ಯಥಾಯಂ ಮಮ ರಾಘವ.

4. ತೊ. ರಾ. I ೧೧-೧೮, ೧೯.

5. ಇದೇ. ೧೧-೨೦.

6. ಇದೇ. ೧೧-೨೧.

*10

ವಾಲ್ಮೀಕಿ ರಾಮಾಯಣದಲ್ಲಿ ' ನೋತ್ಸಹೇ ಹಂತುಮಿಾದೃಶಾನ್' (ಇವರನ್ನು ಕೊಲ್ಲುವುದಕ್ಕೆ ಮನಸ್ಸಾಗದು)[1] ಎಂದು ' ಮಾನವಾಸ್ತ್ರ 'ವನ್ನು ಪ್ರಯೋಗಿಸಲು, ಅದು ಮಾರೀಚನನ್ನು ನೂರು ಯೋಜನ ಹಾರಿಸಿ ' ಸಮುದ್ರದಲ್ಲಿ ಕೆಡುವುತ್ತದೆ '[2] ಅವನು ಸಾಯಲಿಲ್ಲ–ಎನ್ನುವುದು ರಾಮನಿಗೂ ತಿಳಿಯುತ್ತದೆ.[3] ಹೀಗಿದ್ದರೂ ರಾಮನು ಸುಬಾಹುವನ್ನು ಕೊಂದು, ಮಾರೀಚನನ್ನು ಕೊಲ್ಲದಿರುವುದಕ್ಕೆ ಕಾರಣಗಳೇನೂ ' ವಾಚ್ಯ 'ವಾಗಿರುವುದಿಲ್ಲ.[4]

ಬಹುಶಃ, ಇದನ್ನು ಗಮನಿಸಿಯೇ ಮಾರೀಚನಿಗೆ ರಾಮನಿಂದ ತತ್ಕಾಲ ಜೀವದಾನವಾದುದರ ಹಿನ್ನೆಲೆಯಾಗಿ ಮಾರೀಚನಿಗೆ (ಸುಬಾಹುವಿಗೆ–ಇಲ್ಲ) ಮಾತ್ರ ' ತಾಪಸ ವೇಷ 'ದ ಕಲ್ಪನೆಯನ್ನು ಕವಿಯು ಸಂಯೋಜಿಸಿಕೊಂಡಿರಬೇಕು. ಮಾರೀಚನು ' ವಿಪುಲಮಾಯಾ ಕುಶಲ-ವಿದ್ಯಾಚಪಲ ' ನೆಂದು ಕವಿಯೇ ಆತನ ವ್ಯಕ್ತಿತ್ವವನ್ನು ವರ್ಣಿಸಿದ್ದಾನಷ್ಟೆ.[5]

## ಅಹಲ್ಯೋದ್ಧಾರ

ಈ ಪ್ರಕರಣದಲ್ಲಿ ವಾಲ್ಮೀಕಿ ರಾಮಾಯಣಕ್ಕೂ, ಕುಮಾರ ವಾಲ್ಮೀಕಿಯ ರಾಮಾಯಣಕ್ಕೂ ಇರುವ ಮುಖ್ಯ ವ್ಯತ್ಯಾಸಗಳನ್ನು ಹೀಗೆ ಸಂಗ್ರಹಿಸಬಹುದು :

| ವಾಲ್ಮೀಕಿ ರಾಮಾಯಣ | ತೊರವೆ ರಾಮಾಯಣ |
|---|---|
| ಅ) ಅಹಲ್ಯೆಗೆ ಗೌತಮ ಶಾಪದಿಂದ ಅದೃಶ್ಯರೂಪ[6] | ಶಾಪದಿಂದ ಶಿಲಾರೂಪ[7] |
| ಆ) ವಿಶ್ವಾಮಿತ್ರನು ರಾಮನೊಡನೆ ಆಕೆಯನ್ನು ಉದ್ಧರಿಸಬೇಕೆಂದು ಸೂಚಿಸುತ್ತಾನೆ[8] | ಈ ಸೂಚನೆ ಇಲ್ಲ |
| ಇ) ರಾಮನ ದೃಷ್ಟಿ ಮಾತ್ರದಿಂದ ಅಹಲ್ಯೆ ದೃಶ್ಯೆಳಾಗುತ್ತಾಳೆ[9] | ಶ್ರೀರಾಮನ ಅಂಘ್ರಿರಜ ಆವರಿಸಿ ಶಿಲೆಯ ಮಧ್ಯದಲ್ಲಿ ಅಹಲ್ಯೆ ಉದಿಸುವಳು[10] |
| ಈ) ರಾಮನೇ ಅಹಲ್ಯೆಗೆ ವಂದಿಸುತ್ತಾನೆ[11] | ಅಹಲ್ಯೆಯೇ ಶ್ರೀರಾಮನಿಗೆ ' ದೇವ, ಸರ್ವೇಶ್ವರ ' ಎಂದು ನಮಿಸುತ್ತಾಳೆ[12] |

---

1. ವಾ. ರಾ. I ೩೦-೧೬.
2. ವಾ. ರಾ. ೧-೩೦-೧೮.
   ಕ್ಷಿಪ್ತ್ವಾ ಬಾಣೇನ ಮಾರೀಚಂ ಶತಯೋಜನ ಸಾಗರೇ–ಆನಂದ ರಾಮಾಯಣ ೨-೧೩.
3. ವಾ. ರಾ. I ೩೦-೨೦.
4. ಅ) ವಾ. ರಾ. ದಲ್ಲಿ (ಅರಣ್ಯಕಾಂಡ ೯-೧೨) ಇನ್ನೊಮ್ಮೆ ಮಾರೀಚನನ್ನು ರಾಮನು ಕೊಲ್ಲದೆ ಬಿಡುತ್ತಾನೆ. ರಾಮನು ಹೀಗೇಕೆ ಮಾಡಿದ? 'ಸೀತಾಪಹರಣ ಕಾರ್ಯಕ್ಕೆ–ಅರ್ಥಾತ್ ರಾವಣ ವಧೆಗೆ–ಅವನ ಅಸ್ತಿತ್ವದ ಅಗತ್ಯವನ್ನು ರಾಮನು ತನ್ನ ದಿವ್ಯತೆಯಿಂದ ಕಂಡುಕೊಂಡಿರಬೇಕು '–ಈ ವಿವರಣೆ K.S.R. Sastri-Riddles of the Ramayana-p. 72. ನೋಡಬಹುದು.
5. ಆ) ತತ್ತ್ವ ಸಂಗ್ರಹ ರಾಮಾಯಣದಲ್ಲಿ (I ೧೯-೧೮) ಸ್ಪಷ್ಟವಾಗಿಯೇ ಇದೆ :- ಹತ್ವಾ ಸುಬಾಹುಂ ದುಶ್ಶೀಲಂ ಮಾರೀಚಂ ನಾಹನತ್ ಪ್ರಭು ಸರ್ವಜ್ಞ. ಪರಮಾತ್ಮಾಹಿ ಭಾವಿಕಾರ್ಯಾನ್ಯಪೇಕ್ಷಯಾ.

ವಾ. ರಾ. ಬಾಲಕಾಂಡ.

6. ೪೮-೩೦, ೪೯-೧೫, ೧೬.
8. ೪೯-೧೩.
9. ೪೯-೧೮.
11. ೪೯-೧೯.

ತೊ. ರಾ. ಬಾಲಕಾಂಡ.

7. I ೧೨-೧೮
10. I ೧೨-೧೯.
12. I ೧೨-೨೦.

ಕುಮಾರ ವಾಲ್ಮೀಕಿಯು ಹೇಳಿರುವ 'ಅಹಲ್ಯೋದ್ಧಾರ'ದ ಕಥಾ ಕ್ರಮಕ್ಕೆ ಅಧ್ಯಾತ್ಮ-ರಾಮಾಯಣ,[1] ಆನಂದ ರಾಮಾಯಣ[2] ಮತ್ತು ಭಾರತ ತಾತ್ಪರ್ಯ ನಿರ್ಣಯಗಳಲ್ಲಿ[3] ಆಧಾರಗಳಿವೆ.

## ಸೀತಾ ವಿವಾಹ ಪತ್ರಿಕೆ

ವಿಶ್ವಾಮಿತ್ರನ ಯಜ್ಞವು ಸಾಂಗವಾದ ಮೇಲೆ, ಅವನಿದ್ದಲ್ಲಿಗೆ, ಜನಕ ಭೂಪನ ಮಣಿಹಾರರು ಮಹಾಮಂಗಲೆಯ ವಿವಾಹ ಪತ್ರಿಕೆ ಸಹಿತ ಬಂದರೆಂದೂ,[4] ಆಗ ವಿಶ್ವಾಮಿತ್ರನು 'ಜಾನಕಿಯ ನರಚರಿತ್ರದ ರಾಮಭದ್ರಗೆ ಪರಿಣಯನ ಮಾಳ್ಪುಜ್ಜುಗನ ನಿರ್ಧರಿಸಿ'[5] ಮಿಥಿಲೆಗೆ ಹೊರಟಂತೆಯೂ ಕುಮಾರ ವಾಲ್ಮೀಕಿಯು ಹೇಳುತ್ತಾನೆ.

ಈ ಸನ್ನಿವೇಶದಲ್ಲಿ ಆದಿಕಾವ್ಯವು ಸೀತಾವಿವಾಹದ ವಿಚಾರವಾಗಿ ಏನನ್ನೂ ಹೇಳುವುದಿಲ್ಲ. ಮಿಥಿಲೆಯಲ್ಲಿ ನಡೆಯುವ ಒಂದು ಯಜ್ಞಕ್ಕೆ ವಿಶ್ವಾಮಿತ್ರನು ರಾಮಲಕ್ಷ್ಮಣರೊಂದಿಗೆ, ಹೊರಡುತ್ತಾ, ಜನಕನಲ್ಲಿರುವ[6] ಅದ್ಭುತವಾದ ಧನುಸ್ಸನ್ನು ರಾಮನು ನೋಡಬೇಕೆಂದು ಸೂಚಿಸುತ್ತಾನೆ ಮಾತ್ರ.[7]

ತೊರವೆ ರಾಮಾಯಣದಲ್ಲಿ ಪ್ರತಿಯೊಂದು ಘಟನೆಯೂ ಪೂರ್ವಯೋಜಿತವಾಗಿರುತ್ತದೆ. ಜನಕನ ಯಜ್ಞಕ್ಕಿಂತಲೂ ಕವಿಗೆ "ಆದಿಲಕ್ಷ್ಮಿ-ನಾರಾಯಣರ ಕಲ್ಯಾಣೋತ್ಸವ"ವು ಮುಖ್ಯವಾಗಿದ್ದು, ಅದನ್ನು ಮೊದಲೇ ಸಂಕಲ್ಪಿಸಿ ವಿಶ್ವಾಮಿತ್ರನಿಗೂ (ಅಲ್ಲಿ ರಾಮನಿರುವುದರಿಂದ) ಜನಕನಿಂದ ವಿವಾಹ ಪತ್ರಿಕೆ ತಲುಪುವಂತೆ ಮಾಡಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ. ಆದರೂ, ಈ ಕಥಾವಿನ್ಯಾಸಕ್ಕೆ ಆನಂದ ರಾಮಾಯಣ,[8] ಭಾರತ ತಾತ್ಪರ್ಯ ನಿರ್ಣಯಗಳಲ್ಲಿ[9] ತಕ್ಕ ಹಿನ್ನೆಲೆಯಿದೆ.

---

1. ಅಧ್ಯಾತ್ಮ ರಾಮಾಯಣ, I ೫-೨೭.
2. ಆನಂದ ರಾಮಾಯಣ-ಸಾರಕಾಂಡ, ೩-೧೬.
3. ಭಾರತ ತಾತ್ಪರ್ಯನಿರ್ಣಯ, ೪-೧೦.

ವಿ. ಸೂ. ಹೀಗೆ ಪಾದರಜಸ್ಪರ್ಶದಿಂದ ಕಲ್ಲು ಹೆಣ್ಣಾದ ಸುದ್ದಿ ತಿಳಿದ ನಾವಿಕನೊಬ್ಬನು ರಾಮನನ್ನು ದೋಣಿ ದಾಟಿಸುವ ಮೊದಲು (ದೋಣಿಯೂ ಹೆಣ್ಣಾದರೆ ತನ್ನ ಗತಿಯೇನು ? ಎಂದು ಹೆದರಿ) ಪ್ರಾರ್ಥಿಸಿಕೊಂಡದ್ದು ಹೀಗಿದೆ :

ಕ್ಷಾಲಯಾಮಿ ತವ ಪಾದ ಪಂಕಜಂ
ನಾಥ ದಾರುದೃಷದೋಃ ಕಿಮಂತರಮ್
ಮಾನುಷೀಕರಣ ಚೂರ್ಣಮಸ್ತಿ ತೇ
ಪಾದಯೋರಿವ ಕಥಾಪ್ರಥೀಯಸೀ (ಅಧ್ಯಾತ್ಮ ರಾ. I ೬-೩. ಆನಂದ ರಾ. ೩-೨೬.)

'ರಾಮಚರಿತ ಮಾನಸ'ದಲ್ಲಿ ನಾವಿಕ ಕೇವಟನು ವನವಾಸಕ್ಕೆ ಹೊರಟ ರಾಮನೊಡನೆ ಹೀಗೆ ಪ್ರಾರ್ಥಿಸುತ್ತಾನೆ. (ಸಂಗ್ರಹಾನುವಾದ ಪು. ೧೧೧)

4. ತೊ. ರಾ. I ೧೨-೨.
5. ಇದೇ, ೧೨-೩.
6. ಜನಕ ಎಂಬುದು ವಂಶದ ಹೆಸರು. ದೇವರಾತನೆಂಬ ಪ್ರಾಚೀನ ಜನಕ ರಾಜನಿಗೆ ಶಿವಧನುಸ್ಸು ದೈವದತ್ತವಾಗಿತ್ತು. ಮುಂದೆ ಅದು ವಂಶಪರಂಪರೆಯಿಂದ ಸೀತೆಯ ತಂದೆಯ ವಶಕ್ಕೆ ಬಂದಿತು.

ಪ್ರೀತಶ್ಚ ಭಗವಾನೀಶಸ್ತ್ರಿಶೂಲೀ ನೀಲಲೋಹಿತಃ
ಪ್ರದದೌ ಶತ್ರುನಾಶಾರ್ಥಂ ಜನಕಾಯಾದ್ಭುತಂ ಧನುಃ –ಕೂರ್ಮ ಪುರಾಣ.

7. ವಾ. ರಾ. I ೫-೭ ಅದ್ಭುತಂ ಚ ಧನೂರತ್ನಂ ತತ್ರೈಕಂ ದ್ರಷ್ಟುಮರ್ಹಸಿ.
8. ಆನಂದ ರಾ. ಸಾರಕಾಂಡ, III ೧೫-೧೬, ಶ್ರುತ್ವಾ ಜನಕ ಗೇಹೇ ವೈ ತತ್ಕನ್ಯಾಯಾಃ ಸ್ವಯಂವರಮ್...
ರಾಮಲಕ್ಷ್ಮಣ ಸಂಯುಕ್ತೋ ಮುನಿಸ್ತಂ ನಗರಂ ಯಯೌ.

ಆನಂದರಾಮಾಯಣದಲ್ಲಿ–ದಶರಥನಿಗೂ ಈ ವಿವಾಹ ಪತ್ರಿಕೆ ಹೋಗಿತ್ತೆಂದೂ, ಮಕ್ಕಳ ವಿರಹ ದುಃಖದಿಂದಾಗಿ ಅವನು ಬರಲಿಲ್ಲವೆಂದೂ ಇದೆ– ಆ. ರಾ. ೩-೩೦.

9. ತದಾ ವಿದೇಹೇನ ಸುತಾ ಸ್ವಯಂವರೋ
ವಿಘೋಷಿತೋ ದಿಕ್ಷು ವಿದಿಕ್ಷು ಸರ್ವಶಃ

## ಸೀತಾಸ್ವಯಂವರ ಸಭೆ

ಆದಿಕಾವ್ಯದಲ್ಲಿ, ವಿಶ್ವಾಮಿತ್ರನ ಅಪೇಕ್ಷೆಯಂತೆ, ಜನಕನು ಶಿವಧನುಸ್ಸನ್ನು ಯಜ್ಞಶಾಲೆಗೆ ತರಿಸಿ, ರಾಮಲಕ್ಷ್ಮಣರಿಗೆ ಅದನ್ನು ತೋರಿಸುತ್ತಾನೆ ; ಆ ಮೊದಲು ಬಹುಮಂದಿ ರಾಜರು " ವೀರ್ಯ ಶುಲ್ಕಳೆಂದು ನಿರ್ಣಯಿಸಲ್ಪಟ್ಟ " ಸೀತೆಯನ್ನು[1] ಪಡೆಯುವುದಕ್ಕಾಗಿ, ಆ ಬಿಲ್ಲಿಗೆ ಹೆದೆಯೇರಿಸಲು ಪ್ರಯತ್ನಿಸಿ ವಿಫಲರಾದುದನ್ನು ತಿಳಿಸುತ್ತಾನೆ ; ಶ್ರೀ ರಾಮನು ಆಗ ಅನಾಯಾಸವಾಗಿ ಆ ಬಿಲ್ಲಿಗೆ ಹೆದೆಯೇರಿಸಲು ಅದು ಮುರಿಯುತ್ತದೆ.[2] ಇಷ್ಟು ಘಟನೆಗಳೂ ನಡೆದುದು ಜನಕನ ಯಜ್ಞಶಾಲೆಯಲ್ಲಿ.[3] ಕುಮಾರ ವಾಲ್ಮೀಕಿಯು ಹೇಳುವಂತೆ ಮೊದಲೇ ಸಿದ್ಧವಾದ, ಧರಾಂಗನಾ ವಲ್ಲಭರಿಂದ ಸನ್ನಿಹಿತವಾದ[4] ಸ್ವಯಂವರ ಮಂಟಪದಲ್ಲಿ ಅಲ್ಲ.

ಅಧ್ಯಾತ್ಮ ರಾಮಾಯಣದಲ್ಲಿ, ವಾಲ್ಮೀಕಿಯ ಕಥಾನುಸರಣೆಯಿದ್ದರೂ, ಅಲ್ಲಿ ಹಲವು ರಾಜರ ಉಪಸ್ಥಿತಿಯ ಉಲ್ಲೇಖವಿದೆ.[5] ತೊರವೆ ರಾಮಾಯಣದ ' ವಿವಾಹ ಮಂಟಪದಲ್ಲಿ ಪಶುಪತಿ, ಬ್ರಹ್ಮ, ಇಂದ್ರ ಮೊದಲಾದ ಅಖಿಳ ಅಮರೌಘವೂ ಕನ್ಯಾರ್ಥಿಗಳಾಗಿಯೇ ಬಂದಂತೆಯೂ[6] ಆದರೆ ಅವರೆಲ್ಲರೂ ಸೀತೆಯಿಂದ ತಿರಸ್ಕೃತರಾದಂತೆಯೂ ವರ್ಣನೆಯಿದೆ.'[7] ' ವೀರ್ಯ ಶುಲ್ಕ ' ಳಾದ ಸೀತೆಗೆ ಹೀಗೆ ಕನ್ಯಾರ್ಥಿಗಳಲ್ಲಿ ಆರಿಸಿಕೊಳ್ಳುವ ಅವಕಾಶವಿತ್ತೇ ?—ಎಂದು ಕವಿಯು ಆಲೋಚಿಸಿದಂತೆ ತೋರುವುದಿಲ್ಲ ;[8] ರಾಮನು ' ದೇವೋತ್ತಮ ' ನೆನ್ನುವ ತನ್ನ ಶ್ರದ್ಧೆಯನ್ನು ಹೀಗೆ ಅಭಿವ್ಯಕ್ತಗೊಳಿಸಿರಬಹುದು.

## ಧನುರ್ಭಂಗದಲ್ಲಿ ರಾವಣನ ಗರ್ವಭಂಗ

ಸೀತಾ ವಿವಾಹ ಮಂಟಪಕ್ಕೆ ರಾವಣನೂ ಬಂದು ಧನುರ್ಭಂಗ ಪ್ರಯತ್ನದಲ್ಲಿ ಮಾನಭಂಗ ಹೊಂದಿದ ಕಥೆಯನ್ನು ಕುಮಾರ ವಾಲ್ಮೀಕಿಯು ೨೦ ಷಟ್ಪದಿಗಳಲ್ಲಿ ವರ್ಣಿಸಿದ್ದಾನೆ.[9] ಆದಿಕಾವ್ಯದಲ್ಲಿ ಈ ಪ್ರಸಂಗವೇ ಇಲ್ಲ.

---

ನಿರ್ಧಾರ್ಯ ತದ್ಗಾಧಿ ಸುತಾನುಯಾಯಿ
ಯಯೌ ವಿದೇಹಾನನುಜಾನುಯಾತಃ—ಭಾರತ ತಾತ್ಪರ್ಯನಿರ್ಣಯ, ೪–೯.

1. ದಶರಥ–ಕೈಕೇಯಿ ವಿವಾಹದಲ್ಲಿ ' ರಾಜ್ಯ ಶುಲ್ಕ ' ವಿದ್ದಂತೆ ವಾಲ್ಮೀಕಿಯು ಹೇಳಿರುವುದನ್ನು (ವಾ. ರಾ. ಅಯೋಧ್ಯಾಕಾಂಡ, ೧೦೭-೩, ಪುರಾಭ್ರಾತಃ ಪಿತಾತಃ ಸ ಮಾತರಂ ತೇ ಸಮುದ್ವಹನ್ ಮಾತಾಮಹೇ ಸಮಾಶ್ರೌಷೀದ್ರಾಜ್ಯಶುಲ್ಕ ಮನುತ್ತಮಮ್ ಎಂದು ರಾಮನು ಚಿತ್ರಕೂಟದಲ್ಲಿ ಭರತನಿಗೆ ಹೇಳುವ ಸಂಗತಿಯನ್ನು ಆ ಮೊದಲು ಯಾರೂ, ಎಲ್ಲಿಯೂ ಏಕೆ ಪ್ರಸ್ತಾಪಿಸುವುದಿಲ್ಲ ? ಭರತನು ಹಿರಿಯ ಮಗನಾಗಿದ್ದರೆ ಆ ರಾಜ್ಯ ಶುಲ್ಕ ಊರ್ಜಿತವಾಗುತ್ತಿತ್ತು, ಹಾಗಲ್ಲವಾದ್ದರಿಂದ ಆ ಕುರಿತು ಮಂಥರೆಯಾಗಲಿ, ಕೈಕೇಯಿಯಾಗಲಿ ಮೌನತಾಳಿದ್ದರು ಎನ್ನಬಹುದೇ ? ವಿಚಾರಾರ್ಹ.)

2. ವಾ. ರಾ. I ೬೭-೧೮.
3. ಇದೇ. ೫೦-೧, ೬೭-೩, ೬೭-೨೫.
4. ತೊ. ರಾ I ೧೨-೨೮, ೨೯.
5. ಅ. ರಾ. I ೬-೨೪, ಆರೋಪಯಾಮಾಸ ಗುಣಂ ಪಶಸ್ತ್ವಖಿಲ ರಾಜಸು.
6. ತೊ. ರಾ. I ೧೪-೩೦ ಕಂಬ ರಾಮಾಯಣದಲ್ಲಿ (೧-೨೦) ರಾಮಲಿಂಗಾಮೃತ (ಸರ್ಗ ೩) ತತ್ತ್ವ ಸಂಗ್ರಹ ರಾಮಾಯಣ (I ೨೯-೭) ಗಳಲ್ಲಿ ದೇವತೆಗಳ ಉಪಸ್ಥಿತಿ ವರ್ಣಿತ. " ರಾಮಚರಿತ ಮಾನಸ "ದಲ್ಲಿ ದೇವತೆಗಳು ವೇಷಾಂತರದಿಂದ ಬರುತ್ತಾರೆ.
7. ತೊ. ರಾ. I ೧೪-೩೩.
8. ದೇವತೆಗಳು ಧನುರ್ಭಂಗ ಪ್ರಯತ್ನದಲ್ಲಿ ವಿಫಲರಾಗಿದ್ದರು ಎನ್ನುವ ವಾ. ರಾ. I ೬೭-೯ರ ಹೇಳಿಕೆಯನ್ನು ಆಧರಿಸಿರಬಹುದೇ ?
9. ತೊ. ರಾ. ೧೫-೯ ರಿಂದ ೨೮.

ಭಾರತ ತಾತ್ಪರ್ಯನಿರ್ಣಯದಲ್ಲಿನ,

ದಶಾನನಾದ್ಯಾಃ ಪತಿತಾವಿಮೂರ್ಛಿತಾಃ[1]

ಎಂಬ ಹೇಳಿಕೆಯೂ ; ಆನಂದ ರಾಮಾಯಣದಲ್ಲಿ ವಿವರವಾಗಿ ಬರುವ ಈ ಪ್ರಕರಣದ ವರ್ಣನೆಗಳೂ,[2] ಇನ್ನೂ ಕೆಲವು ಕೃತಿಗಳ ಮೂಲಕ ಪ್ರಚಲಿತವಾದ ಅಂಶಗಳೂ[3] ಕುಮಾರ ವಾಲ್ಮೀಕಿಯ ಹಿನ್ನೆಲೆಯಾಗಿರಬೇಕು.

ರಾಮ ಸಾನ್ನಿಧ್ಯದಲ್ಲಿ ದಾನವ ರಾವಣನು ಮುಖಭಂಗಿತನಾದನೆಂಬ ಈ ಕಥೆಯ ವರ್ಣನೆಯಲ್ಲಿ, ಕುಮಾರವ್ಯಾಸನು ಚಿತ್ರಿಸಿದ ಶ್ರೀ ಕೃಷ್ಣ ಸನ್ನಿಧಿಯಲ್ಲಿ ಕೌರವನ ಗರ್ವಭಂಗದ ಸನ್ನಿವೇಶದ ಪ್ರಭಾವವೂ ಇದೆ. ಹೀಗೆ ಭಂಗಿತನಾದ ರಾವಣನು, " ಸೀತೆಯ ಕಳವಿನಲಿ ಕೊಂಡೊಯ್ವೆನು "[4] ಎಂದು ಆ ಸಂದರ್ಭದಲ್ಲಿಯೇ ನಿರ್ಧರಿಸಿದಂತೆ ಹೇಳಿರುವುದು ಮಾತ್ರ ಕುಮಾರ ವಾಲ್ಮೀಕಿಯದೇ ಕಲ್ಪನಾ ವೈಶಿಷ್ಟ್ಯವೆನ್ನಬೇಕು.[5]

## ಸೀತಾ ಜನನ ಕಥೆ

ರಾಮ ಕಥೆಗೆ ಸಂಬಂಧಿಸಿದ ಪ್ರಾಚೀನ ಗಾಥೆಗಳಲ್ಲಿ ಸೀತೆಯು ಜನಕನ ಔರಸಪುತ್ರಿಯೆಂದೇ ಹೇಳಿರಬೇಕು–ಎಂದು ವಿದ್ವಾಂಸರ ಊಹೆ.[6] ಮಹಾಭಾರತದಲ್ಲಿನ ' ರಾಮೋಪಾಖ್ಯಾನ 'ದಲ್ಲಿ

ವಿದೇಹ ರಾಜೋ ಜನಕಃ ಸೀತಾ ತಸ್ಯಾತ್ಮಜಾ ವಿಭೋ[7]

ಸೀತೆಯು ಜನಕನ ಮಗಳು–ಎಂದೇ ಇದೆ. ಹರಿವಂಶದಲ್ಲಿ ಬರುವ ರಾಮಕಥೆಯಲ್ಲೂ ಸೀತೆಯು ಅಯೋನಿಜೆ ಎನ್ನುವ ವಿಚಾರವಿಲ್ಲ.[8]

ವಾಲ್ಮೀಕಿ ರಾಮಾಯಣದಲ್ಲೇ ಭೂಮಿಜೆಯಾದ ಸೀತೆಯ ಪ್ರಾಚೀನತಮ ವರ್ಣನೆ ಸಿಕ್ಕುತ್ತದೆ. ಈ ಮಹಾ ಕೃತಿಯಲ್ಲಿ ಸೀತೆಯ ಜನ್ಮವಿಚಾರವನ್ನು ಹೇಳುವ ಉಲ್ಲೇಖಗಳು ೧೩ ಸಂದರ್ಭಗಳಲ್ಲಿ ಸಿಗುತ್ತವೆ.[9] ಜನಕನು ಯಜ್ಞಾರ್ಥವಾಗಿ ನೇಗಿಲಿನಿಂದ ಭೂಮಿಯನ್ನು ಶೋಧಿಸುತ್ತಿರಲು, ಒಬ್ಬಳು ಕನ್ಯೆಯು ದೊರಕಿದಳು, ಅವಳಿಗೆ ಸೀತೆ ಎಂದು ಹೆಸ

---

1. ಭಾರತತಾತ್ಪರ್ಯನಿರ್ಣಯ, ೪–೨೧.

2. ಆನಂದ ರಾಮಾಯಣ, ಸಾರಕಾಂಡ, III ೬೭ ರಿಂದ ೧೩೩. ಇದರಲ್ಲಿ ರಾವಣನು ಬಿಲ್ಲಡಿಗೆ ಬಿದ್ದು ತನ್ನ ಬಟ್ಟೆಗಳಲ್ಲಿ ಮಲಮೂತ್ರಗಳನ್ನು ಮಾಡಿಕೊಂಡನೆಂಬ ಹೇಳಿಕೆಯಿದೆ. ಈ ಅಂಶವನ್ನು ಕುಮಾರ ವಾಲ್ಮೀಕಿಯು ಕೈಬಿಟ್ಟಿರುವುದು ಉಚಿತ.

3. ಸೀತಾ ಸ್ವಯಂವರದಲ್ಲಿ ರಾವಣನ ಉಲ್ಲೇಖಗಳು ಕೆಳಗೆ ಹೆಸರಿಸಿದ ಕೃತಿಗಳಲ್ಲಿವೆ :
   ಭವಭೂತಿಯ ಮಹಾವೀರ ಚರಿತ, ಮಹಾನಾಟಕ (I ೨೧–೨೨)
   ಮುರಾರಿಕೃತ ಅನರ್ಘರಾಘವ (೩ನೇ ಅಂಕ) ತತ್ತ್ವ ಸಂಗ್ರಹ ರಾಮಾಯಣ
   (I ೨೯–೨೭), ರಾಮಚರಿತಮಾನಸ.

ಸತ್ಯೋಪಾಖ್ಯಾನದಲ್ಲಿ, ಪ್ರಹಸ್ತನು ವಿವಾಹ ಮಂಟಪಕ್ಕೆ ಬಂದು ' ಶಿವಧನುವನ್ನು ಮುರಿಯುವುದು ಶಿವಭಕ್ತ ರಾವಣನಿಗೆ ಸಲ್ಲದು, ಆದ್ದರಿಂದ ಅವನು ಬರಲಿಲ್ಲ ' ಎನ್ನುತ್ತಾನೆ. ದೇವೀಭಾಗವತ (ಸ್ಕಂದ ೩, ಅಧ್ಯಾಯ ೩೮) ದಲ್ಲಿ ಶಿವಚಾಪಯದಿಂದ ರಾವಣನು ವಿವಾಹಕ್ಕೆ ಬಂದಿಲ್ಲ ಎಂದು ಇದೆ.

4–5. ತೊ. ರಾ. I ೧೫–೨೮, ಆದರೆ ರಾವಣನು ಇದನ್ನು ನೆನಪಿಟ್ಟಂತೆ ತೋರುವುದಿಲ್ಲ.

6. ಡಾ. ಬುಲ್ಕೆ–ರಾಮಕಥಾ, ಪು. ೩೬೭ ನೋಡಬಹುದು.

7. ಮಹಾಭಾರತ, III ೨೮೪–೯.

8. ಹರಿವಂಶ, ೧–೪೧.

9. ವಾ. ರಾ. ಬಾಲಕಾಂಡ, ೧–೨೭, ೬೬–೧೪, ೭೩–೨೭.
   ಅಯೋಧ್ಯಾಕಾಂಡ, ೨೮–೩, ೫೪–೧೪, ೧೧೮–೨೮ರಿಂದ ೩೧.
   ಅರಣ್ಯಕಾಂಡ, ೧೩–೨, ೪೭–೩.
   ಸುಂದರಕಾಂಡ, ೫–೭, ೧೩–೧೬, ೧೬–೧೫.
   ಯುದ್ಧಕಾಂಡ, ೧೧೬–೨೫, ೧೧೯–೧೫.

ರಿಟ್ಟನು. "ಭೂತಳದಿಂದ ಜನಿಸಿದ ಆ ಕುಮಾರಿಯು ನನ್ನ ಮಗಳಾಗಬೇಕು"–ಎಂದು ಜನಕನು ವಿಶ್ವಾಮಿತ್ರನಿಗೆ ತಿಳಿಸುತ್ತಾನೆ.[1]

ಈ ಕಥೆಯ ಅನುಸರಣೆಯು ಅಧ್ಯಾತ್ಮ ರಾಮಾಯಣದಲ್ಲೂ ಇದೆ.[2]

ತೊರವೆ ರಾಮಾಯಣದಲ್ಲಿ, ಜನಕನು ಸೀತೆಯು ತನಗೆ ದೊರೆತ ವಿಚಾರವನ್ನು ತಿಳಿಸುತ್ತಾ 'ಹಿಂದೆ ರಾಜಸೂಯ ಮಖಭೂಮಿಯನ್ನು ಶೋಧಿಸುತ್ತಿರಲು, ಲಾಂಗಲದ ಮೊನೆಗೆ ಭೂಗತಾಲಯದ ವನರುಹಾಕರವು ಕಾಣಿಸಿತು. ಅದರಲ್ಲಿದ್ದ ಕನಕ ಕಮಲದ ಕರ್ಣಿಕಾ ಮಧ್ಯದಲಿ ಕೋಮಲೆಯ ಕಂಡೆನು' ಎನ್ನುತ್ತಾನೆ.[3]

ಕಮಲಾಸನೆಯಾದ ಲಕ್ಷ್ಮಿಯೇ ಸೀತೆ ಎಂಬುದನ್ನು ತಿಳಿಸುವುದೇ ಕವಿಯ ಆಶಯವಿರಬೇಕು. ಇದನ್ನು ಹೇಳುವಲ್ಲಿ, ಅಧ್ಯಾತ್ಮರಾಮಾಯಣದ,

ಮುಮೋದ ಜನಕೋ ಲಕ್ಷ್ಮೀಂ ಕ್ಷೀರಾಬ್ಧಿರಿವ ವಿಷ್ಣವೇ[4]

ಎಂಬಹೇಳಿಕೆ, ಭಾರತನಿರ್ಣಯದ,

ಸ್ವಯಂ ರಮಾಸೀರತ ಏನಜಾತಾ[5] ಎಂಬ ಹೇಳಿಕೆ,–ಎರಡೂ ಆಧಾರಗಳಾಗಿರಬಹುದು.[6]

## ಪರಶುರಾಮ ಪ್ರಕರಣ

ಮಾನವ ಸಹಜವಾದ ಸ್ಪರ್ಧೆಯ ಹಂತದಿಂದ, ಎರಡು ಮಾನವ ವರ್ಗಗಳ ಘರ್ಷಣೆಯ ರೂಪಕ್ಕೆ ತಿರುಗಿಸಿ ಕೊನೆಗೆ ದಿವ್ಯಶಕ್ತಿಗಳ ಸಂಗಮವೆನಿಸಿದ್ದು ಪ್ರಕರಣದ ವೈಶಿಷ್ಟ್ಯ. ಕುಮಾರವಾಲ್ಮೀಕಿಯು ತನ್ನ ದೃಷ್ಟಿಯನ್ನು ರಾಮನ ದಿವ್ಯತೆಯೆಡೆಗೇ ಕೇಂದ್ರೀಕರಿಸಿರುವುದು ಈ ಪ್ರಕರಣದಲ್ಲೂ ವ್ಯಕ್ತವಾಗುತ್ತದೆ.

ಪ್ರಕೃತ ವಾಲ್ಮೀಕಿ ರಾಮಾಯಣದಲ್ಲಿ ದೊರೆಯುವ 'ಪರಶುರಾಮ ಪ್ರಕರಣ'ವು ಪ್ರಕ್ಷಿಪ್ತವಾಗಿರಬೇಕೆಂದು ತೋರುತ್ತದೆ.[7] ಕೆಲವು ವಿದ್ವಾಂಸರು, ಪರಶುರಾಮ–ರಾಮ ವಿವಾದದಲ್ಲಿ ಬ್ರಾಹ್ಮಣ–ಕ್ಷತ್ರಿಯರೊಳಗಿನ ಘರ್ಷಣೆ

---

1. ವಾ. ರಾ. ಬಾಲಕಾಂಡ, ೬೬–೧೩, ೧೪.
2. ಅಧ್ಯಾತ್ಮ ರಾಮಾಯಣ I ೬–೫೭.

(ನೇಗಿಲ ಗೆರೆಯ ಹೆಸರಿನ 'ಸೀತೆ'ಯನ್ನು ರಾಮನು ವರಿಸಿದ್ದರಿಂದ ಅವನು ದಕ್ಷಿಣದಲ್ಲಿ ಕೃಷಿಯನ್ನು ಪ್ರಚಾರಮಾಡಿದನೆಂಬ ಕಲ್ಪನೆ, ತೈತ್ತಿರೀಯ ಬ್ರಾಹ್ಮಣ (II ೧೦, ೧–೩)ದಲ್ಲಿ ಬರುವ ಪ್ರಜಾಪತಿಯ ಮಗಳು 'ಸೀತಾ' ಎಂಬ ಹೆಸರಿನವಳೊಂದಿಗೆ ಜನಕಜೆಯ ಸಮೀಕರಣ, ಇತ್ಯಾದಿ ವಿಚಾರ ಸರಣಿಗಳು ಇವೆ)

Monier Williams-Indian Wisdom, ಪು. ೩೩೪ರ ಅಡಿಟಿಪ್ಪಣಿ.

3. ತೊ. ರಾ. I ೧೬–೨೭.

ಕೊಳದಲ್ಲಿ ಸೀತೆಯು ದೊರಕಿದಳೆಂಬ ನಂಬಿಕೆಗೆ ಪೋಷಕವಾಗಿ, ಈಗಲೂ ಉತ್ತರ ಭಾರತದ ತಿರುಹತಿನ ಕೆರೆಯನ್ನು–ಸೀತೆಯ ಕೆರೆ ಎನ್ನಲಾಗುತ್ತಿದೆ.

4. ಅ. ರಾ. I ೬–೫೫.
5. ಭಾ. ತಾ. ನಿ. ೩–೮೮.
6. ಕ್ಷೇಮೇಂದ್ರನ 'ದಶಾವತಾರ ಚರಿತ' (೯೩–೧೦೪)ದಲ್ಲಿ 'ಪದ್ಮಜಾ ಸೀತೆ'ಯ ವಿಚಾರವಿದೆ.

ವಾಲ್ಮೀಕಿಯು ಹೇಳಿದ ಭೂಮಿಜಾ ಸೀತೆ, ಕುಮಾರ ವಾಲ್ಮೀಕಿ ಹೇಳಿದ ಕಮಲಾಲಯೆಯಾದ ಸೀತೆ,–ಇದರೊಂದಿಗೆ ರಕ್ತಜಾ ಸೀತೆ, (ಅದ್ಭುತರಾಮಾಯಣ, ಸರ್ಗ ೭), ಅಗ್ನಿಜಾ ಸೀತೆ, (ಆನಂದ ರಾಮಾಯಣ, I, III ೧೪೪–೨೭೫) ರಾವಣಾತ್ಮಜಾ ಸೀತೆ(ಮಹಾಭಾಗವತ ದೇವಿಪುರಾಣ,೮೮–೬೮)...ಹೀಗೆಲ್ಲಾ ವಿಭಿನ್ನ ಹೇಳಿಕೆಗಳಿವೆ. ಕುಮಾರವಾಲ್ಮೀಕಿಗಂತೂ ಸೀತೆಯು ಸಾಕ್ಷಾತ್ ಲಕ್ಷ್ಮಿಯೇ. ಬೌದ್ಧ ಜಾತಕದಂತೆ ಸೀತೆಯು ದಶರಥನ ಮಗಳೇ–ಡಾ. ಬುಲ್ಕೆ–ರಾಮಕಥಾ, ಪು. ೩೪೧–೩೪೮.

7. Monier Williams-Indian Wisdom. p. 348.
   C. V. Vaidya-Riddles of the Ramayana.
   ಬುಲ್ಕೆ–ರಾಮಕಥಾ–ಪು. ೨೯೦, ೩೧೮. ಮಾಸ್ತಿ–ಆದಿಕವಿ ವಾಲ್ಮೀಕಿ. ಪು. ೧೫.
   Sharma-A Socio Political Study of the Ramayana, p. 5-13.

ಯನ್ನೂ ಗುರುತಿಸಲಾಗಿದೆ.[1] ಆದರೆ ಕೇವಲ ಬೌದ್ಧಿಕವಾದ ಈ ಊಹೆಗೆ ಆದಿಕಾವ್ಯದಲ್ಲಿ ತಕ್ಕಷ್ಟು ಪೋಷಣೆ ದೊರೆಯುವುದಿಲ್ಲ.

ಮಹಾಭಾರತದ ಪೂನಾದ ಶಾಸ್ತ್ರೀಯ ಸಂಸ್ಕರಣದಲ್ಲಿ, ಬೇರೆ ಬೇರೆ ಸಂದರ್ಭಗಳಲ್ಲಿ[2] ಪರಶುರಾಮನ ಕಥೆಯ ಉಲ್ಲೇಖಗಳು ಇದ್ದರೂ, ಅಲ್ಲೆಲ್ಲೂ ಪರಶುರಾಮನು ರಾಮನನ್ನು ಎದುರಿಸಿ ತೇಜೋಹೀನನಾದ ವಿಚಾರ ದೊರೆಯುವುದಿಲ್ಲ. ಇದರಿಂದ ರಾಮನ ಅವತಾರತತ್ವವನ್ನೂ, ರಾಮನು ಪರಶುರಾಮನಿಂದ ಹೊಗಳಿಸಿಕೊಳ್ಳುವ ಪ್ರಕರಣವನ್ನೂ-ನಂತರದ ಪೌರಾಣಿಕ ದೃಷ್ಟಿಯ ಕವಿಗಳು ಆದಿಕಾವ್ಯಕ್ಕೆ ಸೇರಿಸಿರಬೇಕು ಎನ್ನಿಸುತ್ತದೆ.[3]

ವಾಲ್ಮೀಕಿಯ ರಾಮಾಯಣದಲ್ಲಿನ ಪರಶುರಾಮ ಪ್ರಕರಣವು ಪ್ರಕ್ಷಿಪ್ತವಲ್ಲವೆಂದೇ ಭಾವಿಸಿದರೂ, ಅದರಲ್ಲಿನ ರಾಮನ ದಿವ್ಯತೆ ಕುರಿತಾದ ಹೇಳಿಕೆಗಳು ವಾಲ್ಮೀಕಿ ಕೃತವೆಂದೇ ತಿಳಿದರೂ, ಪರಶುರಾಮನ ವಿಷ್ಣುತ್ವದ ಬಗ್ಗೆ ಆದಿಕಾವ್ಯದಲ್ಲಿ ಯಾವ ಸೂಚನೆಯೂ ದೊರೆಯುವುದಿಲ್ಲವೆನ್ನುವುದು ಖಚಿತ.

ನರಸಿಂಹ ಪುರಾಣದಲ್ಲಿ ಪರಶುರಾಮನಲ್ಲಿದ್ದ ವೈಷ್ಣವ ತೇಜಸ್ಸು ಶ್ರೀರಾಮನಲ್ಲಿ ಸೇರಿಕೊಂಡಿತು ಎನ್ನುವ ಹೇಳಿಕೆ,[4] ಇದನ್ನೇ ಹೋಲುವ ಪದ್ಮಪುರಾಣದ ಉಲ್ಲೇಖ,[5] ಅಧ್ಯಾತ್ಮ ರಾಮಾಯಣ[6] ಮತ್ತು ಆನಂದ ರಾಮಾಯಣ[7]ಗಳಲ್ಲಿ ಬರುವ ಪರಶುರಾಮನಿಂದ ರಾಮಸ್ತುತಿ, ಪರಶುರಾಮನಲ್ಲಿ ಅತುಲ ನಾಮಕ ಅಸುರಾವೇಶದ ವಿಚಾರ,[8] ಮಹಾವೀರಚರಿತದಲ್ಲಿನ ಪರಶುರಾಮ ಪ್ರಸಂಗ–ಇವೆಲ್ಲವೂ ಈ ಪ್ರಕರಣವು ಹೊಂದಿದ 'ವಿನ್ಯಾಸ ವೈವಿಧ್ಯ'ವನ್ನು ವಿಶದಪಡಿಸುತ್ತವೆ.

ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಪರಶುರಾಮನಿಗೆ 'ರಾಮನು ಮನುಜನಲ್ಲ' ಎಂಬ ಅರಿವು ಮೂಡಿದೊಡನೆ, 'ಆಯಿತೆಮ್ಮವತಾರವೀ ರಾಮಾಯಣದ ನಾಟಕಕೆ ದೀಪ್ತಿನ್ಯಾಯದವೊಲು' ಎಂದು ಶ್ರೀರಾಮನನ್ನಪ್ಪಿ, ಅಕ್ಷಯ ಸಾಯಕವನವನಿಗಿತ್ತು ಅವನು ತೆರಳುತ್ತಾನೆ.[9] ಪರಶುರಾಮ ಮತ್ತು ರಾಮ–ಇಬ್ಬರ ಅವತಾರಗಳನ್ನು ಉಲ್ಲೇಖಿಸಿ, ರಾಮಾವತಾರಕ್ಕೆ ಪ್ರಾಶಸ್ತ್ಯ, ಪ್ರಾಧಾನ್ಯ ನೀಡಿದ್ದು ಕುಮಾರ ವಾಲ್ಮೀಕಿಯ ಕಥಾವೈಶಿಷ್ಟ್ಯವಾಗಿದೆ.[10]

---

1. M. Williams-Indian Wisdom-p. 347.
2. ಮಹಾಭಾರತ–ಅರಣ್ಯಕ ಪರ್ವ ಅಧ್ಯಾಯ ೧೪೭.
   ಅಧ್ಯಾಯ ೨೭೩-೨೯೧ (ರಾಮೋಪಾಖ್ಯಾನ.)
   ದ್ರೋಣಪರ್ವ ಅಧ್ಯಾಯ ೫೯.
   ಶಾಂತಿಪರ್ವ ಅಧ್ಯಾಯ ೧೨.
3. ಜೈನ ಪರಂಪರೆಯ 'ಪಉಮ ಚರಿಯ'ದಲ್ಲಿ ಪರಶುರಾಮ ಪ್ರಕರಣದ ಸೂಚನೆಯೂ ದೊರೆಯುವುದಿಲ್ಲ ಎನ್ನುವುದು ಇಲ್ಲಿ ಸ್ಮರಣೀಯ.
4. ನರಸಿಂಹಪುರಾಣ–ಅಧ್ಯಾಯ ೪೭–೧೪೮, ೧೪೯.
5. ಪದ್ಮಪುರಾಣ ಉತ್ತರಕಾಂಡ ೨೬೯–೧೬೨.
6. ಅಧ್ಯಾತ್ಮ ರಾಮಾಯಣ, I ೭–೬ ರಿಂದ ೫೦.
7. ಆನಂದ ರಾಮಾಯಣ, I ೩–೩೪೫ ರಿಂದ ೩೭೮.
8. ಭಾರತ ತಾತ್ಪರ್ಯ ನಿರ್ಣಯ, ೪–೬೨.
9. ತೊ. ರಾ. I ೧೭–೧೯.

   ಇಲ್ಲಿ ಕವಿಯು ಹೇಳಿದ ದೀಪ್ತಿನ್ಯಾಯವು ಕಾಳಿದಾಸನ 'ರಘುವಂಶ'ದ ಪಶ್ಯತಿಸ್ಮ ಜಗತಾದನಾತ್ಮಯೇ ಪಾರ್ವಣಾಶಶಿದಿವಾಕರಾವಿವ–ಎಂಬ ಹೋಲಿಕೆಯನ್ನು ನೆನಪಿಸುತ್ತದೆ. (ರಘುವಂಶ ೧೧–೮೨)
10. ಕುಮಾರ ವಾಲ್ಮೀಕಿಯನ್ನನುಸರಿಸಿದ ಬತ್ತಲೇಶ್ವರನ ಕೃತಿಯಲ್ಲೂ ಹೀಗಿದೆ (೩–೨೨) ಈ ಪ್ರಕರಣದ ಕುರಿತು ಇದೇ ಲೇಖಕನ 'ರಾಮಕಥೆಯಲ್ಲಿ ಪರಶುರಾಮ ಪ್ರಕರಣ' ಲೇಖನವನ್ನು ನೋಡಬಹುದು.

(ಯುಗಪುರುಷ–ದಸರಾಂಕ–೧೯೭೨)

## ಅಯೋಧ್ಯಾಕಾಂಡ

### ಯುವರಾಜ ಅಧಿರಾಜ ಪದವಿಗಳು

ವೃದ್ಧನಾದ ದಶರಥನು ನಿರಾತಂಕವಾಗಿ ರಾಮನಿಗೆ ಯುವರಾಜ ಪಟ್ಟಾಭಿಷೇಕ ನಡೆಸಿದಂತೆಯೂ,[1] ಆಮೇಲೆ ಅಧಿರಾಜೇಂದ್ರ ಪಟ್ಟಾಭಿಷೇಕಾವಸರದಲ್ಲಿ ಮಂಥರೆಯಿಂದಾಗಿ ವಿಘ್ನವೊದಗಿದಂತೆಯೂ[2] ಹೇಳಿರುವುದು ಕುಮಾರ ವಾಲ್ಮೀಕಿಯ ಕಥಾವೈಶಿಷ್ಟ್ಯವಾಗಿದೆ.

ರಾಜ್ಯಾಧಿಕಾರವನ್ನು ಯುವರಾಜ, ಮತ್ತು ಅಧಿರಾಜೇಂದ್ರಪಟ್ಟಗಳೆಂದು ಕವಿ ವರ್ಗೀಕರಿಸಿದ್ದನ್ನು ಕಾಣಬಹುದು. ಇವೆರಡೂ ಬೇರೆ, ಬೇರೆ ಎಂದು ವಾಲ್ಮೀಕಿ ರಾಮಾಯಣದಲ್ಲಿ ಸೂಚನೆಯಿದೆ.[3] ಆದರೆ, ಆದಿಕಾವ್ಯದಲ್ಲಿ ಯುವರಾಜ ಪಟ್ಟಾಭಿಷೇಕ ಸಂದರ್ಭದಲ್ಲಿಯೇ ರಾಮನಿಗೆ ವನವಾಸ ಒದಗಿಬರುತ್ತದೆ.

ವಾಲ್ಮೀಕಿ ರಾಮಾಯಣದಿಂದ ತಿಳಿದು ಬರುವಂತೆ, ಯುವರಾಜ ಪದವಿಯ ಅರ್ಹತೆಗಳು ಎರಡು :

೧. ಆತನು ರಾಜನ ಹಿರಿಯ ಪಟ್ಟದರಸಿಯ ಹಿರಿಯಮಗನಾಗಿರಬೇಕು.[4]

೨. ಆತನು ತನ್ನ ಸದ್ಗುಣಗಳಿಂದ ಪ್ರಜಾರಂಜಕನಾಗಿರಬೇಕು.[5]

ಇದಕ್ಕನುಗುಣವಾಗಿ, ದಶರಥನು ಹಿರಿಯ ರಾಣಿ ಕೌಸಲ್ಯೆಯ ಮಗನೂ, ಪ್ರಜಾರಂಜಕನೂ ಆದ ರಾಮನು ಸಾಂಪ್ರದಾಯಿಕವಾಗಿ ಯುವರಾಜನೇ ಆಗಿರುತ್ತಾನೆ–ಎನ್ನುವುದನ್ನು ಸ್ಪಷ್ಟಪಡಿಸುವುದಕ್ಕಾಗಿ ಕುಮಾರ ವಾಲ್ಮೀಕಿ 'ಯುವರಾಜ ಪಟ್ಟವು ನಿರಾತಂಕವಾಗಿ ನಡೆದಂತೆ ಹೇಳಿರಬೇಕು.[6]

ವಾಲ್ಮೀಕಿ ರಾಮಾಯಣದಲ್ಲಿ ದಶರಥನು ಕೈಗೊಂಡ ರಾಮ ಪಟ್ಟಾಭಿಷೇಕದ ನಿರ್ಣಯ ವಿಚಾರದಲ್ಲಿ ದಶರಥನ ಪ್ರಾಮಾಣಿಕತೆಯ ಕುರಿತಾಗಿ ಕೆಲವರು ಸಂದೇಹ ಪಡುವುದಕ್ಕೆ ಅವಕಾಶವಿದ್ದಂತಿದೆ.[7] ತೊರವೆ ರಾಮಾಯಣದಲ್ಲಿ

---

1. ತೊ. ರಾ. II ೧-೭.
2. ಇದೇ. II ೧-೧೧, ೧೨.
3. ವಾ. ರಾ. II ೧೬-೧೨.
4. ಇದೇ. ೨-೧೧.
5. ಇದೇ. ೩-೪೦, ೪೧.
6. ಸಂಪೂರ್ಣಾಧಿಕಾರದ ಸಂಕೇತವಾದ ಅಧಿರಾಜ ಪದವಿಯ ಕುರಿತು ಕವಿಯು,

   ಈ ಸಕಲ ಸಾಮ್ರಾಜ್ಯಭಾರವ
   ನೀ ಸುಬಾಹು ಧ್ವಂಸಿಯಲಿ ನಿ
   ರ್ಯೈಸಿದರೆ ನಾವು ನಿಶ್ಚಿಂತರು........... (ತೊ. ರಾ. II ೧-೧೨) ಎನ್ನುತ್ತಾನೆ.

7. ವಾ. ರಾ. ನಲ್ಲಿ ದಶರಥನು ಆತುರಾತುರವಾಗಿ ಪಟ್ಟಾಭಿಷೇಕದ ನಿರ್ಣಯದ ಸಿದ್ಧತೆ ಮಾಡಿದ್ದರಲ್ಲಿ ಅವನ ಅಂತರಂಗದಲ್ಲಿನ ಆತಂಕವು ವ್ಯಕ್ತವಾಗುವುದು ಎಂಬ ಸಂಶಯಕ್ಕೆ ಪೋಷಕವಾಗಿ

   ೧. ಕೈಕೆಗೆ ವಿವಾಹ ಕಾಲದಲ್ಲಿ ದಶರಥನು ಕೊಟ್ಟ ರಾಜ್ಯಶುಲ್ಕದ ಮಾತು. (II ೧೦೭-೩)
   ೨. ಜನಕನಿಗೂ, ಕೇಕಯ ರಾಜನಿಗೂ ಆಮಂತ್ರಣ ಕಳುಹದೆ ಇರುವುದು. (II ೧-೪೮)
   ೩. ಭರತನ ಅನುಪಸ್ಥಿತಿಯಲ್ಲಿ,ಅದೇ ಸದವಕಾಶವೆಂಬಂತೆ, ರಾಮಪಟ್ಟಾಭಿಷೇಕದ ನಿರ್ಣಯ ಮಾಡಿದ್ದು. (II ೪-೨೫)
   ೪. ತನ್ನ ನಿರ್ಣಯವನ್ನು ರಾಣಿಯರಾರಿಗೂ ತಿಳಿಸದೆ ಇದ್ದದ್ದು
   ೫. ರಾಮನಿಗೆ ಪಟ್ಟವಾಗುವ ವಿಚಾರ ತಿಳಿದು ಕೌಸಲ್ಯೆಯು " ನಿನಗಿದ್ದ ಕಂಟಕಗಳೆಲ್ಲವೂ ಕಳೆದವು " ಎಂದು ರಾಮನಿಗೆ ತಿಳಿಸುವುದು. " ನಾವೆಲ್ಲ ಸಂತೋಷ ಪಡುತ್ತೇವೆ " ಎನ್ನುವಲ್ಲಿ ಕೈಕೆಯಿಯ ಹೆಸರಿಲ್ಲದಿರುವುದು. (II ೪-೩೯)

ಆದರೆ, ಮೇಲಿನ ಅಂಶಗಳನ್ನು ಅಲ್ಲಗಳೆದು, ದಶರಥನ ನಿರ್ಣಯದಲ್ಲಿ ನಿಷ್ಕಾಪಟ್ಯವನ್ನು ಗುರುತಿಸಬಹುದು.

   ೧. ರಾಜ್ಯ ಶುಲ್ಕದ ಮಾತು ಕೈಕೇಯಿಯ ನುಡಿಗಳಲ್ಲಿ ಬರುವುದಿಲ್ಲ. ಭರತನು ಹಿರಿಯ ಮಗನಾಗಿದ್ದರೆ ಮಾತ್ರ ಅವನಿಗೆ ಅದರ ಅರ್ಹತೆ.

ಅಂತಹ ಸಂಶಯಕ್ಕೆ ಕಾರಣವೇ ಇಲ್ಲ. ಪಟ್ಟಾಭಿಷೇಕದ ಹಿಂದಿನ ರಾತ್ರಿ ರಾಮನು 'ಕಾನನವಾಸದ ಕನಸು ಕಂಡು' ಅದನ್ನೇ ನಿರೀಕ್ಷಿಸುತ್ತಿರುತ್ತಾನೆ.[1] ಕವಿಕಲ್ಪಿಸಿದ ಇಂತಹ ಸ್ವಪ್ನವಿಚಾರ ಆದಿಕಾವ್ಯದಲ್ಲಿಲ್ಲ; ಇದು ಕನ್ನಡದ ಕವಿಯದೇ ಕಲ್ಪನೆ; ಇದು ರಾಮನಿಗೆ ಸೂಚಿತವಾದ ದಿವ್ಯ ಸಂಜ್ಞೆಯ ಯೋಜನೆ.

## ರಾಮ ವನವಾಸ : ಕಾರಣಗಳು

ಭರತನ ಪಟ್ಟಾಭಿಷೇಕ ಮತ್ತು ೧೪ ವರ್ಷಗಳ ವರೆಗೆ ರಾಮನ ವನವಾಸ[2]–ಕೈಕೇಯಿಯ ಈ ಎರಡು ವರಗಳ (ಹಿಂದೆ ಕೊಟ್ಟ ವರಗಳ ಪೂರ್ತಿಕೆಗಾಗಿ ಮುಂದಿಟ್ಟ ಕೇಳಿಕೆಗಳ) ಕಾರಣದಿಂದ ರಾಮನು ಅರಣ್ಯಕ್ಕೆ ತೆರಳಬೇಕಾಗುತ್ತದೆ.[3] ಇದಕ್ಕೆ ಪೋಷಕವಾಗಿ ಈ ಕೆಳಗಿನ ಕೆಲವು ಪರೋಕ್ಷ ಕಾರಣಗಳನ್ನೂ ವಾಲ್ಮೀಕಿಯ ಕೃತಿಯಲ್ಲಿ ಗುರುತಿಸಬಹುದು :

೧. ಸೀತೆಯು ರಾಮನೊಡನೆ ತನಗೆ 'ವನವಾಸದ ಯೋಗವಿದೆಯಾಗಿ[4] ಬ್ರಾಹ್ಮಣನು ಹೇಳಿದ್ದನೆಂದು' ತಿಳಿಸುವುದು.[5]

೨. ದಶರಥನು ತಾನು ಮಾಡಿದ ಪಾಪಗಳ ಫಲವಾಗಿ ತನಗೆ ರಾಮನ ಅಗಲುವಿಕೆಯೊದಗಿತೆಂದು ದುಃಖಿಸುತ್ತಾನೆ.[6]

೩. ಅಂಧಮುನಿ ಪುತ್ರವಧೆಯಿಂದಾಗಿ ತನಗೆ ಈ ಸಂಕಟ ಒದಗಿದಂತೆ ದಶರಥನ ಪರಿತಾಪ.[7]

೪. ಕೌಸಲ್ಯೆಯೂ ತಾನು ಪೂರ್ವಜನ್ಮದಲ್ಲಿ ಏನೋ ಅಪರಾಧ ಮಾಡಿರಬೇಕೆಂದು ಶೋಕಿಸುತ್ತಾಳೆ.[8]

ಅಧ್ಯಾತ್ಮ ರಾಮಾಯಣದಲ್ಲಿ, ಸೀತೆಯು ತಾನು ಕೇಳಿದ್ದ 'ಸೀತಾಸಹಿತ ರಾಮ-ವನವಾಸದ ರಾಮಾಯಣ ಕಥೆ'ಯನ್ನು ಸ್ಮರಿಸುತ್ತಾಳೆ.[2]

ಆದರೆ, ಕುಮಾರ ವಾಲ್ಮೀಕಿಯ ಶ್ರೀ ರಾಮನು ತನ್ನ ವನವಾಸಕ್ಕೆ, "ಪೂರ್ವಸಂಚಿತ ಕರ್ಮವೇ ಕಾರಣವೆಂದು" ಹೇಳುತ್ತಾನೆ. ಇದೂ ಕವಿಯ ದೃಷ್ಟಿಯಿಂದ 'ಅವತಾರ ವಿಡಂಬನೆಯೇ' ದೇವತೆಗಳ ಅಪೇಕ್ಷೆಯಂತೆ ಅವನು ರಾವಣ ವಧೆಗಾಗಿಯೇ ವನಗಮನ ಮಾಡಿದನೆಂದು ಕವಿಯು ಸ್ಪಷ್ಟಪಡಿಸಿದ್ದಾನೆ–'ಹರಿ ಜಗದ್ರಕ್ಷೆಗೆ ಸುಧಾಸಾಗರವ ಹೊರಡು

---

೨. ಆತುರವಾಗಿ ದಶರಥನು ಪಟ್ಟಾಭಿಷೇಕದ ನಿರ್ಣಯ ಮಾಡುವುದಕ್ಕೆ, ಅವನು ಕಂಡ ಮರಣಸೂಚಕವಾದ ದುಃಸ್ವಪ್ನವೇ ಕಾರಣ. ಆದ್ದರಿಂದ ಆಮಂತ್ರಣ ಕಳುಹುವುದಕ್ಕೆ, ಭರತನನ್ನು ಬರಮಾಡಿಕೊಳ್ಳುವುದಕ್ಕೆ ಅವಕಾಶವಿರಲಿಲ್ಲ ಮತ್ತು ಅವರಿಂದ ಆಕ್ಷೇಪ ಬಾರದೆಂಬ ವಿಶ್ವಾಸವೂ ದಶರಥನಿಗಿತ್ತು.

೩. ದಶರಥನು ಜನಾಭಿಪ್ರಾಯಕ್ಕೆ ಮನ್ನಣೆ ಕೊಡಬೇಕಾಗಿತ್ತು.

೪. ಮಂಥರೆಯು ಕೈಕೇಯಿಯೊಡನೆ 'ನೀನೇ ಭರತನನ್ನು ಸೋದರ ಮಾವನ ಮನೆಗೆ ಕಳುಹಿದ್ದೀಯಾ' ಎನ್ನುತ್ತಾಳೆ (II ೮–೨೮) ಆದ್ದರಿಂದ ದಶರಥನು ಭರತನನ್ನು ದೂರಮಾಡಿದವನಲ್ಲ.

1. ತೊ. ರಾ. II ೨-೧೫.

2. ಭಾಸನ ಪ್ರತಿಮಾನಾಟಕದಲ್ಲಿ ಹಿರಿಯರ ಪ್ರೇರಣೆಯಂತೆ ರಾಮನ ಕ್ಷೇಮಕ್ಕಾಗಿಯೇ ಅವನ ವನವಾಸವನ್ನು ಬಯಸಿದ ಕೈಕೇಯಿಯು ೧೪ ದಿನಗಳೆನ್ನಬೇಕಾದ್ದನ್ನು ೧೪ ವರ್ಷ ಎಂದು ಬಾಯ್ತಪ್ಪಿ ನುಡಿಯುತ್ತಾಳೆ-ಪ್ರತಿಮಾನಾಟಕ ಕೆ. ಕೃಷ್ಣಮೂರ್ತಿಯವರ ಅನುವಾದ, ೬ನೆಯ ಅಂಕ.

3. ವಾ. ರಾ. II ೧೧-೨೪-೨೬.

4. ಇದೇ. ೩೯-೪.

5. ಸೀತೆಗೊಂದು ಶಾಪದ ಕಥೆಯೂ ಇದೆ. (ಅ. ರಾ. ೩....).

6. ವಾ. ರಾ. II ೩೯-೪.

7. ಇದೇ. ೬೩-೧೧, ೧೨.

8. ಇದೇ. ೨೪೩-೧೭.

9. ಅಧ್ಯಾತ್ಮ ರಾಮಾಯಣ II ೪-೭೮.

ವಂತೆ ರಾಮನು ಅಯೋಧ್ಯೆಯನ್ನು ಬಿಟ್ಟು ತೆರಳುತ್ತಾನೆ' ಎಂದು[1] ಎಲ್ಲವನ್ನೂ (ಭವಿಷ್ಯವನ್ನೂ) ವಾಚ್ಯಗೊಳಿಸಿದ್ದಾನೆ.

### ದಶರಥನಿತ್ತ ರಾಜ ಮುದ್ರಿಕೆ

ರಾಮನು ವನಕ್ಕೆ ತೆರಳುವ ಮೊದಲು ತನ್ನಲ್ಲಿದ್ದ ಎಲ್ಲವನ್ನೂ ದಾನಮಾಡುತ್ತಾನೆ.[2] ಅರಣ್ಯವಾಸಕ್ಕೆ ಹೊರಟ ತನಗೆ ನಾರು ಬಟ್ಟೆಗಳನ್ನೇ ತಂದು ಕೊಡಲಿ, ತನಗೆ ಹಾರೆ, ಬುಟ್ಟಿಗಳೆರಡು ಸಾಕು ಎಂದು ಅಷ್ಟನ್ನೇ ಪಡೆದವನು ರಾಮ.[3] ಆದರೆ ಇದೇ ರಾಮನು ತನ್ನ ನಾಮಾಂಕಿತವಾದ ಅಂಗುಲೀಯಕವನ್ನು ಅಭಿಜ್ಞಾನವಾಗಿ[4] ಸೀತಾನ್ವೇಷಣೆಗಾಗಿ ಹೊರಟ ಆಂಜನೇಯನಿಗೆ ಕೊಡುತ್ತಾನಷ್ಟೆ. ಎಲ್ಲವನ್ನೂ ಬಿಟ್ಟು, ಏನನ್ನೂ ತನ್ನೊಂದಿಗೆ ತಾರದ **ರಾಮನಿಗೆ ಈ ಉಂಗುರವು ಎಲ್ಲಿಂದ ಬಂದಿತು?** ಎಲ್ಲವನ್ನೂ ಬಿಟ್ಟು ವನವಾಸಿಯಾದ ರಾಮನು ಉಂಗುರವೊಂದನ್ನು ಮಾತ್ರ ತನ್ನಲ್ಲಿ ಉಳಿಸಿಕೊಂಡಿದ್ದನೇ ? ಏಕೆ ?–ಈ ಪ್ರಶ್ನೆಗಳಿಗೆ ವಾಲ್ಮೀಕಿಯ ರಾಮಾಯಣದಲ್ಲಿ ಉತ್ತರ ದೊರೆಯದು.

ಈ ಉಂಗುರದ ವಿಚಾರವಾಗಿ ಅಧ್ಯಾತ್ಮರಾಮಾಯಣ, ಆನಂದ ರಾಮಾಯಣ–ಇತ್ಯಾದಿ ಗ್ರಂಥಗಳಲ್ಲೂ ಏನೂ ವಿಶಿಷ್ಟವಾದ ಉಲ್ಲೇಖ ದೊರೆಯುವುದಿಲ್ಲ.

**ಕುಮಾರ ವಾಲ್ಮೀಕಿಯು ಮಾತ್ರ** ಈ ಉಂಗುರವು ಮುಂದೆ ವಹಿಸಲಿರುವ ಮಹತ್ತ್ವದ ಪಾತ್ರವನು ಊಹಿಸಿದ್ದಾನೆ. ವನಗಮನಕ್ಕೆ ಸಿದ್ಧನಾದ ರಾಮನನ್ನು ಕರೆದು ದಶರಥನು :

> ಕಂದಕೇಳೀರೇಳು ವರುಷವು
> ಸಂದ ಬಳಿಕೀ ನಗರವಿದು ನಿ
> ನ್ನಿಂದ ಪಾಲಿಸಿಕೊಳಲಿಕೋ ಮುದ್ರಿಕೆಯ....[5]

ಎಂದು ಅಧಿಕಾರ ಲಾಂಛನವಾದ ಆ ಮುದ್ರಿಕೆಯನ್ನು ಕೊಟ್ಟಂತೆ ಹೇಳಿರುವುದು ವಿಶಿಷ್ಟವೂ, ಅರ್ಥಪೂರ್ಣವೂ ಆಗಿದೆ.

### ಜಟಾಯು–ಸಂದರ್ಶನ

ಪ್ರಚಲಿತ ವಾಲ್ಮೀಕಿ ರಾಮಾಯಣದ ಮೂರುಪಾಠ(೧. ದಾಕ್ಷಿಣಾತ್ಯ, ೨. ಗೌಡೀಯ, ೩. ಪಶ್ಚಿಮೋತ್ತ

---

1. ತೊ. ರಾ. II ೩-೫೨.
2. ವಾ. ರಾ. II ಸರ್ಗ ೩೨.
3. ಇದೇ. ೩೭-೪, ೫. 'ಖನಿತ್ರಪಿಟಕೇ ಚೋಭೇ ಸಮಾನಯತ ಗಚ್ಛತಃ'
4. ಈ 'ಅಭಿಜ್ಞಾನವೇ' ಕಾಳಿದಾಸನ "ಶಾಕುಂತಲ"ಕ್ಕೆ ಸ್ಫೂರ್ತಿ ನೀಡಿತೆಂದು ವಿದ್ವಾಂಸರ ಅಭಿಮತ.
   K. S. R. Sastri–Riddles of the Ramayana, P. 123.
   ಸೀತೆಯು ತನಗೆ ಹನುಮಂತನು ಕೊಟ್ಟ ಆ ಉಂಗುರವನ್ನು 'ಭರ್ತುಃ ಕರವಿಭೂಷಣಮ್' ಎನ್ನುವಳು (ವಾ. ರಾ. III ಸುಂ. ಕಾ. ೩೬-೪).
5. ತೊ. ರಾ. II ೪-೫.

ರಾಮಾಯಣದ ವ್ಯಾಖ್ಯಾನಕಾರರಲ್ಲೊಬ್ಬನಾದ ಗೋವಿಂದರಾಜನು ಬಹುಶಃ ಆ ಉಂಗುರವು ರಾಮನಿಗೆ ಜನಕನಿಂದ ವಿವಾಹ ಕಾಲದಲ್ಲಿ ಪಾರಿತೋಷಕವಾಗಿ ಕೊಟ್ಟಿರಬಹುದು. ಅದನ್ನು ಯಾವಾಗಲೂ ತನ್ನ ಕೈಯಲ್ಲಿ ಧರಿಸುತ್ತಿದ್ದಿರಬಹುದು. ಅಥವಾ ರಾಮನದೇ ಆ ಉಂಗುರವನ್ನು ಅವನು ಸೀತೆಗೆ ಒಮ್ಮೆ ಕ್ರೀಡಾ ಕಾಲದಲ್ಲಿ ಕೊಟ್ಟಿದ್ದು, ಮತ್ತೆ ಯಾವುದೋ ಸರಸ ಸಂದರ್ಭದಲ್ಲಿ ಅವಳಿಂದ ಪಡೆದಿರಬೇಕು ಎಂದು ಊಹಿಸುತ್ತಾನೆ. 'ಆಶ್ಚರ್ಯಚೂಡಾಮಣಿ'ಯ ಕಲ್ಪನೆಯೇ ಬೇರೆ.

ರೀಯ)[1] ಗಳಲ್ಲಿ ಸೀತಾಪಹರಣದ ಮೊದಲೇ ರಾಮನು ಜಟಾಯುವನ್ನು ಸಂಧಿಸಿದ ಪ್ರಕರಣವಿದೆ. ಅಲ್ಲದೆ, ಜಟಾಯುವು 'ಸೀತೆಯ ರಕ್ಷಣೆಯ ಭಾರವನ್ನು ಹೊತ್ತುಕೊಂಡ' ಹೇಳಿಕೆಯೂ ಇದೆ.[2]

### ಗೌಡೀಯ ಪಾಠದಲ್ಲಿ

ಸೀತಾಪಹರಣ ಕಾಲದಲ್ಲಿ ಜಟಾಯುವು ನಿಷ್ಕ್ರಿಯನಾದುದರ ಕಾರಣವನ್ನು ಹೀಗೆಂದು ಹೇಳಿದೆ: 'ತನ್ನ ಬಂಧುಗಳ ದರ್ಶನಕ್ಕಾಗಿ, ರಾಮನ ಆಜ್ಞೆ ಪಡೆದು, ಬೇಗನೆ ಹಿಂದಿರುಗುವುದಾಗಿ, ಪ್ರತಿಜ್ಞೆಮಾಡಿ ಜಟಾಯುವು ತೆರಳಿದ್ದ ಕಾಲದಲ್ಲಿ ಕನಕಮೃಗ ಪ್ರಕರಣ ನಡೆದು ಸೀತಾಪಹಾರವಾಗುತ್ತದೆ.

### ಇತರ ಎರಡು ಪಾಠಗಳು

ರಾಮನು ಕನಕಮೃಗನನ್ನು ತರಲು ಹೊರಡುತ್ತಾ ಲಕ್ಷ್ಮಣನಿಗೆ 'ಕಾರ್ಯದಕ್ಷನಾದ ಜಟಾಯುವು ನಿನಗೆ ಸೀತಾರಕ್ಷಣೆಯಲ್ಲಿ ನೆರವಾಗುತ್ತಾನೆ' ಎಂದು ತಿಳಿಸುತ್ತಾನೆ.[3]

### ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ

ರಾವಣನಿಂದ ಅಪಹೃತಳಾದ ಸೀತೆಯು–ಮರದ ಮೇಲೆ ಕುಳಿತಿದ್ದ ಜಟಾಯುವನ್ನು ಕಂಡು,

ರಾಮಾಯ ತು ಯಥಾತತ್ವಂ ಜಟಾಯೋ ಹರಣಂ ಮಮ
ಲಕ್ಷ್ಮಣಾಯ ಚ ತತ್ ಸರ್ವಮಾಖ್ಯಾತವ್ಯಮಶೇಷತಃ[4]

"ರಾಮಲಕ್ಷ್ಮಣರಿಗೆ ತನ್ನ ಅಪಹರಣದ ಸುದ್ದಿಯನ್ನೆಲ್ಲ ತಿಳಿಸು" ಎನ್ನುತ್ತಾಳೆ.

**ಮೂಲ ರಾಮಾಯಣದಲ್ಲಿ** ರಾಮನು ಸೀತಾಪಹರಣವಾದ ನಂತರವೇ ಜಟಾಯುವನ್ನು ಕಂಡ ಪ್ರಕರಣವು ಹೇಳಲ್ಪಟ್ಟಿರಬೇಕು–ಎಂದು ತೋರುತ್ತದೆ. ವಿವಿಧ ಪಾಠಗಳಲ್ಲಿ ತೋರಿಬರುವ ವ್ಯತ್ಯಾಸಗಳೇ ಈ ಊಹೆಗೆ ಅವಕಾಶವನ್ನುಂಟುಮಾಡುತ್ತದೆ.[5] ಇಷ್ಟಲ್ಲದೆ, ಸೀತಾಪಹರಣವಾದ ನಂತರ ರಾಮನು ಲಕ್ಷ್ಮಣನೊಂದಿಗೆ ಸೀತೆಯನ್ನರಸುತ್ತಾ ಅರಣ್ಯದಲ್ಲಿ ಸುತ್ತಾಡುತ್ತಿರುವಲ್ಲಿ–

ದದರ್ಶ ಪತಿತಂ ಭೂಮೌ ಕ್ಷತಜಾರ್ದ್ರಂ ಜಟಾಯುಷಮ್[6]

---

1. ದಾಕ್ಷಿಣಾತ್ಯ ಪಾಠ- ನಿರ್ಣಯ ಸಾಗರ ಪ್ರೆಸ್ ಮತ್ತು ಗುಜರಾತಿ ಪ್ರಿಂಟಿಂಗ್ ಪ್ರೆಸ್, ಮುಂಬಯಿ.
   ಗೌಡೀಯ ಪಾಠ–ಕಲ್ಕತ್ತಾ ಸಂಸ್ಕೃತ ಸಿರೀಸ್
   ಪಶ್ಚಿಮೋತ್ತರೀಯ ಪಾಠ–ದಯಾನಂದ ಮಹಾವಿದ್ಯಾಲಯ ಸಂಸ್ಕರಣ.
2. ವಾ. ರಾ. ಗೌಡೀಯಪಾಠ, ೨೬–೩–೧೦.
3. ಇದೇ. III ೪೩-೫೦.
   ಪ್ರದಕ್ಷಿಣೇನಾತಿಬಲೇನ ಪಕ್ಷಿಣಾ
   ಜಟಾಯುಷಾ ಬುದ್ಧಿಮತಾ ಚ ಲಕ್ಷ್ಮಣ
   ಭವಾಪ್ರಮತ್ತಃ ಪರಿಗೃಹ್ಯ ಮೈಥಿಲೀಂ
   ಪ್ರತಿಕ್ಷಣಂ ಸರ್ವತ ಏವ ಶಂಕಿತಃ
4. ಇದೇ. ೪೯-೪೦, ೪೧.
5. ಮಹಾಭಾರತ (೩-೨೬೩), ಭಟ್ಟಿಕಾವ್ಯ (ಸರ್ಗ ೫), ಉದಾರ ರಾಘವ (ಸರ್ಗ ೮)–ಗಳಲ್ಲೂ ಸೀತಾಪಹರಣದ ನಂತರವೇ ರಾಮನು ಜಟಾಯುವನ್ನು ಕಂಡ ಉಲ್ಲೇಖಗಳಿವೆ–ಎನ್ನುವುದನ್ನೂ ಇಲ್ಲಿ ಸ್ಮರಿಸಬಹುದು. ಯಾಕೋಬಿ; ಮತ್ತು ಬುಲ್ಕೆಯವರು (ರಾಮಕಥಾ, ಪು. ೪೨೪–೪೨೫) ಇದನ್ನು ತರ್ಕಿಸಿದ್ದಾರೆ.
6. ವಾ. ರಾ. ೬೭-೧೦.

ಜಟಾಯುವು 'ಭೂಮಿಯಲ್ಲಿ ಬಿದ್ದಿರುವುದು ಗೋಚರಿಸುತ್ತದೆ; ರಕ್ತದಲ್ಲಿ ನೆನೆದು ಬಿದ್ದಿದ್ದ–ಮಹಾಕಾಯನಾಗಿದ್ದ ಜಟಾಯುವನ್ನು ನೋಡಿ,

> ಅನೇನ ಸೀತಾ ವೈದೇಹೀ ಭಕ್ಷಿತಾನಾತ್ರ ಸಂಶಯಃ
> ಗೃಧ್ರ ರೂಪಮಿದಂ ವ್ಯಕ್ತಂ ರಕ್ಷೋಭ್ರಮತಿ ಕಾನನಮ್–[1]

ನಿಸ್ಸಂದೇಹವಾಗಿಯೂ, ಈತನೇ ಸೀತೆಯನ್ನು ಭಕ್ಷಿಸಿದ್ದಾನೆ. ರಾಕ್ಷಸನು ಗೃಧ್ರ ರೂಪಧರಿಸಿ ಅಲೆಯುತಿದ್ದಾನೆಂಬುದು ಸ್ಪಷ್ಟವಾಗಿದೆ–ಎನ್ನುತ್ತಾನಷ್ಟೇ ಅಲ್ಲದೆ ಅವನನ್ನು ಕೊಲ್ಲುವುದಕ್ಕಾಗಿ ರಾಮನು ಮುನ್ನುಗ್ಗುತ್ತಾನೆ.[2] ಆಗ ಜಟಾಯುವು ತನ್ನನ್ನು ಕೊಲ್ಲುವ ಅಗತ್ಯವಿಲ್ಲವೆಂದೂ, ಸೀತೆಯನ್ನಪಹರಿಸಿದ ರಾವಣನು ಆಗಲೇ ತನ್ನನ್ನು ಕೊಂದಿರುವುದಾಗಿಯೂ ಹೇಳುತ್ತಾನೆ.[3]

ಜಟಾಯುವು ಹೀಗೆ ನುಡಿಯುತ್ತಿರುವಾಗ, ತಾನು ಸೀತಾ ರಕ್ಷಣೆಯ ಬಗ್ಗೆ ಪ್ರತಿಜ್ಞೆ ಮಾಡಿದ್ದರ ಪ್ರಸ್ತಾಪವಾಗಲೀ ಅದನ್ನು ಕೈಗೂಡಿಸಲು ತಾನು ಅಸಮರ್ಥನಾದ ಬಗ್ಗೆ ಪಶ್ಚಾತ್ತಾಪವಾಗಲೀ ವ್ಯಕ್ತವಾಗುವುದಿಲ್ಲ. ಅಷ್ಟಲ್ಲದೆ, ರಾಮನು ಲಕ್ಷ್ಮಣನಿಗೆ,

> ಅಯಂ ಪಿತೃವಯಸ್ಯೋ ಮೇ ಗೃಧ್ರ ರಾಜೋ ಜಲನ್ವಿತಃ[4]

ಈ ಗೃಧ್ರರಾಜನು ನಮ್ಮ ತಂದೆಯ ಮಿತ್ರ,[5] ವಯಸ್ಸಾದವನು,–ಎಂದು ಜಟಾಯುವಿನ ಪರಿಚಯ ಮಾಡಿಸುತ್ತಾನೆ. ಆ ಮೊದಲೇ ಜಟಾಯುವಿನ ಭೇಟಿ, ಪ್ರತಿಜ್ಞೆ–ಇತ್ಯಾದಿ ನಡೆದಿದ್ದರೆ ಪುನಃ ಈ ಪರಿಚಯದ ಅಗತ್ಯವಿರುತ್ತಿರಲಿಲ್ಲ; ಅಲ್ಲದೆ ಈ ಸಂದರ್ಭದಲ್ಲಿ ಹಿಂದಿನ ಸಂದರ್ಶನದ ವಿಚಾರವೂ ಬಾರದೆ ಇರುತ್ತಿರಲಿಲ್ಲ.

**ಕುಮಾರ ವಾಲ್ಮೀಕಿಯು** ಈ ಪ್ರಕ್ಷಿಪ್ತ ವಿಚಾರವನ್ನು ಗಮನಕ್ಕೆ ತಾರದೆ ಪ್ರಚಲಿತ ರಾಮಾಯಣದ ಕಥಾನುಸರಣೆಮಾಡಿದ್ದಾನೆ. ಅಲ್ಲದೆ ಅಧ್ಯಾತ್ಮ ರಾಮಾಯಣ[6] ಮತ್ತು ಆನಂದರಾಮಾಯಣ[7] ಗಳಲ್ಲಿ ಸೀತಾಪಹರಣಕ್ಕಿಂತಲೂ ಮೊದಲೇ ರಾಮನಿಗೆ ಜಟಾಯು ಸಂದರ್ಶನವಾದಂತೆ ಹೇಳಿರುವುದನ್ನೂ ಇವನು ಗಮನಿಸಿರಬಹುದು. ವಾಲ್ಮೀಕಿ ರಾಮಾಯಣಕ್ಕಿಂತ[7] ಭಿನ್ನವಾದ ಕಥೆಯೊಂದನ್ನು ಕುಮಾರವಾಲ್ಮೀಕಿಯು ದಶರಥ–ಜಟಾಯು ಮೈತ್ರಿಗೆ ಸಂಬಂಧಿಸಿದಂತೆ ಹೇಳುತ್ತಾನೆ. ಜಟಾಯುವು ರಾಮನಿಗೆ,

> ಬಂದನಿಂದ್ರ ಸಹಾಯಕಜನೃಪ
> ನಂದನನು ಬಳಿಕಾ ಮಹೀಶನೊ
> ಳೊಂದು ಗೂಡಿ ಬಿಡೌಜನಾಜಿಯಲಾನಿಶಾಚರರ;

---

1. ವಾ. ರಾ. III ೬೭-೧೧.
2. ಇದೇ. ೬೬-೧೨.
3. ಇದೇ. ೬೭-೧೪ ರಿಂದ ೨೦.
   ' ರಕ್ಷಸಾ ನಿಹತಂ ಪೂರ್ವಂ ನಮಾಂ ಹಂತುಂ ತ್ವಮರ್ಹಸಿ' (೬೭-೨೦)
4. ಇದೇ. III ೬೭-೨೭.
5. ದಶರಥ–ಜಟಾಯು ಮೈತ್ರಿಗೆ ಸಂಬಂಧಿಸಿದ ಸೂಚನೆಯು ವಾ. ರಾ. ದಲ್ಲಿ ಅರಣ್ಯಕಾಂಡ, ೧೪–೩,೪. ೬೭–೨೭, ಕಿಷ್ಕಿಂಧಾಕಾಂಡ, ೫೬–೨೬, ೫೭–೯ಗಳಲ್ಲಿವೆ.
   ಮಹಾಭಾರತ, ಅರಣ್ಯಪರ್ವ, ೨೬೩-೧ ದಲ್ಲಿ, ಈ ಸ್ನೇಹದ ವಿಚಾರವಿದೆ, ಅದರ ಹಿನ್ನೆಲೆ ಹೇಳಿಲ್ಲ.
6. ಅಧ್ಯಾತ್ಮ ರಾಮಾಯಣ III ४-೧ ರಿಂದ ೭.
7. ಆನಂದ ರಾಮಾಯಣ I ೭-೩೭.
7. (ಅ) ಕೃತ್ತಿವಾಸರಾಮಾಯಣವು (೧–೨೭) ಅಯೋಧ್ಯೆಯ ಅನಾವೃಷ್ಟಿಕಾಲದಲ್ಲಿ, ಅದರ ನಿವಾರಣೆಯಲ್ಲಿ ಜಟಾಯುವು ದಶರಥನಿಗೆ ನೆರವಾಗಿ, ಸ್ನೇಹ ಬೆಳೆಯಿತೆನ್ನುವ ಕಥೆಯಿದೆ, ಬುಲ್ಕೆ–ರಾಮಕಥಾ, ಪು. ೪೨೭.

ಕೊಂದೆವಾವದರಿಂದ ಬಳಿಯಲಿ
ಬಂದುಪ್ಪೆ ಬಂಧುತ್ವಕೇಳ್ಳೆ
ವೊಂದುಪರದಲಿ ಬರಲು ಬೇಕೇ ರಾಮಕೇಳೆಂದ.[1]

ಜಟಾಯುವು ಹೀಗೆ ತನ್ನ ಮತ್ತು ದಶರಥನ ಮೈತ್ರಿಯ ವಿಚಾರವನ್ನು ತಿಳಿಸಿದಾಗ ಆ ಹಕ್ಕಿಯೊಡನೆ— ರಾಮನು—

ಅಯ್ಯನಸ್ಥಿರವಾದ ಬಳಿಕೆಮಗೆ........ನೀನೇ ದಶರಥನು[2]

ಎಂದು ಜಟಾಯುವಿನಲ್ಲಿ 'ಪಿತೃಭಕ್ತಿ' ಯನ್ನು ಪ್ರದರ್ಶಿಸುತ್ತಾನೆ. ಶ್ರೀರಾಮನ ಸದ್ಗುಣಾತಿಶಯವನ್ನು ತಿಳಿಸುವುದಕ್ಕಾಗಿಯೇ ಕವಿಯು ಹೀಗೆ ಹೇಳಿರಬೇಕು. ಆದರೆ ಜಟಾಯುವು 'ಸೀತಾ ರಕ್ಷಣೆಯ ವಿಚಾರದಲ್ಲಿ ಯಾವ ಭರವಸೆಯನ್ನೂ ಕೊಡುವುದಿಲ್ಲ, ಯಾವ ಪ್ರತಿಜ್ಞೆಯನ್ನೂ ಮಾಡುವುದಿಲ್ಲ.'

### ಜಟಾಯು—ಮರ್ಮ ವಂಚನೆ

ಆದಿಕಾವ್ಯದಲ್ಲಿ ಜಟಾಯು—ರಾವಣರೊಳಗಿನ ಹೋರಾಟ ೪೪ ಶ್ಲೋಕಗಳಲ್ಲಿ ವರ್ಣಿತವಾಗಿದೆ.[3] ಈ ಪ್ರಕರಣದಲ್ಲಿ ಮೂರು ಪಾಠಗಳೊಳಗೆ ಅಂತರ ಕಂಡುಬರುವುದಿಲ್ಲ. ಘೋರವಾದ ಕಾಳಗದಲ್ಲಿ ಅಸಾಧಾರಣ ಸಾಹಸಿಯಾದ ಜಟಾಯುವಿನ ರಕ್ಕೆಗಳನ್ನು ಘೋರಕರ್ಮಿಯಾದ ರಕ್ಕಸನು ಕಡಿದು ಹಾಕಲು ಜಟಾಯುವು ಪ್ರಾಣ ಹೋಗುವ ಸ್ಥಿತಿಯಲ್ಲಿ ಗಾಯಗೊಂಡು ಧೊಪ್ಪನೆ ನೆಲಕ್ಕುರುಳಿದನು.[4]

ಕುಮಾರ ವಾಲ್ಮೀಕಿಯು ಜಟಾಯು—ರಾವಣರ ಕಾಳಗವನ್ನು ಸಾಕಷ್ಟು ಪರಿಣಾಮಕಾರಿಯಾಗಿಯೇ ವರ್ಣಿಸುತ್ತಾ, ಕೊನೆಯಲ್ಲಿ, ಖಳನು 'ವಂಚನೆ'ಯ ಮೂಲಕ ಪಕ್ಷಿರಾಜನನ್ನು ಉರುಳಿಸಿದ ಕಥೆ ಹೇಳುತ್ತಾನೆ.[5] ಇದಕ್ಕೆ ಆದಿಕಾವ್ಯದಲ್ಲಿ ಯಾವ ಆಧಾರವೂ ದೊರೆಯುವುದಿಲ್ಲ.[6]

ಜಟಾಯುವಿನ ಅಸಮ ಬಲವನ್ನು ಕಂಡು ಒಳಗಿಂದೊಳಗೆ ಹೆದರಿದ ರಾವಣನು ಕೃತಕ ಸ್ನೇಹವನ್ನು ವ್ಯಕ್ತಪಡಿಸುತ್ತಾ,

ಸಮಬಲರು ನಾವಿಬ್ಬರಿಬ್ಬರ
ಸಮರಸುರಿಯದು ಸೋಲಗೆಲವಿವು
ಸಮನಿಸವು ಕದನದಲಿ ಧರ್ಮದಲೆಮ್ಮ ಮರ್ಮಗಳ

---

1. ತೊ. ರಾ. III ೧-೪೩, ಮುಂದಿನ ಪದ್ಯದಲ್ಲಿ ಜಟಾಯುವಿನ ವಯಸ್ಸಿನ ಬಗ್ಗೆ ಹೇಳಿದ್ದಕ್ಕೆ, ಜಟಾಯು ರಾವಣನೊಡನೆ ವಾ. ರಾ. ದಲ್ಲಿನ ಹೇಳಿಕೆ ಆಧಾರವಿರಬಹುದು:
   ಷಷ್ಟಿರ್ವರ್ಷ ಸಹಸ್ರಾಣಿ ಮಮ ಜಾತಸ್ಯ ರಾವಣ, ವಾ. ರಾ. III ೫೦-೨೦.
2. ತೊ. ರಾ. III ೧-೪೫.
3. ವಾ. ರಾ. III ೫೧-೧ರಿಂದ೪೪. ಈ ಭಾಗದಲ್ಲಿ ವಾಲ್ಮೀಕಿಯ ಕವಿತಾಕೌಶಲ ಹೆಚ್ಚು ಹೃದಯಸ್ಪರ್ಶಿಯಾಗುವಂತೆ ಅಭಿವ್ಯಕ್ತಗೊಂಡಿದೆ. ಅವರೊಳಗೆ ಒಂದು ಮುಹೂರ್ತಕಾಲ ಸಂಗ್ರಾಮವು ನಡೆಯಿತು. (೫೧—೪೧)
4. ವಾ. ರಾ. III ೫೧-೪೪.
5. ತೊ. ರಾ. III ೧೦-೨೫ರಿಂದ೨೭.
6. ಮಹಾಭಾರತ-ವನಪರ್ವ-೨೭೮-೬ರಲ್ಲಿ-ಖಡ್ಗಮಾದಾಯ ಚಿಚ್ಛೇದ ಭುಜೌ ತಸ್ಯ ಪತತ್ರಿಣಃ

ಅಧ್ಯಾತ್ಮರಾಮಾಯಣ III ೭-೫೭-೫೮—ರಾವಣಃ ಖಡ್ಗಮಾದದೇ ಚಿಚ್ಛೇದ ಪಕ್ಷೌಸಾಮರ್ಷಃ ಪಕ್ಷಿರಾಜಸ್ಯಧೀಮತಃ, ಪಪಾತ ಕಿಂಚಿಚ್ಛೇಷೇಣ ಪ್ರಾಣೇನ ಭುವಿ ಪಕ್ಷಿರಾಟ್

ಆನಂದ ರಾಮಾಯಣ- ೧ ೭. ೧೧೧-೧೧೨.

ಸ್ವಸ್ಥೀ ಭೂತೋ ದಶಾಸ್ಯೋऽಪಿ ತಾಡಯಾಮಾಸ ತಂ ಪದಾ|
ತತೋ ಜಟಾಯುಃ ಪತಿತೋ ವಮನ್ ರಕ್ತಂ ಮುಖೇನ ಸಃ||

ಇಲ್ಲೆಲ್ಲೂ 'ವಂಚನೆ'ಯ ಪ್ರಸ್ತಾಪವಿಲ್ಲ.

ಕ್ರಮಿತವಚನದಲುಸುರಿದಡೆ ವಿ
ಕ್ರಮದ ಬಗೆ ಬಳಿಕರಿಯಬಹುದೆನ
ಲಮರರಿಪುವಿನ ನುಡಿಗೆ ನಂಬುಗೆವಿಡಿನರುಣಸುತ.[1]

ರಾವಣನ ಕೇಳಿಕೆಯಂತೆ ಜಟಾಯುವು 'ಒಪ್ಪುವೀ ಘನ ಪಕ್ಷಮೂಲದೊಳಿಪ್ಪುದೆನ್ನಸು' ಎಂದು ನಿಜವನ್ನು ನುಡಿಯುತ್ತಾನೆ.[2] ಆದರೆ, 'ಪರಸತಿಗೆನುವಿಕ್ಕುವವರು ನರಕ ಭಯಕ್ಕಂಜುವರೇ ?–ಖಳನು ತನ್ನಯ ಚರಣ ಚರಣತಳದಲಿ ಪರಮತರ ಚೈತನ್ಯವಿದೆ'[3] ಎಂದು ಸುಳ್ಳನ್ನೇ ಆಡುತ್ತಾನೆ. ಮುಂದಿನ ಕಾಳಗದಲ್ಲಿ ಆ ರಕ್ಕಸನು 'ನಿರ್ಭರದ ನಿಸ್ತ್ರಿಂಶಕದಲಿ ಅರುಣಜನ ಮೇಲೆರಗಿ, ಅವನ ಪಕ್ಷಗಳನ್ನು ಕತ್ತರಿಸುತ್ತಾನೆ.

ಕಳಚಿಬಿದ್ದವು ಪಕ್ಷವಿಂದ್ರನು
ಕಳಚಿದದ್ರಿಯ ಪಕ್ಷದಂತಿರೆ
ಬಳಲಿದನು ಬೊಂಬಾಳಿಸಿದ ಭಾಸುರದ ರಕ್ತದಲಿ[4]

ಜಟಾಯುವು 'ಜಲರುಹಾಕ್ಷ, ಜನಾರ್ದನ ಶ್ರೀನಿಳಯ, ನೀನೇ ಗತಿ' ಎನ್ನುತ್ತಾ ಇಳೆಗೊರಗುತ್ತಾನೆ.[5]

ಹೀಗೆ ರಾವಣನು ಜಟಾಯುವನ್ನು ವಂಚಿಸುವ ಕಥೆ 'ತತ್ತ್ವ ಸಂಗ್ರಹರಾಮಾಯಣದಲ್ಲಿದೆ.'

ಜೇಷ್ಯಾಮಿ ಕೂಟಯುದ್ಧೇನೇತ್ಯಾಲೋಚ್ಯೈವಮನು ಭಾಷತ
ಮರ್ಮದೇಶಂ ಪ್ರವಕ್ಷ್ಯಾಮಿ ಮಮತೇ ವಕ್ತುಮರ್ಹಸಿ
ಪಾದಾಂಗುಷ್ಠಂ ಹಿಮೇ ಮರ್ಮ ತವ ಮರ್ಮ ಪ್ರವಕ್ಷ್ಯತಾಮ್[6]

ಕುಮಾರ ವಾಲ್ಮೀಕಿಯಂತೆಯೇ ಇಲ್ಲಿಯೂ ರಾವಣನು ತನ್ನ ಪಾದಾಂಗುಷ್ಠದಲ್ಲಿ ತನ್ನ ಪ್ರಾಣವಿದೆ ಎನ್ನುತ್ತಾನೆ. ಕುಮಾರ ವಾಲ್ಮೀಕಿಯು ಹೇಳಿದ ಕಥೆಯ ಅನುಸರಣೆಯು ಬತ್ತಲೇಶ್ವರನ–'ಕೌಶಿಕ ರಾಮಾಯಣದಲ್ಲಿ' 'ಖಗ ನಿಜ ನೆರನ ಹೇಳಿದನು, ದುರುಳ ದಾನವ ಕಪಟದಿಂದವೆ ಚರಣದಳವನು ನೆರನ ಹೇಳಿದ' ಎಂದಿದೆ.[7]

---

1. ತೊ. ರಾ. III ೧೦–೨೫.
2. ಇದೇ. ೧೦–೨೬.
3. ಇದೇ. ೧೦–೨೭.
4.–5. ಇದೇ. ೧೦–೨೮.
6. ತತ್ತ್ವಸಂಗ್ರಹ ರಾಮಾಯಣ. III ಸರ್ಗ ೧೫-೪೭, ೪೮
7. ಬತ್ತಲೇಶ್ವರನ ಕೌಶಿಕ ರಾಮಾಯಣ–೬–೪೦, ೪೧.

(ಅ) ಮುಂದೆ ಯುದ್ಧಕಾಂಡದಲ್ಲಿ ರಾಮನು ರಾವಣನನ್ನು, ಅನ್ಯತ ಮುಖದಿಂದಾರು ಗೆಲಬಹುದೈ ನಿದಾನಿಸಲರುಣ ನಂದನನ–ಎಂದು ಮೂದಲಿಸುತ್ತಾನೆ. ತೊ. ರಾ. VI ೪೭-೨೪.

(ಆ) ಜಟಾಯು ಉರುಳಿಬಿದ್ದ ಸನ್ನಿವೇಶದಲ್ಲಿ ಕುಮಾರ ವಾಲ್ಮೀಕಿಯು ವರ್ಣಿಸುವ 'ಕಳಚಿ ಬಿದ್ದವು ಪಕ್ಷವಿಂದ್ರನು ಕಳಚಿದದ್ರಿಯ ಪಕ್ಷದಂತಿರೆ'–ಈ ಪದ್ಯವು ನಾಗಚಂದ್ರನ ಪಂಪರಾಮಾಯಣದ ಇದೇ ಸಂದರ್ಭದ–

ತನ್ನೆರಡುಮೆರಂಕೆಗಳ್ ಮುರಿದಿಳಾತಳದೊಳ್ ಕೆಡೆದತ್ತು ವಜ್ರದಿಂ
ಸುರಪತಿ ಪೊಯ್ಯೆ ಬಿಟ್ಟ ಕೆಡದಂತೆ ಜಟಾಯು ನಭೋ ವಿಭಾಗದಿಂ
(ಪಂಪರಾಮಾಯಣ ೯-೧೦೪.)–ಪದ್ಯವನ್ನು ನೆನಪಿಸುತ್ತದೆ

(ಇ) ರಾವಣನಿಂದ ಜಟಾಯು ವಂಚನೆಯ ಪ್ರಕರಣ ಮರಾಠಿಯ "ಭಾವಾರ್ಥರಾಮಾಯಣ" (೩-೧೭) ದಲ್ಲಿದೆಯೆಂದು ಬುಲ್ಕೆಯವರು ಹೇಳುತ್ತಾರೆ–ರಾಮಕಥಾ–ಪು. ೪೨೫.

(ಈ) ಇಂಡೋನೇಶಿಯಾದ 'ಸೆರೀ ರಾಮ'ದಲ್ಲಿ:

ರಾವಣನು ತನ್ನ ಅಂಗುಷ್ಠದಲ್ಲಿ ತನ್ನ ಪ್ರಾಣವಿದೆ ಎಂದು ಹುಸಿನುಡಿಯಲು, ಅದನ್ನು ಕೇಳಿದ ಸೀತೆಯು, ಜಟಾಯುವೊಡನೆ, 'ಮರ್ಮ ರಹಸ್ಯವನ್ನು ಅರುಹಬೇಡ' ಎಂದು ಎಚ್ಚರಿಸುತ್ತಾಳೆ. ಆದರೂ ಜಟಾಯು ಸುಳ್ಳಾಡುವುದಿಲ್ಲ. ರಾವಣನಿಂದ ಘಾತಗೊಂಡುರುಳಿದ ಜಟಾಯುವಿನ ಮುಖದ ಮೇಲೆ ಸೀತೆಯು ತನ್ನ ಉಂಗುರವನ್ನಿರಿಸುತ್ತಾಳೆ. ಡಾ. ಬುಲ್ಕೆ–ರಾಮಕಥಾ, ಪು. ೪೨೫.

## ಜಾಬಾಲಿಯಿಂದ ನಳೋಪಾಖ್ಯಾನ, ಹರಿಶ್ಚಂದ್ರೋಪಾಖ್ಯಾನಗಳು

ವನವಾಸಿಯಾದ ರಾಮನಿಗೆ ಜಾಬಾಲಿಯು (ಅಯೋಧ್ಯೆಯಿಂದ ಭರತನ ಅಪೇಕ್ಷೆಯಂತೆ ರಾಮನ ಕುಶಲವಾರ್ತೆ ತಿಳಿಯಬಂದವನು[1]) ನಳನ ಕಥೆಯನ್ನೂ,[2] ಹರಿಶ್ಚಂದ್ರನ ಕಥೆಯನ್ನೂ[3] ಹೇಳಿ ಸಂತೈಸುವ ಕಲ್ಪನೆ ಇನ್ನಾವ ರಾಮಾಯಣದಲ್ಲೂ ಇಲ್ಲ. ಇದು **ತೊರವೆ ರಾಮಾಯಣದ್ದೇ ವೈಶಿಷ್ಟ್ಯ.**

ಮಹಾಭಾರತದಲ್ಲಿ ನಳೋಪಾಖ್ಯಾನ[4] ಮತ್ತು ರಾಮೋಪಾಖ್ಯಾನ[5]ಗಳು ಬರುತ್ತವಷ್ಟೆ. ಅಲ್ಲಿ ಅವು ಪಾಂಡವರ ಸಾಂತ್ವನಕ್ಕಾಗಿ ಅರಣ್ಯಪರ್ವದಲ್ಲಿ ಮುನಿಗಳಿಂದ ಹೇಳಲ್ಪಟ್ಟವುಗಳು. ಅದನ್ನು ಅನುಸರಿಸಿಯೇ ತನ್ನ ರಾಮಾಯಣದ ಅರಣ್ಯಕಾಂಡದಲ್ಲಿ ರಾಮನನ್ನು ಸಂತೈಸುವುದಕ್ಕಾಗಿ 'ವಿಧಿವಶದಿಂದ ಅಪಾರ ಸಂಕಟ ಅನುಭವಿಸಿದ ಆ ಇಬ್ಬರು ರಾಜರ, ಸತ್ಯನಿಷ್ಠರ ಕಥೆಗಳನ್ನು' ಜಾಬಾಲಿಯಿಂದ[6] ಕವಿಯು ಹೇಳಿಸಿರಬೇಕು.

### ಸೀತಾಪಹರಣ ಕಾರಣ

## ಶಂಬುಕ ವಧಾ ವೃತ್ತಾಂತ

ಕುಮಾರವಾಲ್ಮೀಕಿಯು ರಾವಣನಿಂದ ಸೀತಾಪಹರಣಕ್ಕೆ ಹಿನ್ನೆಲೆಯಾಗಿ, ವಾಲ್ಮೀಕಿ ರಾಮಾಯಣದಲ್ಲಿಲ್ಲದ ವಿಶಿಷ್ಟವಾದ ಸನ್ನಿವೇಶವೊಂದನ್ನು ಹೆಣೆದಿದ್ದಾನೆ. ರಾಮನು ಸೀತಾ ಲಕ್ಷ್ಮಣ–ಸಹಿತನಾಗಿ ದಂಡಕಾರಣ್ಯದಲ್ಲಿದ್ದಾಗ ಶೂರ್ಪನಖಿಯ ಮಗನಾದ ಶಂಬುಕನು[7] 'ಸುರಪತಿತ್ವ'ವನ್ನು ಬಯಸಿ ತಪಕ್ಕೈಗೊಳ್ಳುತ್ತಾನೆ. ಆ ಶಂಬುಕನಿಗೆ ನರರಿಂದಲ್ಲದೆ ಮರಣವಿಲ್ಲವೆನ್ನುವುದನ್ನು ಇಂದ್ರನು ತಿಳಿದು, ಬೃಹಸ್ಪತಿ ಆಚಾರ್ಯನ ಸಲಹೆಯಂತೆ, ಸುರಗಣ ಸಹಿತ ಶಬರ ರೂಪವನ್ನು ತಾಳಿ, ರಾಮನಿದ್ದಲ್ಲಿಗೆ ಬಂದು ಮೃಗಬಾಧೆಯ ನಿವಾರಣೆಗಾಗಿ ಬೇಟೆಯಾಡಿ ಅನುಗ್ರಹಿಸಬೇಕೆಂದು ಕೇಳಿಕೊಳ್ಳುತ್ತಾನೆ.

ಆಗ ರಾಮನು :

ನಿಯಮವೆಮಗಿದು ವನನಿವಾಸಾ
ಶ್ರಯದ ತುದಿ ಪರಿಯಂತಮೃಗಹಿಂ
ಸೆಯಲಿ ಮಾಡೆವು ಮನದ ಮತವಿದು ರಾಜಋಷಿತನದ.[8]

---

(ಉ) ರಾಮನು ತನ್ನ ಅಂಗೈಯ ಮೇಲೆ ಜಟಾಯುವನ್ನು ಸಂಸ್ಕಾರಗೊಳಿಸಿದನೆಂದೂ, ಅದರಿಂದ ನಮ್ಮ ಎರಡು ಅಂಗೈಗಳನ್ನು ಪರಸ್ಪರ ಉಜ್ಜಿಕೊಂಡಾಗ ಶವ ಸಂಸ್ಕಾರ (ಹೆಣಸುಟ್ಟ) ಜನಿತ ವಾಸನೆ ಬರುವುದು ಎಂದೂ–ಜನಜನಿತ ಕಥೆಯಿದೆ. ಅದರ ಮೂಲ ತಿಳಿಯದು.

1. ತೊ. ರಾ. III ೨-೭.
2. ಇದೇ. ೨-೧೩ರಿಂದ೨೪ (೧೨ ಪದ್ಯಗಳು)
3. ಇದೇ. ೨-೨೫ರಿಂದ೩೧ (೭ ಪದ್ಯಗಳು) ಇವೆರಡು ಆಖ್ಯಾನಗಳು ಕುಮಾರವಾಲ್ಮೀಕಿಯ 'ಸಂಕ್ಷಿಪ್ತತೆ, ಸಂಗ್ರಹ ಶಕ್ತಿಗಳಿಗೆ' ಒಳ್ಳೆಯ ಉದಾಹರಣೆಗಳು.
4. ಮಹಾಭಾರತ ಅರಣ್ಯಪರ್ವ ೫೩–೭೯ ಅಧ್ಯಾಯಗಳು (೨೭ ಅಧ್ಯಾಯಗಳು)
5. ಇದೇ. ೨೭೩-೨೯೨ ಅಧ್ಯಾಯಗಳು (೨೦ ಅಧ್ಯಾಯಗಳು)
6. ವಾ. ರಾ. ದಲ್ಲಿ ಜಾಬಾಲಿಯು ಭರತನೊಡನೆ ಚಿತ್ರಕೂಟಕ್ಕೆ ಹೋಗಿ, ರಾಮನನ್ನು ಎಂತಾದರೂ ಅಯೋಧ್ಯೆಗೆ ಮರಳಿಸಬೇಕೆನ್ನುವ ಉದ್ದೇಶದಿಂದ ನಾಸ್ತಿಕವಾದವನ್ನವಲಂಬಿಸಿ ನುಡಿದದ್ದು, ಆದರೆ ರಾಮನು ಅವನ ವಾದವನ್ನು ನಿರಾಕರಿಸಿದ್ದು ವರ್ಣಿತವಾಗಿದೆ. (ವಾ. ರಾ. ಅಯೋಧ್ಯಾಂಡ ಸರ್ಗ ೧೦೮ ಮತ್ತು ೧೦೯) ಕುಮಾರವಾಲ್ಮೀಕಿಯು ಆ ಸನ್ನಿವೇಶದಲ್ಲಿ ಜಾಬಾಲಿಯ ವಿಚಾರವೇನನ್ನೂ ಹೇಳುವುದಿಲ್ಲ.
7. ಶಂಬುಕನು ಶೂರ್ಪನಖಿಯ ಮಗನೆನ್ನುವ ಅಂಶವು ಕೆಳಗಿನ ಉಲ್ಲೇಖಗಳಿಂದ ಸ್ಪಷ್ಟವಾಗುತ್ತದೆ.
   ತೊ. ರಾ. ಅರಣ್ಯಕಾಂಡ_೪-೧, ೫-೫ (ಪರಿಶಿಷ್ಟ), VI ೨೭-೬೪, ೬೫ (ಪರಿಶಿಷ್ಟ)
8. ತೊ. ರಾ. ಇದೇ. ೩-೭.

ಎಂದು ಕಾರಣ ಹೇಳಿ ಲಕ್ಷ್ಮಣನನ್ನು ಆ ಕಾರ್ಯಕ್ಕೆ ನಿಯೋಜಿಸುತ್ತಾನೆ. ಬೇಟೆಯ ಸಮಯದಲ್ಲಿ ಇಂದ್ರನು ಮಾಯಾ ಸೂಕರವನ್ನು ಸೃಷ್ಟಿಮಾಡಿ ಶಂಬುಕನಿದ್ದಲ್ಲಿ ಸುಳಿಯುವ ಸಂಚು ಹೂಡಿ, ಲಕ್ಷ್ಮಣನ ಬಾಣವು ಆ ರಜನೀಚರನ ಶಿರವ ತರಿವಂತೆ ಮಾಡುತ್ತಾನೆ.[1]

ಇತ್ತ ಶೂರ್ಪನಖಿಯು ನರಮಾಂಸದ ಆಸೆಯಲಿ, ವನವಿಹಾರಮಾಡುತ್ತಿರಲು, 'ಅಸುವಳಿದ ಮಗನನ್ನು ಕಂಡು,' ಹಗೆ ತೀರಿಸಲು ರಾಮನ ಎಲೆಮನೆಗೆ ಧಾವಿಸುತ್ತಾಳೆ. ಆದರೆ ಅಲ್ಲಿ ರಾಮನ ರೂಪಾತಿಶಯವನ್ನು ಕಂಡೊಡನೆಯೇ ಅವಳ ಕ್ರೋಧ ಕರಗಿ, ಕಾಮವಶಳಾಗುತ್ತಾಳೆ. ಸುಂದರ ಸ್ತ್ರೀರೂಪ ತಳೆದು ಅವರ ಬಳಿ ಸುಳಿಯುತ್ತಾಳೆ[2]........ ಮುಂದಿನ ಕಥೆಯು ಬಹುಮಟ್ಟಿಗೆ ಆದಿಕಾವ್ಯಕ್ಕನುಗುಣವಾಗಿಯೇ ಮುಂದುವರಿಯುತ್ತದೆ.

ಆದಿಕಾವ್ಯದ ಅರಣ್ಯಕಾಂಡದಲ್ಲಿ ಶಂಬುಕ ವಧೆಯ ವೃತ್ತಾಂತವಿಲ್ಲ. ಅಲ್ಲಿ ಶೂರ್ಪನಖಿಯ ಮಗನ ವಿಚಾರವೂ ಇಲ್ಲ. ಉತ್ತರಕಾಂಡದಲ್ಲಿ ಶೂದ್ರ ತಪಸ್ವೀ ಶಂಬುಕನ ಕಥೆ ವಿಸ್ತಾರವಾಗಿ ಬಂದಿದೆ.[3] ಆದರೆ ಉತ್ತರಕಾಂಡದ ಶಂಬುಕನಿಗೂ, ಕುಮಾರ ವಾಲ್ಮೀಕಿಯು ಅರಣ್ಯಕಾಂಡದಲ್ಲಿ ಹೇಳುವ ಶಂಬುಕನಿಗೂ ಯಾವ ಸಂಬಂಧವೂ ಇಲ್ಲ.[4]

ಕುಮಾರ ವಾಲ್ಮೀಕಿಯು ಆನಂದರಾಮಾಯಣದಲ್ಲಿ[5] ಬರುವ ಶೂರ್ಪನಖಾಪುತ್ರ ಸಾಂಬ[6]ನ ವೃತ್ತಾಂತವನ್ನು ಅನುಸರಿಸಿದಂತಿದೆ. ಅಲ್ಲಿ ಸಾಂಬನು ತಪಸ್ಸು ಮಾಡಿ, ಬ್ರಹ್ಮನಿಂದ ಒಂದು ಖಡ್ಗವನ್ನು ಪಡೆದು, ಮತ್ತೂ ತಪದಲ್ಲಿ ಮುಂದುವರಿಯುತ್ತಿರಲು, ಲಕ್ಷ್ಮಣನಿಂದ ಅನಿರೀಕ್ಷಿತವಾಗಿ ಆ ಬಹ್ಮ-ದತ್ತನಾದ ಖಡ್ಗದಿಂದಲೇ ಸಾಂಬನ ಕೊರಳು ಕತ್ತರಿಸಲ್ಪಡುತ್ತದೆ.

ವನೇ ಶೂರ್ಪನಖಾ ಪುತ್ರಂ ತಪಂತಂ ಸಾಂಬ ನಾಮಕಮ್ ।
ಬ್ರಹ್ಮಾದದೌ ದಿವ್ಯ ಖಡ್ಗಂ ತಂ ಸಾಂಬೋ ದದರ್ಶಸಃ ॥

---

1. ತೊ. ರಾ. III ೩-೨೦.
2. ಇದೇ. ೪-೪.
3. ಉತ್ತರಕಾಂಡ-ಸರ್ಗ ೭೩ರಿಂದ ೮೨.

ಉತ್ತರಕಾಂಡದಲ್ಲಿನ ಶಂಬುಕ ವಧೆಯ ವೃತ್ತಾಂತವು ಈ ಕೆಳಗಿನ ಕೃತಿಗಳಲ್ಲೂ ಇದೆ:

೧) ಮಹಾಭಾರತ-ಶಾಂತಿಪರ್ವ-

ಶ್ರೂಯತೇ ಶಂಬುಕೇ ಶೂದ್ರೇ ಹತೇ ಬ್ರಾಹ್ಮಣದಾರಕಃ ।
ಜೀವತೋ ಧರ್ಮಮಾಸಾದ್ಯ ರಾಮಾತ್ಸತ್ಯಪರಾಕ್ರಮಾತ್ ॥
(ಅಧ್ಯಾಯ-೧೪೯-೬೩)

೨) ಪದ್ಮಪುರಾಣ-ಸೃಷ್ಟಿಖಂಡ ಅಧ್ಯಾಯ ೩೨-೪೯. ಉತ್ತರ ಖಂಡ. ಅಧ್ಯಾಯ ೨೩೦-೪೭.

೩) ರಘುವಂಶ-ಕೃತದಂಡಃ ಸ್ವಯಂ ರಾಜ್ಞಾ ಲೇಭೇ ಶೂದ್ರಃ ಸತಾಂ ಗತಿಮ್ ।
ತಪಸಾ ದುಶ್ಚರೇಣಾಪಿ ನ ಸ್ವಮಾರ್ಗವಿಲಂಘಿನಾ ॥-೧೫-೫೩.

೪) ಉತ್ತರ ರಾಮಚರಿತ-ದ್ವಿತೀಯಾಂಕ.

೫) ಅಧ್ಯಾತ್ಮರಾಮಾಯಣ-ಉತ್ತರಕಾಂಡ ೪-೨೪ರಿಂದ ೨೬.

೬) ಆನಂದರಾಮಾಯಣ-ರಾಜ್ಯಕಾಂಡ-೧೦-೫೦ರಿಂದ ೧೨೨.

ಉತ್ತರಕಾಂಡದ 'ಶಂಬುಕ ವೃತ್ತಾಂತ' ವಿಚಾರವಾಗಿ ಬಹಳ ವಿವೇಚನೆ ನಡೆದಿದೆ. ಅದರ ಒಂದಂಶವನ್ನು ಮಾದರಿಗಾಗಿ ಇಲ್ಲಿ ಉದ್ಧರಿಸಲಾಗಿದೆ.

"In, Rama and Sambuka, Wilhelm Printz opposes weber's theory that the Sambuka episode of the Ramayana refers ro the settlement of Christian missioniers on the coast of coromandel, and traces development of this episode in the Padma purana, Mbh, Raghuvamsa..."Quoted by A. D. Pusalker, Studies in Epics and Puranas p. 203.

5. ಆನಂದರಾಮಾಯಣ-ಸಾರಕಾಂಡ.
6. ಮಹಾಭಾರತದಲ್ಲಿ-ಕೃಷ್ಣನಿಗೆ ಜಾಂಬವತಿಯಲ್ಲಿ 'ಸಾಂಬ'ನೆಂಬ ಹೆಸರಿನ ಪುತ್ರನಿದ್ದನು. ಆ ಸಾಂಬನೇ ಬೇರೆ-

ತದ್ಧೃತ್ವಾ ಲಕ್ಷ್ಮಣಃ ಖಡ್ಗಂ ವೃಕ್ಷಾನ್ವಲ್ಲೀರ್ಬಭಂಜಸಃ।
ವೃಕ್ಷಗುಲ್ಮೇ ಹತಃ ಸಾಂಬಃ...................[1]

ತೊರವೆ ರಾಮಾಯಣದ ಶಂಬುಕವಧೆ ಪ್ರಕರಣಕ್ಕೆ ಆನಂದ ರಾಮಾಯಣವೇ ಆಕರವೆನಿಸಿದರೂ, ಕಿರಾತ ರೂಪದ ಇಂದ್ರನ ಮೂಲಕ ಲಕ್ಷ್ಮಣನಿಂದ ಆ ರಕ್ಕಸನ ವಧೆಯಾಗುವ ಕಥೆಯು ಕನ್ನಡದ ಕೃತಿಯ ವೈಶಿಷ್ಟ್ಯವಾಗಿದೆ.[2]

ಜೈನ '**ಪಉಮ ಚರಿಯ**' (ಪರ್ವ ೪೩) ದಂತೆ ಖರಶೂರ್ಪನಖಿಯರ ಪುತ್ರನಾದ ಶಂಬುಕನನ್ನು ಲಕ್ಷ್ಮಣನು ಕೊಂದುದೇ ಸೀತಾಪಹರಣ ಮತ್ತು ರಾಮರಾವಣ ಯುದ್ಧಗಳಿಗೆ ಮೊದಲ, ಮುಖ್ಯ ಕಾರಣವಾಗುತ್ತದೆ. ವಿಮಲ ಸೂರಿಯ 'ಪಉಮ ಚರಿಯ'ವನ್ನು ಅನುಸರಿಸಿ ಕನ್ನಡದಲ್ಲಿ 'ರಾಮಚಂದ್ರ ಚರಿತ ಪುರಾಣ' (ಪಂಪ ರಾಮಾಯಣ) ವನ್ನು ಬರೆದ ನಾಗಚಂದ್ರ (ಅಭಿನವ ಪಂಪ)ನೂ ಈ ಶಂಬುಕ ವೃತ್ತಾಂತವನ್ನು ಹೇಳುತ್ತಾನೆ.

"ಶಂಬುಕನುಂ....ಪನ್ನೆರಡು ವರ್ಷಂ ಸೂರ್ಯಹಾಸಾಸಿಯಂ ಸಾಧಿಸುತ್ತಿರ್ಪುದುಂ ಆತಂಗಾ ಬಾಳನಿತ್ತು ಬೆಸ ಕೈಯಲೆಂದು ಬಂದಯಕ್ಷಾಮರ ಸಹಸ್ರಮಾ ಖಡ್ಗ ರತ್ನಮನವನಿರ್ದ ಬಿದಿರ ಪೊದರ ಮೇಲೇರಿಸಿ ನಮೇರು ಮಂದಾರ ಸುಮನೋಮಂಜರಿಯನರ್ಚಿಸುತ್ತಿರ್ಪುದುಂ....ಇತ್ತ....ಲಕ್ಷ್ಮಣಂ....ಬಂದು ಬಿದಿರ ಪೊದರಪೊದಲೊಳರ್ಚಿಸಿದ್ದ ಸೂರ್ಯಹಾಸಾಸಿಗೆ ಕಯ್ಯಂ ನೀಡುವುದುಂ........ಆ ಕರವಾಳ ಕೂರ್ಪಂ ನೋಡಲೆಂದು....ಕುಮಾರಂ ಪೊಯ್ದೊಡೆ.... ಆ ವಂಶವನದೊಡನೆ.......ತಲೆ ಪರಿದು ಪಾರೆ......... "[3]

ಇದರಿಂದ, 'ಶಂಬುಕ ಪ್ರಕರಣ'ದಲ್ಲಿ ತೊರವೆ ರಾಮಾಯಣವು ಆನಂದ ರಾಮಾಯಣದೊಂದಿಗೆ, ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ'ದ ಪ್ರಭಾವವನ್ನು ಹೊಂದಿರಬಹುದು. ನಾಗಚಂದ್ರನ ಕೃತಿಯಿಂದ ವರ್ಣನೆಗಳಲ್ಲಿ[4] ಮತ್ತು ಲಂಕಾ ದಹನ, ಪ್ರಕರಣ, ರಾವಣ ಪಾತ್ರ ವಿನ್ಯಾಸವಿಚಾರಗಳಲ್ಲಿ ಕುಮಾರ ವಾಲ್ಮೀಕಿಯು ಪ್ರಭಾವಿತನಾದುದು ನಮ್ಮ ಗಮನಕ್ಕೆ ಬರುತ್ತದೆ. ನಾಗಚಂದ್ರನ ವಿಜಯಪುರ ಮತ್ತು ಕುಮಾರ ವಾಲ್ಮೀಕಿಯ ತೊರವೆಗಳು ಪ್ರಾದೇಶಿಕ ವಾಗಿ ಒಂದೇ (ಆಗಿದ್ದವು) ಎಂಬ ಕಾರಣದಿಂದಲೂ ಈ ಪ್ರಭಾವಕ್ಕೆ ಅವಕಾಶವಿದೆ.

ಕುಮಾರ ವಾಲ್ಮೀಕಿಯಂತೆಯೇ ಇತರ ಭಾಷೆಗಳ ಕವಿಗಳೂ ತಮ್ಮ ರಾಮಾಯಣಗಳಲ್ಲಿ 'ಅರಣ್ಯಕಾಂಡದಲ್ಲಿ' ಶೂರ್ಪನಖಿಯ ಪುತ್ರನ ವಧೆಯ ಕಥೆಯನ್ನು ವಿಧ ವಿಧವಾಗಿ ಹೇಳಿರುವುದನ್ನೂ ನಾವು ಗಮನಿಸಬಹುದು.[5]

## ಶೂರ್ಪನಖಿಯ ವಿರೂಪಕರಣ

ಮೂಲ ರಾಮಾಯಣದಲ್ಲಿ 'ಶೂರ್ಪನಖಿಯ ವಿರೂಪಕರಣ' ವೃತ್ತಾಂತವು ಬಹುಶಃ ಇದ್ದಿರಲಾರದು. ಅದು ಪ್ರಕ್ಷಿಪ್ತವಾಗಿರಬೇಕು ಎಂದು ಊಹಿಸುವುದಕ್ಕೆ ಅವಕಾಶವಿದೆ.

---

1. ಆನಂದ ರಾಮಾಯಣದ ಸಾರಕಾಂಡ ೪೧-೪೩.
2. ಕನ್ನಡದ ಕವಿ ಬತ್ತಲೇಶ್ವರನು ಆನಂದ ರಾಮಾಯಣಾನುಸಾರಿಯಾಗಿ ಕಥೆ ಹೇಳಿದ್ದಾನೆ.
   (ಬತ್ತಲೇಶ್ವರನ ಕೌಶಿಕ ರಾಮಾಯಣ-ಸಂಧಿ ೫-೨೧ರಿಂದ೭೦)
3. ಪಂಪ ರಾಮಾಯಣ ಸಂಗ್ರಹ-ಪು. ೪೨-೪೩. (ಪಂಪರಾಮಾಯಣ-ಮೂಲ ೯-೧೬ರಿಂದ ೨೮)
4. ಇದೇ ಪ್ರಬಂಧದ 'ಕೃತಿಯಲ್ಲಿ ಪರಂಪರೆಯ ಸತ್ತ್ವ' ಎಂಬ ಪ್ರಕರಣನೋಡಬಹುದು.
5. ೧) ಸಾರಲದಾಸ ಕೃತ 'ಮಹಾಭಾರತ'ದಲ್ಲಿ ಲಕ್ಷ್ಮಣನಿಂದ ಶೂರ್ಪನಖಿಯ ಮಗನ ವಧೆಯ ಉಲ್ಲೇಖವಿದೆ.
   ೨) ಮರಾಠಿ ಭಾವಾರ್ಥ ರಾಮಾಯಣದಲ್ಲಿ 'ಅರಣ್ಯಕಾಂಡದಲ್ಲಿ ಶಂಬುಕ ವಧೆ'ಯಾದ ಕಥೆಯು ಆನಂದ ರಾಮಾಯಣಕ್ಕನುಗುಣವಾಗಿದೆ.
   ೩) ಮಾಧವ ದಾಸಕೃತ 'ವಿಚಿತ್ರ ರಾಮಾಯಣ'ದಲ್ಲಿ ಶೂರ್ಪನಖಿಯ ಮಗನ ಹೆಸರು 'ಜಪಾಸುರ'
   ೪) ತೆಲುಗು ದ್ವಿಪದ ರಾಮಾಯಣದಲ್ಲಿ 'ಜಂಬುಮಾಲಿ'ಯು ಶೂರ್ಪನಖಿಯ ಮಗ.
   ೫) ಸಯಾಮಿನಾ 'ಬ್ರಹ್ಮ ಚಕ್ರ'ದಲ್ಲಿ ಲಕ್ಷ್ಮಣನಿಂದ ಶೂರ್ಪನಖಿಯ ಇಬ್ಬರು ಪುತ್ರಿಯರ ವಧೆಯಾದ ಕಥೆಯಿದೆ.
   ೬) 'ಸೆರೀರಾಮದಲ್ಲಿ' ಶೂರ್ಪನಖಿಯ ಮಗನ ಹೆಸರು 'ದರ್ಸಾಸಿಂಗಾ', ಅವನಿಗೆ ದೊರೆತ ಖಡ್ಗ 'ಚಂದ್ರಾವಲೀ'

೧. ವಿಭೀಷಣನು ರಾವಣನ ಆಸ್ಥಾನದಲ್ಲಿ ಸೀತಾಪಹರಣದ ಕಾರಣದ ಕುರಿತಾಗಿ ಖರನ ಸಂಗತಿಯನ್ನು ತಿಳಿಸುತ್ತಾನೆ, ಶೂರ್ಪನಖಿಯ ವಿರೂಪಕರಣದ ವಿಚಾರ ಏನು ಮಾತೂ ಅಲ್ಲಿ ಬರುವುದಿಲ್ಲ.[1]

೨. ಯುದ್ಧಕಾಂಡದ ಕೊನೆಯಲ್ಲಿ ಹನುಮಂತನು ಭರತನಿಗೆ, ರಾಮ ವೃತ್ತಾಂತವನ್ನು ಸಂಕ್ಷಿಪ್ತವಾಗಿ ಹೇಳುವಲ್ಲಿ[2] ಶೂರ್ಪನಖಿಯ ನಾಸಾಛೇದದ ಅಂಶವಿದ್ದರೂ[3] ಆ ಘಟನೆಯೇ ಸೀತಾಪಹರಣದ ಕಾರಣವೆಂದು ವ್ಯಕ್ತಪಡಿಸುವುದಿಲ್ಲ. ರಾಕ್ಷಸವಧೆ ಮಾಡಿದ್ದರಿಂದಲೇ ರಾವಣನಿಗೆ ರಾಮನಲ್ಲಿ ವೈರಬೆಳೆಯಿತೆಂಬ ವಿಚಾರವೇ ಸೂಚಿತವಾಗುತ್ತದೆ.

ಹೀಗಿದ್ದರೂ, ಮುಂದಿನ ರಾಮಕಥೆಗಳಲ್ಲಿ–ರಾಕ್ಷಸವಧೆಗಿಂತಲೂ, ಶೂರ್ಪನಖಿಯ ಮಾನಭಂಗವೇ ರಾವಣ–ರಾಮ ವೈರಕ್ಕೆ ಹೆಚ್ಚು ಪ್ರಧಾನವಾದ ಕಾರಣವಾಗಿ ಪರಿಗಣಿಸಲ್ಪಟ್ಟಂತೆ ತೋರುತ್ತದೆ. ಕುಮಾರ ವಾಲ್ಮೀಕಿಯ ದೃಷ್ಟಿಯಲ್ಲಂತೂ–

ಆದುದಾ ರಕ್ಕಸಿಯ ನಾಸಾ
ಛೇದವೇ ಭೂಭಾರಕರ ವಿ
ಚ್ಛೇದನ ಪ್ರಾರಂಭವೆಲೆ ಕುಶ ಕೇಳಿದೈಬಳಿಕ.[4]

## ಸೀತಾಪಹರಣದ ಮೂಲ ರೂಪ, ಮಾಯಾ ಮೃಗ ಪ್ರಕರಣ

ಆದಿಕಾವ್ಯದ ಮೂಲರೂಪದಲ್ಲಿ, ಸೀತಾಪಹಾರ ಸಂದರ್ಭದಲ್ಲಿ ಕನಕ ಮೃಗದ ಪ್ರಸ್ತಾವ ಇದ್ದಿರಲಾರದೆಂದೂ, ಅದ್ಭುತರಸದ ಲೋಕಪ್ರಿಯತೆಯ ಕಾರಣದಿಂದ ಅದನ್ನು ಆ ನಂತರದ ರಾಮಾಯಣಗಳಲ್ಲಿ ಅಳವಡಿಸಿಕೊಂಡಿರಬೇಕೆಂದೂ ಅಭಿಪ್ರಾಯವಿದೆ.[5]

ಕನಕ ಮೃಗದ ಉಲ್ಲೇಖವಿಲ್ಲದೆ ಸೀತಾಪಹರಣವಾಗುವ ಕಥೆಯು :

೧. ಕೂರ್ಮಪುರಾಣ.
೨. ಭಾಸನ ಪ್ರತಿಮಾ ನಾಟಕ.
೩. ವಿಮಲಸೂರಿಯ (ಜೈನ) ಪಉಮಚರಿಯ.

ಆದರೆ ಮಾರೀಚನ ಸ್ವರ್ಣಮೃಗದ ಪ್ರಸ್ತಾಪವಿರುವ ರಾಮಕಥೆಗಳೇ ಹೆಚ್ಚು ಸಂಖ್ಯೆಯಲ್ಲಿವೆ. ಅವುಗಳಲ್ಲಿ ಕೆಲವು ಹೆಸರುಗಳನ್ನು ಹೇಳಬಹುದು :—

---

1. ವಾ. ರಾ. ಯುದ್ಧಕಾಂಡ, ೯-೧೩, ೧೪.
2. ಇದೇ. ೧೨೯ನೇ ಸರ್ಗ.
3. ಇದೇ. ೧೨೯-೧೬, ೧೭.
   ತತೋ ರಾಮೇಣ ಸಂದಿಷ್ಟೋ ಲಕ್ಷ್ಮಣಃ ಸಹಸೋತ್ಥಿತಃ ।
   ಪ್ರಗೃಹ್ಯ ಖಡ್ಗಂ ಚಿಚ್ಛೇದ ಕರ್ಣನಾಸಂ ಮಹಾಬಲಃ ॥
4. ತೊ. ರಾ. III ೬-೧.
   ಕುಮಾರ ವಾಲ್ಮೀಕಿಯು ರಾವಣನಿಂದ ಸೀತಾಪಹರಣಕ್ಕೆ ೩ ಕಾರಣ (ಹಿನ್ನೆಲೆ)ಗಳನ್ನು ಸೂಚಿಸುತ್ತಾನೆ :
   ೧. ಸೀತಾ ವಿವಾಹ ಮಂಟಪದಲ್ಲಿ ರಾವಣನು 'ಕಳವಿನಲಿ ಕೊಂಡೊಯ್ವೆ' ಎಂದು ಮಾಡಿದ ನಿರ್ಧಾರ. (ತೊ. ರಾ. I ೧೫-೨೮).
   ೨. ಶಂಬುಕವಧೆ ಮತ್ತು ಅದರ ಪರಿಣಾಮವಾಗಿ ಶೂರ್ಪನಖಿಯ ನಾಸಾಛೇದ (III ೬-೧).
   ೩. 'ರಾಮನ ಕೂಡುವುದೇ ಸಂಕಲ್ಪ' ಎಂಬ ರಾವಣಜೀವನ ರಹಸ್ಯ (VI ೪೬-೨೨)
   ತೊ. ರಾ. ದ ಮಾಯಾ ಶೂರ್ಪನಖಿಗೂ ವಾ. ರಾ. ದಲ್ಲಿ ಆಧಾರವಿಲ್ಲ. ಆನಂದ ರಾ. (I ೭-೪೬)ನೇ ಆಕರ. ಧೃತ್ವಾ ರೂಪಂ ಮನೋಹರಮ್....
5. C. V. Vaidya-The Riddles of the Ramayana, p. 144. ಈ ಕುರಿತು ಬುಲ್ಕೆ–ರಾಮ ಕಥಾ, ಪು. ೪೪೩ರಲ್ಲಿ ವಿವೇಚನೆ ಇದೆ.

೧. ಮಹಾನಾಟಕ.

೨. ಉದಾತ್ತ ರಾಘವ.

೩. ಆನಂದ ರಾಮಾಯಣ.

೪. ಅಧ್ಯಾತ್ಮ ರಾಮಾಯಣ....ಇತ್ಯಾದಿ.

ಕುಮಾರ ವಾಲ್ಮೀಕಿಯು ತಾನು ಅನುಸರಿಸಿರುವ, ವಾಲ್ಮೀಕಿ ರಾಮಾಯಣ, ಅಧ್ಯಾತ್ಮ ರಾಮಾಯಣ, ಆನಂದ ರಾಮಾಯಣ, ಭಾರತ ತಾತ್ಪರ್ಯನಿರ್ಣಯ, ರಘುವಂಶಗಳಲ್ಲಿ ಸ್ವರ್ಣಹರಿಣದ ಕಥೆಯಿರುವುದರಿಂದ ಅದನ್ನೇ ತನ್ನ ಕೃತಿಯಲ್ಲಿ ಕೆಲವು ಸಣ್ಣ ವ್ಯತ್ಯಾಸಗಳೊಂದಿಗೆ ಹೇಳಿದ್ದಾನೆ.

ತೊರವೆ ರಾಮಾಯಣದಲ್ಲಿ, ಮಾರೀಚನು ರಾವಣನಿಗೆ, 'ಈರೈದು ತಲೆಗಳ ಜೈತಿರಿಸಿ ತಾಪಸ ವೇಷಧಾರಣೆ ಮಾಡುವಂತೆ' ಸೂಚಿಸಿ ತಾನು 'ಹದಿನಾರು ಬಣ್ಣದ ಪುಟದ ಚಿನ್ನಕೆ ನೂರುಮಡಿಯೆನೆ ಹೊಳೆ ಹೊಳೆವ ಹೊಮ್ಮರಿಯ ರೂಪವನ್ನು' ತಾಳುತ್ತಾನೆ.[1]

ವಾಲ್ಮೀಕಿ ರಾಮಾಯಣ,[2] ಅಧ್ಯಾತ್ಮ ರಾಮಾಯಣ,[3] ಆನಂದ ರಾಮಾಯಣಗಳಲ್ಲಿ,[4] ರಾವಣನೇ ಮಾರೀಚನಿಗೆ ಎಲ್ಲ ಹಂಚಿಕೆಗಳನ್ನೂ ಹೇಳುತ್ತಾನೆ. ಶೂರ್ಪನಖಿಯು ತನ್ನಣ್ಣನಿಗೆ,

> ಅಳಿಬಲರು ನರರೆಂದು ಸಮ್ಮುಖ
> ದಲಿ ಸಮಿಾಕವನೆಸಗದಿರು ಕೈ
> ಕೊಳಿಸಿ ಕೈತವದಿಂದಕಮಲಾನನೆಯ ಕಳವಿನಲಿ
> ಸೆಳೆವುದೀ ಮತದೊಳುಹು ನಿಜಮಾ
> ತುಳನೊಳರಿವುದು ಹೋಗು....[5]

ಎಂದು ಸಲಹೆ ನೀಡಿದ್ದನ್ನು, ರಾವಣನು ಅಕ್ಷರಶಃ ಅನುಸರಿಸಿದ್ದಾನೆ.

### ಲಕ್ಷ್ಮಣ ಸಮಸ್ಯೆ

ಮಾರೀಚನ ಕೂಗನ್ನು ಕೇಳಿ, ರಾಮನಿಗೆ ವಿಪತ್ತು ಸಂಭವಿಸಿರಬಹುದೆಂದು ಸೀತೆಯು ಶಂಕಿಸಿದಾಗ, ಲಕ್ಷ್ಮಣನು ಎಷ್ಟು ಸಮಾಧಾನ ಹೇಳಿದರೂ ಆಕೆಗೆ ಭರವಸೆ ಮೂಡುವುದಿಲ್ಲ; ಲಕ್ಷ್ಮಣನಲ್ಲಿ ದುರ್ಯೋಚನೆಯನ್ನು ಕಲ್ಪಿಸಿ, ಅವನಿಗೆ ಕಠೋರವಚನಗಳನ್ನಾಡುತ್ತಾಳೆ. ಅವುಗಳನ್ನು ಕೇಳಿ ಸಹಿಸಲಾರದ ಲಕ್ಷ್ಮಣನು ಪರ್ಣಮಂದಿರ ಬಿಡುವ ಮೊದಲು,

> ನ್ಯಾಯವಾದೀ ಯಥಾಽ ನ್ಯಾಯಮುಕ್ತೋಽಹಂ ಪರುಷಂ ತ್ವಯಾ।
> ಧಿಕ್ತ್ವಾಮದ್ಯ ಪ್ರಣಶ್ಯ ತ್ವಂ ಯನ್ಮಾಮೇವಂ ವಿಶಂಕಸೇ[6] ॥

ನಾನು ನ್ಯಾಯವಾದ ಮಾತುಗಳನ್ನಾಡಿದರೂ, ಎಷ್ಟು ಅನ್ಯಾಯವಾಗಿ ಎಂತಹ ಕಠೋರವಾದ ಮಾತನ್ನು ನನಗೆ ಹೇಳಿದೆ! ಥೂ! ನೀನು ಹಾಳಾಗಿ ಹೋಗು! ನನ್ನನ್ನು ಹೀಗೆ ಶಂಕಿಸುವೆಯಾ? ಎಂದು ಕನಲಿ ನುಡಿಯುತ್ತಾನೆ.

ವಾ. ರಾ., ಅ. ರಾ., ಆ. ರಾ. ಗಳಲ್ಲಿ ಬರುವಂತಹ ಲಕ್ಷ್ಮಣನ ಈ ಬಿರುನುಡಿಗಳನ್ನು ಕುಮಾರ ವಾಲ್ಮೀಕಿಯು ಪ್ರಸ್ತಾವಿಸುವುದಿಲ್ಲ. ರಾಮನನ್ನು 'ಆದಿಪುರುಷ'ನೆಂದೂ, ಸೀತೆಯನ್ನು 'ಆದಿಮಾಯಾಮಾನಿನಿ'ಯೆಂದೂ ನಂಬಿದ ಲಕ್ಷ್ಮಣನು, ರಾಮನಳಿದರೆ ಕಮಲಭವಸುತ್ರಾಮರುಳಿವರೇ? ಕೈರವ ತಾಮರಸಬಾಂಧವರು ನಭವನು ಬೆಳ

1. ತೊ. ರಾ. III ೮-೧೪.
2. ವಾ. ರಾ. III ೪೦-೧೭೦ ರಿಂದ ೨೨.
3. ಅ. ರಾ. III ೬-೩೩-೩೪.
4. ಆ. ರಾ. I ೭/೮೪-೮೫.
5. ತೊ. ರಾ. III ೭-೨೩.
6. ವಾ. ರಾ. III ೪೫-೩೨.

ಗುವರೇ ?[1] ಎಂದೆಲ್ಲಾ ಹೇಳಿ 'ರಾಮನನು ತಹೆ, ಪುಸಿದಡೆ ನಿಮ್ಮ ಪಾದದಾಣೆ' ಎಂದು ಭಕ್ತನಾಗಿಯೇ ಬಿನ್ನವಿಸಿ ಕೊಂಡು ಎಲೆಮನೆಯಿಂದ ಹೊರಡುತ್ತಾನೆ.

ಸೀತೆಯ ಬಿರುನುಡಿಗಳಿಗೆ ಬಲಿಯಾಗಿ ಲಕ್ಷ್ಮಣನು 'ಕಾನನಕೆ ಕಾಲಿಕ್ಕಿದನು ಸಂಜೆಯಲಿ'[2] ಎಂದಿರುವುದೂ, ರಾವಣ ಸನ್ಯಾಸಿಯು ಸೀತೆಯಿದ್ದಲ್ಲಿಗೆ ಬಂದು 'ಸಂಧ್ಯಾ ವಿಹಿತ ಕೃತ್ಯಕೆ ಠಾವು ಸಾಕು ನಮಗೆ'[3] ಎನ್ನುವುದೂ; (ಸೀತೆಯು ರಾವಣ (ಸನ್ಯಾಸಿ)ನನ್ನು ಸ್ವಾಗತಿಸಿ "ಪಾಕವು ಸಿದ್ಧವಾಗಿದೆ"–ಎನ್ನುತ್ತಾಳೆ–ವಾಲ್ಮೀಕಿ ರಾಮಾಯಣ ದಲ್ಲಿ[4])–ತೊರವೆ ರಾಮಾಯಣದ ಕಥಾವೈಶಿಷ್ಟ್ಯಗಳು.

## ಶೂರ್ಪನಖಿಯ ಪುತ್ರಿ ಅಯೋಮುಖಿ

ವಾಲ್ಮೀಕಿ ರಾಮಾಯಣದ ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ಅಯೋಮುಖಿಯ ಕಥೆ ಸಿಗುತ್ತದೆ. ಲಕ್ಷ್ಮಣನಲ್ಲಿ ಮೋಹಗೊಂಡ ಆಕೆಯ

ಕರ್ಣನಾಸ ಸ್ತನಂ ಚಾಸ್ಯಾ ನಿಚಕರ್ತಾರಿಸೂದನಃ....[5]

ಕಿವಿ, ಮೊಲೆ, ಮೂಗುಗಳನ್ನು ಅವನು ಕತ್ತರಿಸುತ್ತಾನೆ.[6] ಆಕೆಯು ಅರಚುತ್ತಾ ಬಂದ ದಾರಿ ಹಿಡಿದು ಕಾಡಿನೊಳಗೆ ಓಡಿಹೋಗುತ್ತಾಳೆ. ಈಕೆಯ ವೃತ್ತಾಂತವು ಸಾಮಾನ್ಯವಾಗಿ–ಶೂರ್ಪನಖಿಯ ಕಥೆಯಂತೆಯೇ–ಇದೆ. ಆದರೆ ಈ ಇಬ್ಬರೊಳಗೆ ಯಾವ ಸಂಬಂಧವನ್ನೂ ಆದಿಕಾವ್ಯವು ತಿಳಿಸುವುದಿಲ್ಲ.

---

1. ತೊ. ರಾ. III ೯-೭.
2. ಇದೇ. ೯-೧೫.
3. ಇದೇ. ೯-೨೦.
4. ವಾ. ರಾ. III ೪೬-೩೪, ೩೫.

ಸೀತೆಯನ್ನಗಲುತ್ತಾ ಲಕ್ಷ್ಮಣನು ಆಕೆಯ ರಕ್ಷಣಾರ್ಥವಾಗಿ ಬಾಣದಿಂದ ರೇಖೆಯೆಳೆದ ವಿಚಾರ ಆನಂದರಾಮಾಯಣ ದಲ್ಲಿದೆ. ಕನ್ನಡದ ಕವಿ ಬತ್ತಲೇಶ್ವರನು ಇದನ್ನು ಅನುಸರಿಸಿದ್ದಾನೆ (೬-೨೯) (I ೭೭-೯೪)

ಆದರೆ, ಕುಮಾರ ವಾಲ್ಮೀಕಿಯು 'ಲಂಕಾ ದಹನ' ಸಂದರ್ಭದಲ್ಲಿ ವಿಭೀಷಣನ ಮುಂದಿರದೆಮರಿನಲಿ, ಹನುಮಂತನು 'ಗೆರೆಯಬರೆದನು' (ಅಗ್ನಿಯು ಅದರೊಳಗೆ ಹೋಗದಿರಲೆಂದು) ಎನ್ನುತ್ತಾನೆ (ತೊ. ರಾ. V ೮-೪೯)

ಅ. ರಾ., ಆ. ರಾ., ಭಾರತ ತಾತ್ಪರ್ಯನಿರ್ಣಯಗಳಲ್ಲಿರುವಂತೆ "ಮಾಯಾಸೀತೆ"ಯ ವಿಚಾರವನ್ನು ತೊರವೆ ರಾಮಾಯಣವು ಹೇಳುವುದಿಲ್ಲ. ಈ ವಿಚಾರದಲ್ಲಿ ಕವಿಯು ಆದಿಕಾವ್ಯವನ್ನೇ ಅನುಸರಿಸಿ ಕಾವ್ಯಗೌರವವನ್ನು ಉಳಿಸಿದ್ದಾನೆ ಎನ್ನಬಹುದು. ೧೯೩೫ರಲ್ಲಿ ಪ್ರಕಟವಾದ (ಕೃಷ್ಣಯ್ಯಸೆಟ್ಟಿ ಪ್ರಕಟನೆ) ತೊರವೆ ರಾಮಾಯಣದಲ್ಲಿ, ಲಕ್ಷ್ಮಣನು ಎಲೆವನೆಯಿಂದ ಹೊರಟೊಡನೆಯೆ–

ಸುರರೊಂದು ತಕ್ಷಣದೊಳಾ ಸರ<br>
ಸಿರುಹ ಮುಖಿಯನು ವೀತಿಹೋತ್ರನ<br>
ಪುರಕೆ ಕೊಂಡೊಯ್ದಗ್ನಿಶುಚಿಯೆಂದೆಂಬ ಶ್ರುತಿನುತದಿ.<br>
ಇರಿಸಿ ವೈಶ್ವಾನರನ ಪುರದೊಳ<br>
ಗುರುತರದೊಳೊಂದಂತನಾತ್ರನ<br>
ನಿರಿಸಿದರು ಪರ್ಣಾಲಯದೊಳಿತೆ ಲವನೆ ಕೇಳೆಂದ (III ೯-೧೬) ಎಂಬ ಪದ್ಯವಿದೆ.

ಈ ಪದ್ಯವು ಮೈ. ವಿ. ಪ್ರಕಟಿಸಿರುವ ತೊ. ರಾ. ದಲ್ಲಿಲ್ಲ. ನಾನು ಪ್ರತ್ಯೇಕವಾಗಿ ಪರಿಶೀಲಿಸಿದ ೧೨ ತಾಳೆಗರಿ ಪ್ರತಿಗಳಲ್ಲೂ ಇಲ್ಲ. ಅಷ್ಟಲ್ಲದೆ, ಮುಂದೆ ರಾವಣ ವಧೆಯಾದ ಮೇಲೆ 'ನಿಜಸೀತೆ'ಯು ಪ್ರತ್ಯಕ್ಷಳಾದ ಘಟನೆಯು ಕಾವ್ಯದಲ್ಲಿ ದೊರೆಯುವುದಿಲ್ಲ.

ಇದರಿಂದ 'ಮಾಯಾಸೀತಾ ವೃತ್ತಾಂತ'ವು ಕುಮಾರ ವಾಲ್ಮೀಕಿ ಕೃತವಲ್ಲ, ಪ್ರಕ್ಷಿಪ್ತವಿರಬೇಕು.

5. ವಾ. ರಾ. III ೬೯-೧೭.
6. ಈ ಹಿಂದೆ ತಾಟಕೆ (I ೨೬-೧೮ ವಾ. ರಾ.)

ತೊರವೆ ರಾಮಾಯಣದಲ್ಲಿ,

> ತನುಜ ಕೇಳ್ಳೆ ಕಂಡರಿಸರಾ
> ವನದ ಪಥದಲಧೋಮುಖಿಯನವ
> ಳಿನ ಕುಲೇಂದ್ರನ ತಡೆದು ನಿಂದಳು ಪರಿಘಹಸ್ತದಲಿ
> ಕನಲಿ ಲಕ್ಷ್ಮಣದೇವನಾಬೆಯ
> ಜನನಿಯಂದರ ಮಾಡಿಮುಂದಣ
> ವನಕೆ ಗಮಿಸಿದರಧಿಕಮುಸ್ತರದುಗ್ರದುರ್ಭಯದ[1]

ಎಂದು ಹೇಳಿ ಆಕೆಯನ್ನು ಶೂರ್ಪನಖಿಯ ಮಗಳೆಂದು ತಿಳಿಸಲಾಗಿದೆ. ಇದಕ್ಕೆ ಏನು ಆಧಾರವೋ ತಿಳಿಯದು. ಬಹುಶಃ ಲಕ್ಷ್ಮಣನಿಂದ ಸಮಾನವಾಗಿ 'ವಿರೂಪ ಕರಣ' ಶಿಕ್ಷೆಹೊಂದಿದ ಇವರಿಬ್ಬರನ್ನು ಕವಿಯು 'ತಾಯಿ–ಮಗಳು' ಎಂದು ಕರೆದಿರಬಹುದೇ ?

## ಶಬರೀ ಭಕ್ತಿ

ವಾಲ್ಮೀಕಿ ರಾಮಾಯಣದ ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ರಾಮನನ್ನು ಕಂಡು ಶಬರಿಯು,

> ಅದ್ಯ ಮೇ ಸಫಲಂ ಜನ್ಮ ಸ್ವರ್ಗಶ್ಚೈವ ಭವಿಷ್ಯತಿ।
> ತ್ವಯಿ ದೇವವರೇ ರಾಮ ಪೂಜಿತೇ ಪುರುಷರ್ಷಭ[2] ॥

ಎಂದು ರಾಮನನ್ನು ಕಂಡು 'ದೇವವರ' ಎಂದು ಸಂಬೋಧಿಸುತ್ತಾಳೆ. ಅಲ್ಲದೆ ಶ್ರೀರಾಮನ ಕೃಪಾ ದೃಷ್ಟಿಯಿಂದ ತಾನು ಪರಿಶುದ್ಧಳಾದೆ–ಎನ್ನುತ್ತಾಳೆ.[3] ಅಲ್ಲದೆ ರಾಮನೂ ಆಕೆಯ ಭಕ್ತಿಯನ್ನು ಪ್ರಶಂಸಿಸುತ್ತಾನೆ.[4]

ಆದಿಕಾವ್ಯದ ಇತರ ಪಾಠಗಳಲ್ಲಿ ಮೇಲೆ ಹೇಳಿದ ೧. ಶಬರೀ ಸ್ತುತಿ. ೨. ಶಬರೀ ಪರಿಶುದ್ಧಿ ೩. ರಾಮನಿಂದ ಶಬರೀ ಪ್ರಶಂಸೆ–ಈ ಮೂರು ಅಂಶಗಳೂ ಇಲ್ಲ. ಆ ಪಾಠಗಳಲ್ಲಿ ರಾಮನ ದೇವತ್ವಕ್ಕಿಂತಲೂ, ಶಬರಿಯ ಗುರುಭಕ್ತಿ ಮತ್ತು ತಪಸ್ಸುಗಳಿಗೆ ಹೆಚ್ಚು ಮಹತ್ವಕೊಡಲಾಗಿದೆ ಬಹುಶಃ ಶಬರಿಯ ಕಥೆಯ ಮೂಲ ರೂಪ ಇದೇ ಆಗಿದ್ದಿರಬೇಕು.[5]

ವಾಲ್ಮೀಕಿ ರಾಮಾಯಣದಲ್ಲಿ ಶಬರಿಯಿಂದ ಸೀತಾನ್ವೇಷಣೆಗೆ ಸಂಬಂಧಿಸಿದ ಯಾವ ಸೂಚನೆ, ಮಾರ್ಗದರ್ಶನ ದೊರೆಯುವುದಿಲ್ಲ. ಆದರೆ, ಅಧ್ಯಾತ್ಮರಾಮಾಯಣದಲ್ಲಿ ಶಬರಿಯು,

> ರಾವಣೇನ ಹೃತಾ ಸೀತಾ ಲಂಕಾಯಾಂ ವರ್ತತೇಧುನಾ[6] ।

---

ಮತ್ತು ಶೂರ್ಪನಖಿ (III ೬೯-೧೮ ವಾ. ರಾ.) ಇವರಿಬ್ಬರಿಗೆ ಲಕ್ಷ್ಮಣನಿಂದ ಇಂತಹ 'ಗತಿ' ಒದಗಿತ್ತು.

1. ತೊ. ರಾ. III ೧೨-೧೨. ಇಲ್ಲಿ ಅಧೋಮುಖಿಯೆಂದಿರುವುದು ತಪ್ಪಾಗಿರಬಹುದೇ ? ರಾಮಕಥೆಯನ್ನೊಳಗೊಂಡ "ಬ್ರಹ್ಮ ಚಕ್ರ"ದಲ್ಲಿ ಶೂರ್ಪನಖಿಗೆ ಇಬ್ಬರು ಹೆಮ್ಮಕ್ಕಳಿದ್ದಂತೆಯೂ ಅವರು ಲಕ್ಷ್ಮಣನಿಂದ ಹತರಾದಂತೆಯೂ ಇದೆ—ಡಾ. ಬುಲ್ಕೆ–ರಾಮಕಥಾ, ಪು. ೪೪೮.
2. ವಾ. ರಾ. III ೭೪-೧೨.
3. ಇದೇ. ೭೪-೧೩.
4. ಇದೇ. ೭೪-೩೧.
5. ಕಬಂಧನು ರಾಮನಿಗೆ ಸೀತಾನ್ವೇಷಣೆಯಲ್ಲಿ ಸುಗ್ರೀವನಿಂದ ನೆರವಾಗುವುದು ಎಂದು ತಿಳಿಸುತ್ತಾನಷ್ಟೆ. (ವಾ. ರಾ. III ೭೨ನೇ ಸರ್ಗ) ಆ ಸಂದರ್ಭದಲ್ಲಿ ಕಬಂಧನು ಶಬರಿಯ ವಿಚಾರವನ್ನು ಪ್ರಸ್ತಾವಿಸಿದರೂ (ವಾ. ರಾ. III ೭೩-೨೬, ೨೭) ಅವಳಿಂದ ರಾಮನಿಗೆ ಸೀತಾನ್ವೇಷಣೆಯಲ್ಲಿ ಸಹಾಯವಾದೀತು ಎಂದು ಸೂಚಿಸುವುದಿಲ್ಲ. ಅಷ್ಟಲ್ಲದೆ ಶಬರಿಯ ಪ್ರಕರಣದಲ್ಲಿ ಸೀತೆಯ ಕುರಿತು ಒಂದು ಮಾತೂ ಬರುವುದಿಲ್ಲ. ಈ ಅಂಶಗಳನ್ನು ಶಬರೀ ವೃತ್ತಾಂತವೇ ಪ್ರಕ್ಷಿಪ್ತವಾಗಿರಬಹುದೇ ? ಎಂಬ ಸಂದೇಹಕ್ಕೆ ಆವಕಾಶವಿದೆ.
6. ಅಧ್ಯಾತ್ಮ ರಾಮಾಯಣ III ೧೦-೩೫.

ಎಂದು ಸೂಚಿಸಿ, ಸುಗ್ರೀವ ಸಹಕಾರದಿಂದ ಕಾರ್ಯಸಿದ್ಧಿಯಾಗುವುದೆಂದು ನುಡಿಯುತ್ತಾಳೆ. ಆನಂದ ರಾಮಾಯಣ ದಲ್ಲಿಯೂ ಈ ಪ್ರಕರಣವು ಅಧ್ಯಾತ್ಮ ರಾಮಾಯಣಾನುಸಾರಿಯಾಗಿದೆ.[1]

ಈ ಪ್ರಕರಣದಲ್ಲಿ ಕುಮಾರ ವಾಲ್ಮೀಕಿಯು ಅಧ್ಯಾತ್ಮ, ಆನಂದರಾಮಾಯಣಗಳನ್ನು ಅನುಸರಿಸಿದ್ದಾನೆ. ಶಬರಿಯು ತುಂಗಭದ್ರಾಕಲಿತ ಪಂಪಾಕ್ಷೇತ್ರದಲ್ಲಿ ಸುಗ್ರೀವನ ಕಾಂಬಿರಿ, ಮನದ ಬಗೆ ಕೈಗೂಡುವುದು ರಿಪುಹನನ ಸಿದ್ಧಿಪುದು, ನಿಮ್ಮಯ ವನಿತೆ ನಿಮಗಹಳು ಎಂದು ತಿಳಿಸಿ, ತಾನು ಅಜಪುರಿಗೆ ಬಿಜಯಗೈಯ್ಯುತ್ತಾಳೆ.[2] ವಾಲ್ಮೀಕಿ ರಾಮಾಯಣ ದಲ್ಲಿ ಶಬರಿಯು,

> ಅನುಜ್ಞಾತಾ ತು ರಾಮೇಣ ಹುತ್ವಾತ್ಮಾನಂ ಹುತಾಶನೇ ।
> ಜ್ವಲತ್ಪಾವಕ ಸಂಕಾಶಾ ಸ್ವರ್ಗಮೇವ ಜಗಾಮ ಸಾ.[3] ॥

ಎಂದು ಅಗ್ನಿಪ್ರವೇಶಮಾಡಿ ಸ್ವರ್ಗಗಮನಗೈದ ವರ್ಣನೆಯಿದೆ.[4] ತೊ. ರಾ. ವು ಸದೇಹ ಸತ್ಯಲೋಕಾರೋಹಣವನ್ನು ಹೇಳಿ ಪುರಾಣ ಪ್ರಜ್ಞೆಯನ್ನು ವ್ಯಕ್ತಗೊಳಿಸಿದೆ–ಎನ್ನಬೇಕು.

### ತುಂಗಭದ್ರೆಯ ಉಲ್ಲೇಖ

ಆದಿಕಾವ್ಯದಲ್ಲಿ ಪಂಪಾ ಸರೋವರದ ವರ್ಣನೆ ವಿಸ್ತಾರವಾಗಿ ಬಂದಿದೆ.[5] ಆದರೆ, ಈ ಸಂದರ್ಭದಲ್ಲಿ ರಾಮನ್ನ ಪಂಪಾ ಸರೋವರಕ್ಕೆ ಬರುತ್ತಾ ತುಂಗಭದ್ರೆಯನ್ನು ಕಂಡನೆಂದಾಗಲೀ ಅದನ್ನು ದಾಟಿದನೆಂದನಾಗಲೀ, ಉಲ್ಲೇಖವಿಲ್ಲ.

ತೊರವೆ ರಾಮಾಯಣದಲ್ಲಿ, ಶಬರಿಯನು ಬೀಳ್ಕೊಂಡು ಪಂಪಾಕ್ಷೇತ್ರಮಂಡಲಕೆ ಬರಲು,

> ಪ್ರಬಲತರ ಘೂರ್ಣಿತದ ಬಹಳಿತ
> ಸಬುದದುಬ್ಬಿನ ಸುಳಿಗಳಬ್ಬರ
> ದಬುಧಿಭಂಗದ ತುಂಗಭದ್ರೆಯ ಕಂಡರಿದುರಿನಲಿ.[6]

ಎಂದು ರಾಮ ಲಕ್ಷ್ಮಣರು ತುಂಗಭದ್ರಾನದಿಯನ್ನು ಕಂಡಂತೆಯೂ, ಆ ನದಿಯನುತ್ತರಿಸಿ, ಪಂಪಾಶ್ರೀನಿವಾಸನ ದರ್ಶನ ಪಡೆದಂತೆಯೂ ಹೇಳಿಕೆಗಳಿವೆ. ಕನ್ನಡನಾಡಿನ ಜೀವನದಿಗಳಲ್ಲಿ ಒಂದಾದ ತುಂಗಭದ್ರೆಯನ್ನು ಕನ್ನಡಕವಿಯು ಉಲ್ಲೇಖಿಸಿದ್ದು ಸಹಜವೇ. ಹಾಗೆಯೇ 'ಪಂಪಾಶ್ರೀನಿವಾಸನ ದರ್ಶನವನ್ನು ರಾಮಲಕ್ಷ್ಮಣರಿಗೊದಗಿಸಿದ್ದೂ

---

1. ಆನಂದ ರಾಮಾಯಣ I ೭. ೧೭೦-೧೬೬.
2. ತೊ. ರಾ. III ೧೨-೩೪.
3. ವಾ. ರಾ. III ೭೪-೩೩.
4. ತೊ. ರಾ. III ೧೨-೩೪.

ಬತ್ತಲೇಶ್ವರನೂ 'ಹರಿ ಶಬರಿಯಾಶ್ರಮಕೆ ಬಂದಾ ಧರಣಿಜಾತೆಯ ಸುದ್ದಿಯರಿದು ಮುಂದುವರಿದುದನ್ನು' ಹೇಳು ತ್ತಾನೆ. (ಕಾ. ರಾ. ೬-೬೦)

ಪ್ರಶ್ನೆ : ಬುಗರಿಯೀಯೆ ಶಬರಿಕಾಯೆ, 'ಕಾದಿರುವಳು ಶಬರಿ' ಎಂಬ ರೀತಿಗಳಲ್ಲಿ (ಗೋ. ಪೈ. ಮತ್ತು ವಿ. ಸೀ. ಕವನ ಗಳಲ್ಲಿ) ಜನಜನಿತವಾದ ಶಬರಿಯು ತಾನು ಕಚ್ಚಿ, ರುಚಿನೋಡಿ ರಾಮನಿಗೆ ಬುಗರಿಗಳನ್ನು ಕೊಟ್ಟ ಕಥೆಯು ಜಾನಪದದಲ್ಲಿ ಹರಡಿಕೊಂಡಿದೆ, ಆದರೆ ಇದಕ್ಕೆ ಯಾವ ಕಾವ್ಯಾಧಾರವಿದೆ? ರಾಮಾಯಣಗಳಲ್ಲಿ ಶಬರಿಯು ತಾನು ಸಂಗ್ರಹಿಸಿದ್ದ ಫಲಗಳನ್ನು ರಾಮಲಕ್ಷ್ಮಣರಿಗೆ ಕೊಟ್ಟ ಉಲ್ಲೇಖಗಳೇನೋ ದೊರೆಯುತ್ತವೆ (ವಾ. ರಾ. III ೭೪-೧೭, ಅ. ರಾ. III ೧೦-೮.೯, ಅ. ರಾ I ೭-೧೬೨) ನನಗೆ ದೊರೆತ ಒಂದು ತೊ. ರಾ. ತಾಳೆಗರಿ ಪ್ರತಿಯಲ್ಲಿ "ಪುಳಿಂದಿನಿ ವಿಶಾಲಭಕ್ತಿಯಲರಿದು ರಸಾಲವೊದಲಾದ ಫಲಂಗಳ ಕೊಟ್ಟ" ಉಲ್ಲೇಖವೇನೋ ಇದೆ. ಇದು ಪ್ರಕ್ಷಿಪ್ತವಾಗಿರಬೇಕು. ರಾಮನ ಅಂಗೈಯಲ್ಲಿ ಜಟಾಯು ಸಂಸ್ಕಾರ, ಅಳಿಲ ಸೇವೆ ಮಳಲ ಭಕ್ತಿ" ಗಳಂತೆಯೇ ಇದು ಗುಪ್ತಗಾಮಿನಿಯಾಗಿ ಹರಿಯುತ್ತಿರುವ ಜಾನಪದ ರಸವಾಹಿನಿಯ ಒಂದು ಶಾಖೆಯಿರಬೇಕು.

5. ವಾ. ರಾ. III ೭೫ನೇ ಸರ್ಗ ಮತ್ತು IV ೧ನೇ ಸರ್ಗ.
6. ತೊ. ರಾ. III ೧೨-೩೫.

ಕುಮಾರ ವಾಲ್ಮೀಕಿಯ ಇನ್ನೊಂದು ಕಲ್ಪನಾ ವೈಶಿಷ್ಟ್ಯವಾಗಿದೆ. ಇತರ ರಾಮಾಯಣಗಳಲ್ಲಿ ಇದಕ್ಕೆ ಹಿನ್ನೆಲೆ ದೊರೆಯುವುದಿಲ್ಲ.

### ವಿರೂಪಾಕ್ಷಂಗೆ ಪಡಿಯೆನೆ ಬೆಳೆದ ಹನುಮಂತ

ಕಿಷ್ಕಿಂಧಾ ಕಾಂಡದ ಆರಂಭದಲ್ಲಿ ರಾಮ–ಹನುಮ ಸಮಾಗಮ ಸಂದರ್ಭದಲ್ಲಿ ಹನುಮಂತನು ತನ್ನ ವೃತ್ತಾಂತವನ್ನೆಲ್ಲಾ ತಿಳಿಸಿದರೂ ರಾಮನಿಗೆ ಸಂದೇಹ ನಿರಸನವಾಗದಿರಲು,

> ಆ ವಿಮಲಯತಿರೂಪವನು ಬಿಡಿ
> ರಾವರಣ ನಭಕೊತ್ತಿಲಯದಿನ
> ದಾ ವಿರೂಪಾಕ್ಷಂಗೆ ಪಡಿಯೆನೆ..........ಹನುಮನು ಬೆಳೆಯುತ್ತಾನೆ.[1]

ಆಗ ರಾಮನಿಗೆ ಶಂಕಾನಿವಾರಣೆಯಾಗಿ 'ಸಾಕು, ಸಾಕು, ಒಡೆಂಬಟ್ಟೆವು' ಎನ್ನುತ್ತಾನೆ. ಈಕಥಾ ವಿನ್ಯಾಸವೆಲ್ಲವೂ ಕುಮಾರ ವಾಲ್ಮೀಕಿಯದೇ ಸೃಷ್ಟಿ. ಇದಕ್ಕೆ ಆಭಾಸಕೋಽಸ್ಯ ಪವನಃ ಪವನಸ್ಯ ರುದ್ರಾಃ ಎನ್ನುವ ಭಾ. ತಾ. ನಿ. (೧-೧೪)ದ ಹೇಳಿಕೆ ಹಿನ್ನೆಲೆಯಾಗಿರಬಹುದು.

### ಸಪ್ತತಾಲ ಭೇದನ ಪ್ರಸಂಗ

ವಾಲ್ಮೀಕಿಯ ಕೃತಿಯಲ್ಲಿ ಸುಗ್ರೀವನು ಏಳು ಸಾಲವೃಕ್ಷಗಳನ್ನು ತೋರಿಸಿ,

> ಯತ್ರೈಕಂ ಘಟತೇ ವಾಲೀ ನಿಷ್ಪತ್ರಯಿತುಮೋಜಸಾ।
> ಏತದಸ್ಯಾಸಮಂ ವೀರ್ಯಂ ಮಯಾ ರಾಮ ಪ್ರಕೀರ್ತಿತಮ್[2] ॥

'ಶಾಖೋಪಶಾಖೆಗಳಿಂದ ಕೂಡಿದ ಈ ಮಹಾವೃಕ್ಷಗಳಲ್ಲಿ ಒಂದೊಂದನ್ನೂ ವಾಲಿಯು ಬಾಣದಿಂದ ಹೊಡೆದು, ಬಾಣವು ಆಚೆಗೆ ತೂರಿಹೋಗುವಂತೆ ಮಾಡಲು ಸಮರ್ಥನು. ಈಗ ನಾನು ವಾಲಿಗಿರುವ ಅಸಾಧಾರಣವಾದ ಶೌರ್ಯವನ್ನು ನಿನಗೆ ಹೇಳಿದ್ದೇನೆ'[3] ಎನ್ನುತ್ತಾನೆ.

ಕುಮಾರ ವಾಲ್ಮೀಕಿಯು ಆ ವೃಕ್ಷಗಳ ಕುರಿತಾಗಿ ಸುಗ್ರೀವನಿಂದ ಹೀಗನ್ನಿಸುತ್ತಾನೆ.

> ಅರಸ ಚಿತ್ತೈಸೇಳು ತಾಳಿವೆ
> ಸರಿಸದಲಿ ದೈವಿಕದ ಮರನಿವ
> ನುರಗನಂದದ ದೈತ್ಯಮುನಿಧರಿಸಿಹನು ವಿತಳದಲಿ
> ಸುರರಿಗಸದಳವಿವು ಬಳಿಕ್ಕಿವ
> ನೆರಡು ಕಡಿಮಾಡಿದರೆ ಕದನದ
> ಲರಿವಧಾ ಸಮಯಕ್ಕೆ ಸಂಪ್ರತಿಯಹುದಲೇ ಎಂದ.[4]

ಇಲ್ಲಿ ಹೇಳಿದ 'ಉರಗನಂದದ ದೈತ್ಯಮುನಿ'ಯ ಪ್ರಸ್ತಾವವು ಆದಿಕಾವ್ಯದಲ್ಲಿ ಇಲ್ಲ. ಕನ್ನಡದ ಕವಿಯು ಉಲ್ಲೇಖಿಸಿದ ಈ ವಿಚಾರಕ್ಕೆ ಭಾರತ ತಾತ್ಪರ್ಯ ನಿರ್ಣಯದಲ್ಲಿ ಬರುವ,

---

1. ತೊ. ರಾ. IV ೧-೧೮. ಅಶೋಕವನದಲ್ಲೂ ಸೀತೆಗೆ ನಂಬಿಕೆ ಮೂಡಿಸಲು ಹನುಮನು ಇದೇ ರೂಪವನ್ನು ಪ್ರದರ್ಶಿಸುತ್ತಾನೆ. (ತೊ. ರಾ. V ೩-೮೦)
2. ವಾ. ರಾ. IV ೧೧-೬೭.
3. ಈ ಶ್ಲೋಕಕ್ಕೆ ಅನೇಕ ಬಗೆಯಲ್ಲಿ ಅರ್ಥ ಹೇಳುತ್ತಾರೆ. ಆ ಕುರಿತಾದ ವಿವೇಚನೆಗೆ–ರಂಗನಾಥಶರ್ಮ–ಕಿಷ್ಕಿಂಧಾ ಕಾಂಡ ಅನುಬಂಧ ಪು. ೪೯೩. ನೋಡಿರಿ.
4. ತೊ. ರಾ. IV ೨-೪೫.

ಭಿತ್ವಾ ತಾನ್ಸಗಿರಿಕುಂ ಭಗವತ್ಪ್ರಮುಕ್ತಃ
ಪಾತಾಲ ಸಪ್ತಕ ಮಥಾತ್ರಜಯೇತ್ಸಪಥ್ಯಾಃ
ನಾಮ್ನಾಸುರಾಃ ಕುಮುದಿನೋಜ್ಞ ಜವಾಕ್ಯರಕ್ಷಾಃ
ಸರ್ವಾಂಕ್ಷತಾನದಹದಾಶು ಶರಃ ಸ ಏಕಃ[1]

ಈ ಹೇಳಿಕೆಯು ಒಂದು ಹಿನ್ನೆಲೆಯಾಗಿರಬೇಕು.

'ತೊರವೆ ರಾಮಾಯಣ'ದ ರಾಮನು,

ಅಹಿಯ ರೂಪನ ದಾನವನ ವಿ
ಗ್ರಹವನುಂಗುಟದಗ್ರದಲಿ ಜಡಿ
ದು.........................[2]

ಎನ್ನುವುದಕ್ಕೆ ಆಧಾರವಾಗಿ, ಆನಂದರಾಮಾಯಣದಲ್ಲಿನ,

ಸ್ವೀಯಂಗುಷ್ಠೇನ ಸೌಮಿತ್ರೇಃ ಪದಂ ಕಿಂಚಿದ್ವಿಮರ್ದ್ಯದ ಚ।
ಯಜುಂ ಕೃತ್ವಾ ಪನ್ನಗಂ ತಂ ಶೇಷಾಂಶೇನ ಸ್ಥಿತಂ ಭುವಿ.[3] ||

ಎಂಬ ಶ್ಲೋಕವು ಆಕರವಾಗಿರಬೇಕು.[4]

**ದುಂದುಭಿ–ಮಾಯಾವಿ**

ಮಾಯಾವೀ ನಾಮ ತೇಜಸ್ವೀ ಪೂರ್ವಜೋ ದುಂದುಭೇಃ ಸುತಃ।
ತೇನ ತಸ್ಯಮಹದ್ವೈರಂ ಸ್ತ್ರೀಕೃತಂ ವಿಶ್ರುತಂ ಪುರಾ.[5] ||

ದುಂದುಭಿಯ ಮಗನಾದ ಮಾಯಾವಿಗೂ[6] ಒಂದಾನೊಂದು ಸ್ತ್ರೀನಿಮಿತ್ತವಾಗಿ ಮಹಾವೈರ ಬೆಳೆದಿತ್ತು. ಇದು ಲೋಕ

---

1. ಭಾರತ ತಾತ್ಪರ್ಯ ನಿರ್ಣಯ ೬-೧೦.
2. ತೊ. ರಾ. IV ೨-೬೬.
3. ಆನಂದ ರಾಮಾಯಣ I ೮-೩೬.
   ಅ) ಈ ಸರ್ಪದ ವಿಚಾರ 'ಮಹಾನಾಟಕ' (೫-೪೪)ದಲ್ಲಿದೆ.
   ಆ) ಕನ್ನಡದ ಕವಿ ಬತ್ತಲೇಶ್ವರನು ತಾಳೀಳರ ಕುರಿತು,

   ಮೂರು ಯೋಜನ ದುರಗ ಬಾಲನ ಸುತ್ತಿ ಮಲಗಿಹುದು
   ತೋರಲುರಗನ ಮೇಲೆ ಮಲಗಿಹ..............೮–೭

ಎನ್ನುತ್ತಾ 'ಸರ್ಪದ' ಉಲ್ಲೇಖ ಮಾಡುತ್ತಾನೆ.

4. ಆನಂದ ರಾಮಾಯಣದಲ್ಲಿ ಯಾರು ಸಪ್ತತಾಲ ಭೇದ ಮಾಡುತ್ತಾರೋ, ಅವರಿಂದ ಮಾತ್ರ ವಾಲಿವಧೆ ಸಾಧ್ಯ–ಎಂಬ ಭವಿಷ್ಯವಾಣಿ ಇದೆ.

   ನರಸಿಂಹ ಪುರಾಣದಲ್ಲೂ (೫೦–೩೨) ಈ ಪ್ರಸ್ತಾವವಿದೆ. ಸಪ್ತತಾಲಭೇದ ಮಾಡಿದಾಗಲೂ ರಾಮನ ಶಕ್ತಿಯ ಬಗ್ಗೆ ಸುಗ್ರೀವನಿಗೆ ನಂಬುಗೆ ಹುಟ್ಟದಿರಲು ರಾಮನು ವಿಶ್ವರೂಪ ತೋರಿ ಧೈರ್ಯ ತುಂಬುವ ಕಥೆಯು ತತ್ತ್ವಸಂಗ್ರಹ ರಾಮಾಯಣ (೪-೩೪)ದಲ್ಲಿದೆ.

   ಸಪ್ತತಾಲಧರಿಸಿದ ಸಪ್ತಾಕಾರದ ದೈತ್ಯನ ಶಿಲ್ಪವೊಂದು ಮದರಾಸಿನಲ್ಲಿದ್ದು. 'ದಿ ಹಿಂದು'–ಇಂಗ್ಲಿಷ್ ದಿನಪತ್ರಿಕೆಯ ಸಾಪ್ತಹಿಕ ಪುರವಣಿ (೨೧-೩-೧೯೮೧)ಯಲ್ಲಿ ಅದರ ಚಿತ್ರ, ವಿಚಾರ ಪ್ರಕಟವಾಗಿದೆ. ಹಳೆಬೀಡಿನ ಹೊಯ್ಸಳೇಶ್ವರ, ಹಂಪಿಯ 'ಹಜಾರ ರಾಮ್' ದೇವಾಲಯಗಳಲ್ಲಿಯೂ ಇದೇ ವಸ್ತುವಿಗೆ ಸಂಬಂಧಿಸಿದ ಶಿಲ್ಪಗಳಿವೆ. ಇದರಿಂದ ಆನಂದ ರಾಮಾಯಣಕ್ಕಿಂತಲೂ ಹಿಂದೆ ಈ ಕಥೆ ಪ್ರಚಲಿತವಾಗಿತ್ತೆಂದು ಹೇಳಬಹುದು.
5. ವಾ. ರಾ. IV ೯-೪.
6. ಅ. ರಾ. ದಲ್ಲಿ ಮಾಯಾವಿಯು ಮಯನ ಮಗನೆಂದಿದೆ. (IV ೧-೪೭)

ವಿದಿತ ವೃತ್ತಾಂತ–ಎಂದು ವಾಲ್ಮೀಕಿಯ ಕೃತಿಯಲ್ಲಿದೆ. ಲೋಕ ವಿದಿತವಾದ ಆ ಸ್ತ್ರೀನಿಮಿತ್ತ ವೃತ್ತಾಂತವಾವುದು ? ಎಂಬುದರ ವಿವರಣೆ ಅಲ್ಲಿಲ್ಲ. ಅಧ್ಯಾತ್ಮ ರಾಮಾಯಣ ಮತ್ತು ಆನಂದ ರಾಮಾಯಣಗಳಲ್ಲಿಯೂ ಈ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ.

ಕುಮಾರ ವಾಲ್ಮೀಕಿಯು ಇದಕ್ಕೆ ಒಂದು ಉಚಿತವಾದ ಹಿನ್ನೆಲೆಯನ್ನು ಒದಗಿಸಿದ್ದಾನೆ. 'ಮಾಯಾವಿಯು ಒಬ್ಬ ಯಕ್ಷನ ಮಗಳನ್ನು ಕಳವಿನಲ್ಲಿ ಒಯ್ಯುತ್ತಿರಲು, ವಾಲಿಯು ಕಂಡು, ಮಾಯಾವಿಯನ್ನು ಎದುರಿಸಿ, ಆ ಹೆಣ್ಣನ್ನು ರಕ್ಷಿಸುತ್ತಾನೆ, ಇದರಿಂದ ಮಾಯಾವಿಗೆ ಆ ಯಕ್ಷಕನ್ಯೆ ತನ್ನವಳಾಗಲಿಲ್ಲ. ಇದರ ಪರಿಣಾಮವಾಗಿ, ವೈರ ಬೆಳೆದು ವಾಲಿಯೊಡನೆ ಯುದ್ಧಮಾಡಿ ಮಾಯಾವಿಯೂ, ಅವನ ಅಯ್ಯನಾದ ದುಂದುಭಿಯೂ ( ಮಾಯಾವಿಯು ಬಿಲದೊಳಗೆ ನಡೆದ.ಹೋರಾಟದಲ್ಲಿ) ಮಡಿದರು.[1]

ಮಾಯಾವಿಯು ಬಿಲದೊಳಗೆ ವಾಲಿಯ ಕೈಯಿಂದ ಸಾಯುತ್ತಾ 'ಹಾ, ಸುಗ್ರೀವ' ಎಂದು ವಂಚಿಸುತ್ತಾನೆ.[2] ಬಿಲದಿಂದ ಬಂದ ಕೂಗು ಸಾಯುತ್ತಿರುವ ಅಣ್ಣನದೇ ಎಂದು ಸುಗ್ರೀವನು ನಿರ್ಧರಿಸಿ ಮೋಸಹೋಗುತ್ತಾನೆ. ಇವಿಷ್ಟೂ ಕುಮಾರ ವಾಲ್ಮೀಕಿಯದೇ ಕಲ್ಪನೆ.[3]

## ವಾಲಿ ವಧಾ ಪ್ರಸಂಗ

ಆದಿಕಾವ್ಯದಲ್ಲಿ ವಾಲಿ–ಸುಗ್ರೀವರೊಳಗೆ ನಡೆದ ಎರಡು ದ್ವಂದ್ವಯುದ್ಧಗಳ ವರ್ಣನೆಯು ದೊರೆಯುತ್ತದೆ.[4] ಎರಡನೆಯ ಹೋರಾಟದ ಸಂದರ್ಭದಲ್ಲಿ, ರಾಮನು ಬಾಣವೆಸೆದು[5] ಅದರಿಂದ ವಾಲಿಯು ಸಾಯುತ್ತಾನೆ. ವಾಲಿ ವಧೆಯ ನಂತರ, ಪ್ರಕೃತದ ವಾಲ್ಮೀಕಿ ರಾಮಾಯಣದಲ್ಲಿ ಸಿಗುವ ರಾಮಾಧಿಕ್ಷೇಪಃ (ವಾಲಿಯು ಶ್ರೀ ರಾಮನನ್ನು ನಿಂದಿಸುವುದು)[6] ಮತ್ತು ವಾಲಿವಧ ಸಮರ್ಥನಮ್ (ರಾಮನು ತನ್ನಿಂದಾದ ವಾಲಿವಧೆಯನ್ನು ಸಮರ್ಥಿಸುವುದು, ವಾಲಿಯ ಕ್ಷಮಾಯಾಚನೆ, ಶ್ರೀ ರಾಮನಿಂದ ಅಭಯ ಪ್ರದಾನ)[7] ಈ ಎರಡು ಸರ್ಗಗಳು ಪ್ರಕ್ಷಿಪ್ತಗಳೆಂದು ವಿದ್ವಾಂಸರ ಅಭಿಪ್ರಾಯವಿದೆ.[8]

---

ತೊ. ರಾ. ದಲ್ಲಿ ಮಾಯಾವಿಯ ತಂದೆ ದುಂದುಭಿ (IV ೨–೩೩)

ಉತ್ತರ ಕಾಂಡ ರಾಮಾಯಣದಲ್ಲಿ ಮಾಯಾವಿ, ದುಂದುಭಿ–ಇಬ್ಬರೂ ಸೋದರರು (ಸರ್ಗ ೧೨)

1. ತೊ. ರಾ. IV ೨–೩೩ ರಿಂದ ೩೭.
2. ಇದು ಮಾರೀಚ ವಂಚನೆಯನ್ನು ನೆನಪಿಗೆ ತರುತ್ತದೆ. ಸಾಯುತ್ತಲೂ ದುಂದುಭಿಯು ತನ್ನ ಹಗೆಸಾಧನೆಗಾಗಿ– ವಾಲಿ–ಸುಗ್ರೀವರೊಳಗೆ ವೈಷಮ್ಯ ಬೆಳೆಯುವಂತಹ ಸಂಚನ್ನು ಹೂಡಿದನೆನ್ನಬೇಕು.
3. ಸುಗ್ರೀವನು ಬಿಲದ ದ್ವಾರದಲ್ಲಿ ಕಾದು ಕುಳಿತ ಅವಧಿಯು ಭಿನ್ನರೀತಿಗಳಲ್ಲಿ ಹೇಳಲ್ಪಟ್ಟಿದೆ:
   ಅ) ವಾ. ರಾ. ೧೫ ವರ್ಷಗಳು (IV ೨೨-೨೯)
   ಆ) ಅಧ್ಯಾತ್ಮ ರಾ. ೧ ತಿಂಗಳು (IV ೧-೫೦)
   ಇ) ಆನಂದ ರಾ. ೧ ತಿಂಗಳು (I ೭-೧೭)
   ಈ) ಕಂಬರಾಮಾಯಣ–೨೮ ತಿಂಗಳು (ಪು. ಸಂಗ್ರಹ ೫೫)
   ಉ) ರಾಮಚರಿತಮಾನಸ ೧೫ ದಿನ (ಪು. ೧೮೦)
4. ಮಹಾಭಾರತದಲ್ಲಿನ ರಾಮೋಪಾಖ್ಯಾನ (ಅರಣ್ಯ ಪರ್ವ–ಅಧ್ಯಾಯ ೨೭೩-೨೯೧) ಮತ್ತು ನೃಸಿಂಹಪುರಾಣಗಳಲ್ಲಿ–ವಾಲಿ–ಸುಗ್ರೀವರೊಳಗೆ ಕೇವಲ ಒಂದು ಯುದ್ಧ ಮಾತ್ರ ಹೇಳಲಾಗಿದೆ.
5. ಅಣ್ಣನೊಡನೆ ಹೋರಾಟದಲ್ಲಿ ಕಂಗೆಟ್ಟ ಸುಗ್ರೀವನು (ಮರೆಯಲ್ಲಿದ್ದ) ರಾಮನನ್ನು ಮತ್ತೆ ಮತ್ತೆ ನೋಡಲಾರಂಭಿಸಿದಾಗ,

   ತತೋ ರಾಮೋ ಮಹಾತೇಜಾ ಆರ್ತಂ ದೃಷ್ಟ್ವಾ ಹರೀಶ್ವರಮ್ ।
   ಶರಂ ವೀಕ್ಷತೇ ವೀರೋ ವಾಲಿನೋ ವಧಕಾರಣಾತ್ ॥ (ವಾ. ರಾ. IV ೧೬–೩೨)
6. ವಾ. ರಾ. IV ಸರ್ಗ ೧೭.
7. ಇದೇ. ಸರ್ಗ ೧೮.
8. ಬುಲ್ಕೆ-ರಾಮಕಥಾ, ಪು. ೪೭೯.

ಕುಮಾರ ವಾಲ್ಮೀಕಿಯು ಈ ಕಥಾಭಾಗದಲ್ಲಿ, ವಾಲ್ಮೀಕಿಯನ್ನು ಅನುಸರಿಸಿದ್ದರೂ, ಒಂದೆರಡು ಕಥಾ ವ್ಯತ್ಯಾಸಗಳನ್ನು ಮೆರೆದಿದ್ದಾನೆ.

(ಅ) ಆದಿಕಾವ್ಯದಲ್ಲಿ, ವಾಲ್ಮೀಕಿಯು ಪ್ರಾಣತ್ಯಾಗಮಾಡುವ ಮೊದಲೇ ತಾರಾ[1] ವಿಲಾಪದ ವರ್ಣನೆಯಿದೆ.[2] ಆಕೆಯನ್ನು ಹನುಮಂತನು ಸಮಾಧಾನ ಪಡಿಸುವ ವಿಚಾರವಿದೆ.[3] ತೊರವೆ ರಾಮಾಯಣದಲ್ಲಿ ವಾಲಿಯು ಮೃತನಾದ ಮೇಲೆ, ಅದನ್ನು ಕೇಳಿ "ತನ್ನಯ ಬಾಲನಂಗದ ಸಹಿತ ಸತಿಯರ ಮೇಳದಾಕ್ರಂದನದಲಿ" ಆತ್ಮವಲ್ಲಭನಿದ್ದಲ್ಲಿಗೆ ಬರುತ್ತಾಳೆ.[4]

(ಆ) ವಾಲ್ಮೀಕಿಯ ಕೃತಿಯಲ್ಲಿ, ವಾಲಿಯ ದೇಹದಲ್ಲಿ ನಾಟಿದ್ದ ಬಾಣವನ್ನು ನೀಲನು ಗಿರಿಗಹ್ವರ ಸಂಲೀನಂ ದೀಪ್ತಮಾಶೀ ವಿಷಂ ಯಥಾ (ಗಿರಿಗುಹೆಯಲ್ಲಿ ಭುಗಿಲೆನ್ನುವ ವಿಷಸರ್ಪವನ್ನು ಹೊರಗೆಳೆಯುವಂತೆ) ಕಿತ್ತೆಳೆಯುತ್ತಾನೆ.[5] ಶ್ರೀ ರಾಮನೇ ಮನದ ಮರುಕದಲಿ ವಾಲಿಯ ಮೈಯಿಂದ ಬಾಣವನ್ನು ಕಿತ್ತಂತೆ ಹೇಳುತ್ತಾನೆ-ಕುಮಾರ ವಾಲ್ಮೀಕಿ.[6]

ಈ ವ್ಯತ್ಯಾಸಕ್ಕೆ ಅಧ್ಯಾತ್ಮ ರಾಮಾಯಣದಲ್ಲಿ ವಾಲಿಯು,

ವಿಶಲ್ಯ ಕುರುಮೇ ರಾಮ ಹೃದಯಂ ಪಾಣಿನಾ ಸ್ಪೃಶನ್,

ಎಂದಾಗ,

ತಥೇತಿ ಬಾಣಮುದ್ಧೃತ್ಯ ರಾಮಃ ಸಸ್ಪರ್ಶ ಪಾಣಿನಾ.[7]

---

ಅ) ವಾಲಿವಧಾ ಪ್ರಸಂಗದಲ್ಲಿ ರಾಮನ ವರ್ತನೆಯಾಗಲೀ, ಅವನಾಡುವ (ವಾಲಿ ವಧೆಯನ್ನು ಸಮರ್ಥಿಸಿಕೊಳ್ಳುವ) ಮಾತುಗಳಾಗಲೀ ವಿಮರ್ಶಕರ ತೀವ್ರ ದೃಷ್ಟಿಗೆ ಗುರಿಯಾಗದೆ ಇಲ್ಲ.-ಉದಾ : 'Sri Rama in defending himself asserts his imperialism in strong terms, almost with out any qualification... it appears a little out of character of Sri Rama-V. S. S. Sastri Lectures on the Ramayana-p. 145.

ಆ) ವಾಲಿವಧಾ ಸನ್ನಿವೇಶದಲ್ಲಿ

೧) ರಾಮನು ಅಡಗಿರಲಿಲ್ಲ. ತಮ್ಮನೊಡನೆ ಕಾಳಗದಲ್ಲಿ ತಲ್ಲೀನನಾದ ವಾಲಿಯು ರಾಮನನ್ನು ಗಮನಿಸಲಿಲ್ಲ,-ಅಷ್ಟೆ.

೨) ವೈರಿಯ ಅರ್ಧಬಲಾಪಹಾರ ಮಾಡುವ ವಾಲಿಯ ಕಾಂಚನಮಾಲೆಯ ಕುರಿತು ರಾಮನಿಗೆ ಭಯವಿದ್ದಿರಲಿಲ್ಲ.

೪) ವಾಲಿ, ಅವನ ಧರ್ಮಪತ್ನಿ ತಾರೆ-ಇಬ್ಬರೂ ರಾಮನ ಧರ್ಮದೃಷ್ಟಿಯನ್ನು ಗುರುತಿಸಿ, ತಮ್ಮ ಆಕ್ಷೇಪಗಳನ್ನು ಹಿಂದೆಗೆದುಕೊಂಡು, ಶ್ರೀ ರಾಮನೊಡನೆ ಕ್ಷಮಾಯಾಚನೆ ಮಾಡದ್ದರಿಂದ ರಾಮವರ್ತನೆಯ ಖಂಡನೆಯು ಅನ್ಯರಿಂದ ಸಮುಚಿತವಾದುದಲ್ಲ-ಈ ಅಭಿಪ್ರಾಯಗಳ ಸಮರ್ಥನೆಗೆ- K. S. Ramaswamy Sastri-Riddles of the Ramayana-p. 112-116. ನೋಡಬಹುದು.

ಇ) ...ರಾಮನು ದೇವ ಕಲ್ಪನು, ಆದರೂ ಮನುಷ್ಯನು. ಅವನ ಅನೇಕ ಗುಣಗಳನ್ನು ಕಂಡು ಚಿಂತಿಸಿದವರಿಗೆ ಈ (ವಾಲಿವಧೆ) ತಪ್ಪನ್ನು ಎಣಿಸುವುದು ಬರಿಯ ರಂಧ್ರಾನ್ವೇಷಣೆ ಎಂದು ತೋರುತ್ತದೆ.-ಮಾಸ್ತಿ ವೆಂ. ಅಯ್ಯಂಗಾರ್-ಆದಿಕವಿ ವಾಲ್ಮೀಕಿ. ಪು. ೧೨೫.

1. ರಾಮಾಯಣ ವ್ಯಾಖ್ಯಾನಕಾರರಲ್ಲೊಬ್ಬನಾದ ಮಹೇಶತೀರ್ಥನು ಕಿಷ್ಕಿಂಧಾ ಕಾಂಡ ೨೨-೧೨ನೇ ಶ್ಲೋಕದ ವಿವರಣೆಯ ಅಡಿಟಿಪ್ಪಣಿಯಲ್ಲಿ ತಾರೆಯ ಜನ್ಮಕಥೆಯನ್ನು ತಿಳಿಸಿದ್ದಾನೆ.
2. ವಾ. ರಾ. IV ಸರ್ಗ ೨೦.
3. ಇದೇ. ಸರ್ಗ ೨೧.
4. ತೊ. ರಾ. IV ೫-೧.
5. ವಾ. ರಾ. IV ೨೪-೧೭, ೧೮.
6. ತೊ. ರಾ. IV ೪-೬೪.
7. ಅಧ್ಯಾತ್ಮ ರಾಮಾಯಣ, IV ೨-೬೦.

ಬತ್ತಲೇಶ್ವರನೂ, ರಾಮನೇ ವಾಲಿಯ ಕೊರಳಮಣಿಯನು ಸರಳಮೊನೆಯಲಿ ತೆಗೆಯಲು ವಾಲಿಯು ಆತ್ಮಾರಾಮನಾದುದನ್ನು ಹೇಳುತ್ತಾನೆ (ಕೌ. ರಾ. ೮-೪೬) ವಾಲಿಯ ಅಂತ್ಯ ಕಾಲದಲ್ಲಿ ರಾಮನ ದಿವ್ಯಸ್ಪರ್ಶವನ್ನು ಅವನಿಗೊದಗಿಸುವುದೇ ಈ ಹೇಳಿಕೆಯ ಹಿನ್ನೆಲೆ.

ರಾಮನೇ ವಾಲಿಯ ದೇಹದ ಬಾಣವನ್ನು ಕಿತ್ತನು–ಎಂದಿರುವ ಉಲ್ಲೇಖವೇ ಆಧಾರವಾಗಿರಬೇಕು.

(ಇ) ವಾಲ್ಮೀಕಿ ರಾಮಾಯಣದಲ್ಲಿ ವಾಲಿಯ ಮರಣವನ್ನು ಕಂಡು, ಭ್ರಾತೃಶೋಕಕ್ಕೊಳಗಾಗಿ ಆತ್ಮಹತ್ಯೆಯ ವಿಚಾರಮಾಡುತ್ತಾನೆ.[1] ಕುಮಾರ ವಾಲ್ಮೀಕಿಯ ಸುಗ್ರೀವನು ರಾಮನೊಡನೆ, " ಈ ಪಾಪಿಯ ಒಡಲಿಗೆ ತೋಮರವ ತೊಡಚು " ಎಂದು ಪ್ರಾರ್ಥಿಸುತ್ತಾನೆ.[2]

(ಈ) ತೊರವೆ ರಾಮಾಯಣದಲ್ಲಿ ರಾಮನು ಸುಗ್ರೀವನನ್ನು ಸಂತೈಸುತ್ತಾ,[3]

> ಸೋಕದಪರಾಧಿಯನು ನಾವ
> ವಿವೇಕನುಖದಲಿ ಕೊಂದೆವೆನ್ನುವ
> ನೌಕಿಕೊಂಡಿಹ ಕಾರ್ಯಕೋಸುಗ....[4]

ಎಂದು ತನ್ನ ವರ್ತನೆಯ ರಹಸ್ಯವನ್ನು–ರಾವಣವಧೆಗಾಗಿ ತಾನು ಹಾಗೆ ಮಾಡಬೇಕಾಯಿತು ಎನ್ನುವ ಸತ್ಯವನ್ನು–ಪ್ರಾಮಾಣಿಕತೆಯಿಂದ ತಿಳಿಸುತ್ತಾನೆ.[5]

ಕುಮಾರ ವಾಲ್ಮೀಕಿಯ ಈ ಹೇಳಿಕೆಗೆ, ಆನಂದ ರಾಮಾಯಣದ " ರಾಮನು ಕಾರ್ಯಗೌರವಾರ್ಥವಾಗಿ ವಾಲಿಯನ್ನು ಕೊಲ್ಲಬೇಕಾಯಿತು"[6] ಎಂಬ ನುಡಿಯೇ ಆಧಾರವಾಗಿದೆ.

ವಾಲ್ಮೀಕಿ ರಾಮಾಯದನಲ್ಲಿ ವಾಲಿಗೆ ರಾಮನು ಕ್ಷಮಾದಾನ ಮಾಡಿದ ಉಲ್ಲೇಖವಿದ್ದರೂ (....ಪ್ರಸಾದಿತಸ್ತ್ವಂ

---

1. ವಾ. ರಾ. IV ೨೪-೨೦, ೨೩.
ಸುಗ್ರೀವನ ಭ್ರಾತೃಶೋಕ ಮತ್ತು ರಾಮನಿಂದ ಸಾಂತ್ವನದ ಉಲ್ಲೇಖಗಳು ವಾ. ರಾ. ದ ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ದೊರೆಯುತ್ತವೆ.

2. ತೊ. ರಾ. IV ೪-೬೪.

3. ಆನಂದರಾಮಾಯಣದಲ್ಲಿ ' ತಾನು ಮರೆಯಲ್ಲಿ ನಿಂತು ವಾಲಿಯನ್ನು ಕೊಂದ ಅಪರಾಧಕ್ಕಾಗಿ-ದ್ವಾಪರಾಂತ್ಯದಲ್ಲಿ ವಾಲಿಯು ಭಿಲ್ಲರೂಪದಲ್ಲಿ ಮರೆಯಲ್ಲಿ ನಿಂತು ಕೊಲ್ಲುವಂತೆ ರಾಮನೇ ಸೂಚಿಸುತ್ತಾನೆ.

> ತಥಾ ಪಿ ಭಿಲ್ಲರೂಪೇಣ ದ್ವಾಪರಾಂತೇಂಘ್ರಿಣಂಮಮ ।
> ಭಿತ್ವಾ ಪ್ರಭಾವೇ ಬಾಣೇನ ಪೂರ್ವವೈರೇಣ ವಾನರಃ ॥
> (ಆನಂದ ರಾಮಾಯಣ I ೮-೬೬, ೬೭.)

4. ಶ್ರೀ ರಾಮನ ಸಮಸ್ತವರ್ತನೆಗೂ ತಳಹದಿ ಇಲ್ಲಿದೆ. ರಾಮನ ಮುಖ್ಯೋದ್ದೇಶ ಸೀತಾನ್ವೇಷಣ. ೧) ಅದು ಆತನಿಗಿದ್ದ ಪ್ರಪ್ರಥಮ ಕರ್ತವ್ಯ. ೨) ಅದಕ್ಕೆ ಆಗಬೇಕಾಗಿದ್ದ ಪ್ರಪ್ರಥಮ ಸಾಧನ ಸಮರ್ಥರಾದವರ ಸಹಾಯ. ೩) ಅಂಥ ಸಹಾಯವನ್ನು ಕೊಡಲು ಪ್ರಪ್ರಥಮವಾಗಿ ಸಿದ್ಧನಾಗಿ ಬಂದವನು ಸುಗ್ರೀವ. ಆದ್ದರಿಂದ ಸುಗ್ರೀವನನ್ನು ತೃಪ್ತಿಪಡಿಸುವುದು ಶ್ರೀ ರಾಮನಿಗೆ ಸ್ವಕರ್ತವ್ಯದ ಪ್ರಪ್ರಥಮಾಂಗವಾಯಿತು........ವಾಲಿವಧೆಯು ಹೀಗೆ ಅನಿವಾರ್ಯ ಕರ್ತವ್ಯವಾಯಿತು.' ಡಿ. ವಿ. ಜಿ.-ಕಿಷ್ಕಿಂಧಾ ಕಾಂಡಕ್ಕೆ ಮುನ್ನುಡಿ-ಪು. ೧೯-೨೦.

5. ರಾಮನು ತನ್ನ ಕಾರ್ಯಸಾಧನೆಗಾಗಿಯೇ ವಾಲಿಯನ್ನು ಕೊಂದನೆಂದು ಗೋವಿಂದರಾಜನು ತನ್ನ ವ್ಯಾಖ್ಯಾನದಲ್ಲಿ ಹೇಳುತ್ತಾನೆ. (ಕಿಷ್ಕಿಂಧಾ ಕಾಂಡ-೧೬-೩೭, ೩೮ ಪ್ರತಿಜ್ಞಾತಂ ಚ ರಾಮೇಣ ತಥಾ ವಾಲಿ ವಧಂ ಪ್ರತೀತಿ ಪ್ರತಿಜ್ಞಾ ನಿರ್ವಾಹಾಯ ' ಧರ್ಮಸ್ನಾಪಿ ವಾಲಿ ವಧಃ ' ಕೃತ:
ರಾಮನ ವರ್ತನೆಗೆ ' ಧೂರ್ತ ಸುಗ್ರೀವನೇ ಮೂಲ ಕಾರಣ 'ವಿರಬೇಕೆಂದು ವಾಲಿಯು ತರ್ಕಿಸುತ್ತಾನೆ. (ಬತ್ತಲೇಶ್ವರ ಕೌ. ರಾ. ೮-೩೫) ಅಲ್ಲದೆ ಇದೇ ಕೃತಿಯಲ್ಲಿ ರಾಮನು ತಾರೆಯನ್ನು ಸಂತೈಸುತ್ತಾ : ' ಅರಗುಲಿಗ ನಾನಾದೆನೀತನ ಮರಹಿನಿಂದವೆ ಕೊಂದೆ '—೮-೪೨ ಎಂದು ತನ್ನ ವರ್ತನೆಯ ಬಗ್ಗೆ ಪರಿತಪಿಸುತ್ತಾನೆ.

6. ಆನಂದ ರಾಮಾಯಣ, I ೮-೬೭.
" ತಂದೆ ಪರಸತಿಗೋತ ಕಾರಣ ಸಂದನಸ್ತಮಯಕ್ಕೆ " ಎಂದು ಅಂಗದನು ತನ್ನ ತಂದೆಯ ಅವಸಾನಕ್ಕೆ ಅವನ ಅಧರ್ಮವೇ ಕಾರಣ ಎಂದು ಒಪ್ಪಿಕೊಳ್ಳುತ್ತಾನೆ. ತನ್ನ ತಂದೆಯ ರೀತಿಯಲ್ಲಿಯೇ ರಾವಣನೂ ಸಾಯಲಿದ್ದಾನೆ ಎಂದು ಅಂಗದನು ರಾವಣಾಸ್ಥಾನದಲ್ಲಿ ಸಾರುತ್ತಾನೆ (ತೊ. ರಾ. ಯುದ್ಧಕಾಂಡ ೧೦-೪೪)

ಕ್ಷಮ ಮೇ ನರೇಶ್ವರ– ಎನ್ನುವುದು ವಾಲಿಯ ಪ್ರಾರ್ಥನೆ[1]) ಅವನಿಗೆ ಮುಕ್ತಿಪ್ರಾಪ್ತಿಯಾಯಿತೆಂಬ ಸ್ಪಷ್ಟ ಉಲ್ಲೇಖವು ಅಲ್ಲಿ ಸಿಗುವುದಿಲ್ಲ.

ಆದರೆ ಆ ಮೇಲಿನ ರಾಮಾಯಣಗಳೆಲ್ಲೆಲ್ಲ ವಾಲಿಗೆ ಮುಕ್ತಿ ದೊರೆತ ಅಂಶವು ಹೇಳಲ್ಪಟ್ಟಿದೆ.

ಅಧ್ಯಾತ್ಮ ರಾಮಾಯಣ[2]
ಭಾರತ ತಾತ್ಪರ್ಯ ನಿರ್ಣಯ[3]
ಆನಂದ ರಾಮಾಯಣ[4]
ಪದ್ಮ ಪುರಾಣ[5]
ಕಂಬ ರಾಮಾಯಣ[6]
ರಾಮ ಚರಿತ ಮಾನಸ[7]

ತೊರವೆ ರಾಮಾಯಣದಲ್ಲಿ ವಾಲಿಯ ಕಾಯದಿಂದ "ಆತ್ಮಜ್ಯೋತಿ"ಯು ಹೊರಹೊಮ್ಮಿತೆನ್ನಲಾಗಿದೆ[8] ಇದ ವಾಲಿಗೆ ಸಿದ್ಧಿಸಿದ ಮುಕ್ತಿಯ ಸೂಚನೆಯೇ ಇರಬಹುದು.[9]

**ಸುಗ್ರೀವ ಪಟ್ಟಾಭಿಷೇಕ**

ವಾಲಿಯ ಮರಣದ ನಂತರ ಹನುಮಂತನು ರಾಮನನ್ನು ಕುರಿತು, "ಸುಗ್ರೀವನನ್ನು ಕಪಿರಾಜನನ್ನಾಗಿ ನೇಮಿಸಿ, ವಾನರರಿಗೆ ಸಂತೋಷವನ್ನುಂಟುಮಾಡು"–ಎಂದು ಪ್ರಾರ್ಥಿಸುತ್ತಾನೆ.[10] ಅದಕ್ಕುತ್ತರವಾಗಿ ರಾಮನು,

ಚತುರ್ದಶ ಸಮಾಃ ಸೌಮ್ಯ ಗ್ರಾಮಂ ವಾಯದಿ ವಾ ಪುರಮ್ ।
ನ ಪ್ರವೇಕ್ಷ್ಯಾಮಿ ಹನುಮನ್ ಪಿತುರ್ನಿರ್ದೇಶ ಪಾಲಕಃ[11] ॥

"ಹನುಮಂತ, ನಾನು ತಂದೆಯ ಆಜ್ಞೆಯನ್ನು ಪಾಲಿಸುತ್ತಿದ್ದೇನೆ. ೧೪ ವರ್ಷಗಳ ವರೆಗೆ ನಗರವನ್ನಾಗಲೀ, ಗ್ರಾಮವನ್ನಾಗಲೀ ನಾನು ಪ್ರವೇಶಿಸುವುದಿಲ್ಲ" ಎನ್ನುತ್ತಾನೆ. ರಾಮನ ನಿರ್ದೇಶನದಂತೆ ಕಿಷ್ಕಿಂದಾ ನಗರದಲ್ಲಿ ಸುಗ್ರೀವನಿಗೆ ರಾಜಪಟ್ಟ ಮತ್ತು ಅಂಗದನಿಗೆ ಯುವರಾಜ ಪಟ್ಟಾಭಿಷೇಕಗಳು ವಿಧ್ಯುಕ್ತವಾಗಿ ನಡೆಯುತ್ತವೆ.[12] ಆ ಸಮಯದಲ್ಲಿ "ಅಸ್ಮಿನ್ ವತ್ಸ್ಯಾಮಹಂ ಸೌಮ್ಯ ಪರ್ವತೇ ಸಹ ಲಕ್ಷ್ಮಣಃ"[13] ಎಂದಂತೆ ರಾಮನು ತಮ್ಮನೊಂದಿಗೆ ಆ ಪರ್ವತದಲ್ಲಿರುತ್ತಾನೆ.

---

1. ವಾ. ರಾ. IV ೧೮–೬೭.
2. ಅ. ರಾ. IV ೪-೭೪.
3. ಭಾ. ತಾ. ನಿ. ಅಧ್ಯಾಯ ೬.
4. ಆ. ರಾ. I ೮–೬೩.
5. ಪ. ಪು. ೪–೧೧೩
6. ಕಂಬ ರಾಮಾಯಣ, ಸಂಗ್ರಹ ಪು. ೫೮.
7. ರಾಮಚರಿತ ಮಾನಸ IV೧೦–೧೧.
8. ತೊ. ರಾ. IV ೪–೬೦.
9. ರಾಮನೊಡನೆ ವಾಲಿಯು.

ದೇವ ನಿನಗಿದು ಸಹಜ ಶರಣರಿ
ಗೋವನಲ್ಲಾ ಕೂಡಿಕೊಳ್ಳೀ
ನೋವ ಸೈರಿಸಲಾರೆ ಕಾವರೆ ಕೂಡಿಕೊಳ್ಳೆಂದ
ಎಂದು ಪ್ರಾರ್ಥಿಸಿ, ಕೊನೆಯಲ್ಲಿ 'ಆತ್ಮಾರಾಮ' ನಾಗುತ್ತಾನೆ.
(ಬತ್ತಲೇಶ್ವರ. ರಾ. ೮–೩೬, ೩೭)

10. ವಾ. ರಾ. IV ೨೬–೭.
11. ಇದೇ. IV ೨೬–೯.
12. ಇದೇ. IV ಸರ್ಗ ೨೬, ೧೮ ರಿಂದ ४೦.
13. ಇದೇ. IV ೨೬–೧೫.

ಆದಿಕಾವ್ಯದಲ್ಲಿ ಮೇಲಿನಂತೆ ಕಥಾಕ್ರಮವಿದ್ದರೂ, ತೊರವೆ ರಾಮಾಯಣದಲ್ಲಿ ರಾಮನು ಲಕ್ಷ್ಮಣನನ್ನು ಸುಗ್ರೀವಪಟ್ಟಾಭಿಷೇಕ ವ್ಯವಸ್ಥೆಗಾಗಿ ಕಿಷ್ಕಿಂಧೆಗೆ ಕಳುಹುತ್ತಾನೆ.[1] ಲಕ್ಷ್ಮಣನು ಅಣ್ಣನ ಆಜ್ಞೆಯಂತೆ ನಡೆದು ಪ್ರಸ್ರವಣಕ್ಕೆ ಮರಳುತ್ತಾನೆ.[2]

ತೊರವೆ ರಾಮಾಯಣಕ್ಕೆ–ಈ ಸನ್ನಿವೇಶದಲ್ಲಿ–ಆನಂದ ರಾಮಾಯಣವೇ ಆಧಾರ. ಅಲ್ಲಿ ಹೀಗಿದೆ :

ಅಥರಾಮಂ ಸ ಸುಗ್ರೀವೋ ರಾಜ್ಯಾರ್ಥಂ ಪ್ರಾರ್ಥಯತ್ತದಾ
ರಾಮಸ್ತಮೇವ ರಾಜಾನಂ ಚಕಾರ ಲಕ್ಷ್ಮಣೇನ ಸಃ[3]

ಅಧ್ಯಾತ್ಮ ರಾಮಾಯಣದಲ್ಲಿ ಈ ವಿಚಾರ ಇನ್ನಷ್ಟು ಸ್ಪಷ್ಟವಾಗಿದೆ.
ತಾನು ನಗರ ಪ್ರವೇಶ ಮಾಡುವುದಿಲ್ಲ ಎಂದ ರಾಮನು ಸುಗ್ರೀವನೊಡನೆ,

ಆಗಮಿಷ್ಯತಿ ಮೇ ಭ್ರಾತಾ ಲಕ್ಷ್ಮಣಃ ಪತ್ತನಂ ತವ[4]

ಎಂದು ತಿಳಿಸುತ್ತಾನೆ.[5]

## ಪ್ರಸ್ರವಣ ಗಿರಿಯಲ್ಲಿ ರಾಮ ಕಾಲಕ್ಷೇಪ

ರಾಮ ಲಕ್ಷ್ಮಣರು ಪ್ರಸ್ರವಣ ಗಿರಿಯಲ್ಲಿ ಮಳೆಗಾಲವನ್ನು[6] ಕಳೆಯುತ್ತಾರೆ. ಶರತ್ಕಾಲವು ಕಾಲಿರಿಸುತ್ತದೆ. ರಾಮಾಜ್ಞೆಯಂತೆ ಲಕ್ಷ್ಮಣನು ಸುಗ್ರೀವನಿದ್ದಲ್ಲಿಗೆ ಬಂದು ಅವನ ಕರ್ತವ್ಯ ಲೋಪದ ಬಗ್ಗೆ ಎಚ್ಚರಿಸುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ೧೧ ಸರ್ಗಗಳಲ್ಲಿ ಈ ಭಾಗವು ವರ್ಣಿತವಾಗಿದೆ.[7] ೪೭೧ ಶ್ಲೋಕಗಳಲ್ಲಿ. ಇಷ್ಟನ್ನೂ ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ ೩೦ ಷಟ್ಪದಿಗಳಲ್ಲಿ ಸಂಗ್ರಹಿಸಿದ್ದಾನೆ.[8]

1. ತೊ. ರಾ. IV ೫-೨೭.
2. ಇದೇ. VI ೫-೨೯.
3. ಆ. ರಾ. I ೮-೭೨.
4. ಅ. ರಾ. IV ೩-೪೭.
5. ಬತ್ತಲೇಶ್ವರನು "ಪಟ್ಟವನು ರವಿಜಂಗೆ ರಘುಪತಿ ಕಟ್ಟಿದನು ಕಿಷ್ಕಿಂಧ ಪುರದಲಿ" (೮-೪೫) ಎಂದು ಮಾತ್ರ ಹೇಳುತ್ತಾನೆ.
6. ರಾಮನು ಮಳೆಗಾಲದಲ್ಲಿ ಆ ಪರ್ವತಭಾಗದಲ್ಲಿ "ಚಾತುರ್ಮಾಸ್ಯಯಜ್ಞವನ್ನು" ನಡೆಸಿದನೆಂದು ಅಗ್ನಿಪುರಾಣ (ಅಗ್ನಿಪುರಾಣ ೮-೫) ದಲ್ಲಿದೆ.

ದೇವೀಭಾಗವತದಂತೆ (೩-೩೦) ಇದೇ ಸಂದರ್ಭದಲ್ಲಿ ರಾಮನು ನಾರದನ ಸೂಚನೆಯಂತೆ ರಾವಣವಧೆಗಾಗಿ ದೇವೀ ಅನುಗ್ರಹಸಂಪಾದನೆ ಪಡೆಯಲು ನವರಾತ್ರೋಪವಾಸವನ್ನು ಕೈಗೊಳ್ಳುತ್ತಾನೆ.

ಶಿವಪುರಾಣದಂತೆ (೩-೫೩-೫೫) ರಾಮನು ಪ್ರಸ್ರವಣಗಿರಿಯಲ್ಲಿ ಶಿವಾರಾಧನೆ ಕೈಗೊಂಡು ಅನುಗ್ರಹೀತನಾಗುತ್ತಾನೆ.

ಅಧ್ಯಾತ್ಮ ರಾಮಾಯಣವು (IV. ಸರ್ಗ ೪) ರಾಮನು ಪ್ರಸ್ರವಣಗಿರಿಯಲ್ಲಿದ್ದಾಗ, ಲಕ್ಷ್ಮಣನು ಅವನೊಡನೆ ಅವನ ಪೂಜಾವಿಧಾನವನ್ನು ತಿಳಿಸುವಂತೆ ಕೇಳಿಕೊಂಡುದಾಗಿಯೂ, ರಾಮನು ತನ್ನ ಆರಾಧನಾ ರಹಸ್ಯವನ್ನು ಅವನಿಗೆ ಅರುಹಿದ್ದಾಗಿಯೂ–ಹೇಳುತ್ತದೆ.

ಏವಂ ಪರಾತ್ಮಾ ಶ್ರೀರಾಮಃ ಕ್ರಿಯಾಯೋಗಮನುತ್ತಮ್ ।
ಪೃಷ್ಟಃ ಪ್ರಾಹ ಸ್ವ ಭಕ್ತಾಯ ಶೇಷಾಂಶಾಯ ಮಹಾತ್ಮನೇ ॥
(ಅ. ರಾ. IV ೪-೪೧)

ಈ ಟಿಪ್ಪಣಿಗಳಿಂದ, ವಿವಿಧ ತತ್ತ್ವಾರಾಧಕರು ಆದಿಕಾವ್ಯವನ್ನು ತಮ್ಮ ಪ್ರಚಾರಮಾಧ್ಯಮವನ್ನಾಗಿ ಮಾಡಿಕೊಂಡರೆಂಬುದು ಸ್ಪಷ್ಟವಾಗುತ್ತದೆ. ಕುಮಾರ ವಾಲ್ಮೀಕಿಯೂ ಇದಕ್ಕೆ ಹೊರತಲ್ಲ. ಇದೇ ಸಂದರ್ಭದಲ್ಲೇ, ಸುಗ್ರೀವನ ಸ್ತುತಿಯ ಮೂಲಕ, ರಾಮನು (ವಿಷ್ಣುವು) ಸಕಲಗುಣನಿಲಯನೆಂದೂ, ಅವನೇ ಸರ್ವೇಶ್ವರನೆಂದೂ–ತನ್ನ ತಾತ್ತ್ವಿಕ ಶ್ರದ್ಧೆಯನ್ನು ವ್ಯಕ್ತಪಡಿಸಿದ್ದಾನೆ.

7. ವಾ. ರಾ. IV ಸರ್ಗ ೨೭-೩೭.
8 ತೊ. ರಾ. IV ಸಂಧಿ ೬, ೧-೩೦ ಪದ್ಯಗಳು.

12

ಕಪಿಸೇನಾಸಮೂಹದೊಂದಿಗೆ ರಾಮನಿದ್ದಲ್ಲಿಗೆ ಬಂದ ಸುಗ್ರೀವನು, 'ತ್ರಾಹಿ ನರನಾಟಕ ವಿನೋದ, ತ್ರಾಹಿ ಭೂಭಾರಹರಣ, ತ್ರಾಹಿ ಸರ್ವೇಶ್ವರ ಸನಾತನ ಸಕಲ ಗುಣನಿಲಯ'[1] ಎಂದೆಲ್ಲಾ ಸ್ತುತಿಸುವುದು ಕುಮಾರ ವಾಲ್ಮೀಕಿಯ ಭಕ್ತಿದೃಷ್ಟಿಯ ಸೃಷ್ಟಿ. ಆದಿಕಾವ್ಯದಲ್ಲಾಗಲೀ, ಅಧ್ಯಾತ್ಮ, ಆನಂದ ರಾಮಾಯಣಗಳಲ್ಲಾಗಲೀ ಈ ಸ್ತುತಿ ಕಾಣ ಸಿಕ್ಕುವುದಿಲ್ಲ.

### ಅಭಿಜ್ಞಾನ ವಿಚಾರ

ವಾಲ್ಮೀಕಿಯು, ಹನುಮಂತನಿಗೆ ತನ್ನ ಗುರುತಾಗಿ ಇರಲೆಂದು ರಾಮನು ತನ್ನ ನಾಮಾಂಕಿತವಾದ ಉಂಗುರವನ್ನು ಕೊಟ್ಟನು ಎನ್ನುತ್ತಾನೆ.

ದದೌ ತಸ್ಮೈ ತತಃ ಪ್ರೀತಃ ಸ್ವನಾಮಾಂಕೋಪಶೋಭಿತಮ್ ।
ಅಂಗುಲೀಯಮಭಿಜ್ಞಾನಂ ರಾಜಪುತ್ರ್ಯಾಃ ಪರಂತಪಃ[2] ॥

ರಾಮನು ಮತ್ತಾವ ಕುರುಹನ್ನೂ ಹೇಳುವುದಿಲ್ಲ.

ಅಧ್ಯಾತ್ಮರಾಮಾಯಣದಲ್ಲೂ ಇಷ್ಟೇ ಇದೆ.[3]

ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ, ರಾಮನು ತನ್ನ ಉಂಗುರವನ್ನು ಹನುಮನಿಗೆ ಕೊಡುವುದರೊಂದಿಗೆ 'ಕುರುಹಗಳನಿವ ಹೇಳುವುದು' ಎಂದು ಕೆಲವನ್ನು ಅವನ ಕಿವಿಯಲ್ಲಿ ಅರುಹಿದ್ದಾಗಿ ಹೇಳುತ್ತಾನೆ.[4] ಹೀಗೆ ಮಾರುತಿಯ ಕಿವಿಯಲ್ಲಿ ರಾಮನು ಅರುಹಿದ ಕುರುಹುಗಳು–ಕಾಕವೃತ್ತಾಂತ,[5] ಚಿತ್ರಕೂಟದಲ್ಲಿ ನಡೆಸಿದ ಜಲಕ್ರೀಡೆ, ವಿರಾಧ ವೃತ್ತಾಂತ, ಅಗಸ್ತ್ಯನಿಂದ ಅಸ್ತ್ರಪ್ರದಾನ–ಇವೇ ಇರಬೇಕೆಂದು ಮುಂದೆ ಹನುಮಂತನು ಸೀತೆಯೊಡನೆ ನುಡಿಯುವಲ್ಲಿ ಸ್ಪಷ್ಟವಾಗುತ್ತದೆ.[6] ಆದಿಕಾವ್ಯದಲ್ಲಿಲ್ಲದ ಈ ವಿಚಾರವನ್ನು ಆನಂದ ರಾಮಾಯಣದಿಂದ[7] ಪ್ರಭಾವಿತನಾಗಿ ಕುಮಾರ ವಾಲ್ಮೀಕಿ ಹೇಳಿರಬೇಕು.[8]

---

1. ತೊ. ರಾ. IV ೭–೨, ೩.
2. ವಾ. ರಾ. IV ೪೪-೧೨.

ಹೀಗೆ 'ಉಂಗುರ ಕೊಟ್ಟ ಅಂಶವೂ ಪ್ರಕ್ಷಿಪ್ತವಿರಬೇಕೆಂಬ' ಅಭಿಪ್ರಾಯವಿದೆ (ಬುಲ್ಕೆ-ರಾಮಕಥಾ–ಪು. ೪೮೭ ಮತ್ತು ೫೧೭) ಆದರೆ ಇದನ್ನು ನಾವು ಒಪ್ಪುವಂತಿಲ್ಲ.

3. ಅ. ರಾ. IV ೬-೨೮.
4. ತೊ. ರಾ. IV ೮-೧೮.
5. ವಾ. ರಾ. ಮತ್ತು ಅ. ರಾ. ಗಳಲ್ಲಿ 'ಕಾಕ ವೃತ್ತಾಂತವನ್ನು' ಸೀತೆಯು ಹನುಮನಿಗೆ ಕುರುಹಾಗಿ ಹೇಳುತ್ತಾಳೆ.
6. ತೊ. ರಾ. V ೩-೮೪ ರಿಂದ ೯೦.
7. ಆನಂದ ರಾಮಾಯಣದಲ್ಲಿ, ರಾಮನು ಹನುಮನಿಗೆ ಉಂಗುರದೊಂದಿಗೆ,

ತತೋ ರಾಮೋ ನಿಜಂ ಮಂತ್ರಂ ದದೌ ತಸ್ಮೈ ಹನೂಮತೇ (I ೮-೯೪) ಎಂದು ರಾಮಮಂತ್ರವನ್ನು ಕೊಡುವುದಷ್ಟೇ ಅಲ್ಲದೆ,

ತದ್ವೃತ್ತಂ ರಾಘವಃ ಪ್ರಾಹ ಚಿತ್ರಕೂಟೇ ಪುರಾಕೃತಮ್,
ಮನಃ ಶಿಲಾಯಾಸ್ತಿಲಕಂ ಸೀತಾಭಾಲೇ ವಿನಿರ್ಮಿತಮ್......

(I ೮-೯೬, ೯೭)

ಎಂದು ಹಲವು ವಿಶಿಷ್ಟವಾದ 'ಕುರುಹು'ಗಳನ್ನೂ ತಿಳಿಸುತ್ತಾನೆ.

ಕಂಬರಾಮಾಯಣ (ಸಂಗ್ರಹ–ಪುಟ ೬೨) ದಲ್ಲೂ ರಾಮನು ಕೆಲವು ಕುರುಹುಗಳನ್ನು ಹೇಳುತ್ತಾನೆ.

8. ಬತ್ತಲೇಶ್ವರನು ಮುದ್ರಿಕೆಯನ್ನು ಜಾಂಬವನ ಸೂಚನೆಯಂತೆ ಮಾರುತಿಗೆ ಕೊಟ್ಟದ್ದಾಗಿ ತಿಳಿಸುತ್ತಾನೆ. ಅಷ್ಟಲ್ಲದೆ, ಸೀತೆಯ ಚೆಲುವು ವ್ಯಕ್ತವಾಗುವ ಕುರುಹು ಮತ್ತು ಇನ್ನೆರಡು ಘಟನೆಗಳ ಕುರುಹುಗಳನ್ನು ಹೇಳುತ್ತಾನೆ. (ಕಾ. ರಾ. ೯-೨೭ ರಿಂದ ೩೦)

ಇವನು ಹೇಳುವ 'ಸೀತೆಯ ಮೊಲೆಯ ಕಾಕ ನಖಾಂಕರೇಖೆ' (೯-೨೭) ಕಾಕಾಸುರನಿಂದಾದುದಾಗಿರಬೇಕು ?

## ಸೀತಾನ್ವೇಷಣ, ಸ್ವಯಂಪ್ರಭಾ ಪ್ರಕರಣ

ಬಿಲ ಪ್ರವೇಶಿಸಿ, ಸ್ವಯಂಪ್ರಭೆಯಿದ್ದಲ್ಲಿಗೆ[1] ತೆರಳಿದ ಕಪಿನಾಯಕರನ್ನು ಉಪಚರಿಸುತ್ತಾಳೆ. ಆ ಬಿಲವನ್ನು ಪ್ರವೇಶಿಸಿದವರು ಜೀವಸಹಿತ ಮರಳಲಾರರೆಂದಿದ್ದರೂ, ತನ್ನ ತಪಃ ಪ್ರಭಾವದಿಂದ ಆಕೆ ಅವರನ್ನು ಬಿಲದಿಂದ ಹೊರಕ್ಕೆ ನಿಮಿಷಮಾತ್ರದಲ್ಲಿ ತಂದು ಬಿಡುತ್ತಾಳೆ. ಆ ಮೇಲೆ ಅವಳು ಬಿಲಪ್ರವೇಶ ಮಾಡುತ್ತಾಳೆ–ಹೀಗಿದೆ ವಾಲ್ಮೀಕಿಯ ಕೃತಿಯಲ್ಲಿ.[2]

ಜಾಂಬವನಿಂದ 'ಸೀತಾನ್ವೇಷಣೆಗೆ ನೆರವಾಗಬೇಕು' ಎಂಬ ಪ್ರಾರ್ಥನೆ ಬಂದಾಗ, ಸ್ವಯಂಪ್ರಭೆಯು ಕಪಿನಾಯಕರ ಮನ ಚುಚ್ಚಿನುಡಿಯಲು, ಮಾರುತಿಯು ಕೆರಳಿ ಆ ನಗರವನ್ನೇ ಕೆಡಹಹೊರಡುತ್ತಾನೆ. ಆಗ ಸ್ವಯಂಪ್ರಭೆಯು ಹೆದರಿ, ಹನುಮನ ಮನ ಒಲಿಸಿ ನುಡಿದು, ಅವರನ್ನೆಲ್ಲಾ ಬಿಲದಿಂದ ಹೊರಬರುವಂತೆ ಮಾಡುತ್ತಾಳೆ.[3] ಆಮೇಲೆ 'ಇಂದಿರೇಶನ ಕಾರ್ಯಕೊದಗುವುದು' ಎಂದು ಅವರ ಹರಸಿ,ಕಂಬದ ನಂದನನ (ನರಹರಿ) ನೆನೆಯುತ್ತ ಅದೃಶ್ಯಳಾಗುತ್ತಾಳೆ[4]–ಇದು ತೊ. ರಾ. ದಲ್ಲಿನ ಕಥೆ. ಈ ಪ್ರಕರಣದಲ್ಲಿಯೂ, ಹನುಮನ ಸಾಹಸ ಪ್ರದರ್ಶನಕ್ಕೆ ಈ 'ಶ್ರೀ ಹರಿವಾಯು ಭಜಕ'ನಾದ ಕವಿಯು ಅವಕಾಶ ಕಲ್ಪಿಸಿಕೊಂಡಿದ್ದಾನೆ. ಅಧ್ಯಾತ್ಮ, ಆನಂದ ರಾಮಾಯಣಗಳಲ್ಲಿ ಇದಕ್ಕೆ ಆಧಾರ ದೊರೆಯದಿದ್ದರೂ ಇನ್ನಾವುದೋ ಮೂಲದಿಂದ[5] ಕವಿಯು ಪ್ರಭಾವಿತನಾಗಿರಬೇಕು.

ಸ್ವಯಂಪ್ರಭೆಯು 'ಅದೃಶ್ಯಳಾದಳೆಂಬ ಹೇಳಿಕೆ'ಗೆ ಆನಂದ ರಾಮಾಯಣದಲ್ಲಿನ ಆಕೆ ದೇಹತ್ಯಾಗ ಮಾಡಿದ ಉಲ್ಲೇಖವೂ,[6] ಅಧ್ಯಾತ್ಮ ರಾಮಾಯಣದಲ್ಲಿನ ಸ್ವಯಂಪ್ರಭೆಯು ರಾಮಸನ್ನಿಧಿಯನ್ನು ಸೇರಿ, ರಾಮನ ಆದೇಶದಂತೆ ಬದರೀವನ ಸೇರಿ ಪರಮಪದ ಹೊಂದಿದಳೆಂಬ ಉಲ್ಲೇಖವೂ ಪ್ರೇರಕಗಳಾಗಿರಬಹುದು.

### ಸಮುದ್ರೋಲ್ಲಂಘನ

## ವಿರಸೆ–ಮೈನಾಕ–ಸಿಂಹಿಕೆ

ವಾಲ್ಮೀಕಿ ರಾಮಾಯಣದ ದಾಕ್ಷಿಣಾತ್ಯ ಮತ್ತು ಪಶ್ಚಿಮೋತ್ತರೀಯ ಪಾಠಗಳಿಗೆ ಅನುಸಾರವಾಗಿ, ಹನುಮಂತನು ಸಮುದ್ರ ಲಂಘನಮಾಡುತ್ತಾ ಅನುಕ್ರಮವಾಗಿ ಮೈನಾಕ, ಸುರಸೆ, ಮತ್ತು ಸಿಂಹಿಕೆಯರನ್ನು ಭೇಟಿಯಾಗುತ್ತಾನೆ. ಆದರೆ ಗೌಡೀಯ ಪಾಠದಲ್ಲಿ ಅನುಕ್ರಮತೆಯು ಹೀಗಿದೆ: ಸುರಸೆ, ಮೈನಾಕ, ಸಿಂಹಿಕೆ. ಅಧ್ಯಾತ್ಮರಾಮಾಯಣ, ಆನಂದ ರಾಮಾಯಣಗಳಲ್ಲಿ ಗೌಡೀಯ ಪಾಠದ ಅನುಸರಣೆಯು ಕಂಡುಬರುತ್ತದೆ.

ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಅನುಕ್ರಮವಾಗಿ–ವಿರಸೆ,[7] ಮೈನಾಕ, ಸಿಂಹಿಕೆಯರನ್ನು ಎದುರಿಸುತ್ತಾನೆ–ಹನುಮಂತ.

---

1. ಸ್ವಯಂಪ್ರಭೆಯ ಸ್ಥಾನದಲ್ಲಿ ಮಹಾಭಾರತವು ಪ್ರಭಾವತಿ, ನೃಸಿಂಹಪುರಾಣವು ಪ್ರಭಾ, ಅಗ್ನಿಪುರಾಣವು ಸುಪ್ರಭಾ–ಎಂಬ ಹೆಸರುಗಳನ್ನು ಹೇಳುತ್ತವೆ.

2. ವಾ. ರಾ IV ಸರ್ಗ ೫೦, ೫೧, ೫೩.

3-4. ತೊ. ರಾ. IV ಸಂಧಿ ೧೦-೧೧ ರಿಂದ ೩೦.

5. ಕಂಬರಾಮಾಯಣದಲ್ಲಿ (ಸಂ. ಪು. ೬೩) ಹನುಮನು ತನ್ನ ಸಿಂಹಶಕ್ತಿಯಿಂದ ಬಿಲವನ್ನೊಡೆದು ಸ್ವಯಂಪ್ರಭೆಗೆ ಮೋಕ್ಷ ಒದಗಿದ ಕಥೆ ಇದೆ. ಹನುಮಂತನ ಪ್ರಾಧಾನ್ಯವನ್ನು ಉಲ್ಲೇಖಿಸುವ ಈ ಕಥೆಯ ಯಾವುದೋ ಆಕರದ ಪರಿಚಯವು ಕುಮಾರ ವಾಲ್ಮೀಕಿಗಿದ್ದಿರಬಹುದು.

6. ಬತ್ತಲೇಶ್ವರನ ಕೃತಿಯಲ್ಲಿ ತಪಸ್ವಿನಿಯಾಗಿದ್ದ ಸ್ವಯಂಪ್ರಭೆಗೆ,

ಪಾಲಿಸೆನುತವೆ ಕಪಿಗಳೆರಗಲು
ಕೇಳಿವಾರ್ತೆಯನಾ ಸ್ವಯಂಪ್ರಭೆ
ಬೀಳುಗೊಟ್ಟಳು ಯೋಗದಂಡದಿ ಬಾಗಿಲನು ತೆರೆದು–

ಎಂದಿದೆ. ಕೌಶಿಕ ರಾಮಾಯಣ. ೯-೩೮.

7. ಆದಿಕಾವ್ಯದ 'ಸುರಸೆ'ಯು ಇಲ್ಲಿ 'ವಿರಸೆ' ಎಂದು ಕರೆಯಲ್ಪಟ್ಟಿದ್ದಾಳೆ.

ಸುರಸೆಯು, ವಾಲ್ಮೀಕಿ ರಾಮಾಯಣದಂತೆ, ಹನುಮಂತನ ಸತ್ತ್ವಪರೀಕ್ಷೆ ಮಾಡಿ ಕೊನೆಯಲ್ಲಿ 'ನಿನ್ನ ಕಾರ್ಯ ಸಿದ್ಧಿಯಾಗಲಿ' ಎಂದು ಹಾರೈಸುತ್ತಾಳೆ.[1]

ಅಧ್ಯಾತ್ಮರಾಮಾಯಣದಲ್ಲಿ[2] ಮತ್ತು ಆನಂದರಾಮಾಯಣದಲ್ಲಿ[3] ಸುರಸೆಯ ಈ ಹಾರೈಕೆಯಿದೆ. (ಜ್ಞಾತ್ವಾ ಸಾಪಿ ಬಲಂ ತಸ್ಯ ಸ್ತುತ್ವಾ ತಂ ಪ್ರಯಯೌ ದಿವಮ್-ಆನಂದ ರಾ.)

ತೊರವೆ ರಾಮಾಯಣದಲ್ಲಿ ಹನುಮನು ವಿರಸೆಯ ಕಾಲೆರಡ ಹಿಡಿದಭ್ರಮಂಡಲಕ್ಕೆಸೆಯಲು-ಆಕೆಯು ದೇವ ಲೋಕದ ಸೂಳೆಗೇರಿಯ ನಡುವೆ ಬೀಳುತ್ತಾಳೆ.[4]

ಸಿಂಹಿಕೆಯ ದೇಹವನ್ನು ಸೀಳಿ ಎಡದ ಭಾಗವನ್ನು ದಶಶಿರನ ಊರಿಗೆಸೆಯುತ್ತಾನೆ, ಉಳಿದ ತುಂಡನ್ನು 'ಬಲಿ ಮುಖಕುಲೇಂದ್ರ ಜಾಂಬವ ನೇವಸಿದ್ದೆಡೆಗೆ ಬಿಸಾಡುತ್ತಾನೆ[5]-ಇವೆರಡೂ ಉಲ್ಲೇಖಗಳು ಹನುಮಂತನ ಸಾಹಸಾತಿಶಯ ವನ್ನು ಬಹಿರಂಗಗೊಳಿಸಲು ಕುಮಾರ ವಾಲ್ಮೀಕಿಯೇ ಯೋಜಿಸಿಕೊಂಡ ವಿಶಿಷ್ಟ ಘಟನೆಗಳು. ಇತರ ರಾಮಾಯಣ ಗಳಲ್ಲಿ ಇವುಗಳಿಗೆ ಆಧಾರ ದೊರೆಯುವುದಿಲ್ಲ.

### ತೃಣಬಿಂದುವಿನ ಪರೀಕ್ಷೆ

ಸಿಂಹಿಕೆಯನ್ನು ಕೊಂದ ಮೇಲೆ ಹನುಮಂತನು,

ಉಕ್ಕುವತಿಶಯ ವೀರರಸದೊಳ
ಸೊಕ್ಕಿನಲಿ ಲಂಕಾಪುರನನೆಡ
ಕಿಕ್ಕಿ ಹಾರಿದನತ್ತ ಮೇಲೇಳ್ನೂರು ಯೋಜನವ.[6]

ಹೀಗೆ ಹಾರಿದ ಮಾರುತಿಯು ತೃಣಬಿಂದುವಿನ ಆಶ್ರಮಪ್ರವೇಶಿಸಿ, 'ರಾವಣನ ಊರಬಲ್ಲಡೆ ಹೇಳು' ಎಂದು ಪ್ರಶ್ನಿಸಲು, ಆ ಮುನಿಯು 'ನೀನು ಕೋಡಗ, ನಿನಗೇಕೆ ಲಂಕೇಶನ ವಿಚಾರ?' ಎಂದು ಗೇಲಿಮಾಡುತ್ತಾನೆ. ತನ್ನನ್ನು ಎತ್ತಿನಿಲ್ಲಿಸಿ ದರೆ ರಾವಣನ ನಗರವನ್ನು ತೋರುವುದಾಗಿ ಹೇಳಿದಾಗ ಹನುಮಂತನು ತನ್ನ ಸತ್ವಾತಿಶಯದಿಂದ ಅವನನ್ನು ನಭಕ್ಕೆತ್ತಿ ದಾಗ, ತೃಣಬಿಂದುವು 'ಹಿಂದೆ ಆ ಅಸುರೋತ್ತಮನು ನನ್ನ ಕುಂಡಲವನ್ನು ಎತ್ತಲರಿಯದೆ ತೇಕಿದನು, ನೀನಾದರೋ ಕುಂಡಲಸಹಿತ ನನ್ನನ್ನೆ ಎತ್ತಿರುವೆ'-ಎಂದು ಮೆಚ್ಚುಗೆ ವ್ಯಕ್ತಪಡಿಸಿ, ದರ್ಭೆಯ ಕೊನೆಯಲಿ ರಾವಣನ ಪುರಿಯನ್ನು ಮಾರುತಿಗೆ ತೋರುತ್ತಾನೆ.[7]

ತೊರವೆ ರಾಮಾಯಣವು ಹೇಳುವ ಮೇಲಿನ ಕಥೆಯು ಆದಿಕಾವ್ಯದಲ್ಲಿಲ್ಲ.

ಆನಂದ ರಾಮಾಯಣದಲ್ಲಿ ಹನುಮಂತನು,

ತತೋಽಬ್ಧೇರ್ದಕ್ಷಿಣೇ ಕೂಲೇ ಲಂಕಾಂ ಕೃತ್ವಾತು ಪಾರ್ಶ್ವತಃ[8] |
ಪಪಾತ ಪರಲಂಕಾಯಾಂ ತತ್ರ ತಾ ರಾವಣಸ್ವಸಾಮ್[9] ||

---

1. ವಾ. ರಾ. V ೧-೧೬೮.
2. ಅಧ್ಯಾತ್ಮ ರಾಮಾಯಣ V ೧-೨೪.
3. ಆನಂದ ರಾಮಾಯಣ I ೯-೫.
4. ತೊ. ರಾ. V ೧-೪.
5. ಇದೇ. V ೧-೨೨.

ಇದೇ ಕವಿಯು ಮುಂದೆ 'ಅಕ್ಷಕುಮಾರನ ಶಿಖವನ್ನು ಕಿತ್ತು ದಶಾಸ್ಯನ ಸಭೆಯ ಸರಿಸಕ್ಕೆ ಹನುಮನು ಎಸೆದಂತೆಯೂ (V ೫-೩೪) ವರ್ಣಿಸಿದ್ದಾನೆ.

6. ತೊ. ರಾ. V ೧-೨೫.
7. ಇದೇ. V ೧-೩೬.
8. ಇದರೊಂದಿಗೆ ತೊ. ರಾ. ದ 'ಲಂಕಾಪುರವನೆಡಕಿಕ್ಕಿ' ಯನ್ನು ಅನ್ವಯಿಸಬಹುದು.
9. ಆ. ರಾ. I ೯-೧೬, ೧೭.

ಎಂದು, ಲಂಕೆಯನ್ನು ಬದಿಗಿಕ್ಕಿ, ಪರಲಂಕೆಗೆ ಹೋಗಿ ಕ್ರೌಂಚವಧೆ ಮಾಡಿದ ಕಥೆಯಿದೆ.[1]

ಕುಮಾರ ವಾಲ್ಮೀಕಿಯು, ಆನಂದ ರಾಮಾಯಣವನ್ನು ಅನುಸರಿಸಿ, ತನ್ನದೇ ವಿಶಿಷ್ಟತೆಯೊಂದಿಗೆ ಕಥೆ ಹೇಳಿರಬೇಕು. ಅದೇ ಆನಂದ ರಾಮಾಯಣದಲ್ಲಿ, ಹನುಮಂತನು ಲಂಕೆಯಿಂದ ಮಾರುತಿಯು ಹಿಂದಿರುಗುತಿದ್ದಾಗ, ಅವನ ಗರ್ವಭಂಗಮಾಡಿದ ಒಬ್ಬ ಮುನಿಯ ಕಥೆ ಬರುತ್ತದೆ.[2] ಅಲ್ಲಿ ರಾಮನೇ ಆ ಮುನಿಯ ರೂಪದಲ್ಲಿ ಬಂದುದಾಗಿ ಹೇಳಲಾಗಿದೆ. ಹನುಮಂತನ ಗರ್ವಭಂಗದ ಈ ಘಟನೆಯನ್ನು ಕುಮಾರ ವಾಲ್ಮೀಕಿಯು ಹನುಮಂತನ ಸಾಹಸಾತಿಶಯ ಪ್ರದರ್ಶನದ ಸಂದರ್ಭವನ್ನಾಗಿ ರೂಪಾಂತರಿಸಿಕೊಂಡಿರಬಹುದು.[3] (ರಾಮಾಯಣದ ಉತ್ತರಕಾಂಡ ದಲ್ಲಿನ 'ತೃಣಬಿಂದು' ಬೇರೆ)

## ಹನುಮಂತನ ಛದ್ಮವೇಷ

ವಾಲ್ಮೀಕಿ ರಾಮಾಯಣದಲ್ಲಿ ಹೀಗಿದೆ :

ಸೂರ್ಯೇಚಾಸ್ತಗತಂ ರಾತ್ರೌ ದೇಹಂ ಸಂಕ್ಷಿಪ್ಯ ಮಾರುತಿಃ।
ಪೃಷದಂಶಕಮಾತ್ರಃ ಸನ್ ಬಭೂವಾದ್ಭುತದರ್ಶನಮ್[4]॥

ಸೂರ್ಯನು ಮುಳುಗಿ ರಾತ್ರಿಯಾಗುತ್ತಾಬಂದಿತು. ಆಗ ಹನುಮಂತನು ನೋಡುವುದಕ್ಕೆ ಆಶ್ಚರ್ಯಕರವಾಗಿ ತನ್ನ ದೇಹವನ್ನು 'ಬೆಕ್ಕಿನ ಗಾತ್ರದಷ್ಟು' ಚಿಕ್ಕದಾಗಿ ಮಾಡಿಕೊಂಡನು.

ಇಲ್ಲಿ ಹೇಳಿದ 'ಬೆಕ್ಕಿನಗಾತ್ರದಷ್ಟು' ಎನ್ನುವ ಹೇಳಿಕೆಯು ಮುಂದೆ 'ಹನುಮಂತನು ಬೆಕ್ಕಿನ ರೂಪದಲ್ಲಿ ಲಂಕಾ ಪ್ರವೇಶ ಮಾಡಿದನು' ಎಂಬ ರೂಪವನ್ನು ತಾಳಿತು.[5]

ಕುಮಾರವಾಲ್ಮೀಕಿಯ ಹನುಮಂತನು 'ಅಸುರ ಭಟಾಳಿಯರಿಯದಂತಿರೆ **ಕಾಯವನು ಸಂವರಿಸಿಕೊಳ್ಳುತ್ತಾನೆ**'[6] ಮುಂದೆ ಕಳಿದು ಜಾವದಮೇಲೆ ರಕ್ಕಸರುಲುಹು ನಿಲಲು **ಅಣುರೂಪದಲಿ** ವಿಲಧಾಲಯಗಳಲ್ಲಿ ಸೀತೆಯನ್ನರಸುತ್ತಾನೆ.[7] **ಸೂಕ್ಷ್ಮರೂಪದಲಿ** ವಿಭೀಷಣನ ಮಂದಿರವ ಹೊಕ್ಕು ಹೊರಡುವ ಉಲ್ಲೇಖವೂ ಇದೆ. ಬಹುಶಃ **ಚಿಕ್ಕ**ರೂಪದ ಕಪಿಯ ರೂಪದಲ್ಲಿಯೇ ಹನುಮಂತನು ಲಂಕಾ ಪ್ರವೇಶಮಾಡಿರಬೇಕು–ಎನ್ನುವುದಕ್ಕೆ, ಸಿಂಹಿಕೆಯು **ಹನು**ಮಂತನನ್ನು ಕಂಡು 'ಕಪಿ' ಎಂದು ಸಂಬೋಧಿಸಿ ಮಾತನಾಡಿದುದೇ[8] ಆಧಾರವಾಗಿದೆ. ವಿವಿಧ ರಾಮಾಯಣಗಳಲ್ಲಿ ಹನುಮಂತನ ವಿವಿಧ ಛದ್ಮವೇಷಗಳನ್ನು ಹೇಳಿದ್ದರೂ[9], ಕುಮಾರವಾಲ್ಮೀಕಿಯು, 'ಸಣ್ಣ ಗಾತ್ರದ ಕಪಿ'ಯ ರೂಪವನ್ನೇ ಹೇಳಿ, ಆದಿಕವಿಯನ್ನೇ ಅನುಸರಿಸಿದಂತೆ ತೋರುತ್ತದೆ.

---

1. ಆ. ರಾ. I ೧೩–೬೪.
2. ಇದೇ. I ೯/೨೮೩–೩೦೭.
3. ತೊ. ರಾ. ವನ್ನು ಅನುಸರಿಸಿ, ಬತ್ತಲೇಶ್ವರನು 'ಮುನಿಯ ಕನಕಕುಂಡಲ'ವನ್ನು ಎತ್ತಿ, ಹನುಮಂತನು ಸಾಹಸ ಪ್ರದರ್ಶಿಸಿದ ಕಥೆ ಹೇಳುತ್ತಾನೆ. ಕೌ. ರಾ. IX ೫೪–೬೪.
4. ವಾ. ರಾ.V ೨-೪೯.
5. ಹನುಮಂತನಿಗೆ 'ಬೆಕ್ಕಿನರೂಪ'ವನ್ನು ಹೇಳಿದ ಕೃತಿಗಳು : (ಬುಲ್ಕೆ–ರಾಮಕಥಾ, ಪು. ೫೦೦ರಲ್ಲಿ ಉಲ್ಲೇಖಿತವಾದಂತೆ)
   (೧) ಬೃಹದ್ಧರ್ಮಪುರಾಣ (ಪೂರ್ವಖಂಡ, ಅ. ೨೦-೭)
   (೨) ಪದ್ಮಪುರಾಣ ವಂಗೀಯ ಪಾಠ.
   (೩) ಗುಜರಾತಿ ನರ್ಮದ ಕೃತ.ರಾಮಾಯಣ ಸಾರ.
   (೪) ಪಾಶ್ಚಾತ್ಯ ವೃತ್ತಾಂತ ಸಂ. ೧, ೩, ೧೩.
6. ತೊ. ರಾ. V ೧-೩೪.
7. ಇದೇ. ೨-೧೪.
8. ಇದೇ. ೨-೯.
9. ಅಧ್ಯಾತ್ಮ ರಾಮಾಯಣ-ಪಕ್ಷಿಯ ಆಕಾರ (V ೩.೨೦)

## ರಾವಣ ಅಶೋಕವನ ಗಮನ

ಸೀತೆಯನ್ನು ಕಂಡು ಹನುಮಂತನು ಅವಳೆದುರಿಗೆ ತಾನು ಕಾಣಿಸಿಕೊಳ್ಳುವುದಕ್ಕೆ ತಕ್ಕ ಸಂದರ್ಭವನ್ನು ನಿರೀಕ್ಷಿಸುತ್ತಾ ಶಿಂಶಪಾವೃಕ್ಷದ ಮರೆಯಾಗಿ ಕುಳಿತಿದ್ದಾಗ, ಅಶೋಕವನಕ್ಕೆ ರಾವಣನು ಬರುತ್ತಾನೆ. ಅಲ್ಲಿಗೆ ಅವನ ಬರುವಿಕೆಗೆ ರಾವಣನಲ್ಲಿ ಸೀತೆಯ ಕುರಿತಾಗಿದ್ದ ಕಾಮ ಭಾವನೆಯೇ ಕಾರಣವೆಂದು ಆದಿಕಾವ್ಯದಿಂದ ತಿಳಿದುಬರುತ್ತದೆ.[1]

ಕುಮಾರ ವಾಲ್ಮೀಕಿಯು ರಾವಣನೂ ಇದೇ ಸಂದರ್ಭದಲ್ಲಿ, 'ಮನಸಿಜನ ಶರಸಂಧಾನದೆಸುಗೆಯ ಮನೆಯ ಮೈನೋವಿನಲ್ಲಿಯೇ ಅಶೋಕವನಕ್ಕೆ ಆಗಮಿಸುತ್ತಾನೆ' ಆದರೂ ರಾವಣನ ಅಂತರಂಗದಲ್ಲಿ ಈ ಸಂದರ್ಭದಲ್ಲಿ ಬೇರೇನಾದರೂ ಉದ್ದೇಶವು ಇದ್ದಿರಬಹುದೇ ?–ಎಂಬ ಸಂದೇಹಕ್ಕೆ ಅವಕಾಶವಾಗುವಂತೆ, ಕವಿಯು ಪ್ರಾರಂಭದಲ್ಲಿಯೇ 'ಏನ ನೆನೆದನೊ ಮನದೊಳಗೆ ದಶಾನನ' ಎಂದು ಉದ್ಗರಿಸುತ್ತಾನೆ. ಮುಂದೆ ಪ್ರಕಟವಾಗುವ ರಾವಣನ "ಮೋಕ್ಷಕಾಮಿತ್ವ"ವು ಈ ಉದ್ಗಾರದಿಂದ ಧ್ವನಿತವಾಗುತ್ತಿರಬಹುದೇ ?

ಈ ಸಂದೇಹಕ್ಕೆ ಪೋಷಕವಾಗಿ, ಕುಮಾರ ವಾಲ್ಮೀಕಿಯು ಗಮನ ಸೆಳೆದಿರುವ ಅಧ್ಯಾತ್ಮ ರಾಮಾಯಣದಲ್ಲಿ ಈ ಸನ್ನಿವೇಶದ ರಾವಣನ 'ಇಂಗಿತ'ವೇ ಬೇರೆಯಾಗಿರುತ್ತದೆ.

ತನಗೆ ಸೀತಾನಿಮಿತ್ತವಾಗಿ ರಾಮನಿಂದ ಆದಷ್ಟು ಬೇಗನೆ ಮರಣದೊರೆಯಬೇಕು ಎಂದು ರಾವಣನು ಹಗಲಿರುಳೂ ಪರಿತಪಿಸುತ್ತಾನೆ.

> ತಸ್ಮಿನ್ ದಿನೇ ಪುರಾರಾತ್ರೌ ರಾವಣೋ ರಾಕ್ಷಸಾಧಿಪಃ
> ಸ್ವಪ್ನೇ ರಾಮೇಣ ಸಂದಿಷ್ಟಃ ಕಶ್ಚಿದಾಗತ್ಯವಾನರಃ
> ಕಾಮರೂಪಧರಃ ಸೂಕ್ಷ್ಮೋ ವೃಕ್ಷಾಗ್ರಸ್ಥೋನು ಪಶ್ಯತಿ[3]

ಸ್ವಪ್ನದಲ್ಲಿ ವಾನರಾಗಮನವನ್ನು ಕಂಡು ಸ್ವಪ್ನವು ನಿಜವಾಗುವುದೆಂದು ಅರಿತ ರಾವಣನು, ಅಶೋಕವನಕ್ಕೆ ಹೋಗಿ, ಸೀತೆಯನ್ನು ವಾಗ್ಬಾಣಗಳಿಂದ ನೋಯಿಸಬೇಕೆಂದೂ, ಅದು ಹನುಮಂತನ ಮೂಲಕ ರಾಮನಿಗೆ ತಿಳಿದು ರಾಮನು ಬೇಗನೆ ಲಂಕೆಗೆ ಆಗಮಿಸಿ ತನಗೆ ಶೀಘ್ರದಲ್ಲಿ 'ಮುಕ್ತಿ' ಸಿಗುವುದೆಂದು ಹವಣಿಸಿ, ಅವನು ಅಶೋಕವನಕ್ಕೆ ಹನುಮಂತನು ಅಲ್ಲಿ ಇದ್ದಾಗಲೇ–ಆಗಮಿಸುತ್ತಾನೆ.

ಆನಂದರಾಮಾಯಣದಲ್ಲೂ ಈ ವಿಚಾರವಿದೆ.[4] ಇದರಿಂದ ಸಂದೇಹಕ್ಕೆ ಇನ್ನಷ್ಟು ಅವಕಾಶವಾಗಿದೆ.

## ಸೀತಾ ಶಂಕಾ ನಿವಾರಣೆ : ಹನುಮನ 'ತ್ರಿವಿಕ್ರಮ'ರೂಪ

ಹನುಮಂತನು ಸೀತೆಯೊಡನೆ ತಾನು ಯಾವ ಭಾಷೆಯಲ್ಲಿ ಮಾತನಾಡಲಿ ಎಂದು ತರ್ಕಿಸುತ್ತಾ :—

> ವಾನರಸ್ಯ ವಿಶೇಷೇಣ ಕಥಂ ಸ್ಯಾದಭಿಭಾಷಣಮ್
> ಅವಶ್ಯಮೇವ ವಕ್ತವ್ಯಂ ಮಾನುಷಂವಾಕ್ಯಮರ್ಥವತ್
> ಮಯಾ ಸಾಂತ್ವಯಿತುಂ ಶಕ್ಯಾ ನಾನ್ಯಥೇಯಮನಿಂದಿತಾ.[5]

ತಾನು ಮನುಷ್ಯಭಾಷೆಯಿಂದಲೇ ಮಾತನಾಡಬೇಕೆಂದು ನಿರ್ಣಯಿಸುತ್ತಾನೆ.[6]

---

ಆನಂದ ರಾಮಾಯಣ (ಮನೋಹರ ಕಾಂಡ ೭-೨೯)– 'ಅತ್ಯಂತಂ ಸೂಕ್ಷ್ಮವಪುಷಂ ಬಾಲಕಾಕಾರಸಂಯುತಮ್' ವಹ್ನಿ ಪುರಾಣ-ಮೂಷಿಕ ರೂಪ ಮಹಾನಾಟಕ-ಬ್ರಾಹ್ಮಣರೂಪ.

1. ವಾ. ರಾ. V ಸರ್ಗ೧೮, (I ೯-೬೯).
2. ತೊ. ರಾ. V ೩-೨೦.
3. ಅ. ರಾ. V ಸರ್ಗ ೨, ೧೬-೨೦.
4. ಆ. ರಾ. I ೯,೬೯.
5. ವಾ. ರಾ. V ೩೦-೧೯, ೨೦.
6. ಈ ಶ್ಲೋಕಗಳಿಗೆ ವಿಧ ವಿಧವಾಗಿ ವ್ಯಾಖ್ಯಾನ ಮಾಡಲಾಗಿದೆ.

ತೊರವೆ ರಾಮಾಯಣದ ಹನುಮಂತನು ಹೀಗೆ ತಾನು ಆಡಬೇಕಾದ ಭಾಷೆಯ ಕುರಿತು ತರ್ಕಿಸುವುದಿಲ್ಲ, ಚಿಂತಿಸುವುದಿಲ್ಲ. ಸೀತೆಗೆ ತನ್ನಲ್ಲಿ ನಂಬುಗೆ ಹುಟ್ಟಿಸುವಂತೆ ಮಾಡುವುದೇ ಅವನ ದೊಡ್ಡ ಯೋಜನೆಯಾಗಿರುತ್ತದೆ. ಸೀತೆಗೆ ನಂಬಿಕೆ ಹುಟ್ಟಿಸುವುದಕ್ಕಾಗಿ ಕೆಲವು 'ಕುರುಹು'[1]ಗಳನ್ನು ಹೇಳಿದಮೇಲೂ ಅವಳ ಸಂದೇಹ ನಿರಸನವಾಗದಿರಲು, ಹನುಮಂತನು ತನ್ನ ಅದ್ಭುತ, 'ತ್ರಿವಿಕ್ರಮ'ನಂತಹ ರೂಪವನ್ನು ತೋರಿದಾಗ ಸೀತೆಗೆ ಧೈರ್ಯ ಹುಟ್ಟುತ್ತದೆ.[2] ಇದು ತೊ. ರಾ. ದ್ದೇ ಆದ ಕಥಾವೈಶಿಷ್ಟ್ಯ.

ಅಶೋಕವನದಲ್ಲಿ ಸೀತೆಯೆದುರು ಹನುಮಂತನು ಎರಡು ಸಾರಿ ತನ್ನ 'ಅದ್ಭುತ ಗಾತ್ರವನ್ನು' ತೋರಿದ ಉಲ್ಲೇಖ ಆದಿಕಾವ್ಯದಲ್ಲಿದೆ.

ಸೀತೆಯನ್ನು ತಾನು ಹೊತ್ತುಕೊಂಡು ಹೋಗಬಲ್ಲೆ ಎಂದು ಮಾರುತಿಯು ಹೇಳಿದಾಗ,

ಕಥಂ ವಾಲ್ಪಶರೀರಸ್ಥಂ ಮಾಮಿತೋ ನೇತುಮಿಚ್ಛಸಿ।
ಸಕಾಶಂ ವಾನರೇಂದ್ರಸ್ಯ ಭರ್ತುರ್ಮೇ ಪ್ಲವಗರ್ಷಭ[3] ॥

"ಹನುಮಂತ, ಎಷ್ಟು ಚಿಕ್ಕ ಶರೀರ ನಿನ್ನದು ; ನನ್ನನ್ನು ಹೊತ್ತುಕೊಂಡು ನನ್ನ ಗಂಡನ ಬಳಿಗೆ ಸೇರಿಸಬಲ್ಲೆಯಾ ?"– ಎಂದು ಸೀತೆಯು ಸಂದೇಹ ವ್ಯಕ್ತಪಡಿಸುತ್ತಾಳೆ. ಇದನ್ನು ಕೇಳಿ ಅವಮಾನಗೊಂಡಂತಾದ ಹನುಮಂತನು, ತನ್ನ ಅದ್ಭುತವಾದ ರೂಪವನ್ನು ಸೀತಾಪ್ರತ್ಯಯ ಕಾರಣಕ್ಕಾಗಿ ಪ್ರದರ್ಶಿಸುತ್ತಾನೆ.

ತತೋ ವರ್ಧಿತುಮಾರೇಭೇ ಸೀತಾಪ್ರತ್ಯಯ ಕಾರಣಾತ್
ಮೇರುಮಂದರ ಸಂಕಾಶೋ ಬಭೌ ದೀಪ್ತಾನಲಪ್ರಭಃ
ಅಗ್ರತೋ ವ್ಯವತಸ್ಥೇ ಚ ಸೀತಾಯಾ ವಾನರೋತ್ತಮಃ[4]

ಹನುಮಂತನ ಅತ್ಯದ್ಭುತವಾದ ರೂಪವನ್ನು ಕಂಡು ಸೀತೆಯು ಮೆಚ್ಚಿ, "ತವಸತ್ತ್ವಂ ಬಲಂಚೈವ ವಿಜಾನಾಮಿ ಮಹಾಕಪೇ[5] ಎಂದು ನುಡಿಯುತ್ತಾಳೆ.

ಇನ್ನೊಮ್ಮೆ, ಸೀತೆಯು ಕೊಟ್ಟ ಅಭಿಜ್ಞಾನಸಹಿತನಾದ ಆಂಜನೇಯನು ಅಶೋಕವನದಿಂದ ಹೊರಡುತ್ತಾ ತನ್ನ ದೇಹವನ್ನು 'ವರ್ಧಮಾನಗೊಳಿಸಿದ' ಉಲ್ಲೇಖವೂ ಇದೆ.[6]

---

ಗೋವಿಂದರಾಜನು,
ಅತ್ರವಾಕ್ಯಸ್ಯ ಮಾನುಷತ್ವಂ ಕೋಸಲದೇಶವರ್ತಿ ಮನುಷ್ಯ ಸಂಬಂಧಿತ್ವಂ
ವಿವಕ್ಷಿತಂ......ಎಂದೂ ;

ಮಹೇಶ್ವರ ತೀರ್ಥನು,
ಗೀರ್ವಾಣಭಾಷಯಾ ವ್ಯವಹಾರೇ ದೋಷಮಾಶಂಕ್ಯ ಮಾನುಷ ಭಾಷಯೈವ
ವ್ಯವಹರ್ತವ್ಯಮಿತಿ ನಿಶ್ಚಿನೋತಿ......ಎಂದೂ ;

ತಿಲಕನು,
ಮಾನುಷೀಂ ಮನುಷ್ಯಶರೀರಸಾಧ್ಯಾಂ ಸಂಸ್ಕೃತಾಂ ವ್ಯಾಕರಣ ಸಂಸ್ಕೃತಿವತೀಮ್......
ಎಂದೂ-ವ್ಯಾಖ್ಯಾನಿಸಿದ್ದಾರೆ.

'Prof. Jacobi's View that Manushi Samskrita is vulgar Samskrita as opposed to the Sanskrit of the Sishtas has no real basis'...K. S. R. Sastri-R. R. p. 124.

1. 'ಕುರುಹು'ಗಳ ವಿವೇಚನೆಯು ಇದೇ ಪ್ರಬಂಧದಲ್ಲಿ ಆಗಲೇ ಬಂದಿದೆ.
2. ತೊ. ರಾ. V ೩-೮೦,೮೧.

   ಶಿವನ ಕಾಯದಕಾಂತಿಮೈಯಲಿ
   ಖಿವಖಿವಿಸಿದುದು ವದನವುದಯದ
   ರವಿಯವೊಲು ರಂಜಿಸಿತು ತಾರಾಗಣದ ಹುರಿಯಂತೆ

3. ವಾ. ರಾ. V ೩೭-೩೦.
4. ಇದೇ. V ೩೭-೩೪, ೩೫.
5. ಇದೇ. V ೩೭-೪೦.
6. ಇದೇ. V ೪೦-೨೦.

ಕುಮಾರ ವಾಲ್ಮೀಕಿಯು ಆದಿಕಾವ್ಯದ ಮೇಲಿನ ಎರಡು ಸಂದರ್ಭಗಳನ್ನು ಹಿನ್ನೆಲೆಯಾಗಿರಿಸಿಕೊಂಡು, ಪ್ರಾರಂಭದಲ್ಲಿಯೇ ಸೀತೆಗೆ ನಂಬುಗೆ ಮೂಡಿಸುವುದಕ್ಕಾಗಿ ತನ್ನ ಅದ್ಭುತ ರೂಪನನ್ನು ಹನುಮಂತನು ಪ್ರದರ್ಶಿಸಿದಂತೆ ವರ್ಣಿಸಿರಬೇಕು.

## ಲಂಕಾದಹನ ವಿಚಾರ

ಆದಿಕಾವ್ಯದ ಮೂಲರೂಪದಲ್ಲಿ 'ಲಂಕಾದಹನ' ವೃತ್ತಾಂತವಿದ್ದಿರಲಾರದೆಂದೂ, ಪ್ರಚಲಿತ ರಾಮಾಯಣದಲ್ಲಿನ ಆ ವೃತ್ತಾಂತದ ವರ್ಣನೆಯಿರುವ ೧೫ ಸರ್ಗಗಳೂ ಪ್ರಕ್ಷಿಪ್ತಗಳಾಗಿರಬೇಕು–ಎಂದೂ ಯಾಕೋಬಿಯನರು ನಿರ್ಣಯಿಸುತ್ತಾರೆ. ಅವರು ತಮ್ಮ ನಿರ್ಣಯಕ್ಕೆ ಮೂರು ಕಾರಣಗಳನ್ನು ನೀಡುತ್ತಾರೆ.[1]

೧. ಸೀತೆಯು ಹನುಮಂತನನ್ನು ಅಶೋಕವನದಿಂದ ಬೀಳ್ಕೊಳ್ಳುವ ಮೂರು ವಿವರಣೆಗಳು ಪ್ರಕೃತದ ರಾಮಾಯಣದ ಸುಂದರ ಕಾಂಡದಲ್ಲಿ ದೊರೆಯುತ್ತವೆ.

ಅ) ಲಂಕಾದಹನದ ಪೂರ್ವದಲ್ಲಿ.[2]

ಆ) ಲಂಕಾದಹನದ ನಂತರದಲ್ಲಿ.[3]

ಇ) ರಾಮ–ಹನುಮಂತ ಸಂಭಾಷಣೆಯ ಸಂದರ್ಭದಲ್ಲಿ.[4]

ಈ ಮೂರರಲ್ಲಿ ಮೊದಲನೆಯ (ಲಂಕಾದಹನ ಪೂರ್ವದ) "ವಿದಾಯ" ವುಮಾತ್ರ ಮೂಲರಾಮಾಯಣದಲ್ಲಿ ಇದ್ದಿರಬೇಕು. ಈ ಸಂದರ್ಭದಲ್ಲಿ ಸೀತೆಯು ಹನುಮಂತನೊಡನೆ,

ಯದಿ ವಾ ಮನ್ಯಸೇ ವೀರ ವಸ್ವೈಕಾಹಮರಿಂದಮ ।
ಕಸ್ಮಿಂಶ್ಚಿತ್ಸಂವೃತೇ ದೇಶೇ ವಿಶ್ರಾಂತಃ ಶ್ವೋ ಗಮಿಷ್ಯತಿ[5] ॥

"ಎಲೈ ವಾನರವೀರನೇ, ನಿನಗೆ ಸಂಮತವಾದರೆ ಒಂದುದಿನ ಇಲ್ಲಿಯೇ ಉಳಿದುಕೊ. ಎಲ್ಲಿಯಾದರೂ ಅಡಗಿಕೊಂಡು ವಿಶ್ರಾಂತಿ ಪಡೆದು ನಾಳೆ ಹೋಗಬಹುದು...." ಎನ್ನುತ್ತಾಳೆ. ಆಗ ಹನುಮಂತನು, ಸುಗ್ರೀವನು (ರಾಮನ ಜತೆಯಾಗಿ) ರಾಕ್ಷಸ ಸಂಹಾರಕ್ಕಾಗಿ ಕ್ಷಿಪ್ರದಲ್ಲಿಯೇ ಇಲ್ಲಿಗೆ (ಕ್ಷಿಪ್ರಮೇಷ್ಯತಿ ವೈದೇಹಿ ರಾಕ್ಷಸಾನಾಂ ನಿಬರ್ಹಣಃ)[6] ಬರುವನು ಎಂದು ಆಕೆಗೆ ತಿಳಿಸಿ ಅಲ್ಲಿಂದ ಅಶೋಕವನದಿಂದ ಹೊರಡುತ್ತಾನೆ. ಕರ್ತವ್ಯನಿಷ್ಠನಾದ ಹನುಮಂತನು

ದಶಂ ಹ್ಯುದೀಚೀಂಮನಸಾ ಜಗಾಮ[7]

ಮನಸ್ಸಿನಲ್ಲಿಯೇ ಉತ್ತರದಿಕ್ಕಿನಲ್ಲಿ ರಾಮನಿದ್ದೆಡೆಯನ್ನು ಸೇರಿಬಿಟ್ಟನು–ಎಂಬ ಉಲ್ಲೇಖವೂ ಅಲ್ಲಿ ಸಿಗುತ್ತದೆ. ಅಲ್ಲದೆ ಪ್ರಯಾಣಕ್ಕಾಗಿ ತನ್ನ ದೇಹವನ್ನು ಬೆಳೆಸಿಕೊಂಡುದಾಗಿಯೂ ಹೇಳಲಾಗಿದೆ.[8] ಹೀಗೆ ತನ್ನ ಕಾರ್ಯಗೌರವದಿಂದ ರಾಮನಿದ್ದಲ್ಲಿಗೆ ಮರಳಲು ಆತುರನಾಗಿದ್ದು, ಅದಕ್ಕೆ ಸರ್ವರೀತಿಗಳಿಂದಲೂ ಪ್ರಣಮ್ಯ ಶಿರಸಾಂ ದೇವೀಂ ಗಮನಾಯೋಪಚಕ್ರಮೇ–ದೇವಿ (ಸೀತೆಗೆ)ಯನ್ನು ವಂದಿಸಿ–ಸಿದ್ಧನಾದ,

ಶಿವಶ್ಚ ತೇಽಧ್ವಾಸ್ತು ಹರಿಪ್ರವೀರ[10]

ಎಂದು ಸೀತೆಯಿಂದ 'ಶುಭಪ್ರಯಾಣವಾಗಲಿ' ಎಂದು ಹಾರೈಸಲ್ಪಟ್ಟ–ಹನುಮಂತನು ತನ್ನ ಸಾಹಸ ಪ್ರದರ್ಶನಕ್ಕೆಂದು (ನಾನಾ ರೀತಿಗಳಲ್ಲಿ ತಾನು ಆ ಕುರಿತು ತರ್ಕಿಸಿಕೊಂಡು[11]) ಲಂಕೆಯ ವನವನ್ನು ಹಾಳುಗೊಳಿಸಲು ತೊಡಗಿ, ತನ್ನ ಮುಖ್ಯ ಕರ್ತವ್ಯವನ್ನು ಕಡೆಗಣಿಸಿದನೆಂದರೆ ಹೇಗೆ ಉಚಿತವಾದೀತು ?

---

1. ಬುಲ್ಕೆ–ರಾಮಕಥಾ ಪು. ೪೯೬ರಲ್ಲಿ ಉದ್ಧೃತ, (ದಸ್ ರಾಮಾಯಣ ಪು. ೩೩–೩೫).
2. ವಾ. ರಾ. V ಸರ್ಗ ೪೦.
3. ಇದೇ. V ಸರ್ಗ ೫೬-೧೧೦ದಲ್ಲಿ.
4. ಇದೇ. V ಸರ್ಗ ೬೮.
5. ಇದೇ. V ೩೯–೨೦.
6. ಇದೇ V ೩೯–೩೪.
7. ವಾ. ರಾ. V ೪೦–೨೫.
8. ಇದೇ. V ೪೦–೨೧.
9. ಇದೇ. ೪೦–೨೦.
10. ಇದೇ. ೪೦–೨೪.
11. ಇದೇ. ೪೧–೧ ರಿಂದ ೧೩.

೨. ಪ್ರಚಲಿತ ರಾಮಾಯಣದಲ್ಲಿ-ಲಂಕಾ ದಹನದ ನಂತರ ಹನುಮಂತನು ಎರಡು ಸಾರಿ ಸಂದರ್ಶಿಸಿದ ಹೇಳಿಕೆಗಳು[1] ದೊರೆಯುತ್ತವೆ. ಈ ಎರಡು ಪ್ರಸಂಗಗಳಲ್ಲೂ 'ಲಂಕಾದಹನ'ದ ಪ್ರಸ್ತಾವನೆಯಿರುವುದಿಲ್ಲ. ಅಷ್ಟಲ್ಲದೆ ರಾಮನು ಲಂಕೆಯನ್ನು ಸೇರಿದ ಮೇಲೆ, ಅವನು ಕಂಡಂತೆ ಲಂಕೆಯ ಸೌಂದರ್ಯವರ್ಣನೆಯು ಎರಡು ಸರ್ಗಗಳಲ್ಲಿ[2] ಬರುತ್ತದೆ. ಈ ಸಂದರ್ಭದಲ್ಲಿ ಒಮ್ಮೆಯಾದರೂ 'ಲಂಕೆಯು ಸುಟ್ಟುಹೋಗಿದ್ದ, ಅದು ಪುನರ್ನಿರ್ಮಾಣಗೊಂಡಿದ್ದ' ಉಲ್ಲೇಖವು ಸಿಗುವುದಿಲ್ಲ.

೩. ಲಂಕಾದಹನ ಪ್ರಸಂಗದಲ್ಲಿ ಹನುಮಂತನಿಂದ ವಿರೂಪಾಕ್ಷ, ಯೂಪಾಕ್ಷರ ವಧೆಯಾದ ವರ್ಣನೆಯಿದೆ.[3] ಆದರೆ ಯುದ್ಧಕಾಂಡದಲ್ಲಿ ಪುನಃ ಇವರಿಬ್ಬರೂ ಯುದ್ಧಮಾಡಿ ಮಡಿದ ಕಥೆ ಇದೆ.[4] ಲಂಕಾದಹನ ಅಥವಾ ಅಶೋಕವನ ಭಂಜನ ವೃತ್ತಾಂತವು ಮೂಲ ರಾಮಾಯಣಕ್ಕೆ ಮತ್ತೆ ಸೇರಿಸಲ್ಪಟ್ಟುದರಿಂದಲೇ ಹೀಗೆ ಪರಸ್ಪರ ವಿರುದ್ಧ ಉಲ್ಲೇಖಗಳು ಅಲ್ಲಿ ಕಾಣಿಸಿಕೊಳ್ಳುವುದಕ್ಕೆ ಅವಕಾಶವಾಗಿರಬೇಕು.

ಇಷ್ಟಲ್ಲದೆ, ಇತರ ಕಾರಣಗಳಿಂದಲೂ, ಹನುಮಂತನಿಂದ ವನಭಂಜನ ಮತ್ತು ಲಂಕಾದಹನ ಪ್ರಸಂಗಗಳು ವಾಲ್ಮೀಕಿಯು ಬರೆದ ಆದಿಕಾವ್ಯದಲ್ಲಿ ಇದ್ದಿರಲಾರದು—ಎಂದೇ ಖಚಿತವಾಗುತ್ತದೆ.

ಅ) ಹನುಮಂತನು ಲಂಕೆಗೆ ಪ್ರವೇಶಮಾಡುತ್ತಿರುವ ವೇಳೆ,

> ಮಯಿದೃಷ್ಟೇತು ರಕ್ಷೋಭೀ ರಾಮಸ್ಯ ವಿದಿತಾತ್ಮನಃ ।
> ಭವೇದ್ವ್ಯರ್ಥಮಿದಂ ಕಾರ್ಯಂ ರಾವಣಾನರ್ಥಮಿಚ್ಛತಃ[5] ॥

ಎಂದು, ರಕ್ಕಸನೇನಾದರೂ ನನ್ನನ್ನು ಕಂಡುಬಿಟ್ಟರೆ, ಶ್ರೀ ರಾಮನ ಕಾರ್ಯವೆಲ್ಲವೂ ಕೆಟ್ಟಂತೆಯೇ—ಎಂದುಕೊಳ್ಳುವ ಹನುಮಂತನೇ, ಸೀತಾದರ್ಶನದ ನಂತರದಲ್ಲಿ,

> ಕಥಂ ನು ಖಲ್ವದ್ಯ ಭವೇತ್ ಸುಖಾಗತಂ
> ಪ್ರಸಹ್ಯಯುದ್ಧಂ ಮಮ ರಾಕ್ಷಸೈಃಸಹ
> ತಥೈವ ಖಲ್ವಾತ್ಮಬಲಂ ಚಸಾರವತ್
> ಸಂಮಾನಯೇನ್ಮಾಂ ಚರಣೇ ದಶಾನನಃ[6]

"ಏನು ಮಾಡಿದರೆ ಈಗ ರಾಕ್ಷಸರೊಡನೆ ಯುದ್ಧಮಾಡುವ ಪ್ರಸಂಗ ನನಗೆ ಸುಲಭವಾಗಿ ದೊರಕೀತು ? ರಾವಣನಿಗೂ (ಅವನ ಸೈನ್ಯಕ್ಕೂ) ನನಗೂ ಇರುವ ಪರಾಕ್ರಮದ ವ್ಯತ್ಯಾಸವು ಹೇಗೆ ಮನವರಿಕೆಯಾದೀತು ?" ಎಂದು ಯೋಚಿಸುವುದು ಅಸಹಜವೆನಿಸುತ್ತದೆ.

ಆ) ಭರದ್ವಾಜನು ರಾಮವೃತ್ತಾಂತವನ್ನು ಸಂಗ್ರಹಿಸಿ ಹೇಳುವಲ್ಲಿ[7]
ಹನುಮಂತನು ನಡೆದ ಘಟನೆಗಳನ್ನೆಲ್ಲ ಭರತನಿಗೆ ವರದಿಮಾಡುವಲ್ಲಿ[8]

---

1. ವಾ. ರಾ. V ೬೫–೬೮ ಸರ್ಗಗಳು.
   ಇದೇ. VI ೧೧೬ನೆಯ ಸರ್ಗ.
2. ಇದೇ. VI ೩೮ ಮತ್ತು ೩೯ನೆಯ ಸರ್ಗಗಳಲ್ಲಿ.
3. ವಾ. ರಾ. V ೪೬-೨೭.
   ವಿಹಾಯ ನೃಪತದ್ಭೂಮೌ ದುರ್ಧರಸ್ತ್ಯಕ್ತಜೀವಿತಃ
   ತಂ ವಿರೂಪಾಕ್ಷ ಯೂಪಾಕ್ಷೌ ದೃಷ್ಟ್ವಾ ನಿಪತಿತಂ ಭುವಿ
4. ವಾ. ರಾ. VI ಯೂಪಾಕ್ಷವಧೆ-ಸರ್ಗ ೭೬. ವಿರೂಪಾಕ್ಷವಧೆ ಸರ್ಗ ೯೭.
5. ವಾ. ರಾ. V ೨-೪೨.
6. ಇದೇ. V ೪೧-೮
7. ವಾ. ರಾ. VI ಸರ್ಗ. ೧೨೭- ೪, ೧೫
8. ಇದೇ. VI ಸರ್ಗ. ೧೨೯-೫ ರಿಂದ ೫೩

ಲಂಕಾದಹನದ ವಿಚಾರವಿಲ್ಲದಿರುವುದು ಗಮನಾರ್ಹ.

ಇ) ಲಂಕಾ ದಹನ ಪ್ರಕರಣದಲ್ಲಿನ ವರ್ಣನೆ, ಪುನರುಕ್ತಿಗಳೂ ಅದರ ಪ್ರಕ್ಷಿಪ್ತತೆಯನ್ನು ಸೂಚಿಸುತ್ತವೆ.[1]

ಹೀಗಿದ್ದರೂ, ಲಂಕಾದಹನ ಪ್ರಕರಣವು ಪ್ರಚಲಿತ ವಾಲ್ಮೀಕಿ ರಾಮಾಯಣದಲ್ಲಿ ಮತ್ತು ಇತರ ರಾಮಕಥಾ ಸಾಹಿತ್ಯದಲ್ಲಿ ಸ್ಪಷ್ಟ ಸ್ಥಾನವನ್ನು ಗಳಿಸಿಕೊಂಡಿದೆ. ಅದ್ಭುತ ಮತ್ತು ಹಾಸ್ಯರಸಗಳ ಆಕರ್ಷಣೆಯ ಕಾರಣದಿಂದ ಈ ಪ್ರಕರಣವು ಕವಿಗಳ, ಸಹೃದಯರ ಮನಸ್ಸನ್ನು ಸೆಳೆದಿರಬೇಕು. ಕುಮಾರ ವಾಲ್ಮೀಕಿಯೂ ಇದಕ್ಕೆ ಹೊರತಾಗಿಲ್ಲ.

## ಬ್ರಹ್ಮಾಸ್ತ್ರ–ಬ್ರಹ್ಮಪ್ರಾರ್ಥನೆ

ವನಭಂಜನ ಮಾಡಿದ ಹನುಮಂತನ ಮೇಲೆ ಇಂದ್ರಜಿತುವು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾನೆ. ಹನುಮಂತನು ಆ ಬ್ರಹ್ಮಾಸ್ತ್ರಕ್ಕೆ ಕಟ್ಟುಗೊಂಡು ನಿಶ್ಚೇಷ್ಟನಾಗಿ ನೆಲದ ಮೇಲೆ ಬೀಳುತ್ತಾನೆ. ಬ್ರಹ್ಮದೇವನ ಮಹಿಮೆಯಿಂದ ತಾನು ಕಟ್ಟುಬಿದ್ದಿರುವನೆಂದು (ಇಂದ್ರಜಿತುವಿನಿಂದಾಗಿ ಅಲ್ಲ) ಮಾರುತಿಯು ಯೋಚಿಸುತ್ತಾನಲ್ಲದೆ, ಬ್ರಹ್ಮನಿಂದ ತನಗೆ ದತ್ತವಾದ ವರವನ್ನು ಸ್ಮರಿಸಿ, ತನಗೆ ಅಪಾಯವಿಲ್ಲವೆಂದುಕೊಳ್ಳುತ್ತಾನೆ.[2]

ವಾಲ್ಮೀಕಿ ರಾಮಾಯಣದಲ್ಲಿ (ಅಧ್ಯಾತ್ಮ ರಾಮಾಯಣದಲ್ಲೂ)[3] ಹೀಗಿರುವ ವೃತ್ತಾಂತಕ್ಕೆ ಕುಮಾರ ವಾಲ್ಮೀಕಿಯು, ಆನಂದ ರಾಮಾಯಣವನ್ನನುಸರಿಸಿ, ಹನುಮಂತನ ಪ್ರತಾಪಾತಿಶಯವನ್ನು ವ್ಯಕ್ತಪಡಿಸುವ ದೃಷ್ಟಿಯಿಂದ–ಹೊಸ ತಿರುವನ್ನು ಕೊಟ್ಟಿದ್ದಾನೆ.

ಆನಂದ ರಾಮಾಯಣದಲ್ಲಿ, ಬ್ರಹ್ಮನೇ ಬಂದು ಹನುಮನೊಡನೆ ತನ್ನ ಅಸ್ತ್ರದ ಗೌರವವನ್ನು ಉಳಿಸಬೇಕೆಂದು ಪ್ರಾರ್ಥಿಸುತ್ತಾನೆ:

> ಏತಸ್ಮಿನ್ನಂತರೇ ಬ್ರಹ್ಮಾ ಪ್ರಾರ್ಥಯಾಮಾಸ ವಾನರಮ್ ।
> ಬ್ರಹ್ಮಾಸ್ತ್ರಮಾನಯನ್ಮೇಽದ್ಯ ತ್ವಂ ಲಂಕಾಂ ಯಾಹಿ ರಾವಣಮ್[4] ॥

---

1. ವಾ. ರಾ. V ೫೩-೫೪ ಸರ್ಗಗಳು.

" ಲಂಕಾದಹನ ಕತೆಯೆಲ್ಲ ಪ್ರಕ್ಷಿಪ್ತವಾಗಿ ಕಾಣುತ್ತದೆ. ಅದರ ಹಿಂದಣ ಭಾಗವನ್ನು ನೋಡಿದರೆ ಇಂಥ ಸಂದರ್ಭವು ಬರತಕ್ಕದ್ದಲ್ಲ. ಹನುಮಂತನು ಸೀತೆಯನ್ನು ನೋಡಿಕೊಂಡು ರಹಸ್ಯವಾಗಿ ಹೊರಟುಹೋಗತಕ್ಕದ್ದೇ ಇಲ್ಲಿ ಆವಶ್ಯಕ. ಇಂಥದರಲ್ಲಿ ಇವನು ಊರನ್ನು ಸುಟ್ಟು, ಗಲಭೆಮಾಡಿ, ಎರಡು ತಿಂಗಳಕಾಲ ಇನ್ನೂ ಅಲ್ಲಿಯೇ ಇರಬೇಕಾದ ಸೀತಾದೇವಿಯನ್ನು ಸಂದಿಗ್ಧ ಸ್ಥಿತಿಯಲ್ಲಿ ಬಿಟ್ಟುಹೋದನೆನ್ನುವುದು ಅವಿವೇಕವಾಗಿ ಕಾಣುತ್ತದೆ. ಇಂಥ ಮಾತನ್ನು ಕವಿ ಹೇಳುವುದು ಸಾಧ್ಯವಲ್ಲ; ಹನುಮಂತನು ಲಂಕೆಗೆ ಹೋಗಿ ಸುಮ್ಮನೆ ಬರುವುದುಂಟೇ ಎಂದು ಯಾರೋ ಅದನ್ನು ಅವನಿಂದ ನುಡಿಸಿ ತಮ್ಮ ಚಪಲವನ್ನು ಹರಿಸಿಕೊಂಡಿರಬೇಕು."

—ಮಾಸ್ತಿ ವೆಂಕಟೇಶ ಅಯ್ಯಂಗಾರ್–ಆದಿಕವಿ ವಾಲ್ಮೀಕಿ, ಪುಟ. ೧೫-೧೬.

ಲಂಕಾ ದಹನದ ಕುರಿತು ಇತರ ವಿವಿಧ ತರ್ಕಗಳಿಗೆ ಅವಕಾಶವುಂಟಾಗಿದೆ.

ಉದಾಹರಣೆಗಾಗಿ ಒಂದನ್ನು ಇಲ್ಲಿ ಹೇಳಬಹುದು.

ಹನುಮಂತನು ಲಂಕೆಗೆ ಬಂದು ವಿಮಾನದಲ್ಲಿ ಹಾರಿ, ಸಿಡಿಮದ್ದನ್ನೆಸೆದು ಆ ನಗರವನ್ನು ಸುಟ್ಟಿರಬಹುದು–C. N. Metha–'The Flight of Hanuman.'

ಇದನ್ನು ಖಂಡಿಸುತ್ತಾ, ಹೀಗೆನ್ನಲಾಗಿದೆ–'It is an odd mixture of the old and the new and has no basis at all......Mr Metha thinks further that Hanuman flew also over Bali and other islands, that Simhika is New Guinea and that......His flight of fancy is even more astonishing than that of Hanuman!–K. S. R. Sastri-Riddles of the Ramayana. p. 121.

2. ವಾ. ರಾ. V ೪೮–೩೮ರಿಂದ ೪೪.
3. ಅಧ್ಯಾತ್ಮ ರಾಮಾಯಣ V ೪-೩.
4. ಆನಂದ ರಾಮಾಯಣ I ೯–೧೫೯.

ತೊರವೆ ರಾಮಾಯಣದಲ್ಲೂ, ಅಸ್ತ್ರದಿಂದ ಕಟ್ಟುವಡೆದ ಮಾರುತಿಗೆ 'ಅಂಭೋಜ-ಭವನು ಅಂಬರದಿಂದಲೇ ಕರವ ಮುಗಿದು ತನ್ನ ಅಸ್ತ್ರದ ಹಿರಿಮೆಯನ್ನು ಮನ್ನಿಸಬೇಕೆಂದು ಪ್ರಾರ್ಥಿಸುವ ಉಲ್ಲೇಖವಿದೆ.[1]

### ಲಂಕಾದಹನದ ಕಿಡಿ

ಬ್ರಹ್ಮಾಸ್ತ್ರದಿಂದ ಕಟ್ಟುವಡೆದ ಹನುಮಂತನನ್ನು ರಾವಣನ ಆಸ್ಥಾನಕ್ಕೆ ಎಳೆದೊಯ್ಯಲು ಇಂದ್ರಜಿತುವು ಪಟ್ಟ ಪಾಡು ಅಷ್ಟಿಷ್ಟಲ್ಲ. ಇದರ ವರ್ಣನೆ ಕುಮಾರ ವಾಲ್ಮೀಕಿಯದೇ ಕಲ್ಪನಾ-ವೈಶಿಷ್ಟ್ಯವೆಂಬಂತೆ ಮೂಡಿಬಂದಿದೆ.[2]

ಅಸ್ತ್ರಬಂಧಿತನಾದ ಮಾರುತಿಯನ್ನು ಎರಡು ಸಾವಿರ ಆನೆಗಳಿಂದ ಎಳೆಸಲು ಯತ್ನಿಸಿದಾಗ 'ಆ ಘಟಾವಳಿ ಘೀಳಿಟ್ಟಳಿಯುತ್ತವೆ.[3] ಆಗ ಇಂದ್ರಜಿತುವು ಕುಂಭಕರ್ಣನ ವಜ್ರದ ಹಳಿಯ ರಥವನ್ನು ತರಿಸುತ್ತಾನೆ. 'ಇಳೆಯ ಹೊತ್ತಿಭರಾಜಿಯಿಂದಗ್ಗಳದ ಎಂಭತ್ತು ಸಾವಿರ ಕರಿಗಳು[4] ಆ ರಥವನ್ನು ಎಳೆದು ತರುತ್ತವೆ. ಆದರೆ ಹನುಮನನ್ನು ಆ ರಥಕ್ಕೇರಿಸುವುದಾದರೂ ಹೇಗೆ? ಎಲ್ಲಾ ಸಾಹಸ, ಪ್ರಯತ್ನಗಳೂ ನಿಷ್ಫಲವಾದಾಗ, ಇಂದ್ರಜಿತುವು ಕಪಿಗೆ ಕಿಚ್ಚುಕ್ಕುವಂತೆ ಆಜ್ಞೆಮಾಡುತ್ತಾನೆ. ಮಾರುತಿಯ ಸುತ್ತಲೂ 'ತಾಳೇಳರುದ್ದದ ಹಳೆಮರಗಳನು ಇಟ್ಟಣಿಸಿ' ಬೆಂಕಿ ಕೊಟ್ಟಾಗ,

### ಪಟ್ಟಣವನುರಿಗೊಳಿಸಲಿಡು-ತಾ

ಬಟ್ಟೆ ತನಗೆನುತ...........[5] ಹನುಮಂತನು ಮನಸ್ಸಿನಲ್ಲಿಯೇ ನಿರ್ಧರಿಸಿಕೊಳ್ಳುತ್ತಾನೆ. 'ಲಂಕಾದಹನ'ಕ್ಕೆ ಇಂದ್ರಜಿತುವಿನ ಈ ವರ್ತನೆಯೇ ಕಿಡಿಯಂತಾದ ವಿಶಿಷ್ಟ ಕಲ್ಪನೆ ಕುಮಾರ ವಾಲ್ಮೀಕಿಯದು.[6] ವಾಲ್ಮೀಕಿ ರಾಮಾಯಣದಲ್ಲಿ ಇಂತಹ ವಿವರಣೆ ದೊರೆಯುವುದಿಲ್ಲ.

### ಬಾಲಕ್ಕೇಕೆ ಬಂತು ಭಾಗ್ಯ?

ಹನುಮಂತನ ಉಪದೇಶದ ನುಡಿಗಳನ್ನು ಕೇಳಿ ರಾವಣನು ಕ್ರುದ್ಧನಾಗಿ, ಅವನನ್ನು ಕೊಲ್ಲಬೇಕೆಂದು-ಆಜ್ಞಾಪಯತ್ತಸ್ಯವಧಂ ರಾವಣಃ ಕ್ರೋಧಃ ಮೂರ್ಛಿತ:[7] ಆಜ್ಞಾಪಿಸುವುದನ್ನು ಕೇಳಿ ವಿಭೀಷಣನು,

---

1. ತೊ. ರಾ. V ೬-೩೩.

ಇದಕ್ಕೆ ಹಿನ್ನೆಲೆಯಾಗಿ, ಭಾರತತಾತ್ಪರ್ಯ ನಿರ್ಣಯದಲ್ಲಿ, ಈ ಸನ್ನಿವೇಶದಲ್ಲಿ-

ಮಯಾ ವರಾ ವಿಲಂಘಿತಾಹ್ಯನೇಕಶಃ ಸ್ವಯಂಭುವಃ।
ಸಮಾನನೀಯ ಏವಮೇವ ತತೋಽತ್ರಮಾನಯಾಮ್ಯಹಂ- ॥

ಎಂದಿದೆ. ಭಾ. ತಾ. ನಿ. ೭-೩೩.

2. ಇದರ ಪ್ರಭಾವವು ಬತ್ತಲೇಶ್ವರನ ರಾಮಾಯಣದಲ್ಲಿ ಸ್ಪಷ್ಟವಾಗಿದೆ-ಕೌ. ರಾ. ೧೧-೪೨ರಿಂದ ೪೫.
3. ತೊ. ರಾ. V ೭-೪.
4. ಇದೇ. ೭-೫.
5. ಇದೇ. ೭-೮.
6. ಈ ಸಂದರ್ಭದಲ್ಲಿ ಇಂದ್ರಜಿತುವೂ 'ಈ ಕಪಿಗೆ ಬುದ್ಧಿಕಲಿಸಲು ಬೆಂಕಿಯೇ ಬೇಕು'-ಎಂಬ ಅನುಭವವನ್ನೂ ಗಳಿಸಿಕೊಳ್ಳುತ್ತಾನೆ. ಇದರಿಂದಲೇ ಇಂದ್ರಜಿತುವು, ಮುಂದೆ ಮಾರುತಿಗೆ ಯಾವ ಶಿಕ್ಷೆ? ಎಂಬ ಪ್ರಶ್ನೆ ಬಂದಾಗ,

ಹೋರಬೇಡದರೊಡನೆ ಶಸ್ತ್ರದ
ಗಾರುಡವು ಗರ್ವಿಸದು, ಬೆದರದು,
ಭೂರಿಬಾಧೆಗೆ ಬಾಲವನು ಸುಡುವುದೆ ಸುನೀತಿ ಯೆನೆ-

(ತೊ. ರಾ. V ೭-೪೪)

ಎಂದು ಸೂಚಿಸುತ್ತಾನೆ. ಹನುಮನು ಕಲಿಸಿದ ಪಾಠದ ಫಲವಿದು. (ಇದಕ್ಕೆ ಸಂವಾದಿಯಾಗಿ-ಪಾಶ್ಚಾತ್ಯ ವೃತ್ತಾಂತ-೧ರಲ್ಲಿನ ಇಂದ್ರಜಿತುವು ಹನುಮಂತನ ಬಾಲವನ್ನು ಕೆಣಕಿದ ವೃತ್ತಾಂತದ ಉಲ್ಲೇಖವಿದೆ-ಡಾ. ಬುಲ್ಕೆ-ರಾಮಕಥಾ-ಪು. ೫೨೦)

7. ವಾ. ರಾ. V ೫೨-೧.

ವಧಂ ನಕುರ್ವಂತಿ ಪರಾವರಜ್ಞಾ
ದೂತಸ್ಯ ಸಂತೋ ವಸುಧಾಧಿಪೇಂದ್ರಾಃ[1]
–ಎಂದು ದೂತವಧೆಯನ್ನು ಅಲ್ಲಗಳೆದಾಗ, ದಶಗ್ರೀವನು, ಸಮ್ಮತಿಸಿ,
ಕಪೀನಾಂ ಕಿಲ ಲಾಂಗೂಲಂ ಇಷ್ಟಂ ಭವತಿ ಭೂಷಣಮ್ ।
ತದಸ್ಯ ದೀಪ್ಯತಾಂ ಶೀಘ್ರಂ ತೇನ ದಗ್ಧೇನ ಗಚ್ಛತು[2] ॥

ಎಂದು ಹನುಮಂತನ ಬಾಲವನ್ನು ಸುಡುವುದಕ್ಕೆ ನೇಮಿಸಿದ್ದೂ–ಆದಿಕಾವ್ಯದ ಕಥೆಯಾಗಿದೆ.

ತೊರವೆ ರಾಮಾಯಣವು ಇಷ್ಟನ್ನೂ ಹೀಗೆಯೇ ಹೇಳುವುದಿಲ್ಲ. ದೂತನಾಗಿ ಬಂದ ಹನುಮನು ಅಶೋಕವನ ಧ್ವಂಸಮಾಡಲು ಕಾರಣವೇನು ?–ಎಂದು ಪ್ರಹಸ್ತನು ಹನುಮಂತನೊಡನೆ ವಿಚಾರಿಸುತ್ತಾನೆ. ಆಗ ಮಾರುತಿಯು ಕಿವಿ ಮುಚ್ಚಿಕೊಳ್ಳುತ್ತಾ 'ನಾನೇನೂ ಅಂತಹ ತಪ್ಪನ್ನು ಮಾಡಲಿಲ್ಲವಪ್ಪ–ರಾಮ, ರಾಮ–' ಎಂದು

ನಾವರಿಯೆವು ಈ ಹುಲುಬಾಲವೆಸಗಿದಕೆಲಸವ್ವೆಸೆ

ಎಲ್ಲಾತಪ್ಪನ್ನೂ ತನ್ನ ಬಾಲದ ಮೇಲೆ ಹೊರಿಸುತ್ತಾನೆ.[3] ಇದನ್ನು ಕೇಳಿ ಇಂದ್ರಜಿತುವು 'ಹಾಗಾದರೆ, ಈ ಕಪಿಯೊಡನೆ ವ್ಯವಹಾರ ಸಲ್ಲದು ; ಇದರ ಬಾಲದೊಡನೆಯೇ ವ್ಯವಹರಿಸಬೇಕಾಯಿತು. ಆ ಬಾಲಕ್ಕೆ ಬೆಂಕಿ ಕೊಡುವುದೆ ಲೇಸು'[4] ಎಂದು ಸೂಚಿಸಿದಾಗ ರಾವಣನೂ ಸಮ್ಮತಿಸುತ್ತಾನೆ.[5] ಈ ಮೊದಲೇ ಹನುಮಂತನ ಕಿವಿಯನ್ನು ಕತ್ತರಿಸಲು ಅಪ್ಪಣೆ ಕೊಟ್ಟಿದ್ದರೂ 'ಕಪಿವರನ ಕಿವಿಗೊಯ್ದು ಖಡ್ಗ ವಿಕ್ಕಡಿಯಾದುದಲ್ಲದೆ, ಅನಿಲಜನ ರೋಮಚಯ ಹರಿದುದಿಲ್ಲ'[6] ಮುಂದೆ ಹನುಮಂತನ ಬಾಲಕ್ಕೆ ಕಿಚ್ಚಿಕ್ಕುವ ಮಹೋದ್ಯಮವು ಮೊದಲಾಗುತ್ತದೆ. ತನ್ನ ಬಾಲಕ್ಕೆ ಬಂದ ಭಾಗ್ಯವನ್ನು ನೆನೆದು ಹನುಮನು ನಗುತ್ತಾನೆ.[7]

**ಹನುಮಂತನ ಬಾಲ ಬೆಳೆದಂತೆ—**

ಕುಮಾರ ವಾಲ್ಮೀಕಿ ವರ್ಣಿಸಿದ–'ಹನುಮಂತನ ಬಾಲವು' ಬೆಳೆಯುತ್ತಾ ಕನ್ನಡದಲ್ಲಿ ಹನುಮಂತನ ಬಾಲ ದಂತೆ........ಎಂಬ ನಾಣ್ಣುಡಿಗೆ ಕಾರಣವಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ

ಸಂವೇಷ್ಟ್ಯಮಾನೇ ಲಾಂಗೂಲೇ ವ್ಯವರ್ಧತ ಮಹಾಕಪಿಃ[8]

ಕಾಡಿನಲ್ಲಿ ಒಣಸೌದೆಗಳಿಗೆ ತಗುಲಿದ ಬೆಂಕಿಯಂತೆ, ಹನುಮಂತನು ಕ್ಷಣಮಾತ್ರದಲ್ಲಿ ಉಬ್ಬಿ ಬೆಳೆಯುತಿದ್ದನು. ಬಟ್ಟೆಯನ್ನು ಸುತ್ತಿದ್ದ ಹನುಮಂತನ ಬಾಲಕ್ಕೆ ರಾಕ್ಷಸರು ಎಣ್ಣೆಯನ್ನು ಸುರಿದು ಬೆಂಕಿಯನ್ನು ಹತ್ತಿಸಿದರು–ಎಂಬ ವರ್ಣನೆಯಿದೆ. ಅಲ್ಲೆಲ್ಲೂ ಮಾರುತಿಯ ಬಾಲವು ಮಾತ್ರ ಅನಂತವಾಗಿ ಬೆಳೆದ ಸೂಚನೆಯೂ ದೊರೆಯುವುದಿಲ್ಲ.

ತೊರವೆ ರಾಮಾಯಣದಲ್ಲಿ ಹನುಮಂತನ ಬಾಲಬೆಳೆದ, ಅದನ್ನು ಬಟ್ಟೆಯಿಂದ ಸುತ್ತಿ ಎಣ್ಣೆ ಸುರಿದು ಉರಿಸಲೆತ್ನಿಸಿದ ವರ್ಣನೆಗಳೆಲ್ಲವೂ 'ಹನುಮಂತನ ಬಾಲ' ದಂತೆಯೇ ಸುದೀರ್ಘವಾಗಿದೆ. ಎಲ್ಲ ಎಣ್ಣೆಯ ಕಣಜಗಳೂ ಬರಿದಾಗುತ್ತವೆ, ಅರಮನೆಯ, ಅಧಿಕಾರೀನಿಲಯಗಳ ಪೆಟ್ಟಿಗೆಗಳಲ್ಲಿದ್ದ ಬಟ್ಟೆಗಳೆಲ್ಲ ತೀರುತ್ತವೆ–ಇಷ್ಟಾದರೂ 'ಇನ್ನೂ

1. ವಾ. ರಾ. V ೫೨-೫.
2. ಇದೇ. ೫೩-೩.
3. ತೊ. ರಾ. V ೭-೪೨.
4. ತೊ.ರಾ. V ೭-೪೩.
5. ಇದೇ. ೭-೪೪.
6. ಇದೇ ಪ್ರಕರಣದ ಇನ್ನೊಂದು ರೂಪ ಆನಂದ ರಾಮಾಯಣದಲ್ಲಿದೆ. ಅಲ್ಲಿ ಹನುಮನ ಬಾಲವನ್ನು ಕಡಿಯಲು ಬಾಚಿದ ಖಡ್ಗವು 'ಬಭೂವುಃ ಶತಚೂರ್ಣಾನಿ ತಸ್ಯರೋಮ್ಣೋಪಿನಮ್ಮಥಾ' (ಆ. ರಾ. I ೯-೧೭೯ ಇದರ ಸ್ಪಷ್ಟ ಪ್ರಭಾವ ತೊ. ರಾಮಾಯಣದ ಮೇಲಿದೆ.)
7. ತೊ. ರಾ. V ೮-೨೩.
8. ವಾ. ರಾ. V ೫೩-೭.

ಬಿಲ್ಲ ಪ್ರಮಾಣದಷ್ಟು ಅಡಗದಿದೆ'–ಎಂಬಂತೆ ಕಪಿಯ ಬಾಲವು ಮತ್ತೂ ಹೊರಗುಳಿಯುತ್ತದೆ.[1] ಕೊನೆಗೆ, ಕನಲಿದ ರಾವಣನು ಕಾಳ್ಗಿಡೆಯದೆ, 'ಊರನು ಸುಲಿಯಿರಿ' ಎಂದು ಗರ್ಜಿಸುತ್ತಾನೆ.[2] ಇದನ್ನು ಕೇಳಿ ಹನುಮಂತನು,

'ರಾವಣನು ಖೂಳನಾದರೂ, ನಾನು ಅತಿಖೂಳನಾಗಿ ವರ್ತಿಸುವುದು ಉಚಿತವಲ್ಲ; ಊರ ಹೆಂಗಳೆಯರ ಮಾನ ಕಳೆಯುವುದು ಲೇಸಲ್ಲ' ಎಂದು ಚಿಂತಿಸಿ, 'ಇನ್ನು ಬೆಳೆಯದಿರು ಬಾಲವೇ' ಎಂದು ತನ್ನ ಬಾಲಕ್ಕೆ ಸೂಚಿಸಿದೊಡನೆಯೇ ಅದರ ಬೆಳವಣಿಗೆ ನಿಲ್ಲುತ್ತದೆ.[3]

**ಇನ್ನು ಮುಂದಿನ ತೊರವೆ ರಾಮಾಯಣದ ಕಥಾ ವೈಶಿಷ್ಟ್ಯಗಳಲ್ಲಿ ಆನಂದ ರಾಮಾಯಣದ ಪ್ರಭಾವವನ್ನು ಗುರುತಿಸಬಹುದಾದ ಕೆಲವು ಮುಖ್ಯ ಸಂದರ್ಭಗಳು. (ಈ ಪ್ರಕರಣಗಳು ವಾಲ್ಮೀಕಿ ರಾಮಾಯಣದಲ್ಲಿ ದೊರೆಯುವುದಿಲ್ಲ)**

| | ಕಥಾ ವೈಶಿಷ್ಟ್ಯಗಳು | ಆನಂದ ರಾಮಾಯಣ | | | ತೊರವೆ ರಾಮಾಯಣ | | |
|---|---|---|---|---|---|---|---|
| | | ಕಾಂ. | ಅ. | ಶ್ಲೋ. | ಕಾಂ. | ಸಂ. | ಪ. |
| ೧. | ಹನುಮಂತನು ರಾವಣನು ಗಡ್ಡ ಸುಟ್ಟ ಕಥೆ[4] | 1. | 9. | 196–199 | 5. | 8. | 34–35 |
| ೨. | ಯುದ್ಧದ ಮೊದಲೇ ವಿಭೀಷಣ ಪಟ್ಟಾಭಿಷೇಕ | ರಾಜ್ಯವನ್ನು ವಿಭೀಷಣನು ರಾಮನಲ್ಲಿ ನ್ಯಾಸನಿರಿಸುವನು. 1. 10. 43 | | | 6. 3. 38-41 | | |
| ೩. | ಸೇತುಬಂಧದ ಸಂದರ್ಭದಲ್ಲಿ ನಳನ ಗರ್ವಭಂಗ | 1. 10. 196-200 | | | 6. 5. 9 (ಸೂಚನೆಮಾತ್ರ) | | |
| ೪. | ರಾವಣನ ಕಿರೀಟವನ್ನು ಕಿತ್ತ ಘಟನೆ.[5] | ರಾಮು ಕಿತ್ತಂತೆ ಕಥೆ 1. 10. 244-246 | | | ಸುಗ್ರೀವನು ಕಿತ್ತಂತೆ ಹೇಳಿಕೆ 6. 9. 18 | | |

---

1. ತೊ. ರಾ. V ೮-೧೪.

2. ಇದೇ. ೮-೨೧.

ಆನಂದ ರಾಮಾಯಣದಲ್ಲಿ–ರಾವಣನು, ಮಂಡೋದರಿ ಮತ್ತು ಸೀತೆಯರ ಸೀರೆಯನ್ನು ತನ್ನಿರಿ ಎಂದು ಆಜ್ಞಾಪಿಸಿದೊಡನೆಯೆ, ಮಾರುತಿಯು–ಪುಚ್ಛಪೂರ್ತಿಂ ಪ್ರದರ್ಶಯನ್–ಎಂದಿದೆ–ಅ. ರಾ. I ೯–೧೮೨ರಿಂದ ೧೯೫.

ಬತ್ತಲೇಶ್ವರನೂ 'ಮಂಡೋದರಿಯವುಟ್ವಲಿಗೆ ಪರಿವುದನು ಕಂಡು ಅಣುವ ನಾಚಿ, ಬಾಲವ ನಿಲಿಸಿ ನಗುತಿರ್ದ' ಎಂದಿದ್ದಾನೆ (ಕೌ. ರಾ. ೧೨–೧೧)

3. ತೊ. ರಾ. V ೮-೨೬.

ಮರಾಠಿ 'ಭಾವಾರ್ಥರಾಮಾಯಣ'ದಲ್ಲೂ ( V–೩೩) ಹನುಮಂತನ ಬಾಲವು ಹೀಗೆ ಬೆಳೆದ ಕಥೆ ಇದೆ-ಡಾ. ಬುಲ್ಕೆ–ರಾಮುಕಥಾ. ಪು. ೫೩೦.

4. ಕುಮಾರ ವಾಲ್ಮೀಕಿಯ ಮೇಲೆ ಈ ಪ್ರಕರಣದ ವರ್ಣನೆಯಲ್ಲಿ ಆನಂದ ರಾಮಾಯಣದೊಂದಿಗೆ ನಾಗಚಂದ್ರನ ರಾಮಚಂದ್ರ ಚರಿತಪುರಾಣದ ಪ್ರಭಾವವೂ ಆದಂತಿದೆ.

......ಪುಷ್ಪಕವಿಮಾನಮನೇರಿ ದಶಾನನಂ ವಧೂ
ಜನಸಹಿತಂ ಕೃಶಾನುಗೆ ಭಯಾಕುಲನಪ್ಪುದು......

ರಾ. ಚ. ಪು. ೧೧–೧೫೬ (ಪಂಪರಾಮಾಯಣ)

......ಕಳಕಳದಕಳವಳವ
ಕೇಳಿ ಬಳಿಕಸುರೇಂದ್ರನಬಲಾ
ಜಾಲವನು ಪುಷ್ಪಕದೊಳಿರಿಸಿ...... ತೊ. ರಾ. V ೮-೩೭.

ಬತ್ತಲೇಶ್ವರನು ತೊರವೆ ರಾಮಾಯಣದ ಪ್ರಭಾವಕ್ಕೊಳಗಾಗಿ ಮೇಲಿನ ಪ್ರಕರಣಗಳಲ್ಲಿ ೧ ಮತ್ತು ೨ನ್ನು ವರ್ಣಿಸಿದ್ದಾನೆ.

೧. ಕೌ. ರಾ. ೧೨-೨೮.

೨. ಇದೇ. ೧೭–೩೭.

| ಕಥಾ ವೈಶಿಷ್ಟ್ಯಗಳು | ಆನಂದರಾಮಾಯಣ | | | ತೊರವೆ ರಾಮಾಯಣ | | |
|---|---|---|---|---|---|---|
| | ಕಾಂಡ. | ಅಧ್ಯಾಯ | ಶ್ಲೋಕ | ಕಾಂ. | ಸಂ. | ಪದ್ಯ. |
| ೫. ಅಂಗದನು ರಾವಣಾಸ್ಥಾನದಲ್ಲಿ ಲಾಂಗೂಲಾಸನಸ್ಥನಾದುದು[1] | ರಾವಣಂ ಬೋಧಯಾಮಾಸ ಸಭಾಯಾಂ ಲಾಂಗುಲಾಸನೇ 1 | 10 | 221 | 6 | 10 | 31 |
| ೬. ಕುಂಭಕರ್ಣೋಪದೇಶ | 1 | 11 | 142-146 149-153 | 6 | 26 | 66-69 |
| ೭. ನಿದ್ರಾಹಾರವರ್ಜಿತಲಕ್ಷ್ಮಣ | 1 | 11 | 176 | 6 | 45 | 5-6 |
| ೮. ರಾವಣನು ಯಜ್ಞ ನಡೆಸುವುದು | 1 | 11 | 229 | 6 | 48 | 5-18 |
| ೯. ರಾವಣನ ಮರ್ಮಸ್ಥಾನ | 1 | 11 | 228 | 6 | 51 | 61 |
| ೧೦. ರಾವಣನಿಗೆ ಮುಕ್ತಿ[2] | 1 | 11 | 244 | 6 | 51 | 63 |
| ೧೧. ಹನುಮಂತನಿಗೆ ಸಹಭೋಜನ[3] | 1 | 12 | 152-155 | 6 | 55 | 47-49 |

**ಸೇತುಬಂಧ**

ಪ್ರಚಲಿತ ವಾಲ್ಮೀಕಿ ರಾಮಾಯಣದಲ್ಲಿ ದೊರೆಯುವ ಸೇತುಬಂಧ ವಿಷಯಕವಾದ ವೃತ್ತಾಂತಗಳು ಪ್ರಕ್ಷಿಪ್ತಗಳೆಂದು ಅನುಮಾನಿಸಬಹುದಾಗಿದೆ. ಈ ಪ್ರಕರಣದಲ್ಲಿ ಅಂತರ್ಗತವಾಗಿರುವ ಅಲೌಕಿಕ ತತ್ತ್ವಗಳ ಬಾಹುಲ್ಯ ಮತ್ತು ರಾಮಾಯಣದ ಮೂರು ಪಾಠಗಳಲ್ಲಿ ಈ ಕಥಾಸನ್ನಿವೇಶದಲ್ಲಿ ಕಾಣುವ ವಿಭಿನ್ನತೆಗಳು ಈ ಅನುಮಾನಕ್ಕೆ ಕಾರಣವಾಗಿದೆ.[4]

ನಲನ ನೇತೃತ್ವದಲ್ಲಿ ಮರ ಮತ್ತು ಕಲ್ಲುಗಳ ಮೂಲಕ ಕಪಿಗಳಿಂದ ಸೇತುವೆ ನಿರ್ಮಾಣವಾಗಿ ರಾಮನು ವಾನರ ಸೇನೆಯೊಂದಿಗೆ ಸಮುದ್ರತರಣಮಾಡಿದ ಪ್ರಸಂಗ ಮಾತ್ರ ಮೂಲ ವಾಲ್ಮೀಕಿ ರಾಮಾಯಣದಲ್ಲಿದ್ದಿರಬೇಕು. ಇಂದು ನಮಗೆ ದೊರೆಯುವ ಕಾವ್ಯದಲ್ಲಿನ ಈ ಕೆಲವು ಘಟನೆಗಳು ಮೂಲದಲ್ಲಿದ್ದಿರಲಾರದು :

---

1. ತೊ. ರಾ. ದ ಅಂಗದ ದೌತ್ಯದ ಸಂದರ್ಭದಲ್ಲಿ ಬರುವ 'ಪ್ರಹಸ್ತ–ಅಂಗದ ಸಂವಾದ'ವು ವಿಶಿಷ್ಟ ಸುಂದರವಾಗಿದೆ. ಯಕ್ಷಗಾನ "ಅಂಗದ ಸಂಧಾನ"ವು ಇದರಿಂದ ಕಳೆಗೊಂಡಿದೆ.
   ಮಹಾನಾಟಕ (ಅಂಕ ೮)ದಲ್ಲಿ ಮೊತ್ತಮೊದಲಾಗಿ ಅಂಗದ-ರಾವಣ ಸಂವಾದವು ವಿಸ್ತಾರವಾಗಿ ಬಂದಿದೆ.
2. ತೊ. ರಾ. ದಲ್ಲಿ ರಾಮನು ರಾವಣನಿಗೆ ತನ್ನ ವಿಶ್ವರೂಪವನ್ನೂ ತೋರುತ್ತಾನೆ. VI ೫೧, ೪೪-೫೨.
3. ತೊ. ರಾ. V ೯-೩೦ ಮತ್ತು VI ೫೫-೫೪, ಹನುಮನಿಗೆ "ಸಹಭೋಜನದೊಂದಿಗೆ" ಭಾವೀ ಬ್ರಹ್ಮಪದವಿಯೂ ಕೊಡಲ್ಪಟ್ಟಿದೆ.
   (ಅ) ಬೊಮ್ಮನ ಪರಮ ಪದವಿಯನಿತ್ತು ನೃಪ ಮನದಣಿಯೆ ಮನ್ನಿಸಿದ.
   (ಆ) ಆ ವಿರಿಂಚಿಯ ವೈಭವವು ಕಲ್ಪಾವಸಾನಕೆ ಸಲಲಿ.
4. ಈ ಕೆಳಗಿನ ರಾಮಕಥೆಗಳಲ್ಲಿ ಸೇತುನಿರ್ಮಾಣದ ಉಲ್ಲೇಖವೇ ದೊರೆಯುವುದಿಲ್ಲ :
   ೧. ವಿಮಲಸೂರಿಯ "ಪಉಮ ಚರಿಯ" ೨. ನಾಗಚಂದ್ರನ ರಾಮಚಂದ್ರ ಚರಿತಪುರಾಣ
   ಇವೆರಡರಲ್ಲಿ "ಸಮುದ್ರವೆಸರ ವಿದ್ಯಾಧರನಂ ನಳಂ ಕಟ್ಟಿ ರಾಘವಂಗೊಪ್ಪಿಸುತ್ತಾನೆ" ಪ. ರಾ. ೧೧, ೧೨.
   ಪೆರ್ವಡೆ ಕಡಲಂ ನಭೋಗಮನ ವಿದ್ಯೆಯೇ ಸೇತುವೆನಲ್ಕೆ ದಾಟುತ್ತಾರೆ.
   ೩. ಹೇಮಚಂದ್ರ ಕೃತ ಜೈನ ರಾಮಾಯಣ. ೪. ಗುಣಭದ್ರನ "ಉತ್ತರಪುರಾಣ"
   ಇವೆರಡರಲ್ಲಿ ರಾಮಲಕ್ಷ್ಮಣರು ವಿಮಾನ ಮೂಲಕ ಲಂಕೆಯನ್ನು ಸೇರುತ್ತಾರೆ.
   ೫. ಭಾಸನ "ಅಭಿಷೇಕನಾಟಕ" (ಅಂಕ ೪) ದಲ್ಲಿ ವರುಣನು ನೀರನ್ನು ಇಕ್ಕಡೆಗಳಿಗೆ ಸರಿಸಿ, ರಾಮನು ಸೇನಾಸಹಿತನಾಗಿ ಸಮುದ್ರ ದಾಟುವಂತೆ ಮಾಡುತ್ತಾನೆ.
   ೬. ಪದ್ಮಪುರಾಣ (ಪಾತಾಲ ಖಂಡ-ಅಧ್ಯಾಯ ೧೧೨)ದಲ್ಲಿ ರಾಮನ ಪ್ರಾರ್ಥನೆಗೆ ಪ್ರತ್ಯಕ್ಷನಾದ ಶಿವನಿಂದ ಕೊಡಲ್ಪಟ್ಟ ಬಿಲ್ಲನ್ನು ಸಮುದ್ರದ ಮೇಲೆ ಅಡ್ಡವಾಗಿರಿಸಿ, ಅದನ್ನೇರಿ ಎಲ್ಲರೂ ಸಮುದ್ರ ದಾಟುತ್ತಾರೆ.

೧. ರಾಮನಿಂದ ಮೂರು ದಿನಗಳಕಾಲ ಪ್ರಾಯೋಪವೇಶ.[1]
೨. ಸಮುದ್ರವು ಪ್ರಸನ್ನವಾಗದಿರಲು ರಾಮನು ಕ್ರುದ್ಧನಾಗುವುದು.[2]
೩. ರಾಮನು ಬ್ರಹ್ಮಾಸ್ತ್ರವನ್ನು ಹೆದೆಗೇರಿಸಿದ್ದು ; ಸಮುದ್ರಶರಣಾಗತಿ.[3]
೪. ರಾಮಬಾಣದಿಂದ ದ್ರುಮಕುಲ್ಯನಾಶ[4]

ಕುಮಾರ ವಾಲ್ಮೀಕಿಯು ಸೇತುಬಂಧ ಪ್ರಕರಣದಲ್ಲಿ ಮೇಲಿನ ನಾಲ್ಕು ಅಂಶಗಳನ್ನೂ ಹೇಳಿರುತ್ತಾನೆ. ದ್ರುಮ ಕುಲ್ಯನಾಶ ಸಂಬಂಧವಾಗಿ, 'ರಾಮನು ತನ್ನ ಬಾಣವನ್ನು ಸಮುದ್ರರಾಜನ ವೈರಿಗಳಿದ್ದೆಡೆಗೆ ಎಸೆಯಲು ೮೭ ಕೋಟಿ ನಿಶಾಚರರು ನಿಮಿಷದಲ್ಲಿ ಅಳಿದು, ಆ ದ್ವೀಪವು ಮುಂದೆ ಮರುವನವಾಯಿತು'[5]—ಎನ್ನುತ್ತಾನೆ.[6]

## ಸೇತು ಬಂಧಕ್ಕೊಂದು ಆತಂಕ

ಈ ಪ್ರಕರಣವು ವಾಲ್ಮೀಕಿಯ ಕೃತಿಯಲ್ಲಿಲ್ಲ. ಕಪಿವೀರರು ಕಡಲಲ್ಲಿ ತಂದಿಳುಹಿದ ಪರ್ವತಗಳನ್ನೆಲ್ಲ ತಿಮಿ, ತಿಮಿಂಗಿಲ, ಘನತಿಮಿಂಗಿಲ, ಮಕರಗಳು ಒಂದನ್ನೊಂದು ತಿಂದು ನುಂಗುತ್ತಾ ಇರಲು, ಈ ಪೀಡೆಯನ್ನು ಕಂಡು ರಾಮನು ಬೆರಗಾಗುತ್ತಾನೆ.[7] ನಳನ ಹಸ್ತಸ್ಪರ್ಶದಿಂದ ಈ ಆತಂಕ ನಿವಾರಣೆಯಾದ ಸೂಚನೆಯನ್ನು ಕವಿಯೊದಗಿಸು ತ್ತಾನೆ.[8] ಅಧ್ಯಾತ್ಮ, ಆನಂದ ರಾಮಾಯಣಗಳಲ್ಲೂ ಸಿಗದ (ಆ. ರಾ. ದಲ್ಲಿ—ನಳನ ಗರ್ವಭಂಗದ ಪ್ರಕರಣವೇನೋ ಇದೆ) ಈ ಕಥೆಗೆ ಜನಪ್ರಚುರವಾಗಿದ್ದ ಯಾವುದೋ ಆಖ್ಯಾನವು ಪ್ರೇರಕವಾಗಿರಬೇಕು.[9]

---

1-2. ವಾ. ರಾ. VI ಸರ್ಗ ೨೧.
3. ಇದೇ. VI ೨೨.
4. ಇದೇ. VI ೨೨–೩೫, ೩೬.
5. ತೊ. ರಾ. VI ೪–೬೨.

ವಾ. ರಾ. ದ ಪಶ್ಚಿಮೋತ್ತರೀಯ ಪಾಠ (V ಸರ್ಗ ೯೯)ದಲ್ಲಿ ಸಮುದ್ರತರಣದ ನಂತರ ಸಮುದ್ರರಾಜನು ರಾಮ ಲಕ್ಷ್ಮಣರಿಗೆ ಕವಚ ಮತ್ತು ಅಸ್ತ್ರಗಳನ್ನು ನೀಡಿದ ವಿಚಾರವಿದೆ. ದಾಕ್ಷಿಣಾತ್ಯ ಪಾಠವನ್ನು ಅನುಸರಿಸಿದ ಕುಮಾರ ವಾಲ್ಮೀಕಿಯು ಇದನ್ನು ಹೇಳಿಲ್ಲ.

6. ತೊ. ರಾ. ವು ಈ ಪ್ರಕರಣದಲ್ಲಿ ಹೇಳುವ ೮೭ ಕೋಟಿ ಸಂಖ್ಯೆಯ ವಿಚಾರವು ಈ ಕೃತಿಗೇ ವಿಶಿಷ್ಟವಾದುದು. ಬತ್ತಲೇಶ್ವರನು ಅಲ್ಲಿನ ಅಖಿಳದಸ್ಯುಗಳು ರಾಮಬಾಣದಿಂದ ಅಳಿದರೆಂದು ಹೇಳುತ್ತಾನೆ. (ಕೌ. ರಾ. ೧೫–೬೭)

(ಅ) ಮಹಾಭಾರತದ 'ರಾಮೋಪಾಖ್ಯಾನ'ದಲ್ಲಿ—ರಾಮನು ಸಮುದ್ರನಿಗೆ ಬಾಣಪ್ರಯೋಗ ಮಾಡುವುದಿಲ್ಲ. ಸ್ವಪ್ನ ದಲ್ಲಿ ದರ್ಶನ ನೀಡಿ, ಸೇತು ರಚನೆಗೆ ನೆರವಾಗುವ ಭರವಸೆಯೀಯುತ್ತಾನೆ.

ಸಾಗರಸ್ತು ತತಃ ಸ್ವಪ್ನೇ ದರ್ಶಯಾಮಾಸ ರಾಘವಮ್.........

(ಮಹಾಭಾರತ–ವನಪರ್ವ, ೨೮೩-೩೪ ರಿಂದ ೪೨)

(ಆ) ಸ್ಕಂದ ಪುರಾಣದ 'ಸೇತುಮಾಹಾತ್ಮ್ಯ'ದಲ್ಲಿ 'ರಾಮೋಪಾಖ್ಯಾನ'ದ ಅನುಸರಣೆ ಇದೆ.

(ಇ) ಅದ್ಭುತ ರಾಮಾಯಣದಲ್ಲಿ ಇದೇ ಪ್ರಕರಣದಲ್ಲಿ ಲಕ್ಷ್ಮಣನ ಕ್ರೋಧದ ಪ್ರಸ್ತಾವವಿದೆ. (ಅದ್ಭುತ ರಾಮಾಯಣ —ಸರ್ಗ ೧೬)

7. ತೊ. ರಾ. VI ೭–೮.
8. ಇದೇ. VI ೭–೯
9. ಸೇತು ಬಂಧ (೭–೮), ಬಾಲರಾಮಾಯಣ (೮–೫೩). ರಂಗನಾಥ ರಾಮಾಯಣ (೬–೨೫) ಮರಾಠಿಯ 'ರಾಮವಿಜಯ'—ಈ ಕೃತಿಗಳಲ್ಲಿ ಸೇತುವಿನ ಮೇಲೆ ಜಲಚರಗಳ ಆಕ್ರಮಣದ ಉಲ್ಲೇಖವಿದೆ—

ಬುಲ್ಕೆ—ರಾಮಕಥಾ, ಪು. ೫೫೧.

'ರಾಮಚರಿತ ಮಾನಸ'ದಲ್ಲಿ (೬–೪) ರಾಮಭಕ್ತ ಜಲಚರಗಳ ವರ್ಣನೆಯಿದೆ.

ಬತ್ತಲೇಶ್ವರನು ತನ್ನ ರಾಮಾಯಣದಲ್ಲಿ—ತೊ. ರಾ. ವನ್ನು ಅನುಸರಿಸಿ, ಜಲಚರಗಳಿಂದೊದಗಿದ ಆತಂಕವನ್ನು ಸೂಚಿ ಸಿದ್ದಾನೆ.

## ಮಾಯಾ-ರಾಮಶಿರ ವೃತ್ತಾಂತ

| ವಾಲ್ಮೀಕಿಯ ರಾಮಾಯಣ | ಕುಮಾರ ವಾಲ್ಮೀಕಿಯ ರಾಮಾಯಣ |
| --- | --- |
| ೧. ಶಾರ್ದೂಲನು ವಾನರ ಸೇನಾಬಲವನ್ನು ರಾವಣನಿಗೆ ತಿಳಿಸಿದ ವೃತ್ತಾಂತವಾದೊಡನೆ, ವಿದ್ಯುಜ್ಜಿಹ್ವನು ಮಾಯಿಕವಾದ ರಾಮಶಿರಸ್ಸನ್ನು ನಿರ್ಮಿಸಿ ಸೀತೆಯನ್ನು ವಂಚಿಸಲು ಪ್ರಯತ್ನಿಸುತ್ತಾನೆ.[1] | ಮಾಯಾಶಿರ ವೃತ್ತಾಂತವು ಅಂಗದ-ದೌತ್ಯದ ನಂತರ ಬರುತ್ತದೆ.[2] |
| ೨. ಸರಮೆಯು ಸಾಹಸದಿಂದ ರಾಮ ವೃತ್ತಾಂತವನ್ನು ಸಂಗ್ರಹಿಸಿ, ಅದನ್ನು ಸೀತೆಗೆ ತಿಳಿಸಿ ಸಂತೈಸುತ್ತಾಳೆ.[3] | ಅಶೋಕವನದಲ್ಲಿ, ಸರಮೆ, ತ್ರಿಜಟೆಯರು, ಆ ಶಿರವು ಮಾಯಾಕೃತಿಯಿರಬೇಕೆಂದು ನಿರ್ಣಯಿಸಿ, 'ಬಿಸುಡು, ಬಿಸುಡೆಲೆ, ಶಿರವಿದು ವಸುಮತೀಶನದಲ್ಲ'—ಎಂದು ಅದನ್ನೆಸೆಯುವಂತೆಸಗುತ್ತಾರೆ.[4] |
| ೩. ರಾವಣನು ಅಶೋಕವನದಿಂದ ನಿರ್ಗಮಿಸಿದೊಡನೆ ರಾಮಶಿರಸ್ಸು, ಧನುಸ್ಸು-ಎಲ್ಲವೂ ಅದೃಶ್ಯವಾಗುತ್ತವೆ[5] | ಈ ವಿಚಾರದ ಪ್ರತ್ಯೇಕ ಉಲ್ಲೇಖವಿಲ್ಲ.[6] |

---

ವಲಿಮುಖನು ಪರಿದೊಂದು ಬಾಲವ
ಲೆಳೆದು ಕಿತ್ತನು ಹೊತ್ತು ತಂದನು
ಜಲಧಿಮಧ್ಯದಲಿಕ್ಕಲಗ್ಗದ ಮಾನು ನುಂಗಿದುದು (ಕೌ. ರಾ. ೧೦-೬)

'ಅಳಿಲ ಸೇವೆ ಮಳಲ ಭಕ್ತಿ' ಎಂಬ ಜನಪ್ರಿಯ ಸಂಗತಿ (ರಾಮನು ಮೆಚ್ಚುಗೆ ಸೂಚಿಸುತ್ತಾ ಅಳಿಲಿನ ಬೆನ್ನನ್ನು ಕೈಯ ಬೆರಳುಗಳಿಂದ ಸವರಲು-ಅದರ ಬೆನ್ನ ಮೇಲೆ ೩ ಬಿಳಿ ಗೆರೆಗಳು ಮೂಡಿದವು (ಎಂಬ ನಂಬಿಕೆ)ಯ ಉಲ್ಲೇಖ ತೊ. ರಾ. ದಲ್ಲಿ ದೊರೆಯುದಿಲ್ಲ. ವಾ. ರಾ., ಅ. ರಾ., ಅ. ರಾ. ಗಳಲ್ಲೂ ಈ ವಿಚಾರವಿಲ್ಲ. ೯ನೇ ಶತಮಾನದ ಆಳ್ವಾರ ವಿಪ್ರ-ನಾರಾಯಣರ ತಮಿಳು ಕೃತಿಯಲ್ಲಿ ಇದರ ಪ್ರಪ್ರಥಮ ಉಲ್ಲೇಖವು ಸಿಗುತ್ತದೆಂದೂ ನಂತರದ ರಂಗನಾಥ ರಾ. ಕೃತಿವಾಸ, ಬಲದಾಸ ರಾಮಾಯಣಗಳಲ್ಲಿ ಈ ಕಥೆ ಸಿಗುತ್ತದೆಂದೂ ಡಾ. ಬುಲ್ಕೆ-ರಾಮಕಥಾ, ಪು. ೫೫೦ರಲ್ಲಿದೆ.

1. ವಾ. ರಾ. VI ಸರ್ಗ ೩೧. 2. ತೊ. ರಾ. VI ಸಂಧಿ ೧೨.

ಮಹಾಭಾರತದ "ರಾಮೋಪಾಖ್ಯಾನ"ದಲ್ಲಿ ಈ 'ಮಾಯಾರಾಮಶಿರ ವೃತ್ತಾಂತ"ವಿಲ್ಲ. ವಾ. ರಾ. ದಲ್ಲಿ ಮುಂದೆ ಬರುವ (ಸರ್ಗ, ೮೧) ಮಾಯಾಸೀತೆಯ ವಧಾ ಪ್ರಕರಣದ ಅನುಕರಣವಂತಿದೆ-ಇದು.

ವಾ. ರಾ. ದಲ್ಲಿ "ಮಾಯಾ-ರಾಮಶಿರ ಪ್ರಕರಣ"ವು ಪ್ರಕ್ಷಿಪ್ತವಾಗಿರಬಹುದೇ?

ಕಂಬರಾಮಾಯಣದಲ್ಲಿ (ಸಂಗ್ರಹ-ಪು. ೯೦-೯೧) ಮರುತ್ತನೆಂಬ ರಕ್ಕಸನು 'ಜನಕನ ವೇಷ'ಧರಿಸಿ ಸೀತೆಯನ್ನು ವಂಚಿಸುವ ಪ್ರಯತ್ನವಿದೆ.

3. ವಾ. ರಾ. VI ಸರ್ಗ ೩೩. 4. ತೊ. ರಾ. VI ೧೨-೩೬, ೩೭.

5. ಅಂತರ್ಧಾನಂತು ತಚ್ಛೀರ್ಷಂ ತಚ್ಚ ಕಾರ್ಮುಕಮುತ್ತಮಮ್
ಜಗಾಮ ರಾವಣಸ್ಯೈವ ನಿರ್ಯಾಣಸಮನಂತರಮ್ (ವಾ. ರಾ. VI ೩೨-೪೦)

6. ಬತ್ತಲೇಶ್ವರನು (ತೊ. ರಾ. ದಿಂದ ಪ್ರಭಾವಿತನಾಗಿ)
ಸರಮೆ ಕಿವಿಯಲಿ ಮೆಲ್ಲನೆಂದಳು
ನಿರುತ ನಂಬದಿರವ್ವ ಮಾಯವಿ
ದೆರಸನುಂಗುರ ಮುಟ್ಟೆ ಬಯಲೆನೆ ಜೀವಪಸರಿಸಿತು.

ಎಂದು ರಾಮನ 'ಉಂಗುರ'ದ ಮಹತ್ವವನ್ನು ಸೂಚಿಸುತ್ತಾನೆ (ಕೌ. ರಾ. ೧೬-೫೩, ೫೪)

ಆನಂದ ರಾಮಾಯಣ-

ಏತಸ್ಮಿನ್ನಂತರೇ ಬ್ರಹ್ಮಾ ಬೋಧಯಾಮಾಸ ಜಾನಕೀಮ್।
ಕೃತಮಸ್ತಿ ರಾವಣೇನ ಕೃತ್ರಿಮಂ ರಾಮಜಿಚ್ಛಿರಃ॥

ಬ್ರಹ್ಮನೇ ಬಂದು ಸೀತೆಗೆ ಆ ರಾಮಶಿರವು ಕೃತಕವೆಂದು ತಿಳಿಸುತ್ತಾನೆ (ಆ. ರಾ. I ೧೧-೨೨೧)

## ಸರ್ಪಾಸ್ತ್ರ-ಪ್ರಕರಣ

| | ವಾಲ್ಮೀಕಿ ರಾಮಾಯಣ | ಕುಮಾರ ವಾಲ್ಮೀಕಿಯ ರಾಮಾಯಣ |
|---|---|---|
| ೧. | ಇಂದ್ರಜಿತುವಿನ ವರ್ಣನೆಯಲ್ಲಿ 'ಕ್ರಾಂತಿ'ಯಾದ ಸೂಚನೆಯಿಲ್ಲ. | ಇಂದ್ರಜಿತುವು 'ಮನುಜನಲ್ಲೀ ರಾಮನೆಂದೇ ನೆನಹು ನಿಜದಲಿ ತೋರುತಿದೆ'-ರಾಮನಲ್ಲಿ ದಿವ್ಯತೆಯನ್ನು ಗುರುತಿಸುತ್ತಾನೆ.[1] |
| ೨. | ಇಂದ್ರಜಿತುವಿಗೆ ಸರ್ಪಾಸ್ತ್ರವು ಬ್ರಹ್ಮದತ್ತ.[2] | ಅದು ಮಹೇಶದತ್ತ[3] |
| ೩. | ಸರ್ಪಾಸ್ತ್ರಘಾತದಿಂದ ರಾಮ ಲಕ್ಷ್ಮಣರು ನಿಶ್ಚೇಷ್ಟಿತರಾದಾಗ, ಸೀತೆಯನ್ನು ತ್ರಿಜಟೆಯು ಸಂತೈಸುತ್ತಾಳೆ.[4] | ಆ ಕೆಲಸವನ್ನು ಸರಮೆಯು ನಡೆಸುತ್ತಾಳೆ[5] ಸೀತೆಯು ದುಃಖದಿಂದ "ಸಹಗಮನ"ದ ನಿರ್ಣಯ ಮಾಡುತ್ತಾಳೆ[6] |
| ೪. | ಸೀತೆಯು ಪುಷ್ಪಕದ ಮೂಲಕ ರಣರಂಗ ದರ್ಶನ ಮಾಡಿ ಬಂದಮೇಲೆ ಅಸ್ತ್ರಮೋಕ್ಷ ಪ್ರಕರಣವಿದೆ[7] | ಸೀತೆಯ ಕಣ್ಣೆದುರಿನಲ್ಲಿಯೇ ರಾಮ ಲಕ್ಷ್ಮಣರು ನಾಗಪಾಶದಿಂದ ಮುಕ್ತರಾಗುತ್ತಾರೆ,[8] |
| ೫. | ಗರುಡನ ಉಪಕೃತಿಗೆ ಕೃತಜ್ಞನಾದ ರಾಮನು ಅವನೊಡನೆ, 'ನೀನು ಯಾರು?' | ಗರುಡನು ಕೇವಲ ಭಕ್ತಿಭಾವದಿಂದಲೇ ರಾಮನನ್ನು ಸ್ತುತಿಸುತ್ತಾನೆ, "ಅವತಾರ ವಿಡಂಬನೆ ಸಾಕು" ಎಂದು ಮಾತ್ರ ಹೇಳುತ್ತಾನೆ.[9] |

ಎಂದು ವಿಚಾರಿಸಿದಾಗ ವಾಲ್ಮೀಕಿ ರಾಮಾಯಣದಲ್ಲಿರುವ ಈ ಕೆಳಗಿನ ನುಡಿ ಕುಮಾರ ವಾಲ್ಮೀಕಿಯ ರಾಮಾಯಣದಲ್ಲಿಲ್ಲ.

ಗರುಡನು—

ಅಹಂ ಸಖಾ ತೇ ಕಾಕುತ್ಸ್ಥ ಪ್ರಿಯಃ ಪ್ರಾಣೋಬಹಿಶ್ಚರಃ
ಗರುತ್ಮಾನಿಹ ಸಂಪ್ರಾಪ್ತೋ ಯುವಯೋಃ ಸಾಹ್ಯ ಕಾರಣಾತ್[10]

"ಓ ಕಾಕುತ್ಸ್ಥ, ನಾನು ನಿನ್ನ ಪ್ರೀತಿಯ ಗೆಳೆಯ, ಹೊರಗೆ ಸುಳಿದಾಡುವ ಪ್ರಾಣದಂತೆ ನಿನಗೆ ಪ್ರಿಯನಾದವನು. ನಾನು ಗರುತ್ಮಂತ. ನಿಮಗೆ ನೆರವಾಗಬೇಕೆಂದು ಬಂದೆನು"–ಎನ್ನುತ್ತಾನೆ.

---

| | ವಾ. ರಾ. | | | | ತೊ. ರಾ. | | |
|---|---|---|---|---|---|---|---|
| | ಕಾಂ. | ಸರ್ಗ. | ಶ್ಲೋಕ | | ಕಾಂ. | ಸಂ. | ಪ. |
| 2. | ಬ್ರಹ್ಮದತ್ತವರೋ ವೀರೋ ರಾವಣಿಃ | | | 1. | ೬ | ೧೫ | ೨೬ |
| | ೬ | ೪೪ | ೩೬ | 3. | ೬ | ೧೫ | ೩೧ |
| 4. | ೬ | ೪೮ನೇ ಸರ್ಗ | | 5. | ೬ | ೧೬ | ೭ |
| 7. | ೬ | ೫೦ | ೩೭ | 6. | ೬ | ೧೬ | ೧೪ |
| | | | | 8. | ೬ | ೧೬ | ೪೦ |
| | | | | 9. | ೬ | ೧೬ | ೩೬-೩೭ |

ತಮಾಗತಮಭಿಪ್ರೇಕ್ಷ್ಯ ನಾಗಾಸ್ತೇ ವಿಪ್ರದುದ್ರುವುಃ
ಯೈಸ್ತೌ ಸತ್ಪುರುಷೌ ಬದ್ಧೌ ಶರಭೂತೈರ್ಮಹಾಬಲೌ (ವಾ. ರಾ. VI ೫೦-೩೭)

ಆನಂದರಾಮಾಯಣದಲ್ಲಿ ರಾಮನೇ ಗರುಡನನ್ನು ನೆನೆದ ಉಲ್ಲೇಖವಿದೆ

ರಾಮಃ ಸಸ್ಮಾರ ತಾರ್ಕ್ಷ್ಯಂ ಸತಾರ್ಕ್ಷ್ಯಃ ಸಾರ್ಪಾನ್ನ್ಯವಾರಯನ್ (ಆ. ರಾ. I ೧೧-೯)

ಕಂಬರಾಮಾಯಣದಲ್ಲಿ ಲಕ್ಷ್ಮಣನು ಮಾತ್ರ ನಾಗಪಾಶಬದ್ಧನಾಗುತ್ತಾನೆ (ಕಂಬ ರಾ. ೬-೧೮)

10. ವಾ. ರಾ. VI ೫೦-೪೬.

13

ಗರುಡನ ಈ ಹೇಳಿಕೆಯಲ್ಲಿ ರಾಮನ ದಿವ್ಯತೆಯು ಧ್ವನಿಸುತ್ತದೆಂದು ರಾಮಾಯಣದ ವ್ಯಾಖ್ಯಾನಕಾರನಾದ **ಗೋವಿಂದರಾಜನು** ಅಭಿಪ್ರಾಯಪಡುತ್ತಾನೆ:

ಸಖಾ ವಾಹನತ್ವೇನ ಸಹಾಯ ಇತಿ ಗೂಢೋಕ್ತಿಃ

**ತಿಲಕನು:**

ಅಹಂ ಸಖಿತ್ವಾತ್ ಸುಗ್ರೀವಾದಿವತ್ ದೇವಸಾಹ್ಯಕರಣಾರ್ಥಮಾಗತಃ

ಎಂದು ವ್ಯಾಖ್ಯಾನಿಸುತ್ತಾನೆ. ಅಷ್ಟಲ್ಲದೆ ತಿಲಕನು ವಾಲ್ಮೀಕಿ ರಾಮಾಯಣದಲ್ಲಿನ–

ಪ್ರದಕ್ಷಿಣಂ ತತಃ ಕೃತ್ವಾ[1] (ಗರುಡನು ರಾಮನಿಗೊದಗಿದ ವಿಪತ್ತನ್ನು ಪರಿಹರಿಸಿ, 'ಪ್ರದಕ್ಷಿಣೆ' ಮಾಡಿ ಹಾರಿ ಹೋದನು) ಎಂಬ ಶ್ಲೋಕಕ್ಕೆ–

ಪ್ರದಕ್ಷಿಣಂ ಕೃತ್ವಾ ಇತ್ಯನೇನ ದಿವ್ಯ ದೇವತಾಪತಾರೋ ರಾಮ ಇತಿ ಸರ್ವಾನ್ ಪ್ರಾಕೃತ ಕಪೀನ್ ಪ್ರತಿಬೋಧಿತವಾನ್-ಗರುಡನ ನುಡಿ, ನಡೆಗಳೆರಡೂ ರಾಮನ 'ದಿವ್ಯತೆ'ಯನ್ನು ಸಾರಿ ಹೇಳುತ್ತವೆ–ಎಂದು ವ್ಯಾಖ್ಯಾನ ಮಾಡಿದ್ದಾನೆ.' "ಇಲ್ಲಿನ ಧ್ವನಿಯು-ರಾಮನು ಅವತಾರೀ ಪುರುಷನೆನ್ನುವುದೇ-ಆಗಿದೆ"[2]

ಕುಮಾರ ವಾಲ್ಮೀಕಿಗಂತೂ ರಾಮನು ಸಾಕ್ಷಾತ್ ಗರುಡವಾಹನನೇ. ಆದಿಕಾವ್ಯದ 'ಸಖ' ಎಂಬ ಪದವನ್ನು-ಗೋವಿಂದರಾಜನಂತೆ-ಇವನು 'ಭೃತ್ಯ' ಎಂದೇ ಅರ್ಥವಿಸಿ, ಗರುಡನೆಂಬ ಅಲ್ಲಿನ 'ಧ್ವನಿ'ಯನ್ನು ಇಲ್ಲಿ 'ವಾಚ್ಯ'ಗೊಳಿಸಿದ್ದಾನೆ.

### ಹನುಮಂತನ ಹಿಮಾಲಯ ಯಾತ್ರೆ

ಪ್ರಚಲಿತ ವಾಲ್ಮೀಕಿ ರಾಮಾಯಣದಲ್ಲಿ ಮೂರು ಬಾರಿ ಹನುಮಂತನ ಹಿಮಾಲಯ ಯಾತ್ರೆಯ ಉಲ್ಲೇಖಗಳಿವೆ.[3]

---

1. ಇದೇ. ವಾ. ರಾ. VI ೫೦-೬೦.

2. In this episode (the Garuda epsiode) we see another instance of Valmiki's supreme gift of artistic suggestiveness (vyangya or dhwani)-K. S. R. Sastri, Studies in Ramayana II p. 134.

ಮಹಾಭಾರತ (III ೨೮೯-೫) ರಾಮೋಪಾಖ್ಯಾನದಲ್ಲಿ-ಗರುಡಾಗಮನವಿಲ್ಲ. ವಿಭೀಷಣನೇ ಪ್ರಜ್ಞಾಸ್ತ್ರದ ಮೂಲಕ–ರಾಮನನ್ನು ಎಬ್ಬಿಸುತ್ತಾನೆ.

3. 'ಮಹಾಭಾರತ'ದ ರಾಮೋಪಾಖ್ಯಾನದಲ್ಲಿ ಹನುಮಂತನ ಹಿಮಾಲಯ ಯಾತ್ರಾಪ್ರಕರಣವಿಲ್ಲ. ಪ್ರಕೃತದ 'ರಾಮಾಯಣ'ದಲ್ಲಿರುವ ಈ ಯಾತ್ರೆಯು ಕವಿ ವಾಲ್ಮೀಕಿ ರಚಿತವೇ? ಪ್ರಕ್ಷಿಪ್ತವೇ?–ಎನ್ನುವ ವಿವೇಚನೆಗೆ ಅವಕಾಶವುಂಟಾಗಿದೆ.

ನೂರು ಯೋಜನದ ಸಮುದ್ರ ಉಲ್ಲಂಘನ ಮಾಡಿದ ಹನುಮಂತನ ಸಾಹಸವನ್ನು ವರ್ಣಿಸಿದ ಆದಿಕವಿಯೇ ಇದನ್ನೂ ಬರೆದಿರುತ್ತಿದ್ದರೆ, ಆ ಸಾಹಸಕ್ಕಿಂತಲೂ ಬಹುಪಾಲು ದೊಡ್ಡದಾದ ಈ ೨೦೦೦ ಯೋಜನ ಉಲ್ಲಂಘಿಸಿದ ಹನುಮಂತನ ಸಾಹಸ ವರ್ಣನೆಗೆ ಹೆಚ್ಚಿನ ಮಹತ್ತ್ವ ಕೊಡದೆ ಇರುತ್ತಿದ್ದನೇ? ಸಾಗರೋಲ್ಲಂಘನ ಕಾಲದಲ್ಲಿ ಕೆಲವು ಆತಂಕಗಳು ಒದಗಿರುವಾಗ ಈ ಸುದೀರ್ಘ ಯಾತ್ರೆಯು ನಿರ್ವಿಘ್ನವಾಗಿ ನಡೆಯಿತೆಂದರೆ ಸಹಜವಾದೀತೇ? ಪ್ರಚಲಿತ ರಾಮಾಯಣದಲ್ಲಿ ಈ ಘಟನೆಯನ್ನು ವರ್ಣಿಸುವ (ಯುದ್ಧಕಾಂಡದ ಸರ್ಗ ೭೪) ಭಾಗದಲ್ಲಿನ ಛಂದೋಬಾಹುಳ್ಯವೂ, ಅದರ ಪ್ರಾಮಾಣಿಕತೆಯ ಬಗ್ಗೆ ಸಂದೇಹವುಂಟುಮಾಡುವಂತಿದೆ-ಈ ಕಾರಣಗಳಿಂದ ಈ ಪ್ರಕರಣವು ಪ್ರಕ್ಷಿಪ್ತವಾಗಿರಬಹುದು ಎಂದು ಬುಲ್ಕೆ ತರ್ಕಿಸುತ್ತಾರೆ. ರಾಮಕಥಾ. ಪು. ೫೩೨-೫೩೩.

ಇದರಂತೆಯೇ, ಹನುಮಂತನ ಹಿಮಾಲಯ ಯಾತ್ರಾ ಪ್ರಕರಣವು ಆದಿಕವಿಯ ಕಾವ್ಯ ಕೌಶಲದ ಅಸಾಮಾನ್ಯ ಸಿದ್ಧಿಗಳಲ್ಲೊಂದು ಎಂದು ಕೈವಾರಿಸಿದವರೂ ಇದ್ದಾರೆ.

"The Sanjeevini episode is another episode which is not only marvellous 'perse' but also enables the poet to portray his sketch of Hanuman in specially bright and vivid colours".

K. S. R. Sastri- Studies in Ramayna II (Riddles of the Ramayana p. 137).

೧. ಸರ್ಪಾಸ್ತ್ರ ಸನ್ನಿವೇಶದಲ್ಲಿ ಮಾರುತಿಯ ಹಿಮಾಲಯ ಯಾತ್ರೆಯ ವಿಚಾರ ಪ್ರಾರಂಭವಾಗುತ್ತಿರುವಷ್ಟರಲ್ಲಿ ಗರುಡಾಗಮನವಾದ್ದರಿಂದ, ಆ ಯಾತ್ರೆಯು ನಡೆಯುವುದಿಲ್ಲ.[1]

೨. ಕುಂಭಕರ್ಣವಧೆಯ ನಂತರ, ಇಂದ್ರಜಿತುವಿನ ಬ್ರಹ್ಮಾಸ್ತ್ರಕ್ಕೊಳಗಾಗಿ ರಾಮಲಕ್ಷ್ಮಣಸಹಿತ ಕಪಿಸೇನೆಯು ಮೂರ್ಛಿತವಾದಾಗ, ಜಾಂಬವನ ಆದೇಶದಂತೆ ಹನುಮಂತನು ಹಿಮಾಲಯಕ್ಕೆ ತೆರಳಿ ಔಷಧ ಪರ್ವತವನ್ನು ತರುತ್ತಾನೆ.[2]

೩. ರಾವಣನ ಅಮೋಘ ಶಕ್ತಿ ಪ್ರಯೋಗದಿಂದ ಲಕ್ಷ್ಮಣನು ಮೂರ್ಛೆಹೊಂದಿದಾಗ, ಸುಷೇಣನ ಸೂಚನೆಯಂತೆ ಹನುಮಂತನು[3] ಹಿಮಾಲಯಕ್ಕೆ ನೆಗೆದು ಔಷಧಿ ಪರ್ವತವನ್ನು ತರುತ್ತಾನೆ.[4]

ವಾಲ್ಮೀಕಿ ರಾಮಾಯಣದ ಉದೀಚ್ಯಪಾಠದ ಈ ಪ್ರಕರಣದಲ್ಲಿ ಉಳಿದ ಪಾಠಗಳಲ್ಲಿಲ್ಲದ ಈ ಅಂಶಗಳು ದೊರೆಯುತ್ತವೆ :

(ಅ) ಕಾಲನೇಮಿ ಖಳ ವೃತ್ತಾಂತ.

(ಆ) ಮಕರರೂಪ.

(ಇ) ಗಂಧರ್ವ ವಿಚಾರ.

(ಈ) ಔಷಧಿ ಪರ್ವತವನ್ನು ತರುತ್ತಿರುವ ವೇಳೆ ಹನುಮಂತನನ್ನು ರಾಕ್ಷಸರು ತಡೆದು ಅಪಜಯ ಹೊಂದುವುದು.[5]

ಇದೇ ಸನ್ನಿವೇಶದಲ್ಲಿ ಹನುಮಂತ–ಭರತ ಸಂವಾದದ ಉಲ್ಲೇಖವು ರಾಮಾಯಣದ ಗೌಡೀಯಪಾಠದಲ್ಲಿ ಮಾತ್ರ ಸಿಗುತ್ತದೆ.[5]

ಹನುಮಂತನ ಹಿಮಾಲಯ ಯಾತ್ರಾ ಪ್ರಕರಣದಲ್ಲಿ, ಮುಖ್ಯವಾಗಿ ಆದಿಕಾವ್ಯವನ್ನೇ ಅನುಸರಿಸಿದ್ದರೂ, ಕುಮಾರ ವಾಲ್ಮೀಕಿಯು ತನ್ನವೇ ಆದ ಕೆಲವು ವೈಶಿಷ್ಟ್ಯಗಳನ್ನು ಮೆರೆದಿದ್ದಾನೆ. ಅವುಗಳಲ್ಲಿ ಮುಖ್ಯವಾದ ಕೆಲವು ಅಂಶಗಳನ್ನು ಇಲ್ಲಿ ಉದಾಹರಿಸಬಹುದು :

---

1. ವಾ. ರಾ. VI ೩೬–೫೪, ೫೫.
2. ಇದೇ. ಸರ್ಗ ೭೪.
3. ಆನಂದ ರಾಮಾಯಣದಲ್ಲಿ ವಾ. ರಾ. ದಲ್ಲಿ ಹೇಳಲಾದ ಮೇಲಿನ ೧ನೆಯ ಪ್ರಸಂಗದಲ್ಲಿಯೇ, ಮೂರ್ಛಾಗತರಾದ ವಾನರರನ್ನು ಎಚ್ಚರಿಸುವುದಕ್ಕಾಗಿ ಹನುಮಂತನು ಹಿಮಾಲಯ ಯಾತ್ರೆ ನಡೆಸಿ ದ್ರೋಣಾಚಲವನ್ನು ತಂದ ಕಥೆ ಇದೆ–ಆನಂದ ರಾಮಾಯಣ I ೧೧–೨೦ ರಿಂದ ೨೮.

ಈ ಸನ್ನಿವೇಶದಲ್ಲಿ ಕಂಬರಾಮಾಯಣದಲ್ಲಿ ಸೀತೆಯನ್ನು ತಂದು ರಣರಂಗ ದರ್ಶನಮಾಡಿಸಿದ ಉಲ್ಲೇಖವಿದೆ-ಕಂಬ ರಾಮಾಯಣ ಸಂಗ್ರಹ ಪು. ೯೪.

ಅಧ್ಯಾತ್ಮ ರಾಮಾಯಣದಲ್ಲಿ ಇಂದ್ರಜಿತುವಿನ ಬ್ರಹ್ಮಾಸ್ತ್ರದಿಂದ ರಾಮಲಕ್ಷ್ಮಣರು ಬದ್ಧರಾಗುವುದಿಲ್ಲ. ಆ ಅಸ್ತ್ರದಿಂದ ಪತಿತವಾದ ವಾನರ ಸೇನೆಯನ್ನು ಎಬ್ಬಿಸುವುದಕ್ಕಾಗಿ, ರಾಮನೇ ಹನುಮಂತನೊಡನೆ ದ್ರೋಣಗಿರಿಯನ್ನು ತರುವಂತೆ ಕೇಳಿಕೊಳ್ಳುತ್ತಾನೆ :

ಪತಿತಂ ವಾನರಾನೀಕಂ ದೃಷ್ಟ್ವಾ ರಾಮೋಽತಿದುಃಖಿತಃ
ಉವಾಚ ಮಾರುತಿಂ ಶೀಘ್ರಂ ಗತ್ವಾ ಕ್ಷೀರಮಹೋದಧಿಮ್
ತತ್ರ ದ್ರೋಣಗಿರಿರ್ನಾಮ ದಿವ್ಯೌಷಧಿ ಸಮುದ್ಭವಃ
ತಮಾನಯ ದ್ರುತಂ ಗತ್ವಾ ಸಂಜೀವಯ ಮಹಾಮತೇ

(ಅಧ್ಯಾತ್ಮ ರಾಮಾಯಣ–ಯುದ್ಧ ಕಾಂಡ ೫-೭೧, ೭೩.)

4. ವಾ. ರಾ. VI ಸರ್ಗ ೧೦೨.
5. ಬುಲ್ಕೆ-ರಾಮಕಥಾ, ಪು. ೫೬೫ರಲ್ಲಿ ಹೆಚ್ಚಿನ ವಿಚಾರಗಳಿವೆ.

## ಆಂಜನೇಯನ ಮೊದಲ ಯಾತ್ರೆ

೧. ಸಂಜೀವಿನೀ ಶೈಲದ ಕಾವಲಿನ ಸುರರು ಪವನಜನನ್ನು ಕೆಣಕುತ್ತಾರೆ.[1] ಹನುಮಂತನು ಅವರನ್ನು ದಿವಿಜ ಪುರಿಪರ್ಯಂತ ಸದೆಬಡಿದು ಓಡಿಸುತ್ತಾನೆ.[2]

೨. ರಕ್ಕಸವೆಣಗಳನ್ನೆಲ್ಲ ಆಯ್ದು ಕಡಲಿನೊಳಗಿರಿಸಿದ ಮೇಲೆ ಹನುಮನು ಔಷಧಿಪರ್ವತಸಹಿತನಾಗಿ, ರಣರಂಗ ಪ್ರವೇಶಮಾಡುವಂತೆ (ಇಲ್ಲವಾದರೆ ವಾನರರೊಂದಿಗೆ ರಕ್ಕಸರೂ ಎದ್ದಾರು ಎಂಬ ಕಾರಣದಿಂದ) ಎಚ್ಚರಿಕೆಯನ್ನು ವಿಭೀಷಣನು ನೀಡುತ್ತಾನೆ.[3]

೩. ಹನುಮಂತನು ತನ್ನ ಬಾಲವನ್ನು ಮಹೌಷಧಿಯಲ್ಲಿ ಅದ್ದಿ–ವಾನರ ಸೇನೆಯ ಮೇಲೆ ಚಿಮ್ಮಿಸಿದನೆಂಬ ಹೇಳಿಕೆ.[4]

೪. ಜಾಂಬವ, ಹನುಮಂತ ಮತ್ತು ವಿಭೀಷಣ ಈ ಮೂವರು ಮಾತ್ರ ಬ್ರಹ್ಮಾಸ್ತ್ರಕ್ಕೆ ಒಳಗಾಗದಿರಲು ಕಾರಣ ನೀಡಿಕೆ :

> ಧರಣಿಜೆಯ ಸುದ್ದಿಯನು ತಂದಂ
> ದಶರಥ ರಾಘವನಿತ್ತವರದಿಂ
> ದಿರವು ಘಟಿಸಿತು ಮಾರುತಿಗೆ, ನೈರುತಿಯನುರೆ ಜರೆದು
> ಶರಣುವೊಗಲು ವಿಭೀಷಣಂಗಾ
> ಯ್ತಿರವು, ಬೊಮ್ಮನ ವರದಿನಜಸುತ
> ಹರಣ ಹಿಂಗದೆ ಬದುಕಿದನು ಬಾಣವಲಿ ಕಮಲಜನ.[5]

೫. ಸಕಲ ಕಪಿಸೇನೆ ಎದ್ದ ಮೇಲೆ ಔಷಧಿ ಶೈಲವು ಹನುಮನ ಹಸ್ತದಲ್ಲೇ ಮಾಯವಾಗುತ್ತದೆ.[6]

## ಹನುಮಂತನಿಂದ ಎರಡನೇ ಸಾರಿ ಹಿಮಾಲಯ ಯಾತ್ರೆ (ಕುಮಾರ ವಾಲ್ಮೀಕಿಯದೇ ಆದ ಕಥಾ ವೈಶಿಷ್ಟ್ಯಗಳು)

೧. ಲಕ್ಷ್ಮಣನು ರಾವಣನ ಶಕ್ತಿಯಿಂದ ಮೂರ್ಛಿತನಾದಾಗ, ಜಾಂಬವನ ಸೂಚನೆಯಂತೆ ರಾಮನು ಹನುಮಂತನನ್ನು ನೋಡಿ,

---

1. ವಾ. ರಾ. ದಲ್ಲಿ ಇದೇ ಸಂದರ್ಭದಲ್ಲಿ

> ಮಹೌಷಧ್ಯಸ್ತತಃ ಸರ್ವಾಸ್ತಸ್ಮಿನ್ ಪರ್ವತಸತ್ತಮೇ
> ವಿಜ್ಞಾಯಾರ್ಥಿನಮಾಯಾಂತಂ ತತೋ ಜಗ್ಮುರದರ್ಶನಮ್

ಔಷಧಿ ಮೂಲಿಕೆಗಳು ಅದೃಶ್ಯವಾದವು. ವಾ. ರಾ. VI ೭೪-೬೪.

2. ತೊ. ರಾ. VI ೩೬-೫೫.
3. ಇದೇ. ೩೬-೫೮:
4. ಇದೇ. ೩೬-೬೮.
5. ಇದೇ. ೩೬-೭೨.
6. ಇದೇ. ೩೬-೭೪.

ವಾ. ರಾ. ದಲ್ಲಿ ಹನುಮಂತನೇ ಮತ್ತೆ ಹಿಮಾಲಯಕ್ಕೆ ತೆರಳಿ ಇಟ್ಟುಬರುತ್ತಾನೆ

> ತತೋ ತಮೋಷಧೀಶೈಲಮುದಗ್ರವೀರ್ಯಃ
> ನಿನಾಯ ವೇಗಾದ್ಧಿಮವಂತಮೇವ
> ಪುನಶ್ಚ ರಾಮೇಣ ಸಮಾಜಗಾಮ (ವಾ. ರಾ. VI ೭೪-೭೭.)

ಇರವ ಕಂಡ್ಯೆ ನಮ್ಮ ತಮ್ಮನ
ಪರಿಯ ಕಂಡ್ಯೆ ಹನುಮ ನಮ್ಮ—
ಬ್ಬರಗತಪ್ರಾಣಾಭಿಮಾನವು ನಿನ್ನದಲೆಯೆಂದ.[1]

ರಾಮನಾಡಿದ ಮಾತಿಗಿಂತಲೂ ಮೊದಲೇ ಹನುಮನು ಹಿಮಾಲಯ ಯಾತ್ರೆಗೆ ಸಿದ್ಧನಾಗುತ್ತಾನೆ. ಈ ಸಂದರ್ಭದಲ್ಲಿ ಜಾಂಬವ ಕಲಿ ಸುಷೇಣರು ಹನುಮಂತನೊಡನೆ "ಅಂದಿನಂದದಿ ಗಿರಿಯ ತರಬೇಡ, ಔಷಧಿಯ ನೀ ಬಲ್ಲೆ, ಮೂಲಿಕೆಯ ತೀದು ತಾ" ಎಂದು ಸಕಾಲಿಕವಾದ ಎಚ್ಚರಿಕೆ ನೀಡುತ್ತಾರೆ.

೨. ಕಾಲನೇಮಿ[3] ಎಂಬ ಖಳನು ನಾನಾ ಪರಿಯಿಂದ ಹನುಮಂತನನ್ನು ವಂಚಿಸಲು ಯತ್ನಿಸಿದ ಕಥೆ, ಕಾಲಕಂಟಕ ಸರಸಿಯ ಪ್ರಸ್ತಾಪ, ಕಾಲನೇಮಿಯನ್ನೊಡೆದ ವಿಚಾರ, ಧಾನ್ಯಮಾಲಿನಿಯ ಸುದ್ದಿ,[4] ಹನುಮಂತ–ಭರತ ಸಮಾಗಮ–ಮೊದಲಾದ ಅಂಶಗಳು.

೩. ವಾ. ರಾ. ದಲ್ಲಿ ಹನುಮಂತನು ಎರಡನೆಯ ಸಾರಿಯೂ ಔಷಧಿ ಪರ್ವತವನ್ನು ತಂದಂತೆ ಹೇಳಿದ್ದರೆ,[5] ತೊ. ರಾ. ವು ಈ ಸನ್ನಿವೇಶದಲ್ಲಿ, ಆ ಸಂಜೀವನ ಗಿರಿಯ ಕಾಪಿನವರು 'ಅಂದಿನಗ್ಗದ ವೀರ ಮತ್ತೆ ತಂದನೆಂದು' ತಾವೇ ಮಹೌಷಧಿಗಳನ್ನು ಅರಸಿ, ಕಿತ್ತು ಹನುಮಂತನಿಗೆ ಕೊಡುತ್ತಾರೆ.[6]

೪. ರಾಮ ಲಕ್ಷ್ಮಣರಿಗೆ ಆಪತ್ತನ್ನು ಸೂಚಿಸುವ ದುಃಸ್ವಪ್ನಗಳನ್ನು ಭರತನು ಕಾಣುತ್ತಾನೆ. ಆದಕ್ಕಾಗಿ ಶಾಂತಿ ಕರ್ಮಗಳನ್ನು ಮಾಡಿಸುವಷ್ಟರಲ್ಲಿ–ಗಗನದಲ್ಲಿ ಔಷಧಿಸಹಿತನಾಗಿ ಲಂಕೆಗೆ ಸಾಗುತಿದ್ದ ಮಾರುತಿಯನ್ನು ಕಂಡು, ಯಾವುದೋ 'ಕೇಡಿನದ್ಭುತ' ಎಂದು ಭ್ರಮಿಸಿ–ಹನುಮಂತನಿಗೆ ಬಾಣ ಹೂಡಲು ಸಿದ್ಧನಾಗುತ್ತಾನೆ. ಅಷ್ಟರಲ್ಲಿ 'ರಾಘವ ಕಾರ್ಯನಿರತನಿವನು, ಬಿಲುಗೊಳಬೇಡ'–ಎಂದು ಅಂಬರವಾಣಿಯಾಗುತ್ತದೆ.[7]

---

1. ತೊ. ರಾ. VI ೪೭-೪೯.
2. ವಾ. ರಾ. VI ೧೦೨-೨೪ ರಿಂದ ೩೧ ಇಲ್ಲಿ ಸುಷೇಣನ ಸೂಚನೆಯಿದೆ.
   ತೊ. ರಾ. ವು ಈ ಸಂದರ್ಭದಲ್ಲಿ ಅಧ್ಯಾತ್ಮ ರಾಮಾಯಣ (VI ೫-೭೧, ೭೨)ದ ಕಥೆಯನ್ನನುಸರಿಸುತ್ತದೆ.
3. ಕಾಲನೇಮಿ ಖಳನ ಕಥೆಯು ತೊ. ರಾ. ದ ಎಲ್ಲ ಪ್ರತಿಗಳಲ್ಲೂ ಇಲ್ಲ. ಮೈ. ವಿ. ಪ್ರಕಟನೆಯಲ್ಲಿ (ಸಂ. ಬಿ ಎಸ್. ಸಣ್ಣಯ್ಯ) ಈ ಭಾಗವನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

   ಆನಂದ ರಾಮಾಯಣದಲ್ಲಿ ಸಿಗುವ ಈ ಕಥೆಯನ್ನು ಕುಮಾರ ವಾಲ್ಮೀಕಿಯು ತನ್ನ ಕಾವ್ಯದಲ್ಲಿ ಅಳವಡಿಸಿಕೊಂಡಿರಬಹುದು (ತೊ. ರಾ. ದಲ್ಲಿ ಆನಂದ ರಾಮಾಯಣದ ಪ್ರಭಾವವು ಇತರತ್ರ ಸ್ಪಷ್ಟವಾಗಿರುವುದರಿಂದಲೂ, ಹನುಮಂತನ ಹಿರಿಮೆಯನ್ನು ಹೇಳುವ ಕಥೆ ಇದಾಗಿರುವುದರಿಂದಲೂ 'ಮುಖ್ಯಪ್ರಾಣ' ಭಕ್ತನಾದ ಕುಮಾರ ವಾಲ್ಮೀಕಿಯು ಇದನ್ನು ತನ್ನ ಕೃತಿಯಲ್ಲಿ ಹೇಳಿರಬಹುದು)

   ಆನಂದ ರಾಮಾಯಣದಲ್ಲಿ ರಾವಣನು ಕಾಲನೇಮಿಯೊಡನೆ (ಹನುಮಂತನಿಗೆ ವಿಘ್ನವೊದಗಿಸಬೇಕೆಂದು)

   ಪ್ರಾರ್ಥಯಿತ್ವಾ ಕಾಲನೇಮಿಂ ತದ್ವಿಘ್ನಾರ್ಥಮಚೋದಯತ್
   ಸ ಗತ್ವಾ ಹಿಮವತ್ಪಾರ್ಶ್ವೇ ತಪೋವನಮಕಲ್ಪಯತ್ (ಆ. ರಾ. I ೧೧-೪೭)

   ಅಧ್ಯಾತ್ಮ ರಾಮಾಯಣದಂತೆ ಕಾಲನೇಮಿಯು ರಾಮಭಕ್ತನಾಗಿದ್ದು ರಾವಣನಿಗೆ—

   ಸೀತಾ ಪ್ರಯಚ್ಛ ರಾಮಾಯ ರಾಜ್ಯಂ ದೇಹಿ ವಿಭೀಷಣೇ

   ಎನ್ನುತ್ತಾನೆ. (ಅ. ರಾ. VI ೬-೪೬)
4. ಕುಮಾರ ವಾಲ್ಮೀಕಿಯು ಹೇಳುವ ಧಾನ್ಯಮಾಲಿನಿ ವೃತ್ತಾಂತವೂ ಆನಂದ ರಾಮಾಯಣದಿಂದ ಪ್ರೇರಿತ. ಆನಂದ ರಾಮಾಯಣ–I ೧೧, ೫೩–೫೪ರಲ್ಲಿ ಈ ಕಥೆಯಿದೆ.
5. ಅಪಪಾತ ಗೃಹೀತ್ವಾತು ಹನುಮಾನ್ ಶಿಖರಂ ಗಿರೇಃ (ಆ ಗಿರಿಶಿಖರವನ್ನು ಕೈಯಲ್ಲಿ ಹಿಡಿದು, ಹಾರಿ ರಣರಂಗದಲ್ಲಿ ತಂದಿಟ್ಟನು)–ವಾ. ರಾ. VI ೧೦೨-೩೪.
6. ತೊ. ರಾ. VI ೪೭–೫೦.
7. ಇದೇ. VI ೪೭ನೇ ಸಂಧಿಯ ಪರಿಶಿಷ್ಟ–ಪು. ೭೩೬–ಪದ್ಯ ೧.

ಭರತನು ಕಂಡ ಕನಸು, ಹನುಮಂತನಿಗೆ ಹೊಡಿದ ಬಿಲ್ಲು–ಈ ವೃತ್ತಾಂತಗಳಲ್ಲಿ ತೊರವೆ ರಾಮಾಯಣವು ಆನಂದ ರಾಮಾಯಣವನ್ನನುಸರಿಸಿರಬೇಕು.[1] ಮಹಾನಾಟಕದಲ್ಲೂ[2] ಈ ವಿಚಾರವಿದೆ.

## ರಾವಣ ಪರಿಭವ, ವಾನರ ಪ್ರತಾಪ

ಪ್ರಹಸ್ತವಧೆಯಾದುದನ್ನು ಕೇಳಿ, ಕನಲಿ, ಕ್ರುದ್ಧನಾದ ರಾವಣನು ತಾನೇ ಯುದ್ಧಭೂಮಿಯನ್ನು ಪ್ರವೇಶಿಸುತ್ತಾನೆ. ಹನುಮಂತ, ನೀಲರೊಡನೆ ಯುದ್ಧಮಾಡಿ, ಲಕ್ಷ್ಮಣನನ್ನು ತನ್ನ ಶಕ್ತ್ಯಾಯುಧದಿಂದ ಮೂರ್ಛಿತಗೊಳಿಸಿದ ಮೇಲೆ ರಾಮನೊಡನೆ ಹೋರಾಡಿ ಪರಾಜಿತನಾಗಿ ಮರಳುತ್ತಾನೆ–ಇದು ವಾಲ್ಮೀಕಿಯ ಕಾವ್ಯದಲ್ಲಿನ ಕಥೆ.[3]

ಕುಮಾರವಾಲ್ಮೀಕಿಯು ಇದೇ ಪ್ರಕರಣವನ್ನು ವರ್ಣಿಸುವಲ್ಲಿ ತೋರಿದ ತನ್ನವೇ ಆದ ವೈಶಿಷ್ಟ್ಯಗಳನ್ನು ಹೀಗೆ ಸಂಗ್ರಹಿಸಬಹುದು.

೧) ರಾವಣನು ತೆರನ್ನೇರಲು, ಹೋರಿ, ಕುರಿ, ಕೋಣಗಳನ್ನು ಬಲಿ ಕೊಡಲಾಗುತ್ತದೆ.[4]

೨) ಯುದ್ಧಕ್ಕೆ ಮೊದಲಾಗಿ, ರಾವಣನು ರಣರಂಗದ ಮಧ್ಯದಲ್ಲಿ ತನ್ನ ವಂಶಾಧಿದೇವತೆಯಾದ ನಿಕುಂಭಿಳೆಯನ್ನು[5] ಆಹ್ವಾನಿಸಿ 'ವಿಲಸಿತಾಸುರದ' ಪೂಜೆಯನ್ನು ನಡೆಸುತ್ತಾನೆ.[6]

೩) ನೀಲನು ತನ್ನ ಬಾಲದಲ್ಲಿ ದಶಾನನನನ್ನು ಬಿಗಿದು, ಜೋಗುಳ ಹಾಡಿ 'ತೊಟ್ಟಿಲು ತೂಗುತ್ತಾನೆ' ಮೇನಕೆ ಮೊದಲಾದ ಸುರನಾರಿಯರೂ ಈ ಜೋಗುಳದಲ್ಲಿ ಧ್ವನಿಗೂಡಿಸುತ್ತಾರೆ[7] ದಶಾನನನ ಬಳ್ಳಿತಲೆಗಳನ್ನು ನೀಲನು ಕಾಲಿನಿಂದ ಒದೆದು 'ರಾಮನ ಬಾಣಕ್ಕೆ ಗುರಿ, ನೀನು'–ಎಂದು ಗೇಲಿಮಾಡುತ್ತಾನೆ.

---

1. ಆನಂದ ರಾಮಾಯಣದಲ್ಲಿ ಭರತನು ಹೊಡೆದ ಬಾಣ ತಾಗಿ ಹನುಮಂತನ ಕೈಯ್ಯಲ್ಲಿದ್ದ ಪರ್ವತವು ಕೆಳಗುರುಳುತ್ತದೆ.

ಭರತೇನ ಶರಂಮುಕ್ತ್ವಾ ಪರ್ವತೋ ಭುವಿಪಾತಿತ.

(ಆ. ರಾ. I ೧೧–೬೨)

ಹನುಮಂತನು ಭರತನನ್ನು–ರಾವಣನಿಂದ ಪಲಾಯನ ಹೊಂದಿದ ರಾಮನೆಂದೇ ಬಗೆದು ಮಾತನಾಡಿಸುತ್ತಾನೆ. ಭರತನು ಮತ್ತೊಮ್ಮೆ ಬಾಣ ಹೂಡಲು, ಉದ್ಯುಕ್ತನಾದಾಗ ಹನುಮನ ಭ್ರಾಂತಿ ದೂರವಾಗುತ್ತದೆ.

2. ಮಹಾನಾಟಕದಲ್ಲಿ ಭರತನ ಬಾಣದಿಂದ ಹನುಮ ಮೂರ್ಛಿತನಾಗುತ್ತಾನೆ. ವಸಿಷ್ಠ ಬಂದು ಹನುಮನ ಕೈಯ್ಯಲ್ಲಿದ್ದ ಔಷಧಿಗಳ ಮೂಲಕವೇ ಅವನನ್ನು ಎಬ್ಬಿಸುತ್ತಾನೆ. ಹನುಮಂತನು ಭರತನಿಗೆ ಯುದ್ಧವಾರ್ತೆಯನ್ನೆಲ್ಲ ತಿಳುಹಿ, ಅವನ ಸತ್ತ್ವ, ಉತ್ಸಾಹಗಳನ್ನೂ ಪರೀಕ್ಷಿಸಿ ಅಲ್ಲಿಂದ ಹೊರಡುತ್ತಾನೆ. (ಮಹಾನಾಟಕ–೨೩–೨೧ರಿಂದ ೩೧)

ಕುಮಾರವಾಲ್ಮೀಕಿಯು ತನ್ನದೇ ಕಥಾವೈಶಿಷ್ಟ್ಯಗಳನ್ನು ಯೋಜಿಸಿಕೊಳ್ಳುವಲ್ಲಿ ತನ್ನ 'ದರ್ಶನ'ಕ್ಕೆ ಅವು ಅನುಗುಣವಾಗಿರುವಂತೆ ಎಚ್ಚರ ವಹಿಸಿದ್ದಾನೆ. ಈ ಪ್ರಕರಣದಲ್ಲಿ ಭರತನಿಂದ ಹನುಮನು ಉರುಳಿಸಲ್ಪಡದಂತೆ ಕಥೆಯ ವಿನ್ಯಾಸವಿರುವುದಕ್ಕೆ ಕವಿಯ (ಮಾಧ್ವಪ್ರಜ್ಞೆ) ತತ್ತ್ವನಿಷ್ಠೆಯೇ ಕಾರಣವಾಗಿರಬೇಕು.

3. ವಾ. ರಾ. VI ಸರ್ಗ ೫೯.

4. ತೊ. ರಾ. VI ೨೦–೨೮.

ಇದು ಕವಿಯು ಬಾಳಿದ ಪರಿಸರದ ಪ್ರಭಾವವೂ ಇರಬಹುದು–ಈ ಕುರಿತು ಇದೇ ಪ್ರಬಂಧದ 'ಕೃತಿಯ ಸಾಮಾಜಿಕ ಅಧ್ಯಯನ' ಪ್ರಕರಣ ನೋಡಬಹುದು.

5. ನಿಕುಂಭಿಳೆಯೆಂದರೆ ಲಂಕೆಯ ಒಂದು ಪ್ರದೇಶ. ಇಂದ್ರಜಿತುವು ಲಂಕೆಯಲ್ಲಿ ದಕ್ಷಿಣದ ಒಂದು ಭಾಗದಲ್ಲಿ ಕಾಳೀ ವಿಗ್ರಹವನ್ನಿರಿಸಿ ಆ ದೇವತೆಗೆ–ನಿಕುಂಭಿಳೆ–ಎಂದು ಹೆಸರಿಟ್ಟು ಪೂಜಿಸುತ್ತಿದ್ದನು. (ಉತ್ತರಕಾಂಡ ರಾಮಾಯಣ ೩೧–೨)

6. ತೊ. ರಾ. VI ೨೦–೩೯.

7. ಇದೇ. VI ೨೨–೧೧ರಿಂದ ೧೩.

ಹೋರಿ ಜೋ ಜೋ ಹರಿಹಯನ ಬಡಿ
ಹೋರಿ ಜೋ ಜೋ ಬಲಿಯ ವಿಮಲಾ
ಗಾರವಬಲಾಜನದ ಜೋಳಿಗೆಯರಸ ಜೋಯೆನುತ.........

ತೊ. ರಾ. VI ೨೨–೧೨.

೪) ಹನುಮಂತನ ಹೊಡೆತಕ್ಕೆ ರಾವಣನು 'ಮದವೇರಿದ ಇಭಪತಿ ಕುಸುಕಿದ ಎಳೆಗುಂಬಳದಂತೆ–ನುಜ್ಜು ಗುಜ್ಜು ಆಗಿ–ಕರುಳೆಲ್ಲಾ ದೆಸೆದೆಸೆಗೆ ಚೆಲ್ಲುತ್ತವೆ.[1]

೫) ರಾವಣನು ತನ್ನ ಹೊಡೆತಕ್ಕೆ ಮೃತನಾದನೆಂದೇ ತಿಳಿದ ಹನುಮಂತನು–ಸ್ವಾಮಿ ದ್ರೋಹಕ್ಕೆ ಗುರಿಯಾದೆನಲ್ಲಾ, ರಾವಣನನ್ನು ರಾಮನು ಕೊಲ್ಲಬೇಕಾಗಿದ್ದು, ಅದನ್ನು ತಾನು ನಡೆಸಿ ರಾಮಾಯಣದ ಹೆಸರೇ ಅಂತರಿಸಿತಲ್ಲ' ಎಂದು ಮರುಗುತ್ತಾನೆ. ರಾವಣನಲ್ಲಿ ಜೀವ ಸಂಚಾರ ನಿಂತಿದ್ದರೆ ತಾನು ಅಗ್ನಿ ಪ್ರವೇಶ ಮಾಡುವುದಾಗಿ ನಿರ್ಧರಿಸಿ, ತನ್ನ ತಂದೆಯನ್ನು ಸ್ತುತಿಸಲು ಖಳನಲ್ಲಿ ಜೀವಸಂಚಾರವಾಗುತ್ತದೆ. ಇದನ್ನು ಕಂಡು ದೇವತೆಗಳು 'ಸತ್ತ ರಕ್ಕಸನನ್ನು ಮತ್ತೆ ಬದುಕಿಸಿದನಲ್ಲ' ಎಂದು ಹನುಮಂತನನ್ನು ಬೈಯುತ್ತಾರೆ.[2]

೬) ಯುದ್ಧದಲ್ಲಿ ರಾವಣನು ರಾಮನಿಂದ ಪರಾಜಿತನಾಗಿ–ಎಲ್ಲವನ್ನೂ ಕಳೆದುಕೊಂಡು ದಿಗಂಬರನೇ ಆಗುತ್ತಾನೆ. ಕರತಳದ ಮುಸುಕಿನಲ್ಲೇ ಅವನು ಅರಮನೆಗೆ ಮರಳಿದಾಗ 'ಅಹುದು ರಾವಣ'–ಎಂದು ತನ್ನ ಗುರುತನ್ನು ಕಾಪಿನವರಿಗೆ ರಾವಣನೇ ಮಾಡಿಸಿಕೊಡಬೇಕಾಗುತ್ತದೆ. ನಗ್ನನಾದ ದಶಶಿರನನ್ನು ಕಂಡು ಪುರಜನರು, 'ಅಂದು ಊರನ್ನು ಸುಡಿಸಿದ್ದಕ್ಕೆ ತಕ್ಕ ಫಲವಾಯಿತು'–ಎಂದು ತಮ್ಮೊಳಗೆ ನುಡಿದುಕೊಳ್ಳುತ್ತಾರೆ.[3]

ಕುಮಾರ ವಾಲ್ಮೀಕಿಯ ಕೈಯ್ಯಲ್ಲಿ–ಅವನ ಕಪಿಗಳ ಕೈಯ್ಯಲ್ಲಿ–ದಶಾನನನು ಪಟ್ಟಪಾಡು ಶೋಚನೀಯ. ಕಪಿಯೊಂದರ ಬಾಲಕ್ಕೆ ಕಟ್ಟಿ ಬಿದ್ದದ್ದೂ, ಕಪಿಯಿಂದ ಜೋಗುಳ ಹಾಡಿಸಿಕೊಂಡದ್ದೂ, ರಣಕಣದಲ್ಲಿ ಸಂಪೂರ್ಣ ನಗ್ನನಾಗಿ–ನಾರಿಯರು ನೋಡಲಾಗದ ಸ್ಥಿತಿಗೊಳಗಾದದ್ದೂ–ತೊರವೆ ರಾಮಾಯಣದ ರಾವಣನಿಗೆ ಮಾತ್ರ ಒದಗಿದ ಗತಿ. ಇತರ ಕೃತಿಗಳಲ್ಲಿ ದಶಕಂಠನಿಗೆ ಈ ಪಾಡು ಒದಗುವುದಿಲ್ಲ. ಇವೆಲ್ಲಾ ಅವನ ಅಧರ್ಮದ ಫಲವೆಂದು ಮಾತ್ರ ಸಮಾಧಾನ ಪಟ್ಟುಕೊಳ್ಳಬೇಕು, ಅಷ್ಟೆ.

### ಕುಂಭಕರ್ಣನ ವಧೆ

#### ವಾಲ್ಮೀಕಿ ರಾಮಾಯಣದಂತೆ[4]

ಕುಂಭಕರ್ಣನು ಯುದ್ಧಮಾಡುತ್ತಾ ಶ್ರೀರಾಮನ ಐಂದ್ರಾಸ್ತ್ರಕ್ಕೆ ಬಲಿಯಾಗುತ್ತಾನೆ. ಆ ಘೋರ ಸಾಯಕವು ಕುಂಭಕರ್ಣನ ಶಿರವನ್ನು ಕತ್ತರಿಸಿದ ವೇಗಕ್ಕೆ ಆ ರಕ್ಕಸನ ತಲೆಯು ಆಕಾಶಕ್ಕೆ ಹಾರಿ ಲಂಕೆಯಲ್ಲಿ ಬೀಳುತ್ತದೆ. ಬೀಳುತ್ತಾ ಪ್ರಾಕಾರದ ಮೇಲೆ ಕಾವಲಿಗಾಗಿ ನಿಲ್ಲಿಸಿದ ಚರ್ಯಾಗೃಹಗಳನ್ನೂ, ಗೋಪುರಗಳನ್ನೂ, ಉನ್ನತವಾದ

---

ಈ ಕಥಾವೈಶಿಷ್ಟ್ಯವನ್ನು ಬತ್ತಲೇಶ್ವರನೂ ಅನುಸರಿಸಿದ್ದಾನೆ. (ಕೌ. ರಾ. ೩೪–೪೨)

ಜೋಹು ಬಿರಿಬಿರು ಕಣ್ಣ ಕೆಂಪಿಗೆ, ಜೋಹು ನಿನ್ನೀಬಾತಬಸುರಂಗೆ........

1. ತೊ. ರಾ. VI ೨೪–೩೦.
2. ಇದೇ. VI ೨೪–೩೨ರಿಂದ ೪೨.

ಹನುಮನ ಕೈಯಲ್ಲಿ ರಾವಣನು 'ಮದವೇರಿದಿಭಪತಿ ಕುಸುಕಿದ ಎಳೆಗುಂಬಳ' ದಂತಾಗುತ್ತಾನೆ.

ತೊ. ರಾ. VI ೨೪–೩೦.

ಇದನ್ನೇ ಅನುಸರಿಸಿದ ಬತ್ತಲೇಶ್ವರನು, ಇದೇ ಸನ್ನಿವೇಶದಲ್ಲಿ ರಾವಣನ ಸ್ಥಿತಿಯು 'ಧರೆಗೆ ಮದಕರಿ ಮತ್ತೆ ಮೆಟ್ಟಿದ ಹಿರಿಯ ತೊಂಡೆಯ ಹಣ್ಣು'–ಎನ್ನುವಂತೆ ವರ್ಣಿಸುತ್ತಾನೆ (ಕೌ. ರಾ. ೨೨–೨೨)

3. ತೊ. ರಾ. VI ೨೬–೩೪ರಿಂದ ೬.

ವಾ. ರಾ.ದಲ್ಲಿ ಇದೇ ಸಂದರ್ಭದಲ್ಲಿ 'ದಿಗಂಬರ'ನೇನೂ ಆಗುವುದಿಲ್ಲ. ಅಲ್ಲಿ ಅವನ ಸ್ಥಿತಿ:

ತಂ ನಿರ್ವಿಷಾಶೀ ವಿಷಸಂನಿಕಾಶಂ ಶಾಂತಾರ್ಚಿಷಂ ಸೂರ್ಯಮಿವಾಪ್ರಕಾಶವ್

ಗತಶ್ರಿಯಂ ಕೃತ್ತ ಕಿರೀಟಕೂಟಮುವಾಚ. ರಾಮೋ ಯುಧಿ ರಾಕ್ಷಸೇಂದ್ರಮ್ VI ೫೯–೧೪೦

ತೊ. ರಾ. ವನ್ನು ಅನುಸರಿಸಿ, ರಾವಣನು 'ದಿಗಂಬರ'ನಾಗಿದ್ದನು ಎಂದು ಬತ್ತಲೇಶ್ವರನೂ ಹೇಳುತ್ತಾನೆ (ಕೌ. ರಾ. ೨೨–೫೨)

4. ವಾ. ರಾ. VI ೬೭–೧೬೪ರಿಂದ ೧೮೫.

ಕೋಟಿಗಳನ್ನೂ ಉರುಳಿಸುತ್ತದೆ. ಆ ಮೇಲೆ ಕುಂಭಕರ್ಣನ ಶರೀರವು ಒಲೆದು ಸಮುದ್ರಕ್ಕೆ ಬೀಳುತ್ತದೆ.[1] ಬೀಳುವಾಗ ಮಧ್ಯದಲ್ಲಿ ಅತ್ತಿತ್ತ ಓಡುತಿದ್ದ ವಾನರರನ್ನು ಉರುಳಿಸುತ್ತಾ–ಸಮುದ್ರದಲ್ಲಿ ಮುಳುಗುತ್ತಾ ದೊಡ್ಡ ದೊಡ್ಡ ಮೊಸಳೆ, ಮೀನು, ಸರ್ಪಗಳನ್ನು ಮರ್ದಿಸುತ್ತಾ ಸಮುದ್ರ ತಳವನ್ನು[2] ಸೇರುತ್ತದೆ.[3]

ವಾಲ್ಮೀಕಿ ರಾಮಾಯಣದ "ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ಲಕ್ಷ್ಮಣನು ಕುಂಭಕರ್ಣನೊಡನೆ ಯುದ್ಧ ಮಾಡಿದ ವರ್ಣನೆಯು ದೊರೆಯುತ್ತದೆ.[4] ಇದರ ಪ್ರಭಾವದಿಂದ, ಆ ಮೇಲಿನ ಅನೇಕ ರಾಮಕಥೆಗಳಲ್ಲಿ ಲಕ್ಷ್ಮಣನೇ ಕುಂಭಕರ್ಣನನ್ನು ಕೊಂದನೆಂಬ ಉಲ್ಲೇಖ ಸಿಗುತ್ತದೆ.

ಉದಾ :

ಮಹಾಭಾರತದ ರಾಮೋಪಾಖ್ಯಾನ.[5]
ಸ್ಕಂದಪುರಾಣದ ಸೇತುಮಾಹಾತ್ಮ್ಯ.[6]

ಕುಮಾರ ವಾಲ್ಮೀಕಿಯು ಕುಂಭಕರ್ಣವಧಾ ಪ್ರಕರಣದಲ್ಲಿ ವಾಲ್ಮೀಕಿ ರಾಮಾಯಣದ ಕಥೆಯನ್ನೇ ಅನುಸರಿಸಿದಂತೆ ತೋರುತ್ತದೆ. ಅದರೂ ಅವನು ಈ ಮುಂದೆ ಹೇಳಲಾದ–ಆದಿಕಾವ್ಯದಲ್ಲಿಲ್ಲದ–ಅಂಶಗಳನ್ನು ತನ್ನ ಕೃತಿಯಲ್ಲಿ ತಿಳಿಸುತ್ತಾನೆ :

೧) ಕುಂಭಕರ್ಣನನ್ನು ಎದುರಿಸಿದ ಲಕ್ಷ್ಮಣನು–'ನಿನ್ನ ಸೋದರನು ನಮಗೆ ವಿರೋಧಿ ನೀನಲ್ಲ ; ನಿನ್ನನ್ನು ಕೊಲ್ಲೆ, ವಿಭೀಷಣನ ಬಾಲಹಿಡಿದು ಬದುಕುವುದೇ ಲೇಸು'–ಎಂದಾಗ, ಕುಂಭಕರ್ಣನು ಲಕ್ಷ್ಮಣನೊಡನೆ–"ನನ್ನ ಮೇಲೆ ಕರುಣದ ಮಾತೇಕೆ? ಕಲುಹೃದಯದ ಭಾವವಿರಲಿ"–ಎನ್ನುತ್ತಾ, ಕಾಳಗಕ್ಕೆ ತೊಡಗಿ, ರಾಮಾನುಜನ ಮೇಲೆ ಘೋರವಾದ ರಾಕ್ಷಸ–ಶಕ್ತಿಯನ್ನೆಸೆಯಲು, ಇದನ್ನು ಕಂಡು ರಾಮನು ಬ್ರಹ್ಮಾಸ್ತ್ರವನ್ನೆಸೆದು ರಾಕ್ಷಸ ಶಕ್ತಿಯನ್ನು ನಿಶ್ಶಕ್ತಗೊಳಿಸುತ್ತಾನೆ.[7]

೨) ಕುಮಾರ ವಾಲ್ಮೀಕಿಯ ರಾಮನು ವೈಷ್ಣವಾಸ್ತ್ರ ಪ್ರಯೋಗ ಮಾಡಿ ಕುಂಭಕರ್ಣನ ಶಿರವನ್ನು ಕತ್ತರಿಸಿ ಅದನ್ನು ಸೂರ್ಯನೆಡೆಗೆ ಹಾರಿಸುತ್ತಾನೆ. ತನ್ನೆಡೆಗೆ ನುಗ್ಗುತಿದ್ದ ಕುಂಭಕರ್ಣ ಶಿರವನ್ನು ಕಂಡ ಸೂರ್ಯನು–'ನಿಜ ಹಸ್ತದಬುಜವ ಬಿಸುಟು ದುಸ್ತರದ ಮಂದೇಹ ವಿಜಯದ ಖಡ್ಗವನ್ನು ಸೆಳೆದು' ನಿಲ್ಲುತ್ತಾನೆ.[8]

೩) ಕತ್ತರಿಸಲ್ಪಟ್ಟ ಕುಂಭಕರ್ಣಶಿರವು ರಾಮನನ್ನು ಮತ್ತೆ ಎದುರಿಸುತ್ತದೆ. ಆಗ ವಿಭೀಷಣನು,

ತೊಲಗು ತೊಲಗೆಲೆ ರಾಮ ಕೈದುವ
ತೊಲಗ ಬಿಸುಟರೆ ಬಿಡುವುದಲ್ಲದೆ
ತಲೆ ಬಿಡದು ಬವರಿಗರ–

---

1. ಮಹಾನಾಟಕ (ಅಂಕ ೧೧) ದಲ್ಲಿ ಹನುಮಂತನು ತನ್ನ ಒಂದು ಪ್ರಹಾರ ಮೂಲಕ ಹಿಮಾಲಯದೆಡೆಗೆ ಹೋಗಿ ಬೀಳುವಂತೆ ಮಾಡುತ್ತಾನೆ.

2. ಕಂಬ ರಾಮಾಯಣ (೬–೧೫. ಸಂಗ್ರಹ ಪುಟ೯೦)ದಲ್ಲಿ ಕುಂಭಕರ್ಣನು ಸಾಯುವ ಮೊದಲು ರಾಮನನ್ನು ಅನಾದಿ ಪುರುಷನೆಂದು ಒಪ್ಪಿಕೊಳ್ಳುತ್ತಾನೆ. ಅಲ್ಲದೆ, ರಾಮನೊಡನೆ ತನ್ನ ತಲೆಯನ್ನು ಸಮುದ್ರಕ್ಕೆಸೆಯಬೇಕೆಂದು ಕೇಳಿಕೊಳ್ಳುತ್ತಾನೆ. ಅದರಂತೆ ಅವನ ತಲೆಯನ್ನು ಸಮುದ್ರಕ್ಕೆ ಎಸೆಯಲಾಗುತ್ತದೆ.

3. ರಾಮಚರಿತ ಮಾನಸ (ಸಂಗ್ರಹ. ಪು. ೨೨೪) ದಂತೆ ಕುಂಭಕರ್ಣನಿಗೆ ಸದ್ಗತಿಯಾಗುತ್ತದೆ. ಅವನ ರುಂಡವು ಶ್ರೀರಾಮಬಾಣದಿಂದ ಬೇರ್ಪಡಿಸಲ್ಪಟ್ಟು ಹಾರಿ ರಾವಣನ ಎದುರಿಗೆ ಬೀಳುತ್ತದೆ.

4. ವಾ. ರಾ. (ದಾಕ್ಷಿಣಾತ್ಯ ಪಾಠ) VI ೬೭–೧೦೦ರಿಂದ ೧೧೫.

5. ರಾಮೋಪಾಖ್ಯಾನ–ಅಧ್ಯಾಯ ೨೮೭.

6. ಸೇತು ಮಾಹಾತ್ಮ್ಯ–ಅಧ್ಯಾಯ ೪೪.

7. ತೊ. ರಾ. VI ೨೮–೪೦.

8. ಇದೇ. VI ೨೮–೫೭.

ಎಂದು ರಾಮನನ್ನು ಎಚ್ಚರಿಸಲು, ರಾಮನು ಆ ಶಿರವನ್ನು ಅಸ್ತ್ರದ ಮೊನೆಯಲ್ಲಿ ನಿಲ್ಲಿಸುತ್ತಾನೆ. ಆಗ ಆ ತಲೆಯು "ಶೂಲದಗ್ರದ ಕಟ್ಟ ಕಳ್ಳನ ತಲೆಯವೊಲು" ತೋರುತ್ತದೆ.[1]

೪. ತಲೆ ಹೋದರೂ, ಕುಂಭಕರ್ಣನ ಕಬಂಧವು 'ಏಳು ಅರ್ಬುದ ಕಪಿಸೇನೆ'ಯನ್ನು 'ಕಾಲು ಗೊಲೆ' ಯಲ್ಲಿ ಕೊಲ್ಲುತ್ತದೆ. ರಾಮನು ಆ ಕಬಂಧದ ತೊಡೆ, ಜಾನು, ಜಂಘೆಗಳನ್ನು ಕಡಿದರೂ–ಆ ತುಂಡಾದ ಅವಯವಗಳೂ ಕಪಿಗಳನ್ನು ಬೆನ್ನಟ್ಟಿ ಕೊಲ್ಲುತ್ತವೆ. ಆಗ ವಿಭೀಷಣನು,

> ದೇವ ನಮ್ಮ ಕುಂಭಕರ್ಣಂ
> ಗಾವಿರಿಂಚಿ ಮಹಾಸುಷುಪ್ತಿಯು
> ನೀವ ಕಾಲದಲಿತ್ತನೀ ಖಳ ಬೇಡಲನುಪಮದ,
> ಜೀವರತ್ನವನದರುಪದೆಸೆಯಿಂ
> ಸಾವು ಸಮನಿಸದಿನಗೆ ಕೇಳಿಲೆ
> ದೇವ ಕಳುಹು ಖಳೋತ್ತಮನ ಮಸ್ತಕದ ಮಣಿಗೆಂದ[2]

ಎಂದು ಸೂಚನೆ ನೀಡಲು, ರಾಮನು ಅದರಂತೆ, ರಕ್ಕಸನ ಶಿರೋಮಧ್ಯಕ್ಕೆ ಬಾಣ ಪ್ರಯೋಗಿಸುತ್ತಾನೆ.

೫. ವಿಭೀಷಣನ ಸೂಚನೆಯಂತೆ, ರಾಮನು ತನ್ನ 'ಬಾಣ ಸಾರದ ತುದಿಯ ರಕ್ಕಸದಲೆಯ ರತುನವನುಗಿದಾ ಕ್ಷಣದಲ್ಲಿಯೇ–[3]

> ಸರಳೊಡೆದ ತೀವ್ರತೆಗೆ ಬಿದ್ದುದು
> ಸುರುಚಿರದಮಣಿಮುಕುಟ ಸಿಂಗಣ
> ದರಸುಭೂಮಿಯಲಿಳಿ ರಸಾತಳಕಾಳಿ ರಕ್ಕಸನ,
> ಶಿರಕೆಡೆದುದಾ, ಕೊಲುನ ಕಡಿಗಳ
> ಹರಹು ನಿಂದುದು ಕೊಂಡು ಬಂದುದು
> ಬರುತ ಬಾಣ ತದೀಯ ರತ್ನವನರಸನಿದ್ದೆಡೆಗೆ.[4]

---

1. ತೊ. ರಾ. VI ೨೮–೬೦.

ಭಾವಾರ್ಥರಾಮಾಯಣ (ಮರಾಠಿ) ದಲ್ಲಿ ಇದನ್ನೇ ಹೋಲುವ ಕಥೆ ಸಿಗುತ್ತದೆ.

ರಾಮನಿಂದ ಕತ್ತರಿಸಲ್ಪಟ್ಟ ಕುಂಭಕರ್ಣಶಿರವು ಆಕಾಶವನ್ನೇರಿ, ಮತ್ತೆ ಹೋರಾಟಕ್ಕೆ ತೊಡಗುತ್ತದೆ. ತನ್ನ ಶತ್ರುವು ಬೆನ್ನು ತೋರಿಸದ ವಿನಾ ಕುಂಭಕರ್ಣನ ಶರೀರವು ಉರುಳುವುದಿಲ್ಲವೆಂದು ಅವನಿಗೆ ವರವಿರುತ್ತದೆ. ಇದನ್ನರಿತಿದ್ದ ವಿಭೀಷಣನು ರಾಮನೊಡನೆ ಕ್ಷಣಮಾತ್ರವಾದರೂ ತನ್ನ ಬೆನ್ನು ತೋರಿಸುವಂತೆ ಕೇಳಿಕೊಳ್ಳುತ್ತಾನೆ. ಆದರೆ ರಾಮನು ರಣಕಣದಲ್ಲಿ ಬೆನ್ನು ತೋರಿಸಲು ಒಪ್ಪುವುದಿಲ್ಲ. ಆಗ ಹನುಮಂತನು ತನ್ನ ಬಾಲದಿಂದ ರಾಮನ ಬೆನ್ನನ್ನು ಸ್ಪರ್ಶಿಸಲು, ರಾಮನು ಪಕ್ಕನೆ ತಿರುಗಿ, ಅದೇನೆಂದು ನೋಡಿದಾಗ, ಅವನು ಬೆನ್ನು ತೋರಿಸಿದಂತಾದುದರಿಂದ ಕುಂಭಕರ್ಣನ ಕಬಂಧವು ಉರುಳುತ್ತದೆ. (ಭಾ. ರಾ. ೬–೨೮ : ಬುಲ್ಕೆ–ರಾಮಕಥಾ ಪು. ೫೭೧)

2. ತೊ. ರಾ. VI ೨೮–೬೪.

3. ಕುಮಾರ ವಾಲ್ಮೀಕಿ ಹೇಳುವ ಕುಂಭಕರ್ಣನ ಜೀವರತ್ನದ ವಿಚಾರವು ಇವನಿಗೇ ವಿಶಿಷ್ಟವಾದುದು.

ಜಟಾಯು (III ೧೦–೨೬) ಇಂದ್ರಜಿತು (ನಿದ್ರಾಹಾರಮೈಥುನವರ್ಜಿತರಾದವರಿಂದ ಮಾತ್ರ ಮರಣ ಎಂಬ ರಹಸ್ಯ (VI ೪೩-೨೧), ರಾವಣ (ಮರಣ ವಕ್ಷಸ್ಥಲದಲಿ ಎಂಬ ನಂದೀಶ್ವರನ ಶಾಪ–VI ೫೧-೬೧)-ಹೀಗೆ ವಾ. ರಾ. ದಲ್ಲಿಲ್ಲದ 'ಜೀವ ಮರ್ಮ' ರಹಸ್ಯಗಳನ್ನು ಕುಮಾರ ವಾಲ್ಮೀಕಿ ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು.

4. ತೊ. ರಾ. VI ೨೮-೬೬.

ಕುಂಭಕರ್ಣನ ಮಣಿಮಕುಟವು (ರಾಮನೆಸೆದ ಬಾಣದ ರಭಸಕ್ಕೆ) ಸಿಂಗಣ ಅರಸರ ಭೂಮಿಯಲ್ಲಿಯೂ,[1] ತಲೆಯು 'ಇಳೆ ರಸಾತಳಕಾಳುವಂತೆ ಭೂಮಿಯಲ್ಲಿಯೂ'[1] ಬಿದ್ದುದಾಗಿ ಕವಿಯು ವರ್ಣಿಸುತ್ತಾನೆ.[2]

## ವೈಷ್ಣವ–ವೀರ ಅತಿಕಾಯ

ರಾವಣ ಪುತ್ರ ಅತಿಕಾಯನನ್ನು ವೈಷ್ಣವ ವೀರ ಅತಿಕಾಯನನ್ನಾಗಿ ಮಾಡಿ, ಅವನಿಂದ ರಣಕಣದಲ್ಲಿ 'ಸರಳ–ಷೋಡಶೋಪಚಾರ' ಮಾಡಿಸಿ–ಭವಮುಕ್ತನಾದ ಕಥೆಯನ್ನು "ತನ್ನದೇ ಆದ ವೈಶಿಷ್ಟ್ಯಗಳೊಂದಿಗೆ" ಕುಮಾರ ವಾಲ್ಮೀಕಿಯು ವರ್ಣಿಸಿ, 'ಅತಿಕಾಯ ಪಾತ್ರ ಕಲ್ಪನೆ'ಯ ಮೂಲಕ ಕನ್ನಡ ಸಾಹಿತ್ಯದಲ್ಲಿ (ಯಕ್ಷಗಾನ ಪ್ರಪಂಚದಲ್ಲಿಯೂ) ಭದ್ರವಾದ ಸ್ಥಾನವನ್ನು ಗಳಿಸಿಕೊಂಡ ವಿಚಾರವನ್ನು ಈ ಮೊದಲೇ[3] ಪ್ರಸ್ತಾವಿಸಲಾಗಿದೆ.

## ಇಂದ್ರಜಿತು–ಪ್ರಕರಣ

ವಾಲ್ಮೀಕಿ ರಾಮಾಯಣದಲ್ಲಿ ಇಂದ್ರಜಿತುವು[4] ನಡೆಸಿದ (ಯುದ್ಧಕಾಂಡದಲ್ಲಿ) ಆರು ಯುದ್ಧಗಳ ವರ್ಣನೆಯು ದೊರೆಯುತ್ತದೆ.

೧. ಪ್ರಥಮ ಯುದ್ಧದಲ್ಲಿ ಇಂದ್ರಜಿತುವು ಸರ್ಪಾಸ್ತ್ರದಿಂದ ರಾಮಲಕ್ಷ್ಮಣರನ್ನು ಬಂಧಿಸುತ್ತಾನೆ.[5]

೨. ದ್ವಿತೀಯ ಯುದ್ಧ : ಇಂದ್ರಜಿತುವು ಆಭಿಚಾರಿಕ ಹೋಮವನ್ನು ಮಾಡಿ, ಬ್ರಹ್ಮಾಸ್ತ್ರವನ್ನು ಸಂಪಾದಿಸಿಕೊಂಡು, ಮಾಯಾ ಯುದ್ಧ ನಡೆಸಿ, ರಾಮಲಕ್ಷ್ಮಣರನ್ನೂ, ಕಪಿಯೋಧರನ್ನೂ ಮೂರ್ಛೆಗೊಳಿಸಿ ಲಂಕೆಗೆ ಹಿಂದಿರುಗುತ್ತಾನೆ.[6]

---

1. ಇಲ್ಲಿ-ಸಿಂಗಣವರಸುಭೂಮಿಯಲಿ ಎಂದರೆ (ಸಿಂಗಣ್ಣ ಲಂಕೆ-ಎಂದು ತೊ. ರಾ. ದ ಸಂಪಾದಕರು ಅರ್ಥೈಸಿದ್ದರೂ) ಲಂಕೆಗಿಂತಲೂ ಬಹುದೂರವಾದ ಸಿಂಗಣರಾಜ ಆಳುತ್ತಿದ್ದ (ದೇವಗಿರಿ ಪ್ರದೇಶ) ರಾಜ್ಯವೆಂದು ತಿಳಿಯುವುದೇ ಕವಿಯ ಆಶಯಕ್ಕೆ ಉಚಿತವಾದುದು.

ರಕ್ಕಸನ ತಲೆ ಭೂಮಿಗೆ ಬಿದ್ದಿತು, ಕಿರೀಟಮಾತ್ರ (ಈ ಕಿರೀಟ ಹಾರಿದ ಕಲ್ಪನೆ ಕುಮಾರ ವಾಲ್ಮೀಕಿಯದೇ) ಸರಳೊದೆದ ತೀವ್ರತೆಗೆ ಬಹುದೂರ ಎಂದರೆ 'ಸಿಂಗಣರಾಜ್ಯ' ದಲ್ಲಿ ಬಿದ್ದಿತು-ಎನ್ನಬೇಕು. ಅಷ್ಟಲ್ಲದೇ 'ಸೇವುಣ, ಕಲಿಸೇವುಣ, ಎಂದು ಆ ವಂಶದ ರಾಜರ ಹೆಸರು ಹೇಳಿ ಆ ರಾಜವಂಶದ ಪರಿಚಯವನ್ನು ವ್ಯಕ್ತಗೊಳಿಸಿದ ಕವಿಯು, ಅದೇ ವಂಶದಲ್ಲಿ ಪ್ರಸಿದ್ಧನಾದ 'ಸಿಂಗಣ (ಅರಸು)'ನನ್ನು ಸಿಂಹಳ ಲಂಕೆ ಎಂಬ ಅರ್ಥದಲ್ಲಿ ಬಳಸಿರಲಾರ. ಇತರೆಡೆಗಳಲ್ಲಿ ಈ ಅರ್ಥದಲ್ಲಿ ಬಳಸಿದ್ದೂ ಇಲ್ಲ. ಮಹಾನಾಟಕದಲ್ಲಿ 'ಕುಂಭಕರ್ಣನು ಹಿಮಾಲಯಕ್ಕೆ ಹೋಗಿಬಿದ್ದನು' ಎಂದಿರುವುದೂ ಇಲ್ಲಿ ಸ್ಮರಣೀಯ.

2. ಕುಮಾರ ವಾಲ್ಮೀಕಿಯ ಮೇಲಿನ ವರ್ಣನೆಗಳಿಗೆ ವಾ. ರಾ. ದಲ್ಲಿನ ಈ ಕೆಳಗಿನ ಉಲ್ಲೇಖಗಳು ಪ್ರೇರಕಗಳಿರಬಹುದು.

ಅ) ಸ ಕುಂಭಕರ್ಣೋಽಸ್ತ್ರ ನಿಕೃತ್ತಬಾಹುರ್ಮಹೇಂದ್ರ ಕೃತ್ತಾಗ್ರ ಇವಾಚಲೇಂದ್ರಃ
ಉತ್ಪಾಟಯಾಮಾಸ ಕರೇಣ ವೃಕ್ಷಂ ತತೋಽಭಿದುದ್ರಾವ ರಣೇ ನರೇಂದ್ರಮ್–

VI ೬೭-೧೭೧.

ಆ) ಕುಂಭಕರ್ಣಶಿರೋ ಭಾತಿ ಕುಂಡಲಾಲಂಕೃತಂ ಮಹತ್
ಆದಿತ್ಯೇಽಭ್ಯುದಿತೇ ರಾತ್ರೌ ಮಧ್ಯಸ್ಥ ಇವ ಚಂದ್ರಮಾಃ

VI ೬೭-೧೮೨.

ಇ) ತದ್ರಾಮಬಾಣಾಭಿಹತಂ ಪಪಾತ ರಕ್ಷಃ ಶಿರಃ ಪರ್ವತ ಸಂನಿಕಾಶಮ್.......

VI ೬೭-೧೮೩.

3. ಇದೇ ಪ್ರಬಂಧದ 'ಪಾತ್ರ ಪರಿಶೀಲನೆ–ಅತಿಕಾಯ ಪಾತ್ರ'-ಪ್ರಕರಣ ನೋಡಬಹುದು.
4. ಉತ್ತರಕಾಂಡ ರಾಮಾಯಣ (ಸರ್ಗ ೨೯-೩೦) ದಲ್ಲಿ ಮೇಘನಾದನು ಇಂದ್ರಜಿತುವಾದ ಸಾಹಸದ ಕಥೆ ಇದೆ.
5. ವಾ. ರಾ. VI ಸರ್ಗ ೪೫.
6. ಅದೇ. ಸರ್ಗ ೭೩.

೩. ತೃತೀಯ ಯುದ್ಧ : ಆಭಿಚಾರಿಕ ಹೋಮನಡೆಸಿ, ಅದೃಶ್ಯನಾಗಿ ರಾಮ–ಲಕ್ಷ್ಮಣರೊಡನೆ ಹೋರಾಡುತ್ತಾನೆ. ಈ ಮೊದಲು ಅವನು ರಾಕ್ಷಸದೇವತಾಕವಾದ ಮಂತ್ರಗಳಿಂದ ಅಗ್ನಿಯಲ್ಲಿ ಹವನ ಮಾಡಿ 'ಅಂತರ್ಧಾನ ಶಕ್ತಿ'ಯನ್ನು ಪಡೆದಿರುತ್ತಾನೆ.[1]

೪. ಚತುರ್ಥ ಯುದ್ಧ : ಮಾಯಾ ಸೀತೆಯನ್ನು ನಿರ್ಮಿಸಿ, ಅವಳನ್ನು ಹನುಮಂತನೆದುರು ಛೇದಿಸುತ್ತಾನೆ.[2]–ಹನುಮ ಮೊದಲಾದ ಕಪಿವೀರರೊಡನೆ ಯುದ್ಧವಾದನಂತರ ನಿಕುಂಭಿಳೆಗೆ ಹೋಗಿ ಯಜ್ಞ ಆರಂಭಿಸುತ್ತಾನೆ.

ಸ ಹೋತುಕಾಮೋ ದುಷ್ಟಾತ್ಮಾ ಗತಶ್ಚೈತ್ಯ ನಿಕುಂಭಿಲಾಮ್
ನಿಕುಂಭಿಲಾಮಧಿಷ್ಠಾಯ ಪಾವಕಂ ಜುಹವೇಂದ್ರಜಿತ್[3]

೫. ಐದನೇ ಯುದ್ಧ : ಲಕ್ಷ್ಮಣನೂ, ವಾನರಯೋಧರೂ ರಾಕ್ಷಸ ಸೇನೆಯನ್ನು ಛೇದಿಸಲು ಕುಪಿತನಾದ ಇಂದ್ರಜಿತು ತನ್ನ ಹೋಮಕಾರ್ಯವನ್ನು ಮುಗಿಸದೆ ಯುದ್ಧಕ್ಕೆ ಬರುತ್ತಾನೆ.

ಉಪತಿಷ್ಠತ ದುರ್ಧರ್ಷಸ್ತತ್ಕರ್ಮಣ್ಯನನುಷ್ಠಿತೇ[4]

ಯುದ್ಧದ ಅಂತ್ಯದಲ್ಲಿ ಲಕ್ಷ್ಮಣನು ಇಂದ್ರಜಿತುವಿನ ಸಾರಥಿಯನ್ನು ಕೊಲ್ಲುತ್ತಾನೆ. ಆಗ ರಾವಣಿಯು (ಇಂದ್ರಜಿತು) 'ವಂಚಯಿತ್ವಾ ವನೌಕಸಃ ಪ್ರವಿವೇಶ ಪುರೀಂ ಲಂಕಾಂ ರಥಹೇತೋರಮಿತ್ರಹಾ'–ವಾನರರಿಗೆ ತಿಳಿಯದಂತೆ ವಂಚಿಸಿ, ರಥವನ್ನು ತರುವುದಾಗಿ ಲಂಕೆಗೆ ತೆರಳುತ್ತಾನೆ.[5]

೬. ಕೊನೆಯ ಯುದ್ಧ : ಪುನಃ ಲಕ್ಷ್ಮಣನು ಇಂದ್ರಜಿತುವಿನ ಸಾರಥಿಯನ್ನೂ,[6] ವಿಭೀಷಣನು,–ಸಾರಥಿಯಿಲ್ಲದಿದ್ದರೂ ಮುನ್ನಡೆಯುತಿದ್ದ[7]–ರಥಾಶ್ವಗಳನ್ನು ಬಡಿದು ಕೊಂದನು.[8] ಕೊನೆಯಲ್ಲಿ ಲಕ್ಷ್ಮಣನು ಇಂದ್ರಾಸ್ತ್ರದ ಮೂಲಕ ಇಂದ್ರಜಿತುವನ್ನು ಸಂಹರಿಸುತ್ತಾನೆ.[9]

ತೊರವೆ ರಾಮಾಯಣದಲ್ಲಿ ಇಂದ್ರಜಿತುವಿನ ಯುದ್ಧವರ್ಣನೆಯು ಯುದ್ಧಕಾಂಡದ ೧೫, ೩೫, ೪೧, ೪೨, ೪೩, ೪೪–ಸಂಧಿಗಳಲ್ಲಿ ದೊರೆಯುತ್ತದೆ. ಈ ಭಾಗದಲ್ಲಿ ವಿಶಿಷ್ಟವಾದ ಅಂಶಗಳು ಈ ಕೆಳಗಿನಂತಿವೆ :

೧. ವಾಲ್ಮೀಕಿ ರಾಮಾಯಣದಲ್ಲಿ ಇಂದ್ರಜಿತು ನಿರ್ಮಿತಳಾದ ಮಾಯಾ ಸೀತೆಯು 'ರಾಮ, ರಾಮ'ಎಂದು ಮಾತ್ರ ಕೂಗಿಕೊಳ್ಳುತ್ತಾಳೆ.[10] ಕುಮಾರ ವಾಲ್ಮೀಕಿಯ ಮಾಯಾಸೀತೆಯು ಹನುಮಂತನನ್ನು ಕಂಡು ತನ್ನ ಪ್ರಾರಬ್ಧವನ್ನು ತಿಳಿಸಿ ಬಹಳವಾಗಿ ಹಲುಬುತ್ತಾಳೆ.[11] ಇದರಿಂದ ಹನುಮಂತನ ಮೇಲೆ ಪರಿಣಾಮವಾಗಲಿ, ಇಂದ್ರಜಿತುವಿನ ಮಾಯೆಯಲ್ಲ ಎಂಬ ಕಲ್ಪನೆ ಅವನಲ್ಲಾಗಲಿ–ಎಂಬ ಉದ್ದೇಶ ಕವಿಗಿರಬಹುದು.

೨. ವಾ. ರಾ. ದಲ್ಲಿ, ಸೀತೆಯ ವಧೆಯಾಯಿತೆಂದು ದುಃಖಿಸುತ್ತಿದ್ದ ರಾಮನಿಗೆ ವಿಭೀಷಣನು,

ಅಭಿಪ್ರಾಯಂ ತು ಜಾನಾಮಿ ರಾವಣಸ್ಯ ದುರಾತ್ಮನಃ
ಸೀತಾಂ ಪ್ರತಿ ಮಹಾಬಾಹೋ ನ ಚ ಘಾತಂ ಕರಿಷ್ಯತಿ[12]

---

1. ವಾ. ರಾ. VI ಸರ್ಗ ೮೦.
2. ಇದೇ. ಸರ್ಗ ೮೧.
3. ಇತೇ. ೮೨–೨೫.
4. ಇದೇ. ೮೬–೧೪.
5. ಇದೇ. ೯೧–೪.
6. ವಾ. ರಾ. VI ೯೧–೨೪
7. ಇದೇ. ೯೧–೨೯.
8. ಇದೇ. ೯೧–೪೨.
9. ಇದೇ. ೯೧–೬೫, ೭೬.
10. ವಾ. ರಾ. VI ೮೧–೧೬.

ಈ ಮಾಯಾ ಸೀತಾವೃತ್ತಾಂತವು ಆದಿರಾಮಾಯಣದಲ್ಲಿ ಇದ್ದಿರಲಾರದು ಎಂಬ ತರ್ಕವಿದೆ. ಮಹಾಭಾರತದ ರಾಮೋಪಾಖ್ಯಾನದಲ್ಲಿ ಈ ವೃತ್ತಾಂತವಿಲ್ಲ. ಆದರೆ ಮಾಯಾ ಸೀತಾ-ವೃತ್ತಾಂತವನ್ನೇ ಹೋಲುವ 'ಮಾಯಾ-ವಸುದೇವ'ನ ಕಥೆಯೊಂದು ಮಹಾಭಾರತದಲ್ಲಿ (೩–೨೨)ಇದೆ.

11. ತೊ. ರಾ. VI ೪೧-೨೩ ರಿಂದ ೨೯.
12. ವಾ. ರಾ. VI ೮೪-೧೦.

"ರಾವಣನ ಅಭಿಪ್ರಾಯವೇನೆಂದು ನನಗೆ ಗೊತ್ತಿದೆ. ಅವನು ಎಂದಿಗೂ ಸೀತೆಯನ್ನು ಕೊಲ್ಲುವುದಿಲ್ಲ" ಎಂದು ತಿಳಿಸಿ, ಇದೆಲ್ಲವೂ ಆ ಇಂದ್ರಜಿತುವಿನ ಮಾಯೆ ಎಂದು ಧೈರ್ಯನುಡಿಯುತ್ತಾನೆ.[1] ಕುಮಾರ ವಾಲ್ಮೀಕಿಯ ವಿಭೀಷಣನು ರಾವಣನ ಮನೋಧರ್ಮದ ಕುರಿತು ಪ್ರಸ್ತಾವಿಸದೆ, 'ಇದು ಕಣಾ ಮಾಯಾವಿಗಳು ಮಾಡಿದ ಮಹಾ ಶಾಂಬರದ ಕೆಲಸ' ಎಂದು ಧೈರ್ಯ ತುಂಬುತ್ತಾನೆ. ಅಷ್ಟಲ್ಲದೆ, ಹನುಮಂತನನ್ನು ಅಶೋಕವನಕ್ಕೆ ಕಳುಹಿ ಅಲ್ಲಿ ನಿಜಸೀತೆ ಇರುವುದನ್ನು ದೃಢಪಡಿಸುತ್ತಾನೆ.[2]

೩. ವಿಭೀಷಣನು ಮುಟ್ಟಿದೊಡನೆಯೇ ಇಂದ್ರಜಿತು ನಿರ್ಮಿಸಿದ ಮಾಯಾಕೃತಿಯು ಅದೃಶ್ಯವಾಗುತ್ತದೆ.[3]

೪. ವಾ. ರಾ. ದಲ್ಲಿ ವಿಭೀಷಣನ ಸಲಹೆಯಂತೆ ಇಂದ್ರಜಿತುವಿನ ಯಜ್ಞಭಂಗಕ್ಕಾಗಿ ನಿಕುಂಭಿಳೆಗೆ ಲಕ್ಷ್ಮಣನ ನಾಯಕತ್ವದಲ್ಲಿ ಕಪಿವೀರರು ತೆರಳುತ್ತಾರೆ.[4] ಇದೇ ಸನ್ನಿವೇಶದಲ್ಲಿ ತೊ. ರಾ. ದಲ್ಲಿ ವಿಭೀಷಣನು ರಾಮನೊಡನೆ,

> ನಿನ್ನ ಸೇನೆಯಲುಂಟೆ ವತ್ಸರ
> ಹನ್ನೆರಡರುಪವಾಸದವರು ವಿ
> ಭಿನ್ನ ನಿದ್ರಾವಶರು ವನಿತಾ ಸಂಗವರ್ಜಿತರು
> ಉನ್ನತಾಹವ ವೀರರುಳ್ಳಡೆ
> ತನ್ನ ಬಳಿಯಲಿ ಕಳುಹು ತಡವೇ
> ಕಿನ್ನು ಬೇಗ ವಿಚಾರಿಸೆಂದು ವಿಭೀಷಣನು ನುಡಿದ.[5]

ಎಂದು "ಅಂತಹ ಯೋಗ್ಯತೆಯುಳ್ಳವರು ಯಾರಿದ್ದಾರೆ ?" ಎಂದು ವಿಚಾರಿಸುತ್ತಾನೆ. ಆಗ ಲಕ್ಷ್ಮಣನು ತಾನು ಮುಂದಾಗಲು, ತನ್ನ ತಮ್ಮನ 'ಯೋಗ್ಯತೆ'ಯ ರಹಸ್ಯವನ್ನು ತಿಳಿಯಬಯಸಿದ ರಾಮನಿಗೆ ಲಕ್ಷ್ಮಣನು ಅದನ್ನು ಮುಂದೆ ತಿಳಿಸುವುದಾಗಿ ಹೇಳಿ, ಅಪ್ಪಣೆಪಡೆದು ಹೊರಡುತ್ತಾನೆ. (ಮುಂದೆ, ಇಂದ್ರಜಿತು ವಧೆಯಾದ ಮೇಲೆ ಆ ರಹಸ್ಯವನ್ನು ಅಣ್ಣನಿಗೆ ಲಕ್ಷ್ಮಣನು ತಿಳಿಸುತ್ತಾನೆ.)

---

1. ಆನಂದ ರಾಮಾಯಣದಲ್ಲಿ ರಾವಣನೇ ಕೃತ್ರಿಮ ಸೀತೆಯನ್ನು ನಿರ್ಮಿಸಿ ವಾನರ ಸೇನೆಯ ಮುಂದೆ ವಧೆ ಮಾಡಿದಂತೆಯೂ, ಆಗ ಬ್ರಹ್ಮನೇ ಬಂದು ರಾಮಾದಿಗಳಿಗೆ ಸಮಾಧಾನ ನೀಡಿದಂತೆಯೂ ಕಥೆ ಇದೆ :

   ವಿಧಾಯ ಕೃತ್ರಿಮಾಂ ಸೀತಾಂ ಮಾಯೇನ ಸ ದಶಾನನಃ (I ೧೧-೧೪೮.)

   ......................................

   ಬ್ರಹ್ಮನು, ಕೃತ್ರಿಮೇಯಂ ಹತಾ ಸೀತಾ ಮಾ ಖೇದ ಭಜತ್ವಾಽಧುಹಿ (I ೧೧-೨೫೦.)

2. ಕಂಬರಾಮಾಯಣದಲ್ಲಿ ವಿಭೀಷಣನೇ ದುಂಬಿಯ ರೂಪದಲ್ಲಿ ಅಶೋಕವನಕ್ಕೆ ಹೋಗಿ, ಸೀತೆಯನ್ನು ಕಂಡು, ಅಲ್ಲಿಂದ ಮುಂದೆ ಇಂದ್ರಜಿತು ಯಾಗಕ್ಕಾಗಿ ನಿಕುಂಭಿಳೆಯನ್ನು ಪ್ರವೇಶಿಸುತ್ತಿರುವುದನ್ನೂ ತಿಳಿದುಕೊಂಡು ಬರುತ್ತಾನೆ. (ಕಂಬ ರಾಮಾಯಣ-ಸಂಗ್ರಹ ಪು. ೯೬)

   ರಂಗನಾಥ ರಾಮಾಯಣದಲ್ಲಿ ವಿಭೀಷಣನು ಸೂಕ್ಷ್ಮರೂಪದಲ್ಲಿ ತೆರಳಿದನೆಂದು ಮಾತ್ರ ಇದೆ. (ರಾಮಕಥಾ ೫೭೪)

3. ತೊ. ರಾ. VI ೪೧-೬೦.
4. ವಾ. ರಾ. VI ಸರ್ಗ ೮೫.
5. ತೊ. ರಾ. VI ೪೨-೧೪.

   ಈ ವಿಚಾರದಲ್ಲಿ ಕವಿಯು ಅಧ್ಯಾತ್ಮ ರಾಮಾಯಣ ಮತ್ತು ಆನಂದ ರಾಮಾಯಣಗಳಿಂದ ಪ್ರಭಾವಿತನಾಗಿದ್ದಾನೆ.

   ವಿಭೀಷಣೋಽಪಿತಂ ಪ್ರಾಹನಾವಸ್ಯೈರ್ನಿಹನ್ಯತೇ
   ಯಸ್ತು ದ್ವಾದಶ ವರ್ಷಾಣಿ ನಿದ್ರಾಹಾರವಿವರ್ಜಿತಃ...—ಅ. ರಾ. VI ೮-೬೪.

   ಇದೇ ಉಲ್ಲೇಖವು ಆನಂದ ರಾಮಾಯಣದ I ೧೧-೧೬೬ರಲ್ಲಿದೆ.

   ಈ ಎರಡು ರಾಮಾಯಣಗಳಲ್ಲಿ ನಿದ್ರಾಹಾರಗಳ ವರ್ಜನೆಯ ವಿಚಾರಮಾತ್ರವಿದೆ. ಕುಮಾರ ವಾಲ್ಮೀಕಿಯು ವನಿತಾ ಸಂಗ ವರ್ಜನೆಯನ್ನು ಹೆಚ್ಚಾಗಿ ಹೇಳಿದ್ದಾನೆ. (ಬುಲ್ಕೆ, ಕೃತ್ತಿವಾಸ ರಾ, ಬಲದಾಸ ಕೃತರಾಮಾಯಣಗಳಲ್ಲಿ ಸ್ತ್ರೀ ಸಂಗ ವರ್ಜನೆಯ ವಿಚಾರವಿದೆ, ಎನ್ನುತ್ತಾರೆ—ರಾಮಕಥಾ ಪು. ೪೧೫)

ಆದಿಕಾವ್ಯದಲ್ಲಿ ಲಕ್ಷ್ಮಣನ ಜಾಗರಣೆ ಉಪವಾಸಗಳಿಗೆ ಎಲ್ಲೂ, ಯಾವ ಆಧಾರವೂ ಸಿಗುವುದಿಲ್ಲ. ವನವಾಸದ ಮೊದಲ ರಾತ್ರಿ ಮಾತ್ರ, ಲಕ್ಷ್ಮಣನು ಗುಹನೊಡನೆ ಮಾನಾಡುತ್ತಾ ನಿದ್ದೆಮಾಡಲಿಲ್ಲ ಎಂಬ ವಿಚಾರವಿದೆ.

ಪರಿದೇವಯಮಾನಸ್ಯದುಃಖಾರ್ತಸ್ಯ ಮಹಾತ್ಮನಃ
ತಿಷ್ಠತೋ ರಾಜಪುತ್ರಸ್ಯ ಶರ್ವರೀ ಸಾತ್ಯವರ್ತತ.[1]

ಮುಂದೆಂದೂ ಲಕ್ಷ್ಮಣನು ನಿದ್ದೆಯೇ (೧೪ ವರ್ಷಗಳಲ್ಲಿ) ಮಾಡಲಿಲ್ಲ–ಎಂಬ ಉಲ್ಲೇಖವಿಲ್ಲ.[2]

ಶ್ರೀರಾಮನು ದಂಡಕಾರಣ್ಯದಲ್ಲಿದ್ದಾಗ ಅಲ್ಲಿನ ಮುನಿಗಳು ರಾಮಲಕ್ಷ್ಮಣರಿಗೆ ಫಲಮೂಲಗಳನ್ನೂ, ಪುಷ್ಪಗಳನ್ನೂ ವಿವಿಧ ಭೋಜ್ಯಗಳನ್ನೂ ಕೊಟ್ಟು ಸತ್ಕರಿಸುತ್ತಾರೆ :

ಏವಮುಕ್ತ್ವಾ ಫಲೈರ್ಮೂಲೈಃ ಪುಷ್ಪೈರ್ವನ್ಯೈಶ್ಚ ರಾಘವಮ್
ಅನ್ಯೈಶ್ಚ ವಿವಿಧಾಹಾರೈಃ ಸಲಕ್ಷ್ಮಣಮಪೂಜಯನ್[3]

ಇದರಿಂದ ಲಕ್ಷ್ಮಣನು ಉಪವಾಸವ್ರತಾಚರಣೆ ನಡೆಸುತಿದ್ದನೆಂಬುದಕ್ಕೆ ಆಧಾರವಿಲ್ಲ.

ಆದರೂ, ಕುಮಾರ ವಾಲ್ಮೀಕಿಯು ಇತರ ರಾಮಾಯಣಗಳನ್ನು ಆಕರಗಳನ್ನಾಗಿಸಿ, ಲಕ್ಷ್ಮಣನ ಅಲೌಕಿಕ ವ್ಯಕ್ತಿತ್ವವನ್ನು ಸೂಚಿಸುವ ದೃಷ್ಟಿಯಿಂದ ಅವನ ವಿಶೇಷ ಅರ್ಹತೆಯ ರಹಸ್ಯವನ್ನು ತನ್ನ ಕಾವ್ಯದಲ್ಲಿ ಅಳವಡಿಸಿಕೊಂಡಿರಬೇಕು.

೫. ಯುದ್ಧದಲ್ಲಿ ಬಳಲಿದ ಇಂದ್ರಜಿತುವಿಗೆ, ಮಯನು[4] ಮಾಯೆಯಲಿ ಬಂದು, ನಿಜ ದೌಹಿತ್ರ ಮೋಹದಲ ಮಳತರ ಕರಪಾತ್ರ ಜಲದಭಿಮಂತ್ರವನ್ನು ಚೆಲ್ಲಿ ಎಬ್ಬಿಸುತ್ತಾನೆ. ತನ್ನ ಅಂಗದಲ್ಲಿದ್ದ ಕವಚವನ್ನೇ ಮೊಮ್ಮಗನ ಮೈಗೆ ತೊಡಿಸುವುದಲ್ಲದೆ, ತನಗೆ ಬ್ರಹ್ಮನಿತ್ತ 'ನಿಶಿತಾಶುಗನನು, ಉಗ್ರ ಶರಾಸನವನ್ನು ಇತ್ತು' ತೆರಳುತ್ತಾನೆ.[5]

೬. ಲಕ್ಷ್ಮಣನು ಶಕ್ತಿಗುಂದಿದಾಗ ಬ್ರಹ್ಮಲೋಕದಿಂದ ವಾಯುದೇವನೇ ಇಳಿದು ಬಂದು ಲಲಿತ ವೈಷ್ಣವಾಸ್ತ್ರವನು ತಿಳುಹಿ ಕೊಟ್ಟು ಮರೆಯಾಗುತ್ತಾನೆ.[6]

೭. ವಾನರರ ಬಲ, ರಾಮಲಕ್ಷ್ಮಣರ ಅಪ್ರತಿಮ ಸಾಹಸಗಳನ್ನು ಕಂಡು ಇಂದ್ರಜಿತುವು ತನ್ನ ಮನಸ್ಸಿನಲ್ಲಿಯೇ,

---

1. ವಾ. ರಾ. II ೫೧–೨೬.

2. ಕಂಬರಾಮಾಯಣ (II ೬-೫೧) ದಲ್ಲಿ ನಿದ್ರಾದೇವಿಯೇ ಪ್ರತ್ಯಕ್ಷಳಾಗಿ, ವನವಾಸದ ಮೊದಲನೇ ರಾತ್ರಿ (ಲಕ್ಷ್ಮಣನು) ಶೃಂಗವೇರಪುರದಲ್ಲಿದ್ದಾಗ ಲಕ್ಷ್ಮಣನಿಗೆ, 'ಅಯೋಧ್ಯೆಗೆ ಮರಳುವವರೆಗೆ ನಿನ್ನ ಬಳಿಗೆ ಸುಳಿಯುವುದಿಲ್ಲ'-ಎಂದು ನುಡಿಯುತ್ತಾಳೆ.

3. ವಾ. ರಾ. III ೧-೨೨.

ರಾಮಚರಿತಮಾನಸದಲ್ಲಿಯೂ 'ಶೃಂಗವೇರಪುರದಲ್ಲಿ ರಾಮನು ಸೀತೆ, ಹಾಗೂ ಲಕ್ಷ್ಮಣರೊಡನೆ ಕಂದಮೂಲಗಳನ್ನು ಸೇವಿಸುತ್ತಾನೆ (ರಾಮಚರಿತಮಾನಸ-ಅನುವಾದ ಪು.೧೧೦-೧೧೧). ಕೆ. ಎಸ್. ರಾಮಸ್ವಾಮಿಶಾಸ್ತ್ರಿ–ರಿಡ್ಲ್ಸ್ ಆಫ್ ರಾಮಾಯಣ, ಪು. ೯೮ರಲ್ಲಿ–ಲಕ್ಷ್ಮಣನ ೧೪ ವರ್ಷಗಳ ಉಪವಾಸ ಹಾಗೂ ಜಾಗರಣೆಗಳು ಆದಿಕಾವ್ಯಕ್ಕನುಗುಣವಾಗಿಲ್ಲ-ಎಂದಿದ್ದಾರೆ.

4. ಮಯನು ಮಂಡೋದರಿಯ ತಂದೆ, ಇಂದ್ರಜಿತು ಮಯನ ಮೊಮ್ಮಗ, ಹೀಗಾಗಿ ಈ ವ್ಯಾಮೋಹ.

5. ತೊ. ರಾ. VI ೪೩-೨೭, ೨೮.

6. ಇದಕ್ಕೆ ವಾ. ರಾ. VI ೯೧-೬೩ ರಿಂದ ೬೫ ಪ್ರೇರಕವಾಗಿರಬಹುದು.

ಗಗನಸ್ಥಾನಿಭೂತಾನಿ ಲಕ್ಷ್ಮಣಂ ಪರ್ಯವಾರಯನ್—...

ಈತಗಳು ನರರಲ್ಲ, ನೆರೆದಿಹ
ಕೋತಿ ಕೋಡಗವಲ್ಲ, ನಮ್ಮಯ
ತಾತ ಬಯಸಿದ ವನಿತೆ ಮಾನವಿಯಲ್ಲ ಸಿದ್ಧವಿದು,
ಸೋತಡೆಯು ಸುಖ ದೈವದಲಿ ಧೈ
ರ್ಯಾತಿಶಯದಲಿ ಕಾದಿ ಕೀರ್ತಿಯ
ಬೈತಲೆಯನಪ್ಪುವುದೆ ಭಾವಜ್ಞರಿಗೆ ಗುಣವೆಂದ[1]

" ಎಂದು ದಿವ್ಯಜ್ಞಾನ ಹೊಂದಿ "ಹೋರಾಟವನ್ನು ಮುಂದುವರಿಸುತ್ತಾನೆ.[2]

೮. ಇಂದ್ರಜಿತುವಿನ ಶಿರವು ನಭಕ್ಕೆ ನೆಗೆಯುತ್ತದೆ, ತಲೆಹೋದರೂ, ಅವನ ಕಬಂಧವು ಬತ್ತಳಿಕೆಯ ಬಾಣ ಮುಗಿವವರೆಗೂ ಸಳುಗಳನ್ನೆಸೆಯುತ್ತಾ, ಕಿಗ್ಗಟ್ಟಿನ ಕಠಾರಿಯಿಂದ ತಿವಿಯುತ್ತಾ ಮುನ್ನುಗ್ಗುತ್ತದೆ. ಇಂದ್ರಜಿತುವಿನ ಶಿರವನ್ನು ಅವನ ಸಾರಥಿಯು ತಂದು ದಶಕಂಠನ ಓಲಗದೊಳಗೆ ಇಳುಹುತ್ತಾನೆ.[3]

## ರಾವಣ ವಧೆ

ವಾಲ್ಮೀಕಿ ರಾಮಾಯಣದಲ್ಲಿ,–ಮಹೋದರ, ಮಹಾಪಾರ್ಶ್ವ ಮತ್ತು ವಿರೂಪಾಕ್ಷರ ವಧೆಯಾದ ಮೇಲೆ ರಾವಣನು ಸ್ವಯಂ ರಣಭೂಮಿಯನ್ನು ಪ್ರವೇಶಿಸುತ್ತಾನೆ.[4]

ರಾಮ–ರಾವಣರೊಳಗೆ ಭೀಕರ ಯುದ್ಧ ನಡೆಯುತ್ತದೆ. ರಾವಣನ ಅಮೋಘ ಶಕ್ತಿ ಪ್ರಯೋಗದಿಂದ ಲಕ್ಷ್ಮಣನು ಮೂರ್ಛೆ ಹೊಂದುತ್ತಾನೆ.[5] ರಾಮನ ಶೌರ್ಯಾತಿರೇಕವನ್ನು ಎದುರಿಸಲಾರದೆ ರಾವಣನು ಪಲಾಯನಮಾಡುತ್ತಾನೆ.[6]

ಬೇರೊಂದು ರಥವನ್ನೇರಿ ಬಂದ ರಾವಣನೊಡನೆ ರಾಮನು ಯುದ್ಧ ನಡೆಸುತ್ತಿರಲು ಇಂದ್ರನು ತನ್ನ ರಥವನ್ನು ಮಾತಲಿಯೊಡನೆ ರಾಮನಿಗಾಗಿ ಕಳುಹುತ್ತಾನೆ.[7]

ರಾವಣನು ಇಂದ್ರ ರಥದ ಧ್ವಜವನ್ನು ಕತ್ತರಿಸುತ್ತಾನೆ.[8]

ಮುಂದೆ ನಡೆದ ರಾಮ–ರಾವಣಯುದ್ಧದಲ್ಲಿ (ದ್ವಂದ್ವಯುದ್ಧದಲ್ಲಿ) ರಾಮಬಾಣ ಪೀಡಿತನಾದ ರಾವಣನು ರಥದಲ್ಲಿ ಹತಪೌರುಷನಾಗಿ, ಕಂಗೆಟ್ಟಿರುವುದನ್ನು ಕಂಡು ಅವನ ಸಾರಥಿಯು ಅವನನ್ನು ರಣಭೂಮಿಯಿಂದ ಹೊರಗೆ ಕರೆದೊಯ್ಯುತ್ತಾನೆ.[9]

---

1. ತೊ. ರಾ. VI ೪೪-೪೫.
2. ತಂದೆಗೆ ಶರಣಾಗತಿ ಲೇಸು ಎನ್ನುತ್ತಾನೆ. (ಕಂಬರಾಮಾಯಣ) ಪು. ೯೭.
3. ಮಹಾನಾಟಕದಲ್ಲಿ (ಅಂಕ ೧೯) ಇಂದ್ರಜಿತುವಿನ ಶಿರವು ರಾವಣನ ಕೈಮೇಲೆ ಬೀಳುತ್ತದೆ.

ಆನಂದ ರಾಮಾಯಣದಲ್ಲಿ ಲಕ್ಷ್ಮಣನು ಇಂದ್ರಜಿತುವಿನ ಕೈಯನ್ನು ಕಡಿದು ರಾವಣನ ಮುಂದೆ ಬೀಳುವಂತೆ ಮಾಡಿದಾಗ ಕ್ರುದ್ಧನಾದ ರಾವಣನು ಕತ್ತಿಹಿಡಿದು ಸೀತೆಯನ್ನು ಕೊಲ್ಲಲು ಹೋಗುತ್ತಾನೆ. (I ೧೧-೨೦೨)

4. ವಾ. ರಾ. VI ಸರ್ಗ ೧೦೦.
5. ಲಕ್ಷ್ಮಣನು ರಾವಣ ಶಕ್ತಿಯಿಂದ ಮೂರ್ಛಿತನಾದ ವಿಚಾರ ಮಹಾಭಾರತದ 'ರಾಮೋಪಾಖ್ಯಾನ' ದಲ್ಲಿಲ್ಲ.
6. ವಾ. ರಾ. VI ಸರ್ಗ ೧೦೧.
7. ಮಾತಲಿಯು ಇಂದ್ರರಥದೊಂದಿಗೆ ರಾಮನಲ್ಲಿಗೆ ಬಂದ ಪ್ರಕರಣವು ಪ್ರಕ್ಷಿಪ್ತವಿರಬಹುದೇ?

ಅವಧ್ಯೋ ದೇವತಾನಾಂ ಯಸ್ತಥಾ ದಾನವ ರಕ್ಷಸಾಮ್
ಹಿತಃ ಸೋಽಯಂ ರಣೇ ಶೇತೇ ಮಾನುಷೇಣ ಪದಾತಿನಾ

(ವಾ. ರಾ. VI ೧೧೩-೧೫)

'.........ರಾವಣನನ್ನು ಪದಾತಿಯಾದ ಮನುಷ್ಯನು ಕೊಂದುಬಿಟ್ಟನಲ್ಲ'–ಎಂಬಲ್ಲಿ 'ಪದಾತಿ' ಎಂಬ ಪದವು–ರಾಮನ ಇಂದ್ರರಥವನ್ನೇರಿ ಯುದ್ಧ ಮಾಡಿದ್ದರೆ–ಹೇಳಲ್ಪಡುತಿತ್ತೇ?

8. ವಾ. ರಾ. VI ಸರ್ಗ ೧೦೩.
9. ಇದೇ. ೧೦೫-೨೨.

ಮತ್ತೆ ರಾವಣನ ಆದೇಶದಂತೆ ಸಾರಥಿಯು ರಾಕ್ಷಸೇಂದ್ರನ ರಥವನ್ನು ಶ್ರೀರಾಮನ ಅಭಿಮುಖವಾಗಿ ನಿಲ್ಲಿಸು ತ್ತಾನೆ.[1] ಇತ್ತ ರಾಮನಿಗೆ 'ಆದಿತ್ಯಹೃದಯ'ದ[2] ಉಪದೇಶವಾಗುತ್ತದೆ. ಆ ಮೇಲಿನ ಘೋರಯುದ್ಧದಲ್ಲಿ ರಾವಣನ ಧ್ವಜವನ್ನು ರಾಮನು ಛೇದಿಸುತ್ತಾನೆ. ರಾಮನಿಂದ ಕತ್ತರಿಸಲ್ಪಟ್ಟರೂ ಹೊಸ ಶಿರಸ್ಸುಗಳು ರಾವಣನಿಗೆ ಮೂಡುತ್ತವೆ.[3] ಇದನ್ನು ಕಂಡು ಚಿಂತಿತನಾದ ರಾಮನಿಗೆ ಮಾತಲಿಯು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವಂತೆ ಎಚ್ಚರಿಸುತ್ತಾನೆ. ಅದ ರಂತೆ, ರಾಮನ ಬ್ರಹ್ಮಾಸ್ತ್ರದಿಂದ ರಾವಣ ಸಂಹಾರವಾಗುತ್ತದೆ.[4]

ವಾಲ್ಮೀಕಿ ರಾಮಾಯಣದ 'ಪಶ್ಚಿಮೋತ್ತರೀಯ' ಪಾಠದಲ್ಲಿ,
ಇಂದ್ರಜಿತುವಿನ ವಧೆಯಾದನಂತರ ರಾವಣನು ಯಜ್ಞಕ್ಕೆ ತೊಡಗುತ್ತಾನೆ.[5] ಇದನ್ನರಿತ ವಿಭೀಷಣನು ರಾಮನೊಡನೆ 'ಶಿವಾನುಗ್ರಹಕ್ಕಾಗಿ ರಾವಣನು ನಡೆಸುತ್ತಿರುವ ಯಜ್ಞದ ಭಂಗವನ್ನು ಮಾಡದಿದ್ದರೆ ಅವನು ಅಜೇಯನಾಗುತ್ತಾನೆ' ಎಂದು ಸೂಚಿಸುತ್ತಾನೆ. ಅದರಂತೆ ಹನುಮಂತನ ನಾಯಕತ್ವದಲ್ಲಿ ವಾನರರು ಯಜ್ಞಭೂಮಿಗೆ ನಡೆದು ರಾವಣನ ಧ್ಯಾನ ಭಂಗಮಾಡಲು ಯತ್ನಿಸಿದರೂ, ಅಸಮರ್ಥರಾಗಲು, ಅಂಗದನು ಹನುಮಂತನ ಆಜ್ಞೆಯಂತೆ, ಮಂಡೋದರಿಯ ಕೇಶಗ್ರಹಣಮಾಡಿ, ರಾವಣನ ಮುಂದೆ ನಿಲ್ಲಿಸಿದಾಗ ಅವನ ಧ್ಯಾನ ಭಂಗವಾಗಿ, ಯಜ್ಞವು ಅಪೂರ್ಣವಾಗುತ್ತದೆ.

ಯಜ್ಞಭಂಗಗೊಂಡ ರಾವಣನು ಸಿಟ್ಟಿನಿಂದ ಅಂಗದನ ಮೇಲೆ ಅಸ್ತ್ರ ಪ್ರಯೋಗ ಮಾಡುತ್ತಾನೆ.

ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ, ರಾವಣನು ನಡೆಸಿದ ಯಜ್ಞವನ್ನೂ ಅದನ್ನು ವಾನರರು ಭಂಗಗೊಳಿ ಸಿದ ಕಥೆಯನ್ನೂ ಹೇಳುತ್ತಾನೆ.[6] ರಣಪರಾಜಿತನಾದ ದಶಕಂಠನು ರಾಮು ಶರಣಾಗತಿಗೆ ಮನವೊಲ್ಲದೆ,

'ಮೆಚ್ಚಿಸುವೆನಾ........ನಿಗಮಜೂಟನ ಕೋಟಿಹೋಮದಲಿ, ತನಗೆ ನೂರ್ಮಡಿ-ವಿಕ್ರಮದ ಹೆಂಪಿನ ಮಹಾ

---

ಸೂತಸ್ತು ವ್ಯಥಿತಂ ಬಾಣೈಃ ಸ್ಯಂದನಸ್ಥ ನಿರೀಕ್ಷ್ಯ ತಮ್
ತಸ್ಮಾದ್ರಣಾದ ಪೋವಾಹ ರಾವಣಂ ಹತಪೌರುಷಮ್.

1. ವಾ. ರಾ. VI ಸರ್ಗ. ೧೦೬.

2. ವಾ. ರಾ. ದ ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ರಾಮನಿಗೆ 'ಆದಿತ್ಯ ಹೃದಯ'ದ ಉಪದೇಶವಾದ ವೃತ್ತಾಂತವು ದೊರೆಯುತ್ತದೆ.

"ಆದಿತ್ಯ ಹೃದಯ"ವನ್ನು ಉಪದೇಶಿಸುವ ಸರ್ಗವು ರಾಮಾಯಣದ ಹಿಂದಣ, ಮುಂದಣ ಸರ್ಗಗಳ ಕಥೆ ಯನ್ನು ನಿಷ್ಕಾರಣವಾಗಿ ಛೇದಿಸುವುದಲ್ಲದೆ, ಆ ಕಥೆಯ ಪರಿಸ್ಥಿತಿಗೆ ಹೊಂದಿಕೆಯಾಗಿಯೂ ಇಲ್ಲ. 'ಆದಿತ್ಯ ಹೃದಯ' ಎಷ್ಟು ದೊಡ್ಡದೆಂದು ತೋರಿಸುವುದಕ್ಕಾಗಿ, ಇಲ್ಲಿ ರಾಮನಿಗೆ ಇಲ್ಲದ ಶಾಂತಿಯನ್ನೂ ಚಿಂತೆಯನ್ನೂ ಆರೋಪಿಸಿರುವಂತೆ ತೋರುತ್ತದೆ. ಶ್ರಾಂತಿ, ಚಿಂತೆಗಳಿಂದ ಕೂಡಿದ್ದ ರಾಮನು ಅಗಸ್ತ್ಯನಿಂದ ಆದಿತ್ಯ ಹೃದಯವನ್ನು ಉಪದೇಶಿಸಿಕೊಂಡು ಸಮರೋನ್ಮುಖ ನಾದನು ಎಂದು ತೋರಿಸುವುದಕ್ಕಾಗಿ, ಸೌರಮತದ ಮಹನೀಯರು ಯಾರೋ ತಮ್ಮ ಮತಪ್ರಚಾರಕ್ಕೆ ಬಂದ ಕಾಲದಲ್ಲಿ ಅದಕ್ಕೆ ಪ್ರಶಸ್ತಿಯನ್ನು ಸಂಪಾದಿಸುವಂತೆ ಈ ಸರ್ಗವನ್ನು ಇಲ್ಲಿ ಸೇರಿಸಿರಬೇಕು.'—ಮಾಸ್ತಿ ವೆಂಕಟೇಶ ಅಯ್ಯಂಗಾರ್-ಆದಿಕವಿ ವಾಲ್ಮೀಕಿ-ಪು. ೧೭.

3. ವಾ. ರಾ. VI ಸರ್ಗ ೧೧೦.

4. ವಾ ರಾ. VI ೧೧೦-೧೯.

ವಾ. ರಾ. ವನ್ನೇ ಆಧರಿಸಿದ 'ಉನ್ಮತ್ತ ರಾಘವ'ದಲ್ಲಿ ರಾವಣನನ್ನು ಕೊಂದವನು ರಾಮನಲ್ಲ, ಲಕ್ಷ್ಮಣ. ಜೈನ ರಾಮಾಯಣಗಳಲ್ಲಿ ಲಕ್ಷ್ಮಣನೇ ರಾವಣವಧೆಮಾಡುತ್ತಾನೆ.

5. ಬಂಗಾಲಿ 'ಕೃತ್ತಿವಾಸ ರಾಮಾಯಣ'ದಲ್ಲಿ ಶ್ರೀರಾಮನು ಶಕ್ತಿ ಸಂಪಾದನೆಗಾಗಿ ದೇವಿಪೂಜೆ ನಡೆಸಿದ ಉಲ್ಲೇಖ ವಿದೆ. ಬುಲ್ಕೆ-ರಾಮಕಥಾ, ಪು. ೩೪೧.

ವಿಮಲಸೂರಿಯ 'ಪಉಮ ಚರಿಯ' ದಲ್ಲಿ ವರ್ಣಿತವಾದ ರಾವಣನ 'ವಿದ್ಯಾಸಾಧನೆ'ಯ ಪ್ರಕರಣವು ರಾವಣನ ಯಜ್ಞ, ಬಹುರೂಪೀ ವಿದ್ಯಾಸಿದ್ಧಿ—ಇವುಗಳಿಗೆ ಸಂವಾದಿಯಾಗಿದೆ.

6. ತೊ. ರಾ. ೬-೪೪ನೆಯ ಸಂಧಿ.

ಭಟಕೋಟಿ ರಾವಣರನು ಮಹಾಕ್ರತು ಕುಂಡದಲಿ ಹೊರವಡಿಸುವೆನು"[1]–ಎಂದು ನಿರ್ಧರಿಸಿ, 'ಲಲನೆ ಮಂಡೋದರಿ ಸಹಿತನಾಗಿ, ನಿಕುಂಭಿಳೆ ನಿಳಯದಲ್ಲಿ ಯಜ್ಞ ಕೈಗೊಳ್ಳುತ್ತಾನೆ.[2]

ವಾ.ರಾ.ದ ಪ್ರಕ್ಷಿಪ್ತೋತ್ತರೀಯ ಪಾಠ, ಗುಣಭದ್ರನ 'ಉತ್ತರ ಪುರಾಣ,' (ಜೈನ ಸಂಪ್ರದಾಯದ) ವಿಮಲ ಸೂರಿಯ 'ಪಉಮ ಚರಿಯ' ಗಳನ್ನು ಬಿಟ್ಟರೆ–" ಪ್ರಪ್ರಥಮವಾಗಿ ಅಧ್ಯಾತ್ಮ ರಾಮಾಯಣದಲ್ಲಿ ರಾವಣನು ನಡೆಸಿದ ಯಜ್ಞ ವೃತ್ತಾಂತವು ದೊರೆಯುತ್ತದೆ.

ರಾವಣನು ತನಗಾದ ಅಪಜಯ ನಿವಾರಣೆಗಾಗಿ ಏನು ಮಾಡಬೇಕೆಂದು ದೈತ್ಯ–ಗುರು ಶುಕ್ರಾಚಾರ್ಯನಲ್ಲಿ ವಿಜ್ಞಾಪಿಸಲು, ಅವನು :

ಹೋಮಂ ಕುರು ಪ್ರಯತ್ನೇನ ರಹಸಿ ತ್ವ ದಶಾನನ
ಯದಿ ವಿಘ್ನೋನಚೇದ್ಧೋಮೇ ತರ್ಹಿ ಹೋಮಾನಲೋತ್ಥಿತಃ.........[3]

ಎಂದು ಸಲಹೆ ನೀಡಿ, ಮಂತ್ರೋಪದೇಶಮಾಡುತ್ತಾನೆ.

ಆನಂದ ರಾಮಾಯಣದಲ್ಲಿಯೂ ರಾವಣನು ನಡೆಸಿದ ಯಜ್ಞದ ವಿಚಾರವಿದೆ.[4]

ಕುಮಾರ ವಾಲ್ಮೀಕಿಯು ವಾಲ್ಮೀಕಿ ರಾಮಾಯಣದ "ಪ್ರಕ್ಷಿಪ್ತೋತ್ತರೀಯ" ಪಾಠವನ್ನು ಅನುಸರಿಸಿದ್ದಾನೆ–ಎನ್ನುವುದಕ್ಕಿಂತಲೂ, ಅವನ ಕೃತಿಯ ಮೇಲೆ ಅಧ್ಯಾತ್ಮ ರಾಮಾಯಣ ಮತ್ತು "ಆನಂದ ರಾಮಾಯಣ" ಗಳ ಪ್ರಭಾವವು–ಇತರ ಪ್ರಕರಣಗಳಲ್ಲಿ ವ್ಯಕ್ತವಾಗಿರುವಂತೆಯೇ–ಈ ಭಾಗದಲ್ಲೂ ಆಗಿದೆ–ಎಂದು ನಿರ್ಣಯಿಸುವುದು ಉಚಿತ. ಇದರಂತೆ, ರಾವಣನು, 'ನಿಶಾಚರ ಗುರುವಿನ ಮತದಂತೆ ಅಧ್ವರವ ರಚಿಸುತ್ತಾನೆ, ಒಡನೆ ಉಂಟಾದ ಉತ್ಪಾತಗಳಿಂದ ವಿಭೀಷಣನು ರಾವಣನ ಯಜ್ಞ ವಿಚಾರವನ್ನರಿತು, ಅದರ ಭಂಗಕ್ಕೆ ಪ್ರವೃತ್ತನಾಗುತ್ತಾನೆ. ವಾನರ ವೀರರು ದಶಶಿರನನ್ನು ಅರಸುತ್ತಾ[5] 'ಗಿರಿಶಿರದ ಶಕ್ತಿ ನಿಕುಂಭಿಳೆ'ಯ ಮಂದಿರದ ಮುಂದೆ ಬಂದಾಗ ಅಲ್ಲಿ ರಾವಣನು ಕಾಣಿಸದಿರಲು, ಹನುಮಂತನು ಕ್ರುದ್ಧನಾಗಿ ಚರಣದಿಂದ ನೆಲವನ್ನೊದೆಯಲು, ದಶಶಿರನು ಯಜ್ಞ ಮಾಡುತ್ತಿದ್ದ ಸ್ಥಳವು

---

1. ತೊ. ರಾ. VI ೪೮-೫.
2. ರಾವಣನು ನಡೆಸಿದ ಯಜ್ಞದ ಉಲ್ಲೇಖವು ಈ ಕೆಳಗಿನ ಕೃತಿಗಳಲ್ಲೂ ದೊರೆಯುತ್ತದೆ :

ಪದ್ಮಪುರಾಣ (ಉತ್ತರಕಾಂಡ–ಅಧ್ಯಾಯ ೨೬೯)
ತತ್ತ್ವಸಂಗ್ರಹ ರಾಮಾಯಣ, ಭಾವಾರ್ಥರಾಮಾಯಣ, ರಾಮಚರಿತಮಾನಸ.

ಕುಮಾರ ವಾಲ್ಮೀಕಿಯಿಂದ ಪ್ರಭಾವಿತವಾದ ಬತ್ತಲೇಶ್ವರನ ಕೃತಿಯಲ್ಲಿ ರಾವಣನು "ಮಾರಣ ಹೋಮ". ಕೈಗೊಂಡ ವರ್ಣನೆಯಿದೆ. ಈ ಸಂದರ್ಭದ ಪದ್ಯಗಳಲ್ಲಿ ವರ್ಣನೆಯಲ್ಲಿಯೂ, (ಕಾ. ರಾ. ಸಂಧಿ ೩೮) ತೊ. ರಾ. ದ ಅನುಸರಣೆ ಇದೆ.

3. ಅ. ರಾ. , VI ೧೦–೭, ೮, ೯.
4. ಆ. ರಾ I ೧೧-೨೨೯.
5. ಸರಮೆಯು ರಾವಣ ಯಜ್ಞಸ್ಥಾನವನ್ನು ಸೂಚಿಸಿದ ವಿಚಾರ "ಅಧ್ಯಾತ್ಮ ರಾಮಾಯಣ ಮತ್ತು ಆನಂದ ರಾಮಾಯಣಗಳಲ್ಲಿದೆ." (I ೧೧–೨೩೭)

ತತಶ್ಚ ಸರಮಾನಾಮಃ ಪ್ರಭಾತೇ ಹಸ್ತ ಸಂಜ್ಞಯಾ
ವಿಭೀಷಣಸ್ಯ ಭಾರ್ಯಾಸಾ ಹೋಮ ಸ್ಥಾನಮಸೂಚಯತ್.

(ಅ. ರಾ. VI ೧೦-೧೮)

ಈ ಕಥಾನಕವೆಲ್ಲವೂ ಇಂದ್ರಜಿತು ಯಜ್ಞ ಭಂಗ ಪ್ರಕರಣದ ಪುನರಾವರ್ತನೆಯಂತೆಯೇ ಇದೆ.

ಗೋಚರಿಸುತ್ತದೆ.[1] ಒಡನೆ, ಮಾರುತಿಯು ರಾವಣಯಜ್ಞದಿಂದ ಸೃಷ್ಟಿಯಾದ ಅಸುರ ಕೋಟಿಯನ್ನು ಆ ಯಜ್ಞ–ಕುಂಡಕ್ಕೇ ಕೆಡಹುತ್ತಾನೆ.[2]

ರಾವಣನ ಯಜ್ಞ ಭಂಗಮಾಡುವುದಕ್ಕಾಗಿ ಅಂಗದನು ಖಳ ಶಿರೋಮಣಿಯಂಗನೆಯ[3] ಮುಂದಲೆಯನ್ನು ಹಿಡಿದೆಳೆದಾಗ ಮಂಡೋದರಿಯು,

"ಅಕಟ ಲೋಗರ ಹೆಂಡತಿಯನ
ಪ್ರಕಟದಲಿ ನೀ ತಂದೆ ಲೋಕ
ಪ್ರಕಟದಲಿ ನಿನ್ನಂಗನೆಯ ಸಮುಕ್ಷದಲಿ
ಚಿಕುರ ಕಲಿತಾಕರುಷಣದ ವಿಟ
ನಿಕರವೆಳದೊಯ್ಯುತ್ತಲಿದೆ ನೀ
ಶಕುತನಾದಡೆ ಸಲಹು ಲಜ್ಜೆಯನೆಂದಳಾ ಕಾಂತೆ.[4]

ಎಂದು ಮೊರೆಯಿಡಲು, ರಾವಣನು ಕ್ರೋಧೋದ್ದೀಪಿತನಾಗಿ, ತನ್ನ ಚಂದ್ರಹಾಸನನ್ನು ಸೆಳೆದು ಅಂಗದನನ್ನು 'ಸಂಬರಿಸಿ' ಹನುಮಂತದೇವಗೆ 'ಝೊಂಬಿಸಲು', ಮಾರುತಿಯು 'ಆ ಮಹಾಯುಧನ ಸೆಳೆದು ಮುರಿದಿಕ್ಕುತ್ತಾನೆ'

---

1. ತೊ. ರಾ VI ೪೮-೨೩.

ಅ. ರಾ (VI ೧೦-೧೧, ೧೨) ಮತ್ತು ಆ. ರಾ. (I ೧೧-೨೩೦) ಗಳಲ್ಲಿ ಪಾತಾಲ ಸದೃಶವಾದ ಗುಹೆಯಲ್ಲಿ ರಾವಣನು ಯಜ್ಞನಡೆಸಿದನೆಂದಿದೆ. ಕುಮಾರ ವಾಲ್ಮೀಕಿಯ ಇಂಗಿತವೂ ಗುಹೆ ಎಂದೇ ಇರಬೇಕು.

2. ತೊ. ರಾ. VI ೪೮-೨೫.

3. ಅಧ್ಯಾತ್ಮ ರಾಮಾಯಣ VI ೧೦–೩೪, ೩೫.

ಪ್ರವಿಶ್ಯಾಂತಃ ವೇಶ್ಮನ್ಯಂಗದೋ ವೇಗವತ್ತರಃ ।
ಸಮಾನಯತ್ ಕೇಶಬಂಧೇ ಧೃತ್ವಾ ಮಂಡೋದರೀಂ ಶುಭಾಮ್. ॥

ತೊ. ರಾ. ವು ಹೇಳುವಂತೆಯೇ, ಬತ್ತಲೇಶ್ವರನು ತನ್ನ ರಾಮಾಯಣದಲ್ಲಿ ಹೇಳಿರುವುದು ಹೀಗಿದೆ:

ಅ) ದನುಜರ ವಾಯುಸುತ ಕೊಂಡದಲೊಟ್ಟೆ ಸುಡುತ್ತಾನೆ. (ಕೌ. ರಾ. ೩೮-೪)

ಆ) ಅಂಗದನು,

ಖಳನರಾಣಿಯಕಂಡುಮುಡಿವಿಡಿ
ದೆಳೆದು ಕೆಡಹಿದನುಟ್ಟ ವಸ್ತ್ರವ
ಸೆಳೆದು ಕಿವಿಯೋಲೆಗಳ ತೆಗೆದಾ ಕೊಂಡದೊಳಗಿಟ್ಟ.
(ಕೌ. ರಾ. ೩೮-೪೧)

4. ತೊ. ರಾ. VI ೪೮-೨೬.

ಇದರಿಂದ ಪ್ರಭಾವಿತವಾದ ಬತ್ತಲೇಶ್ವರನ 'ಮಂಡೋದರಿ'ಯ ಪ್ರಲಾಪ:

ಸುರರ ಹೆಂಡಿರ ತಂದ ಪೌರುಷ
ಉರಿದು ಹೋಯಿತೆ ಕೆಟ್ಟೆನಕಟಾ
ಧರಣಿಜೆಯ ಪತಿಯಿಲ್ಲದೆಡೆಯಲಿ ಕದ್ದು ನೀ ತಂದೆ.
ಅರಸ ನೀ ಮುಂದಿರಲು ನನಗೀ
ಪರಿಯ ಪರಿಭವವಾಯ್ತು ಹೆಂಡಿರ
ಪರರಿಗೊಪ್ಪಿಸಿ ಬೇಳುಬೇಳೆಂದೊರಲಿದಳು ರಾಣಿ.
(ಕೌ. ರಾ. ೩೮-೪೩)

ಇದೇ ಸಂದರ್ಭವನ್ನು ಸುಬ್ರಹ್ಮಣ್ಯ ಕವಿಯು ತನ್ನ ಹನೂಮದ್ರಾಮಾಯಣದಲ್ಲಿ ವರ್ಣಿಸುವಲ್ಲಿ ತೊ. ರಾ.ದ ಅನುಸರಣೆ, ಪ್ರಭಾವ ವ್ಯಕ್ತವಾಗುತ್ತದೆ:

ಕುಮಾರ ವಾಲ್ಮೀಕಿಯು ಈ ಸನ್ನಿವೇಶವನ್ನು ಚಿತ್ರಿಸುವಲ್ಲಿ ನಾಗಚಂದ್ರನ 'ರಾಮಚಂದ್ರ ಚರಿತಪುರಾಣ'ದಿಂದಲೂ ಕೆಲವಂಶಗಳನ್ನು ಸ್ವೀಕರಿಸಿರಬಹುದೆ ?—ಎಂಬ ಸಂದೇಹಕ್ಕೆ ಅವಕಾಶವಿದೆ. ವಿಮಲಸೂರಿಯ 'ಪಉಮ ಚರಿಯ'ವನ್ನು ಅನುಸರಿಸಿರುವ ನಾಗಚಂದ್ರನು (ಅಭಿನವಪಂಪ)[1] ಈ ಸಂದರ್ಭವನ್ನು ಹೀಗೆ ವರ್ಣಿಸಿದ್ದಾನೆ :

ಸಾಧಾರಣರಿವರೆನಿಪ ವಿ
ರೋಧಿಗಳುಮನುರದೆ ನೆಗಳ್ವುದನುಚಿತಮದರಿಂ
ಸಾಧಿಸಿ ಬಹುರೂಪಿಣಿಯಂ
ಸಾಧಿಸುವೆಂ ಪಗೆಯನೆಂಬ ಬಗೆಯಂ ಬಗೆದಂ.[2]

ಅಂತು ಬಗೆದು ಲಂಕಾನಗರದೊಳಂ ನಾಡೊಳಂ ಹಿಂಸೆ ಬೇಡೆಂದು ಗೋಸಣೆಗಳೆದು ಎನಿತುಪಸರ್ಗಮನಾರ್ ಮಾಳ್ಪೊಡಂ ನಮ್ಮ ಪಡೆಯೊಳ್ ಮಾರ್ಕೊಳ್ಳದಂತು ಮಾಳ್ಪುದೆಂದು ಪೇಳ್ದು—
......................ಸಾಧಿಸಿದಪಂ ಬಹುರೂಪಿಣಿಯಂ ದಶಾನನಂ..............

ರಾವಣನೊರ್ವನುಮಂ ಧರ
ಣೀವಲ್ಲಭ ಗೆಲ್ವುದರಿದು ಸಾಧಿಸಿ ವಿದ್ಯಾ
ದೇವತೆಯನವಂ ಪಡೆವಂ
ರಾವಣಕೋಟಿಯನಿದಿರ್ಚುವವರಾರ್ ಬಳಿಯಂ...............

.....................ಎಂಬುದುಂ ವಿಭೀಷಣಾಂಗದಾದಿಗಳ್............ಈ ಮಹಾಸಾಧನೆಗಂ "ವಿಘ್ನಂ" ಮಾಳ್ಪೆಮೆಂದು ಲಂಕೆಯ ಪುಗುತಂದು.....................

ಮುನಿದೆಳೆದು ತಂದು ನಿಜಕುಲ
ವನಿತೆಯರಂ ಬಿಡದೆ ನೋದಿಯುಂ ಹಾಹಾಕ್ರಂ
ದನಮುಂ ಪುಟ್ಟಿಸೆ ಕೇಳ್ದುಂ
ದನುಜಂ ಜಪಿಯಿಸುತಮಿರ್ದನವ್ಯಗ್ರಮನಂ...............

ಅಂತು ನೀಲನಗದಂತೆ ನಿಶ್ಚಲನಾಗಿರ್ದರಾವಣನಂ ನೋಡಿ........(ಅಂತಃಪುರವನ್ನು ಪ್ರವೇಶಿಸಿ ಅಲ್ಲಿನ ಸ್ತ್ರೀಯರ ವಸ್ತ್ರಾಪಹಾರ ಮಾಡಿದರೂ, ರಾವಣನು ನಿಶ್ಚಲನಾಗಿರಲು)...................
........ಅಂಗದನೆಂದಂ........"ಏಕೆ ಜಪಂಗೆಯ್ದಪೆ.? ನಿನ್ನ ಬಾಹಾಬಲಮುಂ ಪೆರರಿಕ್ಕಿ ವಿದ್ಯೆಯಂ ಸಾಧಿಸಿ ನೀ ಗೆಲಲೇನಾರ್ತಪೆ ?........ಕಣ್ಣಂ ಮುಚ್ಚಿ ಜಪಿಯಿಸುವೆ, ರಾಘವನೆಚ್ಚಂಬುವಿನಿಂ ಕಾಯಲಾರ್ಪುವೇ ದೇವತೆಗಳ್ ?........"[3]

---

[3] ಕಿಡಿಸುತೆ ಹೋಮಮನಾತನ
ಮುಡಬಿಯ ಮುಂದಲೆಯನಂಗದಂ ಪಿಡಿದೆಳೆಮಂ
ಕಮಪಿಂ ತಂದು ಕೂಗಿಡೆ
ನಡುಗುತ್ತಂ ಕಾಂತನೆಡೆಯೊಳಂ ಮೊರೆಯಿಟ್ಟಳ್

ಪತಿಯಿಲ್ಲದ ಸಮಯದೊಳಂ
ಕ್ಷಿತಿಸುತೆಯಂ ತಂದೆ ನೊದರೆಮದದಿಂನಿರೊಳ್
ಖತಿಯಿಂದೆಳೆವರೆ ತನ್ನಂ
ಮತಿಶೂನ್ಯತೆಯಾಯ್ತೆ ಸತ್ವಮಳಿಮದೆ ನಾಥಾ

ಹನುಮದ್ರಾಮಾಯಣ ೧೯-೧೫, ೧೬.

1. ಈ ಕವಿಯ ಪ್ರಭಾವವು ತೊ. ರಾ.ದ ಮೇಲೆ ಸಂಭವನೀಯ ಎನ್ನುವುದನ್ನು ಈ ಮೊದಲೇ ಪ್ರಸ್ತಾವಿಸಲಾಗಿದೆ.
2. ರಾಮಚಂದ್ರ ಚರಿತಪುರಾಣ, ೧೪-೯೯, ೧೦೦, ತೊ. ರಾ. VI ೪೮-೨೮.

ಮತ್ತಂ,

ರೋದನಮುಣ್ಮೆ ಪೊಣ್ಮೆ ಕುಟಿಲಾಲಕಮಂ ಪಿಡಿದಿಳ್ದು ತಂದು 'ಮಂ
ಡೋದರಿಯುಂ ಮದೀಯ ಪಿತೃಗುಕ್ಕೆವ ಚಾಮರಮಿಕ್ಕಲುಯ್ದಪೆಂ
ಕಾದು ಕೊಳಲ್ ಪೊಡರ್ಪು ನಿನಗುಳ್ಳೊಡೆ ಜೇತರಿಸು……

(ಎಂದು ಅಂಗದನು ಆ ಅಂಗನೆಯನ್ನು ಪಿಡಿದೆಳೆದು)……..

ಅಳಿಯೊಳೆ ಜಾನಕಿಯಂ ತಂ
ದಳಿಗಂಡನೆ ನಿನ್ನ ಪೆಂಡಿರಂ ನೀ ನೋಳ್ಪಂತೆಳೆಯುಯ್ದಪೆನಣ್ಮುವೊಡುಳ
ವಳಿಜಪಮುಂ ದನುಜ ತೋರ್ಪುದೆನ್ನೊಳ್ ಕೊರ್ಪಂ[1]

(ಎನ್ನುತ್ತಾನೆ) ಆಗ ಆ ವಧೂಕದಂಬಕಂ……….

ಸಾಧಿಸಿ ವಿದ್ಯೆಯಂ ಪಡೆವುದೇನ್ ನಿಜಪಾರ್ಶ್ವದೊಳಿನ್ನುನಿಂತಿಪಂ
ಬಾಧಿಸಲೆಂತು ನೀನ್ ಮಿಡುಕದಿರ್ದಪೆ ಮೂರ್ಛೆಗೆ ಸಂದರಂತೆ ವಿ
ದ್ಯಾಧರ ಚಕ್ರವರ್ತಿ ಶರಣಾರೆಮಗೆಂದು ಶರೀರತಾಪ ತ
ಪ್ತಾಧರಮುಳ್ತುದುಚ್ಚರವದಿಂದಪರೋಧ ವಧೂಕದಂಬಕಂ.[2]

(ಆಗ ರಾವಣನು) 'ಮಯ ತನೂಜೆಯ ಬಾಡಿದ ವಕ್ತ್ರ ಪದ್ಮಮಂ 'ನೋಡಿ ದಶಾನನನು……..ಅಂಗದಾದಿಗಳಂ[3] ಭ್ರೂಭಂಗಂ ಮಾತ್ರದೊಳೆ ಸೆರೆಗೆಯ್ದು ತಂದು ನಿಮ್ಮಮುಂದೆ ಪರಿಭವಿಸುವೆನೆಂದು….ನುಗ್ಗುತ್ತಾನೆ.

ಮುಂದಿನ ಸನ್ನಿವೇಶದ ಚಿತ್ರಣದಲ್ಲಿ ಕುಮಾರ ವಾಲ್ಮೀಕಿಯು (ಬಹುಶಃ ಇತರ ಯಾವ ರಾಮಾಯಣದಲ್ಲೂ ಸಿಗದ) 'ತನ್ನದೇ ಆದ ರೀತಿಯಲ್ಲಿ ಕಥೆಯನ್ನು' ಮುಂದುವರಿಸುತ್ತಾನೆ.

"ರಾವಣನ ಖಡ್ಗದಿಂದ ಖಂಡಿತವಾದ ಅಂಗದನ ದೇಹದ ಕಡಿಗಳೆರಡನ್ನು[4] ಹನುಮಂತನು ಶ್ರೀರಾಮುನ ಮುಂದಿರಿಸುತ್ತಾನೆ. ರಾಮನು "ಕೈಯೆಡೆಯ ಕಂದನನು ಹಗೆಗಿಕ್ಕಿದಂತಾಯಿತಲ್ಲ"ಎಂದು ಮರುಗುತ್ತಿರಲು,[5] ಜಾಂಬವನು ಅವನಿಗೆ ಧೈರ್ಯ ಹೇಳುತಿದ್ದಂತೆ, ಸುಷೇಣನು, ಲಕ್ಷ್ಮಣನನ್ನು ಎಬ್ಬಿಸಿದ ಔಷಧಾರ್ಥದಲಿ ಅಂಗದನನ್ನು ಮೇಲೇಳಿಸುತ್ತಾನೆ.[6]

---

1. ರಾಮಚಂದ್ರಚರಿತ ಪುರಾಣ, ೧೪-೧೦೩, ತೊ. ರಾ. ೪೮-೨೬.
ಇದಕ್ಕೆ ಸಂವಾದಿಯಾಗಿ ಅಧ್ಯಾತ್ಮ ರಾಮಾಯಣದಲ್ಲಿ ಮಂಡೋದರಿಯ ಮೊರೆ ಹೀಗಿದೆ:

ತ್ವಯಿ ಜೀವತಿ ಮೇ ದುಃಖ ಮೀದೃಶಂ ಚ ಕಥಂ ಭವೇತ್ ।
ಭಾರ್ಯಾಲಜ್ಜಾಚ ಸಂತ್ಯಕ್ತ್ವಾ ಭರ್ತ್ರಾ ಮೇ ಜೀವಿತಾಶಯಾ ॥
(ಅ. ರಾ. VI ೧೦–೩೨)

2. ರಾಮಚಂದ್ರ ಚರಿತಪುರಾಣ, ೧೪-೧೦೪, ತೊ. ರಾ. VI ೪೮-೨೬.
3. 'ಅಂಗದ'ನ ಮೇಲೆ ಕನಲುವಿಕೆಯು 'ರಾಮಚಂದ್ರ ಚರಿತಪುರಾಣ'ಮತ್ತು ತೊರವೆ ರಾಮಾಯಣಗಳಲ್ಲಿ ಸಮಾನವಾಗಿದೆ.
4. ತೊ. ರಾ. VI ೪೮-೩೦.
ಬತ್ತಲೇಶ್ವರನು ತೊ. ರಾ. ವನ್ನು ಅನುಸರಿಸಿ "ರಾವಣನು ಖಡ್ಗದಲೆರಗಲಿಕ್ಕಡಿಯಾದನಂಗದನು" ಎನ್ನುತ್ತಾನೆ (ಕೌ. ರಾ. ೩೮-೪೪)
5. ತೊ. ರಾ. VI ೪೮-೩೦.
ಬತ್ತಲೇಶ್ವರನು ಅಂಗದ ತುಂಡೆರಡ ನೋಡಿ, 'ಲೋಕವರಿಯಲು ಅಪಕೀರ್ತಿಯೆನಗಾಯಿತು–ನಾಕಪಾಲನ ಸುತನ ಕೊಲೆಯಿಂದ'–ಎಂದು ರಾಮನು ದುಃಖಿಸುವುದನ್ನು ಹೇಳುತ್ತಾನೆ (ಕೌ. ರಾ. ೩೮-೪೮)
6. ತೊ. ರಾ. VI ೪೮-೩೨. (ಆ ಔಷಧ ಇನ್ನೂ ಉಳಿದಿತ್ತು?)
ರಾಮನ ಹಸ್ತ ಸ್ಪರ್ಶದಿಂದ ಅಂಗದನು ಜೀವಹೊಂದಿದಂತೆ ಹೇಳಿ ಸಮಸ್ಯಾ ನಿವಾರಣೆ ಮಾಡಿದ್ದಾನೆ–ಬತ್ತಲೇಶ್ವರ.
(ಕೌ. ರಾ. ೩೮-೫೧)

ರಾವಣನೊಡನೆ ಯುದ್ಧಮಾಡಿದಂತೆಲ್ಲ, ಕಾಳಗ ಮುಂದುವರಿದಂತೆಲ್ಲ, ಜಯ ದೊರೆಯದೆ ರಾಮನು "ವಿಷಾದಯೋಗದಿಂದ"[1] ಮಾತಲಿಯೊಡನೆ ಆಡುವ ವೈರಾಗ್ಯದ ಮಾತುಗಳು ಕುಮಾರ ವಾಲ್ಮೀಕಿಯದೇ ಆದ ವಿಶಿಷ್ಟ ಕಲ್ಪನೆಯ ನುಡಿಗಳಾಗಿವೆ. ಬಹುಶಃ ಮಾತಲಿಯಿಂದ ರಾಮನ ದಿವ್ಯತೆಯನ್ನು ಮತ್ತೊಮ್ಮೆ ಬಹಿರಂಗಗೊಳಿಸುವುದಕ್ಕಾಗಿ[2] 'ರಾಮಾವತಾರ ವಿಡಂಬನಾ ನಾಟಕಕ್ಕೆ ಇನ್ನೊಂದು ದೃಶ್ಯವನ್ನು ನಿಯೋಜಿಸಿಕೊಂಡಂತೆ–ತೋರುತ್ತದೆ.

## ರಾವಣನು ಕಂಡ ರಾಮನ ವಿಶ್ವರೂಪ

ದಶಾನನು ತನ್ನ ಮರಣದ ಮೊದಲು ರಾಘವನ ವಿಶ್ವರೂಪವನ್ನು ಕಂಡು ಧನ್ಯನಾದದ್ದು, ಅವನು ರಾಮನ ದೈವತ್ವವನ್ನು ಮನಸಾರೆ ಕೊಂಡಾಡಿದ್ದು, ತನಗಿನ್ನು "ಮುಕ್ತಿಯ ಸೂರೆ ಎಂದು ಹಿಗ್ಗಿದ್ದು"–ಇವೆಲ್ಲವೂ ಆದಿಕಾವ್ಯದಲ್ಲಿಲ್ಲದ, ಆದರೆ ಕುಮಾರ ವಾಲ್ಮೀಕಿಯ ರಾಮಾಯಣದಲ್ಲಿ ದೊರೆಯುವ ವಿಶಿಷ್ಟವಾದ ಅಂಶಗಳು.

ಇಂದ್ರಜಿತುವಿನ ವಧೆಯಾದ ಮೇಲೆ, ಮಂಡೋದರಿಯು ಇನ್ನೊಮ್ಮೆ, ರಾವಣನೊಡನೆ ರಾಮನ ಅಪೌರುಷ ರೂಪವನ್ನು ಕೊಂಡಾಡಿ, ಅವನಿಗೆ ಶರಣಾಗಿ ಬಾಳುವುದೇ ಮೇಲು ಎಂದಾಗ,

ಬಲ್ಲೆನೀ ರಘುನಾಥ ಲಕ್ಷ್ಮೀ–
ವಲ್ಲಭನು ತಾನೆಂಬುದನು ನಾ
ಬಲ್ಲೆನವನಿಜೆ ಲಕ್ಷ್ಮಿಯೆಂಬುದನಾಹವಕೆ ನೆರೆದ
ಭಲ್ಲುಕರುಮರ್ಕಟರು ಸುರರೆಂ
ದೆಲ್ಲವೇತಕೆ ಕೇಳು ರಣಮುಖ
ದಲ್ಲಿ 'ರಾಮನ ಕೊಡುವುದು ಸಂಕಲ್ಪ ತನಗೆಂದ.[3]

ಎಂದೂ ಇದುವರೆಗೂ ಗೋಪ್ಯವಾಗಿರಿಸಿದ್ದ ತಮ್ಮ ಜನ್ಮರಹಸ್ಯವನ್ನೂ, ರಾಮನೊಡನೆ ನಡೆಸುವ ಕಾಳಗದ ರಹಸ್ಯೋದ್ದೇಶವನ್ನೂ ಬಹಿರಂಗಗೊಳಿಸುತ್ತಾನೆ.

ರಾವಣನ ಈ ಮಾತಿಗೆ ಅಧ್ಯಾತ್ಮ ರಾಮಾಯಣದ 'ಎಲೈ ಮಂಡೋದರಿಯೇ, ಈ ರಾಘವನು ವಿಷ್ಣುವೆಂಬುದನ್ನೂ, ಸೀತೆಯು ಲಕ್ಷ್ಮಿಯೆಂಬುದನ್ನೂ ಬಲ್ಲೆನು. ಲಕ್ಷ್ಮಿಯೆಂದು ತಿಳಿದೇ ಸೀತೆಯನ್ನು ಬಲಾತ್ಕಾರವಾಗಿ ಕದ್ದು ತಂದೆನು. ಹಾಗೆ ಮಾಡಿದರೆ ಮಾತ್ರ ಆ ಪರಮಾತ್ಮನು ಬಂದು ನನ್ನನ್ನು ಕೊಲ್ಲುವನು. ಅದರಿಂದ ನನಗೆ ವೈಕುಂಠ

---

1. ಕುರುಕ್ಷೇತ್ರದಲ್ಲಿ ಅರ್ಜುನನಿಗೊದಗಿದ "ವಿಷಾದ ಯೋಗ"ವನ್ನು ಈ ಪ್ರಕರಣ ನೆನಪಿಸುತ್ತದೆ.
2. ತೊ. ರಾ. VI ೫೧-೨೭ ರಿಂದ ೩೫.

ಈ ಸನ್ನಿವೇಶವಲ್ಲಿ "ಆತ್ಮಾನಂ ಮಾನುಷಂ ಮನ್ಯೇ..."ಎಂಬ ಪ್ರಸಿದ್ಧ ವಾಕ್ಯವನ್ನು ನೆನಪಿಗೆ ತರುವಂತಿದೆ ತೊ. ರಾ. ದ ಈ ನುಡಿಗಳು : (ವಾ. ರಾ. VI ೧೨೦-೧೧)

ಮರುಳಲಾ ಸುರಸೂತ ವಾಣೀ
ಶ್ವರನ ಪಿತ ತಾನಾವಡವನೀ–
ಪರಿಯ ಜೀವಿಸುವನೆ ವಿವೇಕವಿಚಾರವಿನಿತಿಲ್ಲ.
ನರರು ನಾವ್......—

(ತೊ. ರಾ. VI ೫೧-೩೬.)

ರಾವಣನು ಶಸ್ತ್ರ ಸನ್ಯಾಸಮಾಡಿದ ರಾಮನನ್ನು 'ತೊಡೆನು ಬಾಣವ ಮುಕ್ತಹಸ್ತರ ಕೊಡೆ'ಎಂದು ತನ್ನ ಯೋಧಧರ್ಮವನ್ನು ಪ್ರಕಟಿಸಿದ್ದು ತೊ. ರಾ. ದ ವೈಶಿಷ್ಟ್ಯ (ಯುದ್ಧಕಾಂಡ ೫೧–೩೭)

3. ತೊ. ರಾ. VI ೪೬-೨೨.

ಪ್ರಾಪ್ತಿ '[1]–ಎಂದು ರಾವಣನು ಹೇಳುವ ನುಡಿಗಳೇ ಹಿನ್ನೆಲೆಯಾಗಿರಬೇಕು. ಅಥವಾ ಇದೇ ವಿಚಾರವಿರುವ 'ಆನಂದ ರಾಮಾಯಣದ ಉಲ್ಲೇಖವೂ ಕಾರಣವಾಗಿರಬೇಕು.[2]

ರಣರಂಗದಲ್ಲಿ ರಾವಣನು ರಾಮನ "ವಿಶ್ವರೂಪ"ದರ್ಶನ ಭಾಗ್ಯವನ್ನು ಹೊಂದಿದಂತೆ ಕುಮಾರ ವಾಲ್ಮೀಕಿ ವರ್ಣಿಸಿದ್ದಾನೆ.[3] ಬಹುಶಃ ತೊರವೆ ರಾಮಾಯಣದ ರಾವಣನಿಗೆ ಮಾತ್ರ ಈ ಅದೃಷ್ಟ ವಿಶೇಷವಿದ್ದಂತೆ ತೋರುತ್ತದೆ. ದಶಾನನನಲ್ಲಿ ದೈವದ ಮಾಹಾತ್ಮ್ಯಜ್ಞಾನ ಉದಿಸಿದೊಡನೆಯೇ ಅವನ ಉದ್ಧಾರಪಥದ ಹೆಬ್ಬಾಗಿಲನ್ನೇ ಕವಿಯು ತೆರೆದು, ಅವನು ಭವಮುಕ್ತನಾದ ಸ್ಥಿತಿಯನ್ನು ವಿವರಿಸಲು ವಿಳಂಬಿಸುವುದಿಲ್ಲ. ದ್ವೇಷವು ಪ್ರೇಮ (ಭಕ್ತಿ)ವಾಗಿ ಪರಿವರ್ತಿತನಾದ ಮೇಲೆ, ರಾವಣನು ಪರಮಾತ್ಮನ ವಿಶ್ವರೂಪವನ್ನು ಕಾಣುವುದಕ್ಕೆ ಸಂಪೂರ್ಣ ಅರ್ಹನೆಂದೇ ಕವಿಯ ತೀರ್ಮಾನ. ಪ್ರಾಯಶಃ, ರಾವಣನ ಹೃದಯದ 'ಪಕ್ವತೆ'ಯನ್ನು ಲೋಕಮುಖಕ್ಕೆ ಪ್ರಕಟಪಡಿಸುವ ದೃಷ್ಟಿಯಿಂದ ಅವನಿಗೆ ಅಪೂರ್ವವಾದ 'ವಿಶ್ವರೂಪ' ದರ್ಶನವೊದಗಿಸಿದಂತಿದೆ. "ಎಂತಹ ಪಾಪಿಗೂ ಅಂತರಂಗ ಸಂಸ್ಕಾರದಿಂದ ಪರಮಾತ್ಮ ಸಾಕ್ಷಾತ್ಕಾರ ಶಕ್ಯವಿದೆ"–ಎನ್ನುವುದನ್ನು ಧ್ವನಿಸುವುದೂ ಈ ಸನ್ನಿವೇಶದ ಉದ್ದೇಶವಾಗಿರಬೇಕು.[4]

## ರಾವಣನ ಮರ್ಮಸ್ಥಾನ

ಈ ವಿಚಾರವಾಗಿ ಆದಿಕಾವ್ಯವು ಏನನ್ನೂ ಹೇಳುವುದಿಲ್ಲ. ಆದರೂ, ತೊ. ರಾ. ದಲ್ಲಿ "ಅಂಬಿಕಾಪತಿಯ ಓಲಗದೊಳಗೆ ರಾವಣನು ತನ್ನನ್ನು ಜಂಬೀರಫಲದಿಂದ (ಅಣಕಿಸಿ) ಹೊಡೆಯಲು, ನಂದೀಶ್ವರನು (ತನಗೆ ಆ ಹಣ್ಣು ಉರಕ್ಕೆ ತಾಗಿದ್ದರಿಂದ) ಆ ರಾವಣನಿಗೆ 'ಮರಣ ವಕ್ಷಸ್ಥಲದಲಾಗಲಿ'ಎಂದು ಶಪಿಸಿದನು."[5] ಇದರಿಂದ ಅವನ ಮರ್ಮಸ್ಥಾನವು ವಕ್ಷ, ಅಲ್ಲಿಗೆ ಬಾಣವೆಸೆ–ಎಂದು ವಿಭೀಷಣನು ರಾಮನಿಗೆ ತಿಳಿಸುತ್ತಾನೆ.

## ಮಂಡೋದರಿಯ ಸಹಗಮನ ವಿಚಾರ

ರಾವಣ ವಧಾನಂತರ, ವಾಲ್ಮೀಕಿ ರಾಮಾಯಣದಲ್ಲಿ, ಮಂಡೋದರಿಯ ವಿಲಾಪವು ವಿಸ್ತಾರವಾಗಿ ವರ್ಣಿತವಾಗಿದೆ.[6] ಶ್ರೀರಾಮನು ವಿಭೀಷಣನನ್ನು ಕರೆದು, "...ಈ ಸ್ತ್ರೀಯರನ್ನು ಮನೆಗೆ ಕಳಿಸು" (....ಸ್ತ್ರಿ? ಯಶ್ಚೈತಾನ್ನಿವರ್ತಯ)[7] ಎನ್ನುತ್ತಾನೆ. ಆಮೇಲೆ ಮಂಡೋದರಿಯ ಕುರಿತು ಆದಿಕಾವ್ಯವು ಮೌನವಾಗಿದೆ.

---

1. "ಜಾನಾಮಿ ರಾಘವಂ......" (ಅ. ರಾ. VI ೧೦-೫೭ ರಿಂದ ೬೯)
2. ಆ. ರಾ. I ೧೧-೨೪೪.
3. ತೊ. ರಾ. VI ೫೦-೪೪ ರಿಂದ ೫೨.
ಕುಮಾರ ವಾಲ್ಮೀಕಿಯನ್ನನುಸರಿಸಿ ಬತ್ತಲೇಶ್ವರನೂ (ಕೌ. ರಾ. ೪೨-೯ ರಿಂದ೧೩),
ಸುಬ್ರಹ್ಮಣ್ಯ ಕವಿಯೂ (ಹ. ರಾ. ೧೩-೨೫) ಕಥೆ ಹೇಳಿದ್ದಾರೆ.
4. "ದೇವಸ್ವಭಾವವುಳ್ಳ ಜಯಾದಿಗಳಿಗೆ, ಹಿರಣ್ಯಕಶಿಪು ಮೊದಲಾದ ಜನ್ಮಗಳಲ್ಲಿ ಅಸುರ ಸ್ವಭಾವವು ಸ್ಫಟಿಕವು ಕೆಂಪುದಾಸವಾಳ ಹೂ ನಿಮಿತ್ತವಾಗಿ ಕೆಂಬಣ್ಣ ಹೊಂದಿದಂತೆ–ಪ್ರಯುಕ್ತವಾಗಿರುತ್ತದೆ" ಬ್ರಹ್ಮಸೂತ್ರ ಭಾಷ್ಯ ೩-೪-೪.
(ಈ ಪಾಠ್ಯ ದರ್ಶನದಂತೆಯೂ ರಾವಣ ಅಸುರಾವೇಶವು ಕೊನೆಗೊಂಡಾಗ, ಅವನಿಗೆ ದಿವ್ಯಾನುಗ್ರಹ ಲಭ್ಯ)
5. ತೊ. ರಾ. VI ೫೦-೬೦.
ಅ. ರಾ. ದಲ್ಲಿ (VI ೧೧-೫೩) ರಾವಣನ ನಾಭಿದೇಶದಲ್ಲಿ ಅಮೃತಕಲಶವಿದ್ದ ವೃತ್ತಾಂತವಿದೆ. ಈ ವಿಚಾರವು ಆ. ರಾ (I ೧೧-೨೭೮),
ರಾಮಚರಿತಮಾನಸ (೬-೧೦೨) ಹನುಮದ್ರಾಮಾಯಣ (೧೩-೪೪), ಭಾವಾರ್ಥ ರಾ. (೬-೬೩)-ಗಳಲ್ಲಿದೆ.
ಬತ್ತಲೇಶ್ವರನು 'ರಾವಣನ ವಕ್ಷದಿ ಮತ್ಸ್ಯಲಾಂಛನವು ಜೀವವಿಪ್ಪೆಡೆ' (೪೨-೧೫) ಎನ್ನುತ್ತಾನೆ.
ರಾವಣ ವಧೆಯಾದೊಡನೆ ಅವನ ಆತ್ಮಜ್ಯೋತಿ ರಾಮನಲ್ಲಿ ಲೀನವಾಯಿತೆಂದು ಈ ಕೃತಿಗಳಲ್ಲಿದೆ :
ಅ. ರಾ. 'ರಾವಣಸ್ಯ ಚ ದೇಹೋತ್ಥಂ ಜ್ಯೋತಿರಾದಿತ್ಯವತ್‌ಸ್ಫುರಮ್' ಪ್ರವಿವೇಶ ರಘುಶ್ರೇಷ್ಠಂ–(VI ೧೧-೭೮, ೭೯)
ರಾಮಚರಿತಮಾನಸ (ಅನು: ಪು. ೨೩೪) ಹನುಮದ್ರಾಮಾಯಣ (೧೩-೯೩)
(ರಾವಣನ ವಧೆಗಾಗಿ ರಾಮನು ಪರಮೇಶ್ವರ ರೂಪತಾಳುತ್ತಾನೆ. ತತ್ತ್ವ ಸಂಗ್ರಹ ರಾ. ೬-೨೦)
6. ವಾ. ರಾ. VI ಸರ್ಗ ೧೧೪ (೮೮ ಶ್ಲೋಕಗಳು)
7. ಇದೇ. ೧೧೪-೯೨.

*14

ತೊ. ರಾ. ರಾಮನು ಆಕೆಯನ್ನು ಕರೆದು, " ದುಃಖಿಸಿ ಫಲವಿಲ್ಲ, ದೇಹಾಂತ್ಯದವರೆಗೆ ಮೈದುನ ವಿಭೀಷಣನನ್ನು ಮುಂದಿಟ್ಟುಕೊಂಡು ಬಾಳು "ಎಂದು ಸಂತೈಸುತ್ತಾನೆ.[1] ಮಂಡೋದರಿಯನ್ನುಳಿದು ಇತರ ರಾವಣ ಪತ್ನಿಯರು ತಮ್ಮ ಪತಿಯ ಚಿತೆಯನ್ನೇರಿ ಸಹಗಮನ ಮಾಡುತ್ತಾರೆ.[2] ಈ ಸಹಗಮನದ ವಿಚಾರವು ವಾ. ರಾ. ಮತ್ತು ಅಧ್ಯಾತ್ಮ ರಾ. ಗಳಲ್ಲಿಲ್ಲ. ಆನಂದ ರಾಮಾಯಣದಲ್ಲಿ,

ತದಾ ಮಂಡೋದರೀ ಭರ್ತ್ರಾ ಸಹ ದೇಹಂ ವಿಸೃಜ್ಯ ಸಾ ।
ಯಯೌ ವೈಕುಂಠಭವನಂ ರಾವಣೇನ ಮುದಾನ್ವಿತಾ.[3]॥

ಎಂದು ಮಂಡೋದರಿಯು ರಾವಣನೊಂದಿಗೆ ವೈಕುಂಠ ಸೇರಿದಳೆಂದಿದೆ. ಇದನ್ನು ಹಿನ್ನೆಲೆಯಾಗಿರಿಸಿಕೊಂಡು, ಸಮಕಾಲೀನ ಸಮಾಜದ ಸಂಪ್ರದಾಯಗಳ ಪ್ರಭಾವಕ್ಕೊಳಗಾದ ಕವಿಯು ಇಲ್ಲಿ ' ಸಹಗಮನ ' ವಿಚಾರವನ್ನು ಹೇಳಿರಬೇಕು. ಆದರೂ, ಕವಿಯು ಮಂಡೋದರಿಯನ್ನು ಸಹಗಮನದಿಂದ ಉಳಿಸಿರುವುದು ಗಮನಾರ್ಹ.[4]

ಹೀಗೆ ಕಥಾ ವೈಶಿಷ್ಟ್ಯಗಳಿಗೆ ಸಂಬಂಧಿಸಿದಂತೆ, ತೊರವೆ ರಾಮಾಯಣದ ವಸ್ತುನಿಷ್ಠವಾದ ಈ ತುಲನಾತ್ಮಕ ವಿಶ್ಲೇಷಣೆಯಿಂದ, ' ಕುಮಾರ ವಾಲ್ಮೀಕಿಯು ' ಆದಿಕಾವ್ಯವಾದ ' ವಾಲ್ಮೀಕಿ ರಾಮಾಯಣವನ್ನೇ ' ಮುಖ್ಯವಾಗಿ ಆಧರಿಸಿದ್ದರೂ, ಈ ಕೆಳಗಿನ ಇತರ ಕೃತಿಗಳಿಂದಲೂ ಪ್ರಭಾವಿತನಾಗಿದ್ದಾನೆ ಎನ್ನುವುದು ಸ್ಪಷ್ಟವಾಗುತ್ತದೆ:

(ಅ) ಅಧ್ಯಾತ್ಮ ರಾಮಾಯಣ.
(ಆ) ಆನಂದ ರಾಮಾಯಣ.
(ಇ) ಭಾರತ ತಾತ್ಪರ್ಯ ನಿರ್ಣಯ.
(ಈ) ರಘು ವಂಶ.
(ಉ) ರಾಮಚಂದ್ರ ಚರಿತ ಪುರಾಣ (ಪಂಪ ರಾಮಾಯಣ)

---

1. ತೊ. ರಾ. VI ೫೧-೧೦೩, ೧೦೪.-ಡಿ. ವಿ. ಜಿ. ಯವರ ' ಶ್ರೀರಾಮ ಪರೀಕ್ಷಣಂ 'ನ ರಾಮನ ನುಡಿ ನೆನಪಿಗೆ ಬರುತ್ತದೆ ಇಲ್ಲಿ.

ಪಂಪ ರಾಮಾಯಣದಲ್ಲಿ ' ರಾವಣಂಗೀ ಮರಣಮೀತನ ದುರ್ವ್ಯಸನದಿಂದಾ
ದುದಲ್ಲ ದೆಮ್ಮಿಂದಾದುದಲ್ತು ಆರ್ಗಾದೊಡಂ ಸಂಸಾರ ಸ್ವರೂಪಮಿಂತುಟೆ
ವಲಂ'-ಎಂಬ ಸಾಂತ್ವನವಿದೆ (ಪಂ. ರಾ. ೧೪–೨೧೧ ಗದ್ಯ)

2. ಇದೇ ೫೨–೧೮.

3. ಆ. ರಾ. I ೧೧–೨೮೬.

ಕನ್ನಡದ ಬತ್ತಲೇಶ್ವರನಲ್ಲಿ ಮಂಡೋದರಿಯು ರಾಮನೊಡನೆ ಸಹಗಮನಕ್ಕೆ ಅನುಮತಿ ಕೇಳಿದಾಗ, " ನೀನಯೋನಿಜೆ, ನಿನಗೆ ಅನಲ ಪ್ರವೇಶವು ಘಟಿಸದು "ಎನ್ನಲಾಗಿದೆ (ಕಾ. ರಾ. ೪೨-೩೨)

ಮಹಾನಾಟಕ (೯-೧೦೩) : ಮಂಡೋದರೀ ತವವಿಭೀಷಣ ಪಟ್ಟರಾಜ್ಞೀ
ಭೂಯಾದಿಮಾಂಚ ಪರಿಪಾಲಯ ವೀರಲಂಕಾಮ್.

ಸರಸ್ವತೀ ಕಂಠಾಭರಣ (೫-೩೯೪) : ಮಯೇನನಿರ್ಮಿತಾಂ ಲಂಕಾಂ ಲಬ್ಧ್ವಾ ಮಂಡೋದರೀಮಪಿ।
ರೇಮೇ ಮೂರ್ತಾ ದಶಗ್ರೀವ ಲಕ್ಷ್ಮೀಮಿವ ವಿಭೀಷಣಃ ॥

ಹೀಗೆಯೇ ಮಂಡೋದರೀ- ವಿಭೀಷಣ ವಿವಾಹ ಉಲ್ಲೇಖಗಳು ಕೆಳಗಿನ ಕೃತಿಗಳಲ್ಲಿವೆ :
ರಾಮಚರಿತ ಮಾನಸ (೧–೨೯–೭) ಕೃತ್ತಿವಾಸರಾಮಾಯಣ (೬-೧೧೨)-ಬುಲ್ಕೆ–ರಾಮಕಥಾ ಪು. ೫೪೪ ರಲ್ಲಿ ಉದ್ಧೃತ
ಕಂಬರಾಮಾಯಣ (ಅನು.: ಪು. ೧೦೩)ದಲ್ಲಿ ಮಂಡೋದರಿಯು ಶೋಕಾತಿರೇಕದಿಂದ ಸಾಯುತ್ತಾಳೆ.

4. ಇದರಂತೆಯೇ ದಶರಥನ ಮೂವರು ರಾಣಿಯರನ್ನುಳಿದು ಇತರ ' ಐನೂರರಸಿಯರು ಅಗ್ನಿಯಲಿ ಒರಗಿದರು ' ಎಂದು ಕುಮಾರ ವಾಲ್ಮೀಕಿಯೇ ಹೇಳಿದ್ದಾನೆ. ತೊ. ರಾ. II ೧-೬.

## ಕೃತಿಯ ಸಾಹಿತ್ಯಕ ಅಧ್ಯಯನ, ವಿಶ್ಲೇಷಣೆ

### ೧. ಕುಮಾರ ವಾಲ್ಮೀಕಿಯ ಬಹುಜ್ಞತೆ–ಕೃತಿಯಲ್ಲಿ ಪರಂಪರೆಯ ಸತ್ವ

ತನ್ನ ಕಾವ್ಯದ 'ವಸ್ತು' (ಕಥೆ) ವಿನ ದೃಷ್ಟಿಯಿಂದ ಕುಮಾರ ವಾಲ್ಮೀಕಿಯು ಇತರ ಗ್ರಂಥಗಳಿಂದ ಹೇಗೆ ಪ್ರಭಾವಿತನಾಗಿದ್ದಾನೆ–ಎನ್ನುವ ಅಂಶವನ್ನು ಈ ಹಿಂದಿನ ಅಧ್ಯಾಯದಲ್ಲಿ ವಿವೇಚಿಸಿದ್ದಾಯಿತು. ಈಗ 'ವಸ್ತು' ವಿನ ಅಭಿವ್ಯಕ್ತಿಯಲ್ಲಿ (ಭಾಷಾಪ್ರಯೋಗ, ವರ್ಣನೆ, ರೀತಿ–ಶೈಲಿಗಳಲ್ಲಿ) ಕವಿಯು 'ಪರಂಪರೆ'ಯ ಸತ್ತ್ವವನ್ನು ವ್ಯಕ್ತಪಡಿಸಿಕೊಂಡ ಬಗೆಯನ್ನು ಸಮಾಲೋಚಿಸುವುದು ನಮ್ಮ ಉದ್ದೇಶವಾಗಿದೆ.

"ಅತ್ಯಂತ ಪ್ರತಿಭಾಶೀಲ (most original) ನೆನ್ನಿಸಿಕೊಂಡ ಯಾವ ಕವಿಯೂ ತನ್ನ ಸಮಕಾಲೀನ ಹಾಗೂ ತನಗಿಂತ ಹಿಂದಿನ ಕವಿಗಳಿಗೆ ಬಹುಮಟ್ಟಿಗೆ ಋಣಿಯಾಗಿಲ್ಲನೆಂದು ಹೇಳಿಕೊಳ್ಳಲಾರ"[1]–ಎಂದ ಮೇಲೆ ಕುಮಾರ ವಾಲ್ಮೀಕಿಯ ಕೃತಿಯಲ್ಲಿಯೂ ಅವನಿಗಿಂತ ಹಿಂದಿನ ಕವಿಗಳ, ಕೃತಿಗಳ ಪ್ರಭಾವವು ಸೂಚಿತವಾದರೆ ಆಶ್ಚರ್ಯವೇನೂ ಇಲ್ಲ.[2] ಕವಿಯ ಋಣದ ಮೊತ್ತವನ್ನು ಕಂಡು ಹಿಡಿಯುವುದಕ್ಕಾಗಿ ಮಾತ್ರ–ಅವನನ್ನು ಇತರ ಕವಿಗಳೊಂದಿಗೆ ಕೃತಿಗಳೊಂದಿಗೆ ಹೋಲಿಸಿ, ತೂಗಿ ನೋಡುವ ಉದ್ದೇಶ ನಮಗಿಲ್ಲ. 'ಕವಿಯ ಬಹುಜ್ಞತೆ' (ಎಂದರೆ ಕಾವ್ಯ ವ್ಯವಸಾಯಕ್ಕೆ ಅನಿವಾರ್ಯವಾದ ವ್ಯುತ್ಪತ್ತಿ ಮತ್ತು ಅಭ್ಯಾಸಗಳು ಕಾವ್ಯ ಬೀಜವಾದ ಪ್ರತಿಭೆಯೊಂದಿಗೆ ಹೇಗೆ ಮೇಳವಿಸಿವೆ ಎನ್ನುವ ಅಂಶ) ಮತ್ತು ಕವಿಯು ತಾನು ಮನನ ಮಾಡಿಕೊಂಡ ಕೃತಿಗಳ ಮೂಲ ದ್ರವ್ಯವನ್ನು ತನ್ನ ಕೃತಿಯಲ್ಲಿನ ಸಂದರ್ಭೋಚಿತ ವಸ್ತು, ಪಾತ್ರ, ಸನ್ನಿವೇಶಗಳಲ್ಲಿ ಸದುಪಯೋಗಪಡಿಸಿಕೊಂಡ ಕವಿ–ಕೌಶಲವನ್ನು ಅನ್ವೇಷಿಸುವುದೇ ನಮ್ಮ ಆಕಾಂಕ್ಷೆಯಾಗಿದೆ.

ಕೆಲವೊಮ್ಮೆ ವರ್ಣನೆಗಳ ಸಾಮ್ಯದಿಂದಲೇ ಋಣಿತ್ತ್ವವನ್ನು ನಿರ್ಣಯಿಸುವಂತಿಲ್ಲ. ಯುದ್ಧ, ಸೂರ್ಯೋದಯ, ಸೂರ್ಯಾಸ್ತ, ಸಮುದ್ರ, ಋತುವರ್ಣನೆಗಳ ಸಂದರ್ಭಗಳಲ್ಲಿ ಪ್ರಚಲಿತ 'ಕವಿಸಮಯ'ದ ಪ್ರಭಾವದಿಂದ ಸಾಮ್ಯವು ವ್ಯಕ್ತವಾಗಬಹುದು. ಒಂದೇ ಸನ್ನಿವೇಶದಲ್ಲಿ ಬೇರೆ ಬೇರೆ ಕವಿಗಳು ಸಮಾನವಾಗಿ ಚಿಂತಿಸುವ ಸಾಧ್ಯತೆಯೂ ಇಲ್ಲದಿಲ್ಲ. ಆದರೆ ಇಂತಹ ಸಂದರ್ಭಗಳಲ್ಲಿ ಭಾಷೆಯ (ಪದಪ್ರಯೋಗದ) ಸಾಮ್ಯವೂ ಗೋಚರವಾದಾಗ, ಕವಿಗಳ ಕಾಲವಿಚಾರವನ್ನು ಗಮನದಲ್ಲಿರಿಸಿಕೊಂಡು ಪ್ರಭಾವವನ್ನು ಗುರುತಿಸುವುದು ಸಾಧ್ಯವಾದೀತು. ಕವಿಯಾದವನು ತನ್ನ ಋಣವನ್ನು ಪ್ರಾಮಾಣಿಕವಾಗಿ ನಿವೇದಿಸಿಕೊಂಡಲ್ಲಿ–ಈ ಕಾರ್ಯವು ಬಹಳ ಸುಲಭಸಾಧ್ಯವಾಗುತ್ತದೆ. ಕುಮಾರ ವಾಲ್ಮೀಕಿಯು ತನ್ನ ಕಾವ್ಯಾರಂಭದಲ್ಲಿ ಗುರುಮಧ್ವಾಚಾರ್ಯ ಮತ್ತು ಆದಿಕವಿ ವಾಲ್ಮೀಕಿ–ಇವರಿಬ್ಬರನ್ನು[3] ಮಾತ್ರ ಸ್ಮರಿಸಿಕೊಂಡು ಉಳಿದ ಶಬ್ದಾಕ್ಷರ ದರಿದ್ರರ ವಿಚಾರವೇಕೆ?–ಎಂದು ಪ್ರಶ್ನಿಸಿದ್ದಾನೆ.[4] ಮೇಲೆ ಹೇಳಿದ ಇಬ್ಬರಷ್ಟೇ ಅಲ್ಲದೆ, ಇನ್ನೂ ಹಲವು ಪೂರ್ವಕವಿಗಳು ಕುಮಾರ ವಾಲ್ಮೀಕಿಯ ಕೃತಿಯ ಹುಟ್ಟು–ಹಿರಿಮೆಗಳಲ್ಲಿ ಬಹುಪಾಲು ಹೊಣೆಗಾರರಾಗಿದ್ದಾರೆ–ಎನ್ನುವುದನ್ನು ಕಂಡರೆ ಕವಿಯ 'ಧೋರಣೆ' ಸಮುಚಿತವಾದದ್ದೆನಿಸುವುದಿಲ್ಲ.[5] ಕುಮಾರವ್ಯಾಸನ ಕಾವ್ಯದಿಂದ

---

1. Ed· by Albert D. Van Nostrand : Literary Criticism in America-p. 22
   ಜಿ. ಎಸ್. ಶಿವರುದ್ರಪ್ಪ–ವಿಮರ್ಶೆಯ ಪೂರ್ವ ಪಶ್ಚಿಮ–ಪು. ೪೭ರಲ್ಲಿ ಉದ್ಧೃತ.
2. ನಾಸ್ತ್ಯ ಚೌರಃ ಕವಿಜನಃ (ಕದಿಯದ ಕವಿಯಿಲ್ಲ)–ಕಾವ್ಯ ಮೀಮಾಂಸೆ–ಪು. ೬೧ರ ಮಾತು ಇಲ್ಲಿ ಸ್ಮರಣೀಯ.
   (ಅ) ಅಭಿವ್ಯಕ್ತಿಯಲ್ಲಿ ಸಾಮ್ಯ ವ್ಯಕ್ತವಾಗುವ ಎರಡು ಕೃತಿಗಳೂ–ಮೂರನೆಯದಾದ ಮತ್ತೊಂದು ಕೃತಿಯಿಂದ ಸಮಾನ ಪ್ರೇರಣೆಯನ್ನು ಹೊಂದಿರುವುದೂ ಸಾಧ್ಯ. (ಈ ಕುರಿತು ಸೋದಾಹರಣೆಯಾಗಿ ಜಿ. ಎಸ್. ಶಿವರುದ್ರಪ್ಪನವರು ತಮ್ಮ 'ವಿಮರ್ಶೆಯ ಪೂರ್ವ ಪಶ್ಚಿಮ'ದ 'ತೌಲನ ಕ್ರಮ' ಎಂಬ ಅಧ್ಯಾಯದಲ್ಲೇ ವಿವೇಚಿಸಿದ್ದಾರೆ.–'ಸಾಮ್ಯದಿಂದ ಸ್ವಾಮ್ಯವನ್ನೇ ಶಂಕಿಸುವುದು ಸರಿಯಲ್ಲ' (ಪು. ೫೮)
3. ತೊ. ರಾ. I ೧-೮ ಮತ್ತು I ೧-೯
4. ಇದೇ VI ೫೫-೬೮.
5. ಈ ಸಂದರ್ಭಗಲ್ಲಿ ಪಂಪನಿಂದ ಪ್ರಭಾವಿತನಾದ ರನ್ನ, ಕಾಳಿದಾಸವಾಣಿಯಿಂದ ತನ್ನ 'ಶಾಂತಿಪುರಾಣ' ವನ್ನು ತುಂಬಿಕೊಂಡ ಪೊನ್ನ, ಕುಮಾರವ್ಯಾಸನ ಅನುಕರಣೆಮಾಡಿದ ಭಾಸ್ಕರಕವಿ (ಜೀವಂಧರಚರಿತೆಯ ಕವಿ) ಇವರೆಲ್ಲಾ ತಮ್ಮ ಋಣವನ್ನು ವ್ಯಕ್ತಪಡಿಸಿಲ್ಲವೆನ್ನುವುದೂ ಉಲ್ಲೇಖನೀಯ.

ಬಹುಮಟ್ಟಿಗೆ ತನ್ನ ಕೃತಿಯನ್ನು ತುಂಬಿಕೊಂಡ, ಬೆಳಗಿಕೊಂಡ ಕವಿಯು ' ಆ ಮಹಾಕವಿಗೆ ತಾನು ಸಮಾನ' ಎನ್ನುವುದರ ಬದಲಾಗಿ ಅವನಿಗೆ ತನ್ನ ಕೃತಜ್ಞತೆಯ ನಮನಗಳನ್ನು ಸಲ್ಲಿಸಬೇಕಾಗಿತ್ತು–ಎನಿಸದಿರುವುದಿಲ್ಲ. ಬಹುಶಃ ನರಹರಿಯ ' ಕಡುಬಕುತ 'ನಾದ ಕುಮಾರ ವಾಲ್ಮೀಕಿಯು (....ಈಶ್ವರಂಗೆಯ್ದ ನಾಲಗೆಯಂ ಮಾರಿದೆಂ....ಮನುಜರ ಮೇಲೆ....ಅನವರತಂ ಪೊಗಳ್ದು ಕೆಡಬೇಡಲೆ....–ಎಂಬ ಹರಿಹರನಂತೆ) ' ನರಸ್ತುತಿ ' ಮಾಡಲು ಒಲ್ಲದೆಹೋದನೋ ಏನೋ ?

| ಕಾಳಿದಾಸನ ರಘುವಂಶ | ಕುಮಾರ ವಾಲ್ಮೀಕಿಯ ತೊರವೆ ರಾಮಾಯಣ |
| --- | --- |
| ೧. ಶೈಶವೇಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿ | ಶಿಶುತನದಲಿ ಸಮಸ್ತ ವಿದ್ಯಾ |
| ಣಾಮ್ ‖ | ವ್ಯಸನಿಗಳು ಯೌವನದೊಳನುಭವ |
| ವಾರ್ಧಕೇ ಮುನಿವೃತ್ತೀನಾಂಯೋಗೇನಾಂತೇ | ವಿಷಯಿಗಳು ಮುಪ್ಪಿನಲಿ ಮುನಿ ಮಾರ್ಗಾನುವರ್ತಿಗಳು, |
| ತನು ತ್ಯಜಾಮ್[1] ‖ | ಅಸು ಪರಿತ್ಯಾಗದಲಿ ಯೋಗದ |
| | ಬೆಸುಗೆಗಳನುಳ್ಳವರು ಕೇಳ್ಸೆ |
| | ಕುಶನೆ ನಿಮ್ಮನ್ವಯದ ರಾಯರು ಲವನೆ ಕೇಳೆಂದ.[2] |
| ೨. ವೈವಸ್ವತೋಮನುರ್ನಾಮ ಮಾನನೀಯೋಮನೀಷಿ | .................ಆ ಮನುಮಹೀಪಾಲ |
| ಣಾಮ್ ‖ | ಭೂಮಿಯಲಿ ಜನಿಸಿದನು ನಿಗಮ |
| ಆಸೀನ್ಮಹೀಕ್ಷಿತಾಮಾದ್ಯಃ ಪ್ರಣವಶ್ಛಂದಸಾಮಿವ[3] ‖ | ಸ್ತೋಮಕಾದಿಪ್ರಣವದವೊಲು |
| | ದ್ದಾಮಕುಕ್ಷಿನೃಪಾಲ ಜನಿಸಿದನಾ ಮಹೀಪತಿಗೆ. |
| ೩. ತದನ್ವಯೇ ಶುದ್ಧಿಮತಿ ಪ್ರಸೂತಃ ಶುದ್ಧಿಮತ್ತರಃ ‖ | ಮೇಲೆ ತನ್ನ ಸಗರ್ಭವರ ವರು |
| ದಿಲೀಪ ಇತಿ ರಾಜೇಂದುರಿಂದುಃ ಕ್ಷೀರನಿಧಾವಿವ[5] ‖ | ಣಾಲಯದೊಳುದ್ಭವಿಸಿದನು ಭೂ |
| | ಪಾಲ ಚೂಡಾರತ್ನನಮಳೇಕ್ಷ್ವಾಕುನಾಮದಲಿ[6] |
| ೪. ಸ ವೇಲಾವಪ್ರವಲಯಾಂ ಪರಿಖೀಕೃತಸಾಗರಾಮ್ ‖ | ..........................ಸ |
| ಅನನ್ಯ ಶಾಸನಾಮುರ್ವೀಂ ಶಶಾಸೈಕಪುರೀಮಿವ[7] ‖ | ಮ್ಮಿಳಿತರಂಭೋರಾಶಿಪರಿವೃತವಿಜಯವಲ್ಲಭರು, |
| | ಬಲವಿರೋಧಿಸಹಾಯ ಶೌರ್ಯಾ |
| | ಕಲಿತರಿನಕುಲದವನಿಪಾಲಕ....ತಿಲಕರು[8] |
| ೫. ಚರಣಯೋರ್ನಖರಾಗ ಸಮೃದ್ಧಿಭಿರ್ಮುಕುಟ ರತ್ನ– | ಶರಧಿಪರಿಖಾವಲಯದವನೀ |
| ಮರೀಚಿಭಿರಸ್ಪೃಶನ್[9] | ಶ್ವರರಮುಕುಟಮರೀಚಿ ಮಂಜರಿ |
| | ಚರಣ ನಖಮುಕುರಂಗಳಲಿ ಬಿಂಬಿಸುವನನವರತ[10] |
| ೬. ಅಸಕೃದೇಕರಥೇನ ತರಸ್ವಿನಾ ಹರಿಹಯಾಗ್ರಸರೇಣ– | ಚರಿಸುವುದು ರಥವೊಂದುವಾಗೀ |
| ಧನುಭೃತಾ[11] | ಶ್ವರನ ಪುರಿಗಿಂದ್ರಾಗ್ನಿಯುಮ....[12] |

---

ರಘುವಂಶ. ಸರ್ಗ–ಶ್ಲೋಕ

| | ಸರ್ಗ | ಶ್ಲೋಕ |
| --- | --- | --- |
| 1. | ೧ | ೮ |
| 3. | ೧ | ೧೧. |
| 5. | ೧ | ೧೨. |
| 7. | ೧ | ೩೦. |
| 9. | ೯ | ೧೩. |
| 11. | ೯ | ೨೩. |

ತೊ. ರಾ. ಕಾಂ. ಸಂ. ಪ.

| | ಕಾಂ. | ಸಂ. | ಪ. |
| --- | --- | --- | --- |
| 2. | ೧ | ೩ | ೧೯. |
| 4. | ೧ | ೩ | ೧೩. |
| 6. | ೧ | ೩ | ೧೪. |
| 8. | ೧ | ೩ | ೨೦. |
| 10. | ೧ | ೩ | ೨೪. |

ಇವರಲ್ಲಿ ರಘುವಂಶ ೧-೩೦ರ ಛಾಯೆಯಿದೆ.

| | | | |
| --- | --- | --- | --- |
| 12. | ೧ | ೬ | ೨೧. |

೭. ಸೋऽಹಂದಾಶರಥಿರ್ಭೂತ್ವಾ ರಣಭೂಮೇರ್ಬಲಿಕ್ಷ್ಮ-
ಮುವ್।
ಕರಿಷ್ಯಾಮಿ ಶರೈಸ್ತೀಕ್ಷ್ಣೈಸ್ತಚ್ಛಿರಃ ಕಮಲೋಚ್ಚ-
ಯಮ್[1]॥

ನರರ ರೂಪಿಂದಾವು ವಿಶ್ವಂ
ಭರೆಯೊಳವತರಿಸುವೆವು ನೀವ್ ವಾ
ನರರ ರೂಪಿಂದುದಿಸುವುದು ಧರಣೀತಳಾಗ್ರದಲಿ
ಧುರದೊಳಹಿತಖಳೋತ್ತಮನದು
ರ್ಧರದ ಶಿರಖಂಡನವನೆಮ್ಮಯ
ಸರಳ ಮೊನೆಯಲಿತೋರಿಸುವೆವಿದ ನಂಬಿ ನೀವೆಂದ.[2]

೮. :........................
ಭಾರ್ಗವಾಯ ದೃಢಮನ್ಯವೇ ಪುನಃಕ್ಷತ್ರಮುದ್ಯತ
ಮಿವ ನ್ಯವೇದಯತ್[3]

................ಇಕ್ಕಡಿ
ಗಳೆದುದಾ ಬಲುಬಿಲ್ಲುಬೆದರಲು ಹೃದಯಭಾರ್ಗವನ[4]

೯. ...................
ಪಶ್ಯತಿಸ್ಮ ಜನತಾದಿನಾತ್ಯಯೇ ಪಾರ್ವಣೌ ಶಶಿದಿವಾ
ಕರಾವಿವ್

.................
ತರಣಿಶಶಿಯನಲೊಪ್ಪಿದರು ಕಡೆವಗಲ ಪೌರ್ಣಿಮೆಯ.[6]

ಸಮಾನ ಸಂದರ್ಭಗಳ ಸೌಂದರ್ಯ-ದರ್ಶನ ದೃಷ್ಟಿಯಿಂದ ಒಂದೇ ಸನ್ನಿವೇಶದಲ್ಲಿ ಇಬ್ಬರು ಕವಿಗಳು ವ್ಯಕ್ತ ಪಡಿಸುವ ಭಾವನೆಗಳಲ್ಲಿ ಹೇಗೆ 'ಸಾಮ್ಯ'ವು ವ್ಯಕ್ತವಾಗುತ್ತದೆ ಎನ್ನುವುದನ್ನು ನಿರ್ದೇಶಿಸುವ ನೆಲೆಯಿಂದ ಕೆಲವು ಉಲ್ಲೇಖಗಳನ್ನು ನೀಡಬಹುದು. ಇದರಿಂದ ಕುಮಾರ ವಾಲ್ಮೀಕಿಯ 'ಅಭಿವ್ಯಕ್ತಿ'ಯ ಸ್ತರವನ್ನು ಸಾಪೇಕ್ಷವಾಗಿ ಗುರುತಿಸುವುದೂ ಸಾಧ್ಯವಾದೀತು.

ವಿದರ್ಭರಾಜ (ಭೋಜನೆ?) ಕೃತ ಚಂಪೂರಾಮಾಯಣ — ಕುಮಾರ ವಾಲ್ಮೀಕಿ ಕೃತ ತೊರವೆ ರಾಮಾಯಣ

ಕೈಕೇಯಿಯ ವರದಿಂದ ದಶರಥನ ಸ್ಥಿತಿ :

೧. ಕಾಂತಾರಭಾಜಿಮಯಿ ಕೇಕಯ ರಾಜಪುತ್ರ್ಯಾಃ
ಕಾರ್ಕಶ್ಯ ಕಂದಲಿತಯಾ ದಳಿತಸ್ಯವಾಚಾ....[7]

................ನಿ
ರ್ಗತವಜೋವಿಹ್ವಲನ ಶೋಕೋದ್ರೇಕ ಪರವಶನ
ಸತಿಯ ಕರ್ಕಶ ಕಲುಷವಾಕ್‌ಶರ
ಹತಿನಿರೋಧಿತ ಹೃದಯಬಾಧಾ
ನ್ವಿತನ ಕಾಣುತ ಕೈಯ ಕದಪಿನಲಿರ್ದನಾ ರಾಮ[8]

---

ರಘುವಂಶ. ಸರ್ಗ-ಶ್ಲೋಕ. — ತೊ. ರಾ. ಕಾಂ. ಸಂ. ಪ.

1. ೧೦ ೪೪.
2. ೧ ೮ ೬೬.
3. ೧೦ ೪೬.
4. ೧ ೧೫ ೪೧.
5. ೧೦ ೮೨.
6. ೬ ೧೭ ೪೦.

ಅಲ್ಲದೆ ಈ ಕೆಳಗಿನ ಶ್ಲೋಕ-ಪದ್ಯಗಳು ಪ್ರಭಾವಕ ಮತ್ತು ಪ್ರಭಾವಿತಗಳಂತೆ ತೋರುತ್ತವೆ.

೧೦ ೭೬. — ೧ ೮ ೮.
೧೨ ೧೩. — ೨ ೬ ೨೮.

7. ಚಂಪೂ ರಾಮಾಯಣ-ಅಯೋಧ್ಯಾಕಾಂಡ, ೩೦.
8. ತೊ. ರಾ. II ೨-೨೮.

೨. ಎಲೆಮನೆಯಲ್ಲಿ ಸೀತೆಯನ್ನು ಕಾಣದೆ ರಾಮನು

ಹಾ ಕಷ್ಟಮತ್ರನಹಿ ಸಾ ಕಿಮಿದಂ ಪ್ರವೃತ್ತ
ಮಾಲೋಕಯಾಮಿ ಬಟುಲಾಮಿಹ ಪಾದ ಮುದ್ರಾಂ।
ಮಾಂ ವೀಕ್ಷ್ಯನೂನಮಗೃಹೀತಮೃಗಂ ಮುಹೂರ್ತ
ಮಂತರ್ಹಿತಾ ತರುಷು ರೋಷವತೀವ ಸೀತಾ[1] ||

ಕನಕ ಮೃಗವನುತಾರನೆಂಬೀ
ಮುನಿಸದೊಂದಿದೆ ತನ್ಮ ತನ್ನಯ
ಮನದ ಸಂಶಯವನುನಿವಾರಿಸು ಹೋಗು ಗೃಹಾಂತರವ
ಕನಕ ಮೃಗವನು ತಂದೆನೆಂದೇ
ವನಿತೆಗನ್ಯತನ ನುಡಿದುಮುಡದಿಯ
ನೆನಗೆ ತೋರಿಸುಸಾಕುಬಳಿಕ ಕೃತಾರ್ಥನಾನೆಂದ[2]

(ಈ ಎರಡು ಕೃತಿಗಳಲ್ಲಿಯೂ, ರಾಮನು ಸೀತೆಯನ್ನು ಕಾಣದೆ, ಒಮ್ಮೆಗೆ ಅವಳು ರಾಮನು ಕನಕ ಮೃಗವನ್ನು ತರದ ಕಾರಣದಿಂದ ಸಿಟ್ಟಿನಿಂದ ಅಡಗಿರಬಹುದು-ಎಂದು ತರ್ಕಿಸುವುದನ್ನು ಗಮನಿಸಬಹುದು)[3]

೩. ವಾಲಿವಧೆಯನಂತರ ತಾರೆಯು ರಾಮನಿಗೆನ್ನುವುದು :

ಕಾರುಣ್ಯಂ ನಿರವಧಿಯತ್ತ್ವವ ಪ್ರಸಿದ್ಧಂ
ಶೀತಾಂಶೋಃ ಸಹಜಮಿವಾರ್ತಿಹಾರಿ ಶೈತ್ಯಂ।
ತತ್ಸರ್ವಂ ಮನುಕುಲನಾಥ ರಮ್ಯ ಕೀರ್ತೇ
ಮತ್ಪಾಪಾತ್ಕಥಯ ಕಥಂ ತ್ವಯಾ ನಿರಸ್ತಮ್[4]||

ಅಕಟ ರಘುಕುಲದರಸುಗಳು ಧಾ
ರ್ಮಿಕರು ಕೃತಭಾಷಿತರು ಭಾಗ್ಯಾ
ಧಿಕರು ಪುಣ್ಯಶ್ಲೋಕರುತ್ತಮರಧಿಕ ಗುಣಯುತರು
ಅಕುಟಿಲರು ಸನ್ಮಾರ್ಗ ಶೀಲ
ಪ್ರಕಟಿತರು ಸದ್ವರ್ತನರು ಸೇ
ವಕರಿಗೋಸುಗಕೊಲುವುದುಚಿತವೆಯೆಂದಳಾತಾರೆ[5]

೪. ಸಮುದ್ರವನ್ನು ಕಂಡು ಇದನ್ನು ಲಂಘಿಸುವವರಾರು ಎಂದು ಚಿಂತಿಸಿದ ಜಾಂಬವನಿಗೆ ಅಂಗದನು :

ಕಿಮಿತಿ ಭಜ ಮೌನಂ ವಾನರಾ ಮಾನಹೀನಾಃ
ಸಗರ ರಚಿತ ಕುಲ್ಯೋಲ್ಲಂಘನೇ ಕುಂಠಿತಾಶಾಃ।
ಅಕಲಶಭವಲೇಹ್ಯಂ ದುಃಶಮಂ ಬಾಡಬಾಗ್ರೇ
ರನವಧಿಮಯಶೋಽಬ್ಧಿಂ ಕಿಂ ಸಮರ್ಥಾಸ್ತರೀತುಮ್[6]||

ಜೀಯ ಚಿಂತೆಯಿದೇಕೆ ಕೇಳ್ ಚಿಂ
ತಾಯಕನು ನೀನಿರಲು ನಿನ್ನ ಸ
ಹಾಯದಲಿ ಸಾಗರವ ಕುಡಿವ ಸಮರ್ಥರಿದ್ದ ನೋಡು[7]

೫. ಸಿಂಹಿಕೆಯನ್ನು ಹನುಮಂತನು ಸೀಳಿದ ಸಂದರ್ಭ.

ಭೂಯೋಽಪಿ ಸೋಽಯಂ ರಘುನಾಥದೂತಶ್ಛಿಚ್ಛೇದ ಗಚ್ಛನ್ನಖರೈಃ ಖರಾಗ್ರೈಃ
ನೃಸಿಂಹರಂಹಾಃ ಪಥಿ ಸಿಂಹಿಕಾಂಗಂ ಛಾಯನಿರೋಧಾದುಪಪನ್ನಮನ್ಯುಃ[8]

ನುಂಗಲೊಡನಾಕ್ಷಣದಿ ಬೆಳೆದನ
ಭಂಗಬಲ ಹನುಮಂತನಾಬೆಯ........
ಬಲಿದ ಮರಿ ಪಕ್ಕದಲಿ ತತ್ತಿಯ
ನಳಿದು ಪೊರಮಡುವಂತೆ ವಜ್ರೋ
ಪಲದ ಕಂಬವನೊಡೆದು ನಿಂದಿಹನುನುಜಹರಿಯಂತೆ[9]

---

1. ಚಂಪೂ ರಾ. ಅರಣ್ಯಕಾಂಡ, ೩೩.
2. ತೊ. ರಾ. III ೧೧-೧೩.
3. ವಾ. ರಾ. ದಲ್ಲಿ ಇದೇ ಸಂದರ್ಭದಲ್ಲಿ ಸೀತೆಯು "ಹಾಸ್ಯಮಾಡುತ್ತಿರಬಹುದೇ ?" ಎಂದು ಶಂಕಿಸಿ,
   ವೃಕ್ಷೇಣಾಚ್ಛಾದ್ಯ ಯದಿಮಾಂ ಸೀತೇ ಹಸಿತುಮಿಚ್ಛಸಿ।
   ಅಲಂ ತೇ ಹಸಿತೇನಾದ್ಯ ಮಾಂ ಭಜಸ್ವ ಸುದುಃಖಿತಮ್॥
   ಎಂದು ಕೇಳಿಕೊಳ್ಳುತ್ತಾನೆ. (ವಾ. ರಾ. ಅರಣ್ಯಕಾಂಡ ೬೦-೪.)
4. ಚಂ. ರಾ. IV ೧೪.
5. ತೊ. ರಾ. IV ೫-೧೭.
6. ಇದೇ. IV ೪೫
7. ಇದೇ. IV ೧೨-೫.
8. ಇದೇ. V ೯.
9. ಇದೇ. V ೧-೨೦.

೬. ಹನುಮಂತನ ಲಂಕಾಯಜ್ಞ:

| | |
|---|---|
| ಪೌಲಸ್ತ್ಯಂ ಪಾತಕಿಸಮಾಗಮಜಾಯಮಾನ– | |
| ಮೇನಃ ಪುನಾನವಾನರಯಾಯಜೂಕಃ। | |
| ನಿರ್ವರ್ತಿತಾಕ್ಷವಿಜಯೋ ನಿಜವಾಲವಹ್ನೌ | ...........ಅಸುರರು |
| ಹುತ್ವಾ ಪಲಾಶಮಿದಃ ಸುಗತಿರ್ಬಭೂವ[1]॥ | ಪಶುಗಳಾದರು ಯಜ್ಞದೀಕ್ಷಿತನಾದನಾ ಹನುಮ[2] |

| ಹನುಮ ಕವಿಯ ಮಹಾನಾಟಕ | ತೊರವೆ ರಾಮಾಯಣ |
|---|---|
| ೧. ಹಸ್ತಾಭ್ಯಾಶಮುಪೈತಿ ಲೇಢಿಚ ತೃಣಂನಸ್ಪೃಶ್ಯತಾಂಗಾಹತೇ | ತೋರುವುದು ನೀರಿನಲಿ ನೋಡಲು[4] |
| ಗುಲ್ಮಾನ್ ಪ್ರಾಪ್ಯನಿವರ್ತತೇಕಿಸಲಯಾನಾಘ್ರಾಯಚಾಘ್ರಾಯಚ | .......... |
| ಭೂಯಃಪಶ್ಯತಿ ಗಚ್ಛತಿಪ್ರತಿದಿಶಂಕಂಡೂಯತೇಸ್ವಾಂತನುಂ | ಗತಿಗೆ ಗತಿ ಮುಂಚುವುದು ನಿಲವಿನ[5] |
| ದೂರಂಧಾವತಿ ತಿಷ್ಠತಿ ಪ್ರಚರತಿಪ್ರಾಂತೇಷು ಮಾಯಾಮೃಗಃ[3] | .......... |
| | ಮುಗಿದ ಮುಂಗಾಲುಗಳ ಮುದಕೆ[6] |
| | .......... |
| | ಇದೆಯಿದೆಂಬಂತೊಡನೆ ಹಿಡಿಹಿಂ |
| | ಗೊದಗಿಹುದು ಬಯಲಾಸೆಯಲಿ ಬಿಸಿ |
| | ಲುದಕದವೊಲಡಿಮುಂಚುವುದು....[7] |
| ೨. ರಾವಣನನ್ನು ಕುರಿತು : ಜಟಾಯುವು, | ರಾವಣನನ್ನು ಕುರಿತು ವಿಭಿಷಣನು |
| ಜನ್ಮಬ್ರಹ್ಮಕುಲೇಹರಾರ್ಚನವಿಧೌ ಕೃತ್ವಾಶಿರಃಕರ್ತನಂ | ಕುಲದಲಲ್ಪನೆ ನೀನು ಮುನಿಕುಲ |
| ಭಕ್ತಿರ್ವಜ್ರಿಣಿಬಾಹುದಂಡದಳನುವ್ಯಾಪಾರ ಶಕ್ತಿಃಪರಾ | ತಿಲಕ ಪೌಲಸ್ತ್ಯಜನಲಾ ನಡ |
| ಹೇಲೋತ್ತೋಲಿತಕೇಳಿಕಂತುಕನಿಭಃ ಕೈಲಾಸಉತ್ಪಾಟಿತ | ವಳಿಯಲಧಮನೆನೀನು ಶಿವಪೂಜಾ |
| ಸ್ತತ್ಕಿಂ ರಾವಣಲಜ್ಜಸೇನ ಹರಸೇ ಚೌರ್ಯೇಣ ಪತ್ನೀಂ ರಘೋಃ[8] | ಪ್ರಸಿದ್ಧನಲಾ.......[9] |
| ೩. ಶ್ರೀರಾಮವಿಲಾಪ: | |
| ಭೋವೃಕ್ಷಾಃ ಪರ್ವತಸ್ಥಾ ಬಹುಕುಸುಮಯುತಾವಾಯುನಾ ....... | ಎಲೆಲೆಮಾಲತಿಜಾತಿಕೇತಕಿ |
| ಘೂರ್ಣಮಾನಾ | ಗಳಿರನೀವಾಪೋಪಭಾರಾ |
| ರಾಮೋಹಂ ವ್ಯಾಕುಲಾತ್ಮಾ ದಶರಥತನಯಃ ಪೃಚ್ಛತೇ ಶೋಕದಗ್ಧಃ | ಕಲಿತಲಲಿತಸ್ಮಿಲತಾಂಗಿಯ....... |
| ಬಿಂಬೋಷ್ಠೀಚಾರುನೇತ್ರಾಗಜಪತಿಗಮನಾ ದೀರ್ಘಕೇಶೀಸುಮಧ್ಯಾ | ಸುಳಿವ ಕಾಣಿರೆಶಿಸುಧಾರಸ |
| ಹಾ ! ಸೀತಾ ಕೇನ ನೀತಾ ಮಮ ಹೃದಯಗತಾ ಕೇನವಾ ಕುತ್ರದೃಷ್ಟಾ[10] | ಲಲಿತ ಬಿಂಬಾಧರೆಯ ವೇಣೀ |
| | ವಿಲಸಿತೆಯ....ಕಾಣಿರೆಶಿಯೆಂದ[11] |

---

1. ಚಂ. ರಾ. V ೬೬.
2. ತೊ. ರಾ. V ೮-೮೩.
3. ಮಹಾನಾಟಕ ೩-೫೧– ಈ ಪದ್ಯವು ಕಾಳಿದಾಸನ ' ಅಭಿಜ್ಞಾನ ಶಾಕುಂತಲ 'ದ,
   ಗ್ರೀವಾಭಂಗಾಭಿರಾಮಂಮುಹುರನುಪತತಿ ಸ್ಯಂದನೇ ದತ್ತದೃಷ್ಟಿಃ (ಅಂಕ-೧)
   ಈ ಪದ್ಯವನ್ನು ನೆನಪಿಗೆ ತರುತ್ತದೆ.

4. 5. 6. 7. ಎಲ್ಲವೂ ತೊ. ರಾ. ಅರಣ್ಯಕಾಂಡ ೮-೨೬, ೪೪, ೪೫, ೪೬.

8. ಮಹಾನಾಟಕ ೩. ಇದಕೆ ಸಂವಾದಿಯಾಗಿ ಹನುಮನ್ನಾಟಕದಲ್ಲಿ
   ಜಾತಿರ್ಬ್ರಹ್ಮಕುಲೇಽಗ್ರಜೋ ಧನಪತಿರ್ಯಃ ಕುಂಭಕರ್ಣೋಽನುಜಃ– ಎಂದಿದೆ.
9. ತೊ. ರಾ. VI ೨-೨೪.
10. ಮಹಾನಾಟಕ ೩
11. ತೊ. ರಾ. III ೧೧-೩೭.

**ರನ್ನನ–ಸಾಹಸ ಭೀಮ ವಿಜಯಂ**

ಓಜಂ ಗಡ ಚೀ ಭಾರದ್ವಾಜಂ ಗಡ ಬಿಲ್ಲಬಲ್ಮೆಯು ಕುಲಮುಂ[1]
ಅಸುಹೃತ್ ಸೇನೆಗೆ ಸಾಲ್ವನೊರ್ವನೆ ಗಡ, ರುದ್ರಾವತಾರಂಗಡ[2]
ಅತಿರಥನಾತಂಗಡ ಬಲ
ಯುತ ಸಮರಥನೆನ್ನೊಳಧಿಕ ಬಲವಂತಂ ಮಾ
ರುತಿಗಡ............[3]
ಪೋಮಾಣ ಧನುರ್ಜಂಗಡ..........

ಭೀಮಂಗಡ..........[4]

..........

ಇದು ಲಾಕ್ಷಾಗೇಹದಾಹಕ್ಕಿದು, ವಿಷಾನ್ನಕ್ಕಿದಾ...[8]
..........

ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮಾ ನಾಲ್ವರುಂ ಸಂಗರಾ
ಧ್ವರದೊಳ್........
............ಕೌರವೇ
ಶ್ವರನೀತಂ ಪಶುವಾಗೆ ಬೇಳ್ದೆನಿವನಂ ಕೋಪಾಗ್ನಿಯಿಂದ
ಗ್ನಿಜೇ[10]

**ತೊರವೆ ರಾಮಾಯಣ**

ಲಲನೆಯೊಬ್ಬಳ ವ್ರತನಮಗೆಗಡ
ಹಳುವದಿರವಿಗೆ ಜೊಮ್ಮ ಚರಿಯದ
ಬಳಕೆ ಗಡ.......[5]
ಫಡಪತಿವ್ರತೆತಾನುಗಡ ಕಾ
ಳ್ಗೆಡೆದು ನುಡಿವವರಾವುಗಡ ದಿಟ
ಕಡಿದಲೆಯು ಮೆಟ್ಟಿಮಿಾವಳು ಗಡಮಹಾ
ದೇವ
ಒಡತಿಗಡಬಹುಸಂಪದಕೆ.........[6]
ಕೊರಳ ಕಡಿತದಲಾಡುವುದುಗಡ......
ಹರಣವನು ಹೋಗಾಡುವುದು ಗಡ....[7]

ಹಿಡಿರಣದೊಳತಿಕಾಯವೀರನ
ಕೆಡಹಿದುತ್ಸವ ದರ್ಪಸಿರಿಗಿದೆ
ಸಿಡಿಲು, ಶೂರ್ಪನಖಾಭಿಮಾನಚ್ಯುತಿಯ
ಸಾಹಸದ
ಸೊಡರಿಗಿದೆ ಬಿರುಗಾಳಿ, ಪಿಸುಣರ
ನುಡಿಯ ಕೇಳಿದುಕುಣಿವಕಡುದ
ಕ್ಕಡೆಯ ತನಕಿದಕೋ ಕೃತಾಂತ–
ನಿವಾಸವೆನುತೆಚ್ಚ[9]

ಕುಶನೆ ಕೇಳ್ವೆ ಯೂಪವಾದುದು
ಬಿಸರುಹಾಕ್ಷನ ಕೀರ್ತಿತರು ರಾ
ಕ್ಷಸಪುರ ತ್ರೇತಾಗ್ನಿಕುಂಡಗಳಾದವವನಿಜೆಯ
ವಿಷಮ ವಿಪ್ಪಲಶೋಕ ಶಿಖಿ ಶೋ
ಭಿಸುವಹುತವಹನಾದನಸುರರು
ಪಶುಗಳಾದರು ಯಜ್ಞ ದೀಕ್ಷಿತನಾದನಾ ಹನುಮ[11]

---

ಹನುಮ ಕವಿಯ "ಮಹಾನಾಟಕ"ದಲ್ಲಿ 'ಅಂಗದ ದಾತ್ಯ' ಸನ್ನಿವೇಶದಲ್ಲಿ ಅಂಗದ–ರಾವಣ ಸಂವಾದವು ಸ್ವಾರಸ್ಯ ವಾಗಿದೆ, ಚುಚ್ಚು ಮಾತುಗಳಿಂದ ಕೂಡಿ "ಚುರುಕು" ಮುಟ್ಟಿಸುವಂತಿದೆ–

ಇದೇ ಸನ್ನಿವೇಶದಲ್ಲಿ ತೊ. ರಾ. ದಲ್ಲಿನ ಅಂಗದ–ಪ್ರಹಸ್ತ ಸಂವಾದವು ಅಷ್ಟೇ ಸುಂದರವಾಗಿದೆ. ಇಂತಹ ಸಮಾನ ಸಂದರ್ಭಗಳಲ್ಲಿ ತೋರುವ "ಸಾಮ್ಯ"ದಿಂದ "ಸ್ವಾಮ್ಯ"ವನ್ನು ಗುರುತಿಸುವುದಾಗಲೀ ಋಣವನ್ನು ಸೂಚಿಸುವುದಾಗಲೀ ಉಚಿತವೆನಿಸುವುದಿಲ್ಲ. ಆದರೂ ಸಮಾನ ಸಂದರ್ಭಗಳ ಸೌಂದರ್ಯದರ್ಶನ ದೃಷ್ಟಿಯಿಂದ ಮಾತ್ರ ಮೇಲಿನ ಉಲ್ಲೇಖಗಳನ್ನು ಕೊಡಲಾಗಿದೆ.

1. ಸಾಹಸಭೀಮವಿಜಯಂ ೨ ೧೮.
2. ಇದೇ. ೨-೧೧.
3. ಇದೇ. ೩-೫೫.
4. ಇದೇ. ೯-೧೩.
5. ತೊರವೆ ರಾಮಾಯಣ III ೪-೨೧.
6. ಇದೇ. V ೩-೫೮.
7. ಇದೇ. VI ೨-೪೫.
8. ಇದೇ. ೮-೧೯.
9. ಇದೇ. VI ೪೪-೧೧.
10. ಇದೇ. ೮-೪೬.
11. ತೊ. ರಾ. V ೮-೮೩.

ಬೆರಲಂ ಕರ್ಚುವ ಪುತ್ರಂ
ಪರಿದೇರುವ ಕಯ್ದುವಿರಿಸಿ ಪೊಡೆಮಡುವ ಭಯ
ಜ್ವರದಿಂ ನಡುಗುವ ಭೀರುಗ
ಳರೆಬರ್ ಕನ್ನಡಿಸಿದರ್ ಭಯಾನಕ ರಸಮಂ[1]

ಚೆಲ್ಲಬಡಿದನು ಮಿಕ್ಕು ಮೀರುವ
ಬಲ್ಲಿದರನತಿಬಲರ ರಣದಲಿ
ಹುಲ್ಲ ಕಚ್ಚಿಸಿ ಹುತ್ತನೇರಿಸಿ ಹೊಗಿಸಿ ಸಾಗರವ
ಬಿಲ್ಲಬಿಸುಡಿಸಿ ಬಿರುದ ಹರಿಯಿಸಿ
ಹಲ್ಲಕಿರಿಯಿಸಿಮಗುಳ್ದ ನಪ್ರತಿ
ಮಲ್ಲನುಬ್ಬಿದವ್ಸೈಯಲರಸನ ಹೊರೆಗೆ ಹರುಷದಲಿ[2]

ನರರಿಂ ನರರಂ ಹರಿಯಿಂ
ಹರಿಯಂ ವರೂಥನುಂತದ್ವರೂಥದಿಂದಿಟ್ಟಸುಹೃ
ತ್ಕರಿಯಂ ಪಡಲಿಟ್ಟಂತಿರೆ
ಮರುತ್ಸುತಂ ಮೋದಿ ತವಿಸಿದಂ ಮಾರ್ಬಲಮಂ[3]

ಕರಿಯ ಕರಿಯಿಂದಿಟ್ಟು ತುರಗವ
ತುರಗದಿಂದಪ್ಪಳಿಸಿ ರಥದಿಂ
ದುರು ವರೂಥವನುರುಬಿ ರಕ್ಕಸರಿಂದ ರಕ್ಕಸರ
ತಿರುಹಿಡುವ ಕಪಿಭಟರಕದನಕೆ
ತೆರಳದತಿಬಲ ರಕ್ಕಸರು ವಾ
ನರರ ವಾನರರಿಂದ ಸದೆದರು ಸೂಳುಪಾಳಿನಲಿ[4]

| ನಾಗಚಂದ್ರ (ಅಭಿನವಪಂಪ)ನ[5] ರಾಮಚಂದ್ರಚರಿತಪುರಾಣ (ಪಂಪರಾಮಾಯಣ) | ಕುಮಾರವಾಲ್ಮೀಕಿಯ ತೊರವೆ ರಾಮಾಯಣ |
|---|---|
| ೧. ದಿವಿಜಕುಜಂಗಳಾರವೆಗಳಾದುವು ಸಿದ್ಧರಸಂ ತಟಾಕಮಾ ದುವು ಸುರಧೇನು ಪಿಂಡಳಿಯದೊಂದೆಡೆಯೊಳ್ ನೆರೆದಿರ್ದುವೆಂಬಿನಂ[6] | ಪಶುಗಳೇ ಸುರಪಶು, ಮಹೀಜ ಪ್ರಸರವೇ ಗೀರ್ವಾಣಕುಜ, ಘನ ರಸವೆ ನಿರುಪಮಸಿದ್ಧರಸವೆನೆ ಸಕಲವಿಭವದಲಿ[7] |
| ೨. ಪೊಗೆಗೊಂಡ ಚಿತ್ರಲತೆದೂ ಳಿಗೊಂಡ ಪುತ್ತಳಿಗೆ ಮಂಜುಗೊಡಬ್ಬಿನಿ ಕಾ ರ್ಮುಗಿಲೊಳಕೊಂಡೆಳೆವೆರೆಯೆನೆ ಮೃಗಲೋಚನೆ ಸೀತೆ ನಾಡೆ ಪಾಡಳಿದಿರ್ದಳ್[8] | ಹೊಗೆಯಲದ ಪುತ್ತಳಿಯವೊಲುಹಿಮ ವಗಿದ ತಾವರೆಯಂತೆ ಬಿಚ್ಚಡೆ ಬಿಗಿದ ಚಿಪ್ಪಿನಮುತ್ತಿನಂದದಿರಾಹುಲಂ ಬಿಸಿದ ಮೃಗಧರನವೊಲು..........[9] |
| ೩. ......................ತ ನ್ನೆರಡುಮೆರಂಕೆಗಳ್ ಮುರಿದಿಳಾತಳದೊಳ್ ಕೆಡೆದತ್ತು ವಜ್ರದಿಂ ಸುರಪತಿ ಪೊಯ್ಯೆ ಬೆಟ್ಟುಕೆಡೆದಂತೆ ಜಟಾಯು ನಭೋವಿಭಾಗದಿಂ[10] | ಕಳಚಿಬಿದ್ದವು ಪಕ್ಷವಿಂದ್ರನು ಕಳಚಿದದ್ರಿಯ ಪಕ್ಷದಂತಿರೆ ಬಳಲಿದನು..........[11] |

---

1. ಸಾಹಸಭೀಮ ವಿಜಯಂ ೪-೨೮.
2. ತೊ. ರಾ. VI ೩೩-೩೫.
3. ಇದೇ. ೩-೮.
4. ಇದೇ. VI ೧೩-೩೭.
5. ನಾಗಚಂದ್ರನು ತನ್ನ 'ಮಲ್ಲಿನಾಥ ಪುರಾಣ' ದಲ್ಲಿ ತಾನು ವಿಜಯಪುರದವನೆಂಬ ಸೂಚನೆಯಿದ್ದು, ತೊರವೆಯ ಕವಿಯ ಮೇಲೆ 'ವಸ್ತು' ದೃಷ್ಟಿಯಿಂದಲೂ ಪ್ರಭಾವಬೀರಿದವನು
6. ರಾಮಚಂದ್ರಚರಿತಪುರಾಣ ೧-೫೯ (ಸಂ)
7. ತೊ. ರಾ. VI ೬-೧೮.
8. ಇದೇ. ೯-೮೩೦.
9. ತೊ. ರಾ. V ೩-೨೪ (ಮತ್ತು II ೨-೨ರಲ್ಲೂ ಹೋಲಿಕೆ ಇವೆ)
10. ಇದೇ. ೯-೧೦೪.
11. ಇನೇ. III ೧೦-೨೪.

೪. ಕಳಹಂಸಾಲಸಯಾನೆಯಂ ಮೃಗಮದಾಮೋದ್ಯನಿಶ್ವಾಸೆಯಂ
ತಳಿರೇ ತಾವರೆಯೇ ಮದಾಳಿಕುಲವೇಕರ್ನೆಯಿದ್ದಲೇ ಮತ್ತ ಕೋ
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗ ಕುಂ
ತಳೆಯಂ ಕ್ವೈರವ ನೇತ್ರೆಯಂ ಪಿಕರವ ಪ್ರಖ್ಯಾತೆಯಂ ಸೀತೆಯಂ[1]

ಕಂಡುಹಂಸೆಯ ಹಂಸಗಮನೆಯ
ಕಂಡುದುಂಟೇಯೆಂದು ಕೋಗಿಲೆ
ಗಂಡುಕೋಕಿಲಲಲಿತನಿನದೆಯಕಾಣಿರೆಲೆ
...................... ಯೆಂದು

ಕಳುರುತಿಮತ್ತ ಕೋಕಿಲಮನೀಕ್ಷಣಮುತ್ಪಲಮಂ ವಿನೀಲ ಕುಂ
ತಳಮಳಿಮಾಲೆಯಂ ಕಚಭರ ನವಿಲಂ ನಡೆ ಹಂಸಿಯಂ ತಳಂ
ತಳಿರ್ಗಳನಾನನಂ ಕಮಲಮಂ ನಳಿತೋಳ್ ಲತೆಯಂ ಲತಾಂತಕೋ
ಮಳೆ ಮರೆಗೊಂಡು ಮುಯ್ಗರೆದು ಕಾಡುವ ಕಾರಣಮೇನೋ ಜಾನ್ಯಕಿ[2]

ವನಜವನು ಕಂಡರಸವನಜಾ
ನನೆಯ ಕಂಡಿರೆಯೆಂದು ಕ್ವೈರವ
ವನು ನಿರೀಕ್ಷಿಸಿ ಕ್ವೈರವಾಕ್ಷಿಯ ಕಂಡಿರೇ
ಯೆಂದು[3]

೫. ಕೋಗಿಲೆ ಬೆರ್ಚಿಪಾರಿದುವು ಚೂತವನಾಳಿಯಿಂ ಶುಕವ್ರಜಂ
ಪೂಗವನಂಗಳಿಂ ಬೆದರಿ ಪೋದುವು ಬಾಲಮರಾಲ ಸಂಕುಲಂ
ಪೂಗೊಳದಿಂದಗಲ್ದುವೆನಸುಂ ಪೆರಪಿಂಪಿಂಗಿದುವುನ್ಮದಾಳಿ ಪು
ನ್ನಾಗ ವನಂಗಳಿಂ ತವಿಸೆ ನಂದನಂ ಪವಮಾನ ನಂದನಂ[4]

ಹಾರಿದುವು ಹಂಸೆಗಳು, ತುಂಬಿಗ
ಳೇರಿದವು ಮೊರೆದಭ್ರದಗಲಕೆ
ಚೀರಿದವು ಕೊಂಚೆಗಳುಬಕಪಿಕಶುಕ
ಮಯೂರಚಯ
ಜಾರಿದವು ಜಂಗಾಯ್ಲದಲಿ ಕಪಿ
ಕೀರಿದವುವನವ್ಮಗನಿಚಯ ವ್ಮೆ
ದೋರಿದವು ದೂರದಲಿ ಕಾಲ್ದುಳಿಗನಿಲ
ನಂದನನ[5]

೬. ಮದಜಲಧಾರೆಯಿಲ್ಲದ ದಿಶಾಗಜದಂತೆ, ಸುಧಾಂಶು ಲೇಖೆಯಿ
ಲ್ಲದ ನಭದಂತೆ, ಕಲ್ಪಲತೆಯಿಲ್ಲದ ನಂದನದಂತೆ, ವೇಲೆಯಿ
ಲ್ಲದಕಡಲಂತೆ, ಕೇಸರಿಣಿಯಿಲ್ಲದ ಕೇಸರಿಯಂತೆ, ಸೀತೆಯಿ
ಲ್ಲದ ರಘುವಂಶ ರಾಮನಿರೆ ನೋಡಿದನಾಕುಲನಾಗಿ ಲಕ್ಷ್ಮಣಂ[6]

ಘನಮದೋತ್ಕಟಧಾರೆಯಿಲ್ಲದ
ಮದದ್ವಿಪವುಂಟೇ, ತೀಕ್ಷ್ಣ,–
ವಿನುತದೀಧಿತಿಯಿಲ್ಲದಿನನುಂಟೇ, ಜಗತ್ತಿ
ನಲಿ
ವನಜವಿಲ್ಲದ ಕೊಳನು, ವರವಾ
ಹಿನಿಗಳಿಲ್ಲದವಾರ್ಧಿ, ಸೀತಾ
ವನಿತೆಯಿಲ್ಲದ ರಾಮನುಂಟೇ ಭೂಮಿ
ಯೊಳಗೆಂದ[7]

೭. ಧರಣೀ ರಕ್ಷಣ ದಕ್ಷ ದಕ್ಷಿಣಭುಜಂ ಲಕ್ಷ್ಮೀಧರಂ ಮೆಯ್ದುನಂ
ಹರಿವಂಶಂ ಜನಕಂ ಮದೀಯ ಜನಕಂ ವೀರಂ ಪ್ರಭಾಮಂಡಲಂ
ಪಿರಿಯಣ್ಣಂ, ರಘುರಾಮನಂಗನೆಯನೆನ್ನಂ, ಸೀತೆಯಂ, ಪಾತಕಂ

ದಶವರೂಥನುಪಾಮಹೀಶನ
ಸೊಸೆಯ, ಜನಕನಮಗಳ, ರಾಮನ
ಶಶಿಮುಖಿಯನಪ್ರತಿಮಲಕ್ಷ್ಮಣದೇ
ವನತ್ತಿಗೆಯ,

---

1. ರಾಮಚಂದ್ರಚರಿತಪುರಾಣ ೯-೧೧೮.
2. ಇದೇ. ೯-೧೦೫.
3. ತೊ. ರಾ. III ೧೧-೩೪, ೩೫.
4. ಇದೇ. ೧೧-೧೨೪.
5. ಇದೇ V ೪-೧೬.
6. ಇದೇ. ೯-೧೩೨.
7. ಇದೇ. III ೧೧-೨೬.

| | |
|---|---|
| ದೊರೆಗೆಟ್ಟುಯ್ದ ಪಸೇವನೆಂದು ಸತಿಹಾಹಾಕ್ರಂದನಂ ಮಾಡಿದಳ್[1] | ಅಸುರವಂಶಾಧಮನು, ದುರಿತ<br>ವ್ಯಸನಿ ದುಷ್ಟದುರಾತ್ಮನಡವಿಯ<br>ಲಸವಳಿಸಿಕೊಂಡೊಯ್ದನೆಂದುಸುರು<br>ವುದು ರಾಮಂಗೆ[2] |
| ೮. ಲತಿಕಾ ಕುಂಜಗಳೊಳ್ ಭೂವಿವರ ಕುಹರದೊಳ್ ಘೋರಕಾಂತಾರ<br>ದೊಳ್ ಪ–<br>ರ್ವತ ಸಾನೂದ್ಯಾನದೊಳ್ ನಿರ್ಝರಸರಿದುಪಕಂಠಂಗಳೊಳ್.<br>ಸಾರಕಾಸಾ<br>ತಟೀ ದೇಶಂಗಳೊಳ್ ಪೂಗೊಳದ ತಡಿಗಳೊಳ್ ದಂಡಕಾ–<br>ರಣ್ಯದೊಳ್ ಕೂ–<br>ಡೆತೊಳಲ್ದರ್ ಕಂಡರಿಲ್ಲಂಬಿಕೆಯನರಸಿವಿದ್ಯಾಧರಾಧೀಶಮುಖ್ಯರ್.[3] | ವಿವಿಧ ಗುಲ್ಮನಿಕುಂಜದಲಿ ಭೂ<br>ವಿವರವಳಯಂಗಳಲಿ ಭೂರುಹ<br>ನಿವಹದಲಿ ನಿರ್ಜರನಿಕುಂಚಿತ ಪಲ್ವಲಂ<br>ಗಳಲಿ<br>ಪವನನಿಸ್ವನ ಪರ್ಣರವ ಪ್ರ<br>ಸ್ರವಣಧಾರಾಧ್ವಾನಖಗನ್ಪುಗ<br>ನಿವಹದಲರಸಿ ನೋಡಿದರಿವರು ಜಾನ<br>ಕಿಯ[4] |
| ೯. ಸತಿಸೀತೆಯ ಶೋಕಾನಲ<br>ಹತಿಯಿಂ ಬೆಂದತ್ತು ಕೂಡೆ ಲಂಕಾನಗರಂ[5] | ಅವನಿಜೆಯ ವಿಷಮವಿಪ್ಲವಶೋಕ<br>ಶಿಖಿಶೋಭಿಸುವ ಹುತವಹನಾದನು[6] |
| ೧೦. ......................ದೋರ್ದಂಡ ಕಂಡೂ<br>ಯನಮಂ ಚಂಡಾಸಿಸಂಘಟ್ಟದಿನೋಗೆವುರಿಯಿಮುಳ್ಗಿ ಪೆಂ[7]<br>ಎನಗೆ ರಣರಭಸದಿಂಗಡ<br>ಮನುಜಂ ಮೇಲೆತ್ತಿ ಬಂದನಿನ್ ದೋಃಕಂಡೂ<br>ಯನಮಂ ಕಳಲ್ಚಲೆಡೆಯಾ<br>ಯ್ತೆನುತ್ತುಮುತ್ತರಳ ತಾಮ್ರ ಲೋಚನನಾದಂ[8] | ........................<br>ಭೂರಿಭುಜ ಕಂಡುವಿನ ತಿಮಿರ ವಿ<br>ಕಾರವನು ಪರಿಹರಿಸಿಕೊಂಬೆ....<br>....ಸಮರಸಭಾರಕೇಳಿಯಲಿ.[9] |

....

## ಕುಮಾರವ್ಯಾಸ—ಕುಮಾರ ವಾಲ್ಮೀಕಿ

ಕುಮಾರ ವಾಲ್ಮೀಕಿಯ ಕಾವ್ಯಚಂದ್ರಮನಿಗೆ ಕುಮಾರವ್ಯಾಸನ 'ಭಾರತವು' ಸೂರ್ಯನಿದ್ದ ಹಾಗೆ. ತಾನಿರಿಸಿಕೊಂಡ ಕಾವ್ಯನಾಮ, ಕಾವ್ಯಾಧಿಪತಿ ವಿಚಾರ, ಛಂದಸ್ಸು, ಶಬ್ದಸಂಯೋಜನೆ, ಹಲವಾರು ವರ್ಣನೆಗಳು—ಈ ಎಲ್ಲ ಅಂಶಗಳಲ್ಲೂ ಕುಮಾರ ವಾಲ್ಮೀಕಿಯು ಕುಮಾರವ್ಯಾಸನಿಂದ ಬೆಳಕು ಪಡೆದದ್ದು,–'ಸೂರ್ಯ ಪ್ರಕಾಶದಷ್ಟು' ಸ್ಪಷ್ಟವಾಗಿದೆ. ತೊರವೆ ರಾಮಾಯಣದ ಒಟ್ಟು ೫೧೦೩ ಷಟ್ಪದಿಗಳಲ್ಲಿ ಸುಮಾರು ೨೨೦ ಪದ್ಯಗಳಲ್ಲಿ 'ಗದುಗಿನ ಭಾರತ'ದ ಪ್ರಭಾವವು ನಿಚ್ಚಳವಾಗಿದೆ. ಸಮೀಪವರ್ತಿಗಳೂ, ಸಮಾನ ಮನೋಧರ್ಮವುಳ್ಳವರೂ ಆದ ಇಬ್ಬರಲ್ಲಿ ಹಲವೊಮ್ಮೆ 'ಸಾಮ್ಯ,' 'ಸಾದೃಶ್ಯ'ಗಳು ವ್ಯಕ್ತವಾಗುವುದು ಅನಿರೀಕ್ಷಿತವೇನೂ ಅಲ್ಲ; ಆದರೆ ಕಾವ್ಯಸೃಷ್ಟಿಯ ಮೂಲವಾದ ಪ್ರತಿಭಾವೈಭವದಲ್ಲಿ ಇಬ್ಬರೂ ಸರಿಸಮಾನರಾಗುವುದು ಅಸಾಧ್ಯವೇ, ಅನಿರೀಕ್ಷಿತವೇ. ಅಂತಹ ಸನ್ನಿವೇಶದಲ್ಲಿ ವಿಶೇಷ

---

1. ರಾಮಚಂದ್ರಚರಿತ ಪುರಾಣ ೯-೧೪೩.
2. ತೊ. ರಾ. III ೧೦-೮.
3. ಇದೇ. ೯-೧೩೭.
4. ಇದೇ. III ೧೧-೨೩.
5. ಇದೇ. ೧೧-೧೫೮.
6. ಇದೇ. V ೮-೮೩.
7. ಇದೇ. ೧೨-೭೩.
8. ಇದೇ. ೧೩-೩.
9. ಇದೇ. VI ೬-೬೦.

ಪ್ರತಿಭಾಶಾಲಿಯಾದ ಮಹಾಕವಿಯ ಪ್ರಭಾವಲಯದಲ್ಲಿ ಇನ್ನೊಬ್ಬನು ತನ್ನ ಕಾವ್ಯಮಾರ್ಗಕ್ರಮಣಕ್ಕೆ ಬೇಕಾದ 'ಬುತ್ತಿ'ಯನ್ನು ಸಂಗ್ರಹಿಸಿಕೊಳ್ಳುವುದು ಸ್ವಾಭಾವಿಕ. ಬಹುಶಃ ಸಾಹಿತ್ಯವೆಲ್ಲವೂ ಇಂತಹ 'ಕೊಡು–ಕೊಳು'ಗಳ ಹೆಜ್ಜೆಗಳನ್ನಿರಿಸಿಯೇ ಮುನ್ನಡೆದಿದೆ.

ಈ ಹಿನ್ನೆಲೆಯಲ್ಲಿ, ಕುಮಾರವ್ಯಾಸನ ಕೃತಿಯಿಂದ ಕುಮಾರವಾಲ್ಮೀಕಿಯು ಬಹಳ ಉಪಕೃತನಾಗಿದ್ದಾನೆಂದರೆ, ಮಹಾಕವಿಯೊಬ್ಬನ ಸಮರ್ಥಮಾರ್ಗದರ್ಶನ ಹೊಂದಿದ್ದಾನೆಂದು ಮಾತ್ರ ತಿಳಿಯಬೇಕಲ್ಲದೆ, ಕುಮಾರ ವಾಲ್ಮೀಕಿಯ ಕೃತಿಯಲ್ಲಿ 'ಸತ್ವ'ವೇನೂ ಇಲ್ಲವೆಂದಾಗಲೀ, ಈ ಕವಿಗೆ ಕಾವ್ಯಸೃಷ್ಟಿಯ ರಹಸ್ಯವೇ ತಿಳಿಯದು ಎಂದಾಗಲೀ ಅರ್ಥ ಮಾಡುವ 'ವೈಪರೀತ್ಯಕ್ಕೆ' ಬಲಿಯಾಗಬಾರದು. ಕುಮಾರ ವಾಲ್ಮೀಕಿಯ ಈ 'ಅನುಸರಣಾ' ವಿಧಾನದಿಂದಾಗಿ, ಅವನ ಕೃತಿಯು ಜನ ಸಾಮಾನ್ಯಕ್ಕೆ ಸುಲಭಗ್ರಾಹ್ಯವಾಯಿತು, ಆ ಮಹಾಕಾವ್ಯದ ಬೆಳಕಿನಲ್ಲಿ ಇದರ ಅರ್ಥವನ್ನೂ, ಅರ್ಥವೈಶಿಷ್ಟ್ಯಗಳನ್ನೂ ಕಾಣುವುದು ಸುಲಭವೆನಿಸಿತು. ಕುಮಾರವ್ಯಾಸನ ಕಾವ್ಯದ ಪ್ರಭಾವವು ಎಷ್ಟೇ ಇದ್ದರೂ, ಕುಮಾರವಾಲ್ಮೀಕಿಯು 'ತನ್ನದೇ' ಕೃತಿಯನ್ನು ಜನತೆಗೆ ಕೊಟ್ಟಿದ್ದಾನೆ. ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ಪ್ರತ್ಯೇಕ ಸ್ಥಾನವನ್ನು ಗಳಿಸಿದ್ದಾನೆ. ಕುಮಾರವ್ಯಾಸ-ಸೂರ್ಯನ ಮುಂದೆ ಇವನು ಚಂದ್ರನಾಗಿಯಾದರೂ ವಿಶಿಷ್ಟವಾಗಿ ಬೆಳಗಿದವನು, ಬಾಳಿದವನು; ಆ ಮಹಾ ಪ್ರಭೆಯಲ್ಲಿ 'ತನ್ನನ್ನೇ ಕರಗಿಸಿಕೊಂಡವನಲ್ಲ'–ಎಂದು ಮಾತ್ರ ಹೇಳಬಹುದು.

'ತೊರವೆ ರಾಮಾಯಣ'ದಲ್ಲಿ ಕುಮಾರವ್ಯಾಸನ 'ಗದುಗಿನ ಭಾರತ'ದ ಪ್ರಭಾವದ ಸ್ವರೂಪದರ್ಶನಕ್ಕಾಗಿ ಕೆಲವೇ ಉದಾಹರಣೆಗಳನ್ನು ಇಲ್ಲಿ ಕೊಡಲಾಗಿದೆ.

| | ಕುಮಾರವ್ಯಾಸನ 'ಗದುಗಿನ ಭಾರತ' (ಕರ್ಣಾಟ ಭಾರತ ಕಥಾ ಮಂಜರಿ) | ಕುಮಾರ ವಾಲ್ಮೀಕಿಯ ತೊರವೆ ರಾಮಾಯಣ |
|---|---|---|
| ೧. | ಶ್ರೀವನಿತೆಯರಸನೆ ವಿಮಲ ರಾ | ಶ್ರೀಜನಕಜಾರಮಣ ವಿಮಲ ಸ |
| | ಜೀವ ಪೀಠನ ಪಿತನೆ ಜಗಕತಿ | ರೋಜಸಂಭವ ಜನಕನನುಪಮ |
| | ಪಾವನನೆ ಸನಕಾದಿ ಸಜ್ಜನನಿಕರದಾತಾರ....[1] | ರಾಜಶೇಖರವಿನುತ ನಿಖಿಳಾಮರ ಕಿರೀಟಚಯ.[2] |
| ೨. | ಹಲಗೆಬಳಪವ ಪಿಡಿಯದೊಂದ | ಪರರ ಬಗೆ ಪರರುಕ್ತಿಪರರು |
| | ಗ್ಗಳಿಕೆ ಪದವಿಟ್ಟಳುಪದೊಂದ | ತ್ಕರುಷ ಪರರುನ್ನತಿಯ ಕೃತಿಯಪ |
| | ಗ್ಗಳಿಕೆ ಪರರೊಡ್ಡವದ ರೀತಿಯಕೊಳ್ಳದಗ್ಗಳಿಕೆ.[3] | ಹರಣೆ ಪರರುಪಮಾನ ಪರರೊಡ್ಡವದಪರುಟವದ |
| | | ಹರಹು ಹೊಗದಗ್ಗಳಿಕೆ, ಪದಸಂ |
| | | ಚರಣೆಯಲಿ ಲಿಪಿ ತಿರುಗಿ ನೋಡದ |
| | | ಬಿರಿದು ಬೇರೆ ಕುಮಾರ ವಾಲ್ಮೀಕಿಯವಹೋ ಲಹರಿ[4] |
| ೩. | ಅರಸುಗಳಿಗಿದು ವೀರ,ದ್ವಿಜರಿಗೆ | ಸುಕವಿಗಳ ಸುಮ್ಮಾನ, ಸೂರಿ |
| | ಪರಮ ವೇದದಸಾರ ಯೋಗೀ | ಪ್ರಕರದಮಲಜ್ಞಾನ, ಮುನಿಕರ |
| | ಶ್ವರರ ತತ್ವ ವಿಚಾರ ಮಂತ್ರಿಜನಕ್ಕೆಬುದ್ಧಿ ಗುಣ....[5] | ಮುಕುರ, ಗುಣಿಗಳ ಗೂಢನಿಧಿಸುರಸರಸುಧಾ–ಶರಧಿ....[6] |

1. ಕು. ವ್ಯಾ. ಭಾ. I ೧-೧.
2. ತೊ. ರಾ. I ೧-೧.
3. ಇದೇ. I ೧-೧೫.
4. ಇದೇ. I ೧-೧೦.
5. ಇದೇ. I ೧-೧೯.
6. ಇದೇ. I ೧-೧೧.

೪. ಕಳವು ಹುಸಿ ಹಾದರ ವಿರೋಧ
ಸ್ಖಲಿತವಾರಡಿ ಬಂದಿ ದಾಳಿದುಳ
ಬೆಳುಗವತೆಯನ್ಯಾಯ ಪರಿಭವ ಠಕ್ಕು ಡೊಳ್ಳಾಸ.[1]
ಹಳಿವುವಂಚನೆ ಜಾತಿಸಂಕರ ;....

ಹುಸಿನುಸಿಳು ಡೊಳ್ಳಾಸ ಹಿಂಸಾ
ವ್ಯಸನವಾರಡಿ ಬಂದಿ ದಳದುಳ
ವಸುರಭಯ ದುರ್ಭಿಕ್ಷ ನಾನಾವರ್ಣಸಮ್ಮಿಶ್ರ,[2]

೫. ಭ್ರೂಲತೆಯ ಬಿಲುಗಳ ಕಟಾಕ್ಷದ
ಕೋಲಹೊದೆಗಳ ಬಾಸೆಗಳ ಕರ
ವ್ಯಾಳಿಗಳ ಕಸ್ತೂರಿಯ ತಿಲಕದ ಹರಿಗೆ ಹಲಗೆಗಳ
ತೋಳುಗಳ ಲೌಡಿಗಳ ಸೆಳ್ಳಿಗು
ರೋಳಿಗಳ ಸುರಗಿಗಳ ಮನ್ಮಥ
ನಾಳು ನಡೆದುದು ದ್ರೌಪದಿಯ ದಂಡಿಗೆಯಬಳಸಿನಲಿ[3]

ಭ್ರೂಲತೆಯ ಹದವಿಲ್ಲುಗಳ, ಹೊಳೆ
ವಾಲಿಗಳ ಹೊದೆಗೋಲುಗಳ, ನಳಿ
ತೋಳ ಬಡಿಗೋಲುಗಳ ಸೆಳ್ಳಿಗುರ್ಗೊನೆಗಳಂಟುಗಳ...[4]

೬. ಅರುಸಿಲನರು ಸಮ್ಮುಖಕೆ ಮದ
ನಾರಿಯರ್ಧದ ನಾರಿ, ಹರಿ ತಾ
ಹೇರುವದ ಹೆಂಗುಸುರೆ, ಬೊಮ್ಮನು ಮಗಳ
ಮೊರೆಗೇಡಿ ;
ಘೋರವದು ಸುರಪತಿಯ ಕಥೆ ವ್ಯೆ
ಯಾರೆ ಹೊತ್ತನು ಮದನ ಮುದ್ರಾ
ಧಾರಿಯೆಂಬವೊಲೊದರಿದವು ಮುಂಗುಡಿಯ
ಕಹಳೆಗಳು[5]

ಮೇದಿನೀಪತಿ ಕೇಳಿದ್ಯೆ ಕಮ
ಲೋದರನು ಕಾಮಿನಿಯನೆದೆಯೊಳ
ಗಾದರಿಸಿದನು, ಕಮಲಭವ ಜಗದರಿಯೆ ನಂದನೆಯ
ಐದೆಯನು ಮಾಡಿದನು, ಅರೆ ವೆ
ಣ್ಣಾದನೀಶ್ವರನಿಂದ್ರಗಿಂದ್ರರ
ಹಾದಿಯದು ನಗೆಯಿತ್ತಣವರನು ಹೇಳಲೇನೆಂದ[6]

೭. ಹೊಳೆವ ಕಂಗಳ ಕಾಂತಿ ಮರಗ
ತ್ತಲೆಯ ಮೊತ್ತವ ಬಿಗಿಯೆ, ವ್ಯೆ ಪರಿ
ಮಳಕೆ ತೂಳುವ ತುಂಬಿಗಳ ತನುಲತೆಯ
ಚೆಲುವಿಕೆಯ[7]

ಅರಸ ಕೇಳಾ ತರುಣಿಯರ ತನು
ಪರಿಮಳದ ಸೋಂಕಿನಲಿ ಸುತ್ತಲು
ಪರಿಮಳಿಸಿದ:ದು ತದು ಸುತರಳಾಪಾಂಗರೋಚಿಯಲಿ
ಮುರಿದುದಾ ಮರಗತ್ತಲೆಯು ವ್ಯೆಸಿರಿ[8]

೮. ಮದುನುಡಿಗೆ ಗಿಣಿ ಹೊದ್ದಿದವು ಸರ
ದುಲಿಗೆ ಕೋಗಿಲೆಯೌಕಿದವು ಪರಿ
ಮಳದ ಪಸರಕೆ ತೂಳಿದವು ತುಂಬಿಗಳು ಡೊಂಬಿಯಲಿ
ಹೊಳೆವ ಮುಖಕೆ ಚಕೋರಚಯ ವಿ
ಟ್ಟಳಿಸಿದವು...........[9]

ಗತಿಗೆ ಕುಣಿದವು ಹಂಸೆ, ಸಂಭಾ
ಷಿತದ ಮೃದು ರವಕೊದಗಿದವು ಪರ
ಭೃತವಪಾಂಗಮರೀಚಿಚಂದ್ರಿಕೆಗಾ ಚಕೋರಿಚಯ[10]

---

ಕು. ವ್ಯಾ. ಭಾ.

1. II ೧–೪೫. II ೭–೧೦.
3. I ೧೩–೩೪.
5. I ೧೩–೧೭.
7. I ೯–೧೪.
9. III ೮–೧೦.

ತೊ. ರಾ.

2. I ೩–೨೭.
4. I ೫–೩೯
6. I ೫–೩೭.
8. I ೫–೪೫.
10. I ೫–೪೬.

15

೯. ವಿಕಳ ವಾಮನ ಮೂಕ ಬಧಿರಾಂ
ಧಕರು ಮಾಗಧ ಸೂತ ವಂದಿ
ಪ್ರಕರ ಮಲ್ಲ ಮಹೇಂದ್ರಜಾಲಿ ಮಹಾಹಿತುಂಡಿತರು[1]

ಜಗದ ಜನಪದವರ್ಥಿಗಳು ಶಿ
ಲ್ಪಿಗಳು ಸರಸ ಸರಿಸೃಪಗ್ರಾ
ಹಿಗಳು ವಾಮನ ಬಧಿರಮೂಕಾಕ್ಷನುರು ನೋಟಕರು
ಹೊಗಳಿಕೆಯ ಪರಿಪಲಿಯ ಕ್ಯೆವಾ
ರಿಗಳು ನೆರೆದುದು.........[2]

೧೦. ಮುದವ ನೆಲೆ ಶುಭದಿಕ್ಕೆ ಸೊಗಸಿನ
ಸದನ ಸೌಖ್ಯದ ಗರುಡಿ ಸೊಂಪಿನ
ಪದವಿ ಲೀಲೆಯ ತಾಣ ತಾಯ್ಮನೆ ಖೇಳಮೇಳವದ
ಮುದವ ಮಡು ಭೋಗ್ಯೆಕ ನಿಧಿ ಸಂ
ಪದದ ಜನ್ಮಸ್ಥಳ ಮನೋರಥ
ಮುದಯಗಿರಿ ಹಿಂದೀಸು ದಿನವಮರಾವತೀ ನಗರ[3]

ಈ ಸುದಿನಪರಿಯಂತ ವಿಭವದ
ವಾಸ ಸೊಬಗಿನ ಸೆಜ್ಜೆ, ಸುಖದ ಸು
ದೇಶ, ಸುಮ್ಮಾನದ ಸುಧಾಂಬುಧಿ, ಸಿರಿಯ ನೆಲೆವೀಡು
ಲೇಸಿನಾಗರ, ಶುಭದ ಬಹಳಿತ
ಕೋಶ ಸಂತಸದಿಕ್ಕೆ, ಸೊಂಪಿನ
ವಾಸವಾಗಿದ್ದುದು ನಿವಾಸವಿದೆಂದನಾ ಭೂಪ[5]

೧೧. ಕಳವಳದನೆಲೆ, ಭಯದ ಜನ್ಮ
ಸ್ಥಳ, ವಿಷಾದದ ಪೇಟೆ, ಖಾತಿಯ
ನಿಳಯ ಖೋಡಿಯ ಕಟಕ, ಭಂಗದ ಸಂಭವಸ್ಥಾನ
ಅಳುಕಿನಂಗಡಿ, ಹಳುವಿನಾಡುಂ
ಬೊಲ ಸಿರೋಧದ ಶಾಲೆ, ದುಗುಡದ
ಕಳನೆನಿಸಿತೀ ನಗರಿ ಈಗಲು ಪಾರ್ಥ ಕೇಳೆಂದ[4]

ಅಶುಭವಾಡುಂಬೊಲನು, ಕುಮುದದ
ಹಸರ, ಚಿಂತೆಯ ಸಂತೆ, ದುಃಖದ
ವಸತಿ, ದುಗುಡದಬೀಡು, ದುಮ್ಮಾನದ ಜನಸ್ಥಾನ
ಅಸುಖದಾರವೆ, ಖೇದಹುದಿದಾ
ಯಸದ ಜಾಳಿಗೆ, ಜನನ ಮನೆ ರ,
ಕ್ಕಸಿಯ ಮಠವಾಯ್ತಿಂದು ಭವನವಿದೆಂದನಾ ಭೂಪ[6]

೧೨. ದ್ಯುಮಣಿಕರ್ಣದ್ಯುಮಣಿಸಹಿತ
ಸ್ತಮಿಸೆ ಕಮಲಿನಿ ಕೌರವನ ಮುಖ
ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊ
ಡನೆ[7]

.........ರಘು ಕುಲಾಂಬರ
ಹಿಮಕಿರಣನಗಲಿದನು ವಿಪಿನ ವಿಯದ್ವಿಭಾಗದಲಿ
ದ್ಯುಮಣಿ ಕುಲಪಾರ್ಥಿವ ಸರೋಜ
ದ್ಯುಮಣಿ ದಶರಥರಾಯನಾ ಪ
ಶ್ಚಿಮದ ತರಣಿಯ ತೇಜದಲಿ ತಿರುಗಿದನು ಪಟ್ಟಣಕೆ.[8]

ಕೆಲವು ಸನ್ನಿವೇಶಗಳಲ್ಲಿ

ಕು. ವ್ಯಾ. ಭಾ.

೧. ಯುಧಿಷ್ಠಿರನು ನಡೆಸಿದ 'ರಾಜಸೂಯ'

| ಸಭಾಪರ್ವ–ಸಂಧಿ. | ಪದ್ಯ. |
|---|---|
| 7 | 15ರಿಂದ21 |
| 7 | 27 |
| 7 | 31 |
| 7 | 32 |
| 7 | 33 |
| 7 | 35 |

ಕುಮಾರ ವಾಲ್ಮೀಕಿಯ ತೊ. ರಾ.

ದಶರಥನು ನಡೆಸಿದ 'ಪುತ್ರಕಾಮೇಷ್ಠಿ'

| ಬಾಲಕಾಂಡ–ಸಂಧಿ. | ಪದ್ಯ. |
|---|---|
| 7 | 24ರಿಂದ28 |
| 7 | 41 |
| 7 | 44 |
| 7 | 45 |
| 7 | 47 |
| 7 | 52 |

ಕು. ವ್ಯಾ. ಭಾ.
1. II ೭-೧೧.
3. III ೨-೪.
4. III ೧೨-೫.
7. VIII ೨೭-೩೦.

ತೊ. ರಾ.
2. I ೭-೨೩.
5. II ೨-೩೫.
6. II ೨-೩೬.
8. II ೪-೭.

ತೊ. ರಾ. ದಲ್ಲಿ ಅನುಕ್ರಮ ಪದ್ಯಗಳಲ್ಲಿ ಪ್ರಭಾವ, ಅನುಕರಣೆ 'ಸಾಂದ್ರ'ವಾಗಿದೆ

೨. ದ್ರೌಪದಿ ಸ್ವಯಂವರ — ಸೀತಾ ಸ್ವಯಂವರ

| ಆದಿಪರ್ವ–ಸಂಧಿ | ಪದ್ಯ | ಬಾಲಕಾಂಡ–ಸಂಧಿ | ಪದ್ಯ |
|---|---|---|---|
| 12 | 7 | 13 | 1 |
| 12 | 10 | 13 | 5 |
| 12 | 14 | 13 | 6 |
| 12 | 11 | 13 | 7 |
| 12 | 16 | 13 | 9 |
| 12 | 17 | 13 | 10 |
| 13 | 24 | 14 | 16, 17 |
| 13 | 27 | 14 | 20 |

ಸಭಾಪರ್ವ (ದ್ಯೂತ ಸಭೆ, ಇತ್ಯಾದಿ ವರ್ಣನೆಗಳ ಪ್ರಭಾವವನ್ನೂ 'ಸೀತಾ ಸ್ವಯಂವರ'ದಲ್ಲಿ ಕಾಣಬಹುದು)

| | | | |
|---|---|---|---|
| 14 | 46 | 14 | 17 |
| 13 | 32, 33 | 14 | 23 |
| 13 | 45 | 14 | 24 |

ಕುಮಾರವ್ಯಾಸನು ಕರ್ಣಾವಸಾನ ಪ್ರಸಂಗದಲ್ಲಿ ಹೇಳಿದ ಈ ಕೆಳಗಿನ ಷಟ್ಪದಿಯು

ಕಳಚಿ ದುರಿಯೋಧನನ ಬೆಳುಗೊಡೆ
ನೆಲಕೆ ಬೀಳ್ವಂದದಲಿ ಕೌರವ
ಕುಲದ ಸಿರಿಶ್ರೀಶ್ವರ್ಯವಿಳಿಗೊರ್ಗುಡಿಸಿ ಕೆಡೆವಂತೆ
ಥಳಥಳಿಪ ನಗೆಮೊಗದ ಗಂಟಿಕಿ
ಬಲಿದ ಹುಬ್ಬಿನ ಬಿಟ್ಟ ಕಂಗಳ
ಹೊಳೆವ ಹಲುಗಳ ಕರ್ಣ ಶಿರ ಕೆಡೆದುದು ಧರಿತ್ರಿಯಲಿ.[1]

ಕುಮಾರ ವಾಲ್ಮೀಕಿಯ ರಾಮಾಯಣದಲ್ಲಿ ಮೂರು ಪ್ರಸಂಗಗಳಲ್ಲಿ ಬಳಸಲ್ಪಟ್ಟಿದೆ:

(ಅ) ಅತಿಕಾಯಾವಸಾನ ಸನ್ನಿವೇಶ

ಮಿಸುಪಮಣಿಮಯಕುಂಡಲದ ಡಾ
ಳಿಸುವ ಕಂಗಳ ಮುಗುಳುನಗೆ ಲಂ
ಬಿಸಿದ ವದನದವೀರರಸದಭಿನವದ ಲೋಚನದ,
ಅಸುರಪತಿ ಲಂಕೇಶ್ವರನ ಮೊಗ–
ರಸದ ಸಿರಿ ಕೆಲಸಿಡಿವವೊಲು ತಲೆ
ವಿಶಿಖಮುಖದಲಿ ಕೆಡೆದುದಿಳೆಗತಿಕಾಯ ರಕ್ಕಸನ.[2]

1. ಕು. ವ್ಯಾ. ಭಾ.–ಕರ್ಣ ಪರ್ವ, ೨೭-೨೪.
2. ತೊ. ರಾ.–ಯುದ್ಧ ಕಾಂಡ, ೩೪-೭೪.

**(ಇ) ಇಂದ್ರಜಿತು ಅವಸಾನ ಸನ್ನಿವೇಶ**

ಹೇಳಲಚ್ಚರಿ ವೀರಲಂಕಾ
ಪಾಲಕನ ಭುಜವಿಜಯ ಲಕ್ಷ್ಮಿಯ
ತೋಳ ಕನ್ನಡಿ ಕಳಚಿ ಬೀಳ್ವಂದದಲಿ ನಭದಿಂದ
ಡಾಳಿಸುವ ದಾಡೆಗಳ ಹೊಗರೊಗು
ವಾಲಿಗಳ ನಗೆಮೊಗದ ಕರ್ಣಾವಿ
ಲೋಲಕುಂಡಲದಸುರಶಿರಕೆಡೆದುದು ಧರಿತ್ರಿಯಲಿ.[1]

**ರಾವಣಾವಸಾನ ಪ್ರಸಂಗ:**

ಕುಶನೆ ಕೇಳ್ಮೈಮುಗುಳು ನಗೆ ಲಂ
ಬಿಸಿದ ವದನದ ಹೊಗರು ಜಗುಳದ
ನಸು ಮುಗಿದ ಲೋಚನದ ಥಳಥಳಿಸುವ ಕದಂಪುಗಳ
ಪಸರಿಸಿದ ತೋಳುಗಳ ವಕ್ತ್ರದ
ಲೊಸರ್ವ ಶ್ರೋಣಿತ ಲಿಪ್ತ ಕಾಯದ
ಲಸುರಪತಿ ರಂಜಿಸಿದನಾ ರಣರಂಗಮಧ್ಯದಲಿ[2]

ಕುಮಾರ ವ್ಯಾಸನು ಚಿತ್ರಿಸಿದ ಭಗದತ್ತನ ಸುಪ್ರತೀಕ ಗಜ ವರ್ಣನೆಯ[3] ಛಾಯೆಯು ತೊರವೆ ರಾಮಾಯಣದ 'ಮಹೋದರ'ನ "ಸುದರ್ಶನ" ಎಂಬ ಮಹಾಗಜಪ್ರಸಂಗದಲ್ಲಿ ಗೋಚರಿಸುತ್ತದೆ.[4]

ಕಥಾ ಸನ್ನಿವೇಶದ ಭಾವ ಪೋಷಕವಾಗಿ ಸೂರ್ಯೋದಯ, ಸೂರ್ಯಾಸ್ತಗಳನ್ನು ವರ್ಣಿಸಿದ ಕುಮಾರ ವ್ಯಾಸನ 'ರೀತಿ'ಯನ್ನು[5] ಕುಮಾರ ವಾಲ್ಮೀಕಿಯೂ ಅನುಸರಿಸಿದ್ದಾನೆ.[6]

ಹೀಗೆ, ಪ್ರಭಾವ, ಅನುಸರಣೆಗಳ ಪಟ್ಟಿಯನ್ನು ಇನ್ನಷ್ಟು ಬೆಳಸಬಹುದು. ಮಹಾಕವಿ ಕುಮಾರವ್ಯಾಸನ ಕೃತಿಯಲ್ಲಿ ನಮ್ಮ ಮನಸೆಳೆಯುವ ರಸವತ್ತಾದ ಸಂಭಾಷಣೆ (ಉದಾ: ಭೀಮ–ದ್ರೌಪದಿ, ಅರ್ಜುನ–ಊರ್ವಶಿ, ಅರ್ಜುನ–ಉತ್ತರ, ಕೃಷ್ಣ-ಕರ್ಣ, ಅಭಿಮನ್ಯು-ದ್ರೋಣನಾಯಕತ್ವದ ಕೌರವಪಕ್ಷದ ಭಟರು........ಗಳನ್ನು ಹೆಸರಿಸಬಹುದು) ಸಂದರ್ಭೋಚಿತ ಸನ್ನಿವೇಶ ನಿರ್ಮಾಣ ಕೌಶಲ, ಮಾನವಹೃದಯದ ಸೂಕ್ಷ್ಮ ಪರಿಚಯದಿಂದ ಮಾತ್ರ ಸಾಧ್ಯವಾಗುವ ಪಾತ್ರ–ಚಿತ್ರಣಾ ವೈಖರಿ–ಇವುಗಳನ್ನೂ ಕುಮಾರ ವಾಲ್ಮೀಕಿಯು ಮೈಗೂಡಿಸಿಕೊಂಡಿದ್ದರೆ, ಇವನ 'ರಾಮಾಯಣ'ವೂ ಆ ಕೃತಿಯ ಮಟ್ಟವನ್ನು ಮುಟ್ಟುತಿತ್ತು ಎಂದು ಹೇಳಿ ನಿಲ್ಲಿಸಬಹುದು.

**ಕುಮಾರ ವಾಲ್ಮೀಕಿಯ ಬಹುಜ್ಞತೆಗೆ ಸಾಕ್ಷಿಯಾದ ಇನ್ನೂ ಕೆಲವು ಉಲ್ಲೇಖಗಳು:**

ಕುಮಾರ ವಾಲ್ಮೀಕಿಯು ಸಂಸ್ಕೃತ, ಕನ್ನಡ ಮಹಾಕವಿಗಳ ಪ್ರಭಾವಲಯದಲ್ಲಿ ಬೆಳೆದವನೆಂಬುದು–ಈ ತನಕದ ಅವನ ಕಾವ್ಯ–ವಿಶ್ಲೇಷಣೆಯಿಂದ ಸ್ಪಷ್ಟವಾದೀತು. ತನ್ನ ವಿಸ್ತಾರವಾದ ಕಾವ್ಯಾಭ್ಯಾಸ, ಪರಿಶ್ರಮಗಳ ಫಲವಾಗಿ, ಕವಿಯು ತನ್ನ ಕೃತಿಯಲ್ಲಿ ಸುಪ್ರಸಿದ್ಧ ಲೋಕೋಕ್ತಿಗಳನ್ನು, ಸುಭಾಷಿತ, ಕವಿವಾಣಿಗಳನ್ನೂ ಸಂದರ್ಭೋಚಿತವಾಗಿ ಅಳವಡಿಸಿಕೊಂಡದ್ದನ್ನು ನಾವು ಗಮನಿಸಬಹುದು.

---

1. ತೊ. ರಾ.–VI ೪೪-೫೭.
2. ತೊ. ರಾ VI ೫೧–೭೫.
3. ಕು. ವ್ಯಾ. ಭಾ.–ದ್ರೋಣಪರ್ವ–ಸಂಧಿ ೩.
4. ತೊ. ರಾ. VI ೨೯-೧೭ರಿಂದ ೨೨.
5. ಕು. ವ್ಯಾ. ಭಾ.–ಭೀಷ್ಮಪರ್ವ ೬-೪೮, ದ್ರೋಣಪರ್ವ ೬-೬೬. ಕರ್ಣಪರ್ವ ೨-೧, ೨೭-೩೦, ೩೦.
6. ತೊ. ರಾ. V ೨-೧, VI ೨-೫೬, VI ೯-೩೦. VI ೩೪-೭೯. VI ೪೫-೨, ೪೪, VI ೨-೨.

## ತೊರವೆ ರಾಮಾಯಣ

೧. ಧನಪತಿಯ ಸಿರಿ, ವಾರಿಧಿವಾ
ಹನನ ಭೋಗ, ಸಮೀರಣನ ಬಲ,
ವಿನನ ತೇಜ, ಸಮಾನ ವಿತರಣ ಚಾರುಚಂದ್ರಮನ,
ವನಧಿಪನಗಾಂಭೀರ್ಯ, ರವಿನಂ
ದನನ ನಡವಳಿ, ಧರೆಯ ಸೈರಣೆ
ಯಿನಿತು ದಶರಥ ಸಾರ್ವಭೌಮಂಗಲ್ಲದಿಲ್ಲೆಂದ[1]

೨. ಸಿರಿಯರಸ ಚಿತ್ರೈಸು ಹರಸುವ
ಗೊರಸನೀ ಶಿತಿಕಂಠನೀ ಶಚಿ
ಯರಸ ಸೇವಕನೀಸಮೀರಣ ಬಂಧು ಬಾಣಸಿಗ
ಮರಳಿಮಾತೇನೀ ಯಮನು ಕಿಂ
ಕರನು ಮಿಕ್ಕಿನ ವರುಣ ದಿಗಧಿಪ
ರಿರವ ಚಿತ್ರೈಸಿದರೆ ಪರಿಹಾಸಕವಲೇಯೆಂದ[2]

೩. ನಿಂದನೆಲ ನುಂಗುವಡೆ, ಸುಳಿವಿನ
ಮಂದಮಾರುತನುರುಹುವಡೆ, ಪೂ
ರ್ಣೇಂದುಮಂಡಲ ಗರಳಮಯ ಕೌಮುದಿಯ ಕಾರುವಡೆ,
ಕಂದ ಕೇಳ್ಕೆ ಬದುಕಬಹುದೇ
ತಂದೆನಿನಗೀ ನೆನಹ ನೆನೆದರೆ
ಹಿಂದುಗಳೆವವರಾರು ಹೇಳೆಂದಪ್ಪಿದಳು ಮಗನ[3]

೪. ಸೀತೆಯ ವನಗಮನದ ಬಳಲಿಕೆಯನ್ನು ವರ್ಣಿಸುತ್ತಾ
ಅಡಿಗೆನಿಲುವಳು ಕುಳ್ಳಿರುವಳಡಿ
ಗಡಿಗೆ ಸುಯ್ವಳು, ಬಳಲುವಳು, ಬಾ
ಯ್ವಿಡುವ ಕೀಳುವಳಳುಕುವಳು ಬಳುಕುವಳು ಮೆಲ್ಲಡಿಯ

---

1. ತೊ. ರಾ. I ೩-೨೬————————ಸುರಪತಿಯಭೋಗ, ವಹ್ನಿಯ ತೇಜವಂತಕನ
ಹರಿಶ್ಚಂದ್ರಕಾವ್ಯ ೧-೪೧ (ರಾಘವಾಂಕ) ಭರದದಟು, ನೈರುತಿಯ ಕಾಯ್ಪು, ರತ್ನಾಕರೇ
ಶ್ವರನ ಗಂಭೀರ ವನಿಲನ ಬಲಂ ವಿತ್ತಪನ ಸಿರಿ ರುದ್ರನುಗ್ರತ್ವವು
ತರಣಿಯ ಪ್ರಭೆ, ಧರೆಯ ಧೈರ್ಯ, ಚಂದ್ರನ ಶಾಂತಿ
ವೆರಸಿ ರೂಪಾದುದೆನಿಸುವ ಹರಿಶ್ಚಂದ್ರ ಭೂ
ವರನಾ ಪುರಕ್ಕೊಡೆಯನರಿಶರಧಿ ವಡಬನಾರಾತಿ ಗಜ ಪಂಚಾಸ್ಯನು.

2. ತೊ. ರಾ. I ೮-೬೨. ಇಂದ್ರಂ ಮಾಲ್ಯಕರಂ, ಸಹಸ್ರಕಿರಣಂದ್ವಾರಿ ಪ್ರತೀಹಾರಿಕಮ್ । ಚಂದ್ರಂ ಛತ್ರಧರಂ, ಸಮೀರವರುಣೌಸಮ್ಮಾರ್ಜಯಂತೌಗೃಹಾನ್ । ಪಾಚಕ್ಕೇಪರಿನಿಷ್ಠ ತಂ ಹುತವಹಂ–ಕಿಂಮದ್ಗೃಹಂ ನೇಕ್ಷಸೇ (ಹನುಮನ್ನಾಟಕ)

3. ತೊ. ರಾ. II ೩-೬————ಈ ಸುದಿಯು 'ಸೋಮೇಶ್ವರಶತಕ'ದ :
ಧರೆಬೀಜಂಗಳ ನುಂಗೆ......................
......................ಹರಕೊಲ್ಲಲ್ ಪರಕಾವನೇ ?–ಯನ್ನು ನೆನೆಪಿಸುತ್ತದೆ.

ಇಡಲರಿಯದಿನ್ನೆನಿತು ಕಾನನ
ದೆಡೆಯೆನುತ ಬೆಸಗೊಂಬಳೀಪರಿ
ನಡೆ ನಡೆದು ನಡೆಗೆಟ್ಟು ನೆಮ್ಮಿದಳಾತ್ಮವಲ್ಲಭನ[1]

೫. ರಾಮನೊಂದಿಗೆ ವನಕ್ಕೆ ಹೊರಟ ಲಕ್ಷ್ಮಣನಿಗೆ ಸುಮಿತ್ರೆಯ ಈ ನುಡಿಗಳು—

……………ರಾಘುವೇಶ್ವರನ
ಜನಕದಶರಥನಂತೆಕಾಂಬುದು
ಜನಕಜೆಯನೆನ್ನಂತೆ ಕಾಂಬುದು
ವನವಯೋಧ್ಯೆಯೆಂದು ಬಗೆ ನಡೆಯೆಂದಳಾ ಕಾಂತೆ[2]–

ಇದೇ ಸನ್ನಿವೇಶದಲ್ಲಿ ಆದಿಕಾವ್ಯದಲ್ಲಿಯೂ ಸುಮಿತ್ರೆಯು ತನ್ನ ಮಗನಿಗೆ ಹೇಳಿದ (ಲೋಕಪ್ರಸಿದ್ಧವಾದ) ಮಾತುಗಳೇ[3] ಆಗಿವೆ.

೬. **ಹೇಮಂತ ವೈಭವ:**

ಶಿರದ ಗಂಗೆಯ ತೂರಿ ತುಹಿನಾ
ಕರನನಂಬರಕಿಟ್ಟು ಹಣೆಗ
ಕಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ
ಹರಿಪಯೋಧಿಯನುಳಿದು ಲಕ್ಷ್ಮಿಯ
ಗುರು ಪಯೋಧರದಿರುಬಿನಲಿ ಬೈ
ತಿರಿಸಿದನು ನಿಜಮೂರ್ತಿಯನು ಹೇಮಂತಕಾಲದಲಿ[4]

೭. **ರಾಮನಿಗೆ ಶಬರವೇಷದ ದೇವತೆಗಳು ತಂದೊಪ್ಪಿಸಿದ ಕಾಣಿಕೆಗಳು:**

ಕರಿಯ ಮುಕ್ತಾಫಲನ, ವನಸೂ
ಕರನ ದಾಡೆಯ, ಹರಿಣಶಿಶು, ಕ
ಸ್ತುರಿಯ ಮೃಗ, ಶಾರ್ದೂಲ ಚರ್ಮವ, ಸಿಂಹದುಗುರುಗಳ

---

1. ತೊ. ರಾ II ೪–೧೭————ಸದ್ಯಃ ಪುರೀಪರಿಸರೇsಪಿಶಿರೀಷಮೃದ್ವೀ
ಸೀತಾ ಜವಾ ತ್ತ್ರಿ ಚತುರಾಣಿ ಪದಾನಿ ಗತ್ವಾ
ಗನ್ತವ್ಯಮಸ್ತಿ ಕಿಯದಿತ್ಯ ಸಕೃದ್ಬ್ರುವಾಣಾ
ರಾಮಾಶ್ರುಣಃ ಕೃತವತೀ ಪ್ರಥಮಾವತಾರಮ್
(ಹನುಮನ್ನಾಟಕ)
(ಶಿರೀಷ ಕುಸುಮದಂತೆ ಕೋಮಲೆಯಾದ ಆ ಸೀತೆಯು ಬೇಗ ಬೇಗ ಮೂರು ನಾಲ್ಕು ಹೆಜ್ಜೆಗಳನ್ನಿಟ್ಟು. ' ಇನ್ನೆಷ್ಟು ದೂರ ಹೋಗತಕ್ಕದ್ದಿರುವುದು ?' ಎಂದು ಕೇಳಿದ ಮಾತು ರಾಮನಿಗೆ ಮೊದಲನೆಯ ಕಣ್ಣೀರನ್ನು ಹಾಕಿಸಿತು)
2. ತೊ. ರಾ. II ೩-೪೭.
3. ವಾ. ರಾ. II ೪೦-೯. ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಮ್।
ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾ ಸುಖಮ್॥
4. ತೊ. ರಾ. III ೨–೩
ಇದನ್ನೇ ಹೋಲುವ ಹೇಮಂತ ವರ್ಣನೆ–೧. ಸೂಕ್ತಿ ಸುಧಾರ್ಣವ–ಪು. ೨೭೯–೨೫೩ ಮತ್ತು
೨. ಪಂಪರಾಮಾಯಣ ೭–೯೪ರಲ್ಲಿದೆ ;
(ಇಂತಹ ' ವರ್ಣನೆ 'ಗಳಲ್ಲಿ ' ಕವಿಸಮಯ 'ದ ಕಾರಣದಿಂದಾಗಿ ' ಸಾಮ್ಯ ' ಸ್ವಾಭಾವಿಕ)

ತೆರಳಿಕಟ್ಟಿನ ಬಿಲ್ಲು ಬೋಳಿಗ
ಳರೆಗಿಳಿಯ ಕೋಡಗದ ಮರಿಗಳ
ನರಸ ರಾಮುಂಗಿತ್ತು ಕಂಡುದು ಶಬರ ಸಂದೋಹ[1]

೮. **ಆ ಶಬರರ ವೇಷಭೂಷಣಗಳು :**

ಹೀಲಿಯುಡುಗೆಯಹೆಗಲ, ಬಲುಬಡಿ
ಗೋಲುಗಳ, ಸಂಕಲೆಯ ನಾಯ್ಗಳ
ತೋಳಗುಂಜಿಯ ದಂಡೆಗಳ, ಕಟಿತಟದ ಸುರಗಿಗಳ,
ಬೋಳಿಗಳ ಮಿಟ್ಟೆಗಳ ದೀಹದ
ಸಾಳುವನ ಗಳೆಯಂಟುಗಳ ಶಬ
ರಾಳಿ ಬಂದುದು ಪರ್ಣಶಾಲೆಗೆ ಸೂರ್ಯವಂಶಜನ[2]

೯. **ಬೇಟೆಯ ವರ್ಣನೆ :**

ಒಡ್ಡಿದರು ದಡಿವಲೆಯ ಸಿಡಿವಲೆ । ಕಡ್ಡಿವಲೆ ಕುಣಿವಲೆಯನಗಲಕೆ ।
ಚಡ್ಡಣಿಸಿದರು ಬೀಸುವಲೆ ಬೆಳ್ಳಾರೆವಲೆಗಳಲಿ॥
ಅಡ್ಡವಿಸಿ ಸೋಹಿದರು ಕೋಣನ । ದೊಡ್ಡುಗಳದಂತಿಗಳ ಮರಿಗಳ ।
ನೊಡ್ಡೊಡೆಯದವೊಲಾ ಸುಮಿತ್ರಾಸುತನ ಸರಿಸದಲಿ ॥[3]

೧೦. **ಶೂರ್ಪನಖಿಯಿಂದ ಪ್ರಣಯ ಪ್ರಾರ್ಥನೆ**

ತೊಡರ ಬಿಗಿ ಮದನಂಗೆ, ಮದನನು
ತೊಡೆ ವಸಂತನ, ಮಾರುತಗೆ ಮರು
ವಿಡಿಯವಿಕ್ಕು, ಸುಧಾಂಶುವಿನ ಸುಮ್ಮಾನವನು ಕೆಡಿಸು,
ನುಡಿಯನಡಗಿಸು ಕೋಗಿಲೆಯ, ಗಾ
ರುಡಿಸು ವಿಷಯ ವಿಷಾಹಿಯನು, ಮೇ
ಲುಡಿಯ ಹಾಯ್ ಹತ್ತನೆಯನಸ್ಥಾಂತರದ ದಳವುಳಕೆ[4]

---

1. ತೊ. ರಾ. III ೩-೪—ಸೂಕ್ತಿಸುಧಾರ್ಣವದಲ್ಲಿ : ಕತ್ತುರಿಮಿಗಮುಂ ಪಂದಿಯ
ಮುತ್ತಂಪೆರ್ಬುಲಿಯ ತೊಗಲನಾನೆಯ ಕೊಂಬಂ
ಕಿತ್ತು ದಸವಸದೆ ತೆಗೆತೆಗೆ
(ಸೂಕ್ತಿ ಸುಧಾರ್ಣವ ೩-೮೭-ಅನಂತನಾಥಪುರಾಣಂ ೧೧-೩೮) ದಿತ್ತು ಮುದಂ ಪತಿಗೆ ಕಾಣ್ಕೆಗೊಟ್ಟಂತೆಂದರ್
ಮತ್ತಗಜಂಗಳ ಕೋಡಂ
ಕತ್ತುರಿಮಿಗಮುಂ ಮೊದಲ್ದ ಪೊಂಬುಲಿತೊಗಲಂ
ಚಿತ್ತಯ್ಸುದೆಂದು ಕಾಣ್ಕೆಯ
(ಸೂಕ್ತಿಸುಧಾರ್ಣವ–೩–೮೮–ಮೂಲ ತಿಳಿಯದು) ನಿತ್ತು ಮೊಗಂ ಬಡೆದು ಧರಣಿಪತಿಗಿಂತೆಂದರ್
2. ತೊ. ರಾ. III ೩–೩—ಹರಿಶ್ಚಂದ್ರಕಾವ್ಯದಲ್ಲಿ : ಓವಿ ಹೀಲಿಯನುಟ್ಟು ತಳಿರಮೇಲುದನುರಕೆ
ತೀವಿಗುಂಜಾಭರಣಮಂ ತೊಟ್ಟು......೫-೩೩.
3. ತೊ. ರಾ. III ೩-೧೨—ಹರಿಶ್ಚಂದ್ರಕಾವ್ಯದಲ್ಲಿ : ತಡಿಕೆವಲೆ ತಟ್ಟೆವಲೆ ಹಾಸುವಲೆ ಬೀಸುಬಲೆ
ಕೊಡತಿವಲೆ ಕೋಲುವಲೆತಳ್ಳಿವಲೆ ಬಳ್ಳಿವಲೆ......೫-೮.
4. ತೊ. ರಾ. III ೪-೧೮—ಇಲ್ಲಿ ಸೂಚಿತವಾದ ' ಕಂದರ್ಪ ದಶಮಾವಸ್ಥೆ 'ಯ ಉಲ್ಲೇಖಗಳು :

೧೧. **ಲಕ್ಷ್ಮಣನ ಚಾರಿತ್ರ್ಯಕ್ಕೆ ಒಂದು ಉಜ್ವಲ ಸಾಕ್ಷ್ಯವಾಗಿ ನಿಲ್ಲಬಲ್ಲ ಮಾತುಗಳಿವು:**

ಶ್ರುತಿ ಲಲಾಟ ಗ್ರೀವ ಕಟಿ ವಿ
ಶ್ರುತಕರಾಭರಣಂಗಳಿವು ಭೂ
ಸುತೆಯ ತೊಡವಹುದೆನ್ನದೀ ನೂಪುರಗಳಹುದೆಂಬ
ಮತಿಯಿದೇನ್ನೈ ತಮ್ಮ ದಿಟ ವಿ
ಸ್ಮೃತಿಯಿದೇನ್ನೈ 'ದೇವ, ನಿಶ್ಚೈ
ಸ್ಥಿತಿಯ ವಂದನೆಯಿಂದ ಬಲ್ಲೆನು ಕುರುಹನಿವ'ನೆಂದ[1]

೧೨. **'ದೇವನು ದುರ್ಬಲ ಘಾತಕ' ನೆಂದು ವಾಲಿಯ ಆಕ್ಷೇಪ:**

ಮೃಗಕುಲೇಂದ್ರ ದ್ವೀಪಿಹಯ ರದ
ನಿಗಳಿರಲು ಬಳಿಕಾಡನಿಕ್ಕಿದ
ನಗೆಯ ನಾಣ್ಣುಡಿ ನಿನ್ನೊಳಾಯ್ತೆಂದುಗಿಸಿದನು ನಗೆಯ[2]

೧೩. **ವಾಲಿಯದೇ ಇನ್ನೊಂದು ಮಾತು** (ರಾವಣನನ್ನು ಗೆಲ್ಲುವಲ್ಲಿ ಸುಗ್ರೀವ ಸಖ್ಯವು ನಿಷ್ಪ್ರಯೋಜಕ)

......ಸಾಗರವನುತ್ತರಿಸುವಡೆ ಹರಿಗೋಲ ಹಂಗುಗಡ.[3]

೧೪. ವಾಲಿವಧೆಯ ನಂತರ ಸುಗ್ರೀವ ಶೋಕ–

......ಕರುಳು ಮರುಗದೆ ಬಿಡುವುದೇ ?[4]

---

ಅ) ದಶಾನನ 'ದಶಾವಸ್ಥೆ'–ಪಂಪರಾಮಾಯಣ (ಸಂ) ೪-೯೧ರನಂತರದ ಗದ್ಯ
ಆ) ರುದ್ರಭಟ್ಟನ ಜಗನ್ನಾಥ ವಿಜಯ-೧೧-೫೧ರನಂತರದ ಗದ್ಯ-'ದರ್ಪಕ ದಶಮಾವಸ್ಥೆ'
ಇ) ರಾಘವಾಂಕನ 'ಹರಿಶ್ಚಂದ್ರಕಾವ್ಯದಲ್ಲಿ (೪-೪೪)

ಅಳುಪಿನೋಡಿದಡೊಂದು ಚಿಂತಿಸಿದಡೆರಡು ಸುಯ್
ಮೊಳೆಯೆ ಮೂರು, ಜ್ವರಂ ತೋರಿದಡೆ ನಾಲ್ಕು ಮೆ
ಯ್ಯಳುಪಲಯ್ದೂಟಮಂ ಬಿಸಲಾರುವಿಕಳವೆಡೆಗೊಳಲೇಳು ಕಡುಮೋನಮಂ
ತಳೆಯಲೆಂಟಿಸಿ ಮೂರ್ಛೆಮೂಡಲೊಂಬತ್ತು ತನು
ವಳಿಯೆ ಹತ್ತಿವು ದಶಾವಸ್ಥೆಯಿವರಂದಮಂ
ತಿಳಿಯೆ ಕೇಳೆಂದೊಬ್ಬ ಕಡುಜಾಣೆ ಹೇಳಿಬೋಳೈಸಿದಳು ಬಾಲಕಿಯನು

ಈ) ನಯನರತಿ ಚಿಂತೆಸಂಕಲ್ಪಯುತಂ ಜಾಗರತೆಕಾರ್ಶ್ಯಮರತಿಯೆಮಾನಂ।
ಪ್ರಿಯೆಯ ವಿಮೋಹಂ ಮೂರ್ಛಾ। ತ್ರಯ ಮರಣಮಿವಿಂತವಸ್ಥೆ ದಶವಿಧಮಕ್ಕುಂ
(ಚಿಕ್ಕುಪಾಧ್ಯಾಯ (೧೬೭೨)ನ ರಂಗಸ್ವಾಮಿಯ ಶೃಂಗಾರ ಸೂತ್ರೋದಾಹರಣೆ)
ಕ. ಕ. ಚ. ೬-೪೮೮ರಲ್ಲಿ ಉದ್ಧೃತ.

1. ತೊ. ರಾ. IV ೨-೯. ವಾ. ರಾ. ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ।
ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಬ್ಜವಂದನಾತ್॥ IV ೬-೨೨.
ಅ. ರಾ. ದಲ್ಲೂ ಇದೇ ಶ್ಲೋಕವನ್ನು ಉದ್ಧರಿಸಲಾಗಿದೆ.
2. ತೊ. ರಾ. IV ೪-೩೯—ಸಿಂಹಂನೈವ, ಗಜಂನೈವ, ವ್ಯಾಘ್ರಂನೈವಚ ನೈವಚ
ಅಜಾಪುತ್ರಂ ಬಲಿಂದದ್ಯಾತ್ ದೇವೋ ದುರ್ಬಲಘಾತಕಃ—ಲೋಕೋಕ್ತಿ.
3. ತೊ. ರಾ. IV ೪–೪೪—...ತಿತೀರ್ಷುರ್ದುಸ್ತರಂ ಮೋಹಾದುಡುಪೇನಾಸ್ಮಿ ಸಾಗರಮ್
ಕಾಳಿದಾಸ–ರಘುವಂಶ-೧-೨.
4. ತೊ. ರಾ. IV ೪-೬೩—ಕಣ್ಣರಿಯದೊಡಂ ಕರುಳರಿಯದೇ ?–ಜನ್ನನ 'ಯಶೋಧರಚರಿತೆ'

೧೫. **ಹನುಮಂತನಿಗೆ ರಾಮನು "ಬ್ರಹ್ಮ ಪದವಿ" ಯೆನ್ನು ಕರುಣಿಸಿದಾಗ ಕವಿಯ ಉದ್ಗಾರ:**

ತೀರದೇ ತಾ ಜೇಡ, ತನ್ನಯ
ನಾರಿಯುಮಳಕರಾಕ್ಷದಗ್ರದ
ಧಾರೆ ಸೋಂಕಿದಡುಹದಲೇ ಬ್ರಹ್ಮೇಂದ್ರ ಪದವಿಗಳು
ಸಾರತರ ನಿಗಮಾರ್ಥವಿದು ಬೆರ
ಗಾರಿಗಾ ಲಕ್ಷ್ಮೀಶನೋದಿದರೆ
ವೀರಕೇಳು ವಿಚಿತ್ರವಿದ ಕೇಳೆಂದನಾ ಮುನಿಪ[1]

೧೬. ಗಳಿಸಬಹುದು ಕಳತ್ರ ಮಿತ್ರಾ
ವಳಿಯನೊಡ "ಹುಟ್ಟಿದರನೆಂತ್ಯೈ
ಗಳಿಸಬಹುದು ?"..........[2]

೧೭. ಮರಣ ನಿನ್ನಿಂದಾಯ್ತೆ ? ನಾವ್ ಸಂಹರಿಸಿದನರೇ ?–ಸಾಕು ಶೋಕದ ಸುರುಳಿಯನು ಸುತ್ತಡೆ ಸುಸಮ್ಯಕ್‌ಜ್ಞಾನಿಯಾಗು[3]

೧೮. ತರಳತನ ಮೇಲುಬ್ಬುಗೊಬ್ಬಿನ
ಭರದ ಜವ್ವನ ಸುಪ್ರತಾಪಜ್ವರದ ತಾಮಸನದರ ಮೇಲಾಸುರ ಕುಲಾತಿಶಯ
ದೊರಕಲಿವು ಬಳಿಕೇನು ?...[4]

೧೯. ಪಶುಗಳೇ ಸುರಪಶು ಮಹೀಜ
ಪ್ರಸರವೇ ಗೀರ್ವಾಣ ಕುಜ, ಘನ
ರಸವೆ ನಿರುಪಮ ಸಿದ್ಧರಸವೆನೆ ಸಕಲ ವಿಭವದಲಿ[5]

---

ವಾ. ರಾ. ದಲ್ಲಿ IV ೨೪-೨೦ ಇದೇ ಸನ್ನಿವೇಶದಲ್ಲಿ ಸುಗ್ರೀವನು :...ಯಸ್ಮಿನ್ ಭವೇತ್ ಸೋದರಸಂನಿಕರ್ಷಃ

1. ತೊ. ರಾ. IV ೯-೩೦—ಯಂ ಕಾಮಯೇ ತಂ ತಮುಗ್ರಂ ಕೃಣೋಮಿ.........
ಮಧ್ವಾಚಾರ್ಯ–ವಿಷ್ಣುತತ್ತ್ವನಿರ್ಣಯ II–೪೪೧ರಲ್ಲಿ ಉದ್ಧೃತ
ಬ್ರಹ್ಮೇಶ ಶಕ್ರ ರವಿಧರ್ಮಶಶಾಂಕಪೂರ್ವಗೀರ್ವಾಣಸಂತತಿರಿಯಂ ಯದಪಾಂಗ
ಲೇಶಮ್ ಆಶ್ರಿತ್ಯ ವಿಶ್ವವಿಜಯಂ ವಿಸೃಜತ್ಯಚಿಂತ್ಯಾ–ಶ್ರೀಯತ್ಕಟಾಕ್ಷಬಲವ
ತ್ಯಜಿತಂ ನಮಾಮಿ–ಮಧ್ವಾಚಾರ್ಯ–ದ್ವಾದಶಸ್ತೋತ್ರ–೭-೨.
2. ತೊ. ರಾ. IV ೪-೬೫.——ದೇಶೇ ದೇಶೇ ಕಲತ್ರಾಣಿ ದೇಶೇ ದೇಶೇ ಚ ಬಾಂಧವಾಃ
ವಾ. ರಾ. VI ೧೦೨ ೧೨, ೧೩.—ತಂ ತು ದೇಶಂನ ಪಶ್ಯಾಮಿ ಯತ್ರ ಭ್ರಾತಾ ಸಹೋದರಃ
3. ತೊ. ರಾ. IV ೪-೬೭—ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್
..........................................
...............ನೈವಂ ಶೋಚಿತುಮರ್ಹಸಿ. ಗೀತಾ ೨-೨೧ ; ೨೬.
4. ತೊ. ರಾ. VI ೨-೧೭——ಯೌವನಂ ಧನ ಸಂಪತ್ತಿಃ ಪ್ರಭುತ್ವಮವಿವೇಕತಾ।
ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಮ್॥. ಸುಭಾಷಿತ.
5. ತೊ. ರಾ. VI ೬-೧೮——ಪಂಪ ರಾಮಾಯಣ ೧-೫೯ (ಸಂ)
ಜಗನ್ನಾಥ ವಿಜಯ–೯-೮೬.
ಹರಿಶ್ಚಂದ್ರಕಾವ್ಯ–,೨–೧—ಇವುಗಳಲ್ಲಿ ಮೇಲಿನಂತಹ ವರ್ಣನೆ ಸಿಗುತ್ತದೆ.

೨೦. ......................

ವೀರದಶಕಂಧರನು ಪಡೆದಾಯುಷ್ಯರಾಶಿಗಳ
ತೀರಲಳಿದಪರಾಂಬುರಾಶಿಯ
ತೀರದಲಿ ತಂದಿಳುಹಿದನುಪಮ
ಸಾರತರಮಣಿಮಯದ ಕೊಳಗವಿದೆನಲು ರವಿ ಮೆರೆದ.[1]

೨೧. ಗರುಡನ "ನಿಗಮ ಸ್ವರೂಪ"

ಬಲದ ಗರಿ ಋಕ್ಸಾಮ ಮುಖಮಂ
ಡಲ ಯಜುರ್ವಾಮಾಂಗ ನಿರುಪಮ
ವಿಲಸದುಪನಿಷದಮಳಗಾತ್ರ ಪವಿತ್ರನಂಬರವ
ಬೆಳಗುತಿಳಿವನು ಪೂರ್ಣ ಶಶಿಮಂ
ಡಲದ ಸೊಂಪಿನಲಮಮ ಹಾಲಾ
ಹಲ ಮಹೋಗ್ರವ್ಯಾಳಪಾಶವಿನಾಶ ರೋಷದಲಿ[2]

೨೨. ರಾಮ-ರಾವಣ ಯುದ್ಧ ಉಪಮಾತೀತ

ಗಗನ ಗಗನಕೆ, ಜಲಧಿ ಹಲಧಿಗೆ
ಮಿಗುಳ್ದವೇ ಸ್ರತಿ, ರಾಮ ರಾವಣ
ರಿಗೆ ರಘುಕ್ಷಿತಿನಾಥ ರಾವಣರಲ್ಲದಿಲ್ಲೆಂದ[3]

೨೩. ಕರಿಯನಿಟ್ಟವುಡಲದ ಗಿಡುವಿನ ಮರೆಯ ಹೊಗುವರೆ?[4] (ಕುಂಭಕರ್ಣನು ರಾವಣನೊಡನೆ ಕೇಳಿದ್ದನೀತಿ, ಪ್ರಶ್ನೆ)

೨೪. ಖಳ ಮಕರಾಕ್ಷನ "ಶಿರ ಹರಿವಾಣದಾರತಿಯಂತೆ.... ಸುಳಿದುದು"[5]

---

1. ತೊ. ರಾ. VI ೯–೨೯——ಉದಯಾಸ್ತಮಾನವೆಂಬರಡು ಕೊಳಗದಲ್ಲಿ ಆಯುಷ್ಯವೆಂಬ ರಾಶಿಯ ಅಳೆದು ತೀರುವ ಮುನ್ನ ಶಿವನ ನೆನೆಯಿರೇ."–ಅಕ್ಕಮಹಾದೇವಿ ವಚನ. ಮಾಘನು ಸೂರ್ಯಚಂದ್ರರನ್ನು ಘಂಟೆಗಳೆಂದು ಕಲ್ಪಿಸಿದ್ದರೆ, ಕು. ವಾಲ್ಮೀಕಿಯು 'ಹನುಮಂತನ ಕುಂಡಲಗಳು ಚಂದ್ರಸೂರ್ಯರ ಸೋಲಿಸುತಲಿರ್ದವು'–ಎಂದಿದ್ದಾನೆ. (ತೊ. ರಾ. VI ೧೨-೨೭)

2. ತೊ. ರಾ. VI ೧೬–೨೯. ನಾರಾಯಣ ಪಂಡಿತಾರ್ಯವಿರಚಿತ 'ಶ್ರೀ ಸುಮಧ್ವ ವಿಜಯ'ದಲ್ಲಿ ಬದರೀವೃಕ್ಷವು ಶ್ರೀಮದಾಚಾರ್ಯರಿಗೆ ಪಕ್ಷಿಶ್ರೇಷ್ಠನಾದ ಗರುಡನಂತೆ ತೋರಿತು; ಅದರ ಕೊಂಬೆಗಳು ಶ್ರುತಿಸ್ಮೃತಿಗಳಂತೆ ಕಂಡವು–ಎಂಬ ವರ್ಣನೆಯಿದೆ.

ಅತಿಚಿತ್ರ ವಿಚಿತ್ರ ಪತ್ರಿಣಮ್.......
ಶ್ರಿತ ಸಾಧು ಪುರಾಣಭಾರತಂ
ನಿಗಮಂ ಮೂರ್ತಮಿವೋರುಶಾಖಿನಮ್ (ಸರ್ಗ ೭-೧೨,೧೪)

3. ಇದೇ. VI ೨೫-೧೮ ......................................
ಗಗನಂ ಗಗನಾಕಾರಂ ಸಾಗರಂ ಸಾಗರೋಪಮಮ್॥
ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ...।

4. ಇದೇ. VI ೨೬–೭೧. ಅವ್ವುಡಲ ಗಟ್ಟಿಯಾದ ಮರವಲ್ಲ; ಅದಕ್ಕೆ ಆನೆಯನ್ನು ಕಟ್ಟಿದಾಗ ಆದರ ಸ್ಥಿತಿ ಅಪಾಯಕರ; ಅದನ್ನು ಮರೆಹೋಗುವುದಂತೂ ಅವಿವೇಕ. (ಅಶಾಶ್ವತವಾದುದನ್ನು ಆಶ್ರಯಿಸುವುದು ಕ್ಷೇಮಕರವಲ್ಲ)

ಪಾರ್ಶ್ವನಾಥಪುರಾಣ (ಆ. ೩-೧೯ಗದ್ಯದಲ್ಲಿ–'ಆನೆಯಂ ಬಿಟ್ಟವುಡಲಕ್ಕೆಯಂ ಮೆರೆಗೊಂಡರು' ಇದೇ ಮಾತು, ಮುಂದಿನ 'ಸಾಳ್ವ-ಭಾರತ'ದಲ್ಲಿಯೂ ಇದೆ(ಆನೆಯ ನಿಟ್ಟ ಅವ್ವುಡಲನ ಮರೆಹೊಗುವ ತೆರ)

5. ಇದೇ. VI ೪೦-೫೫.

೨೫. ಮಾಯಾ ಸೀತೆಯ ಶಿರವನ್ನು ಕಂಡು ರಾಮನ ಪ್ರಲಾಪ

ಸೇವೆಯಲಿ ತೊತ್ತಾಗಿಯಿಹೆ ವಿ
ಜ್ಞಾ ವಿಶೇಷಕೆ ಮಂತ್ರಿಯಾಗಿಹೆ
ಭಾವಿಸಲು ಸಖಿಮಾಳ್ಪ ಪಸುಸ್ನೇಹವನು ಮಾಳ್ಪೆ
ತೀವಿದತಿಶಯ ರತಿಗೆ ವಿವಿಧ ಕ
ಲಾ ವಿಚಿತ್ರದ ಕುಶಲೆಯಾಗಿಹೆ
ಭೂವಧುವಿನಂತೆನಗೆ ತೋರುವೆ ಸೈರಣೆಯೊಳಿಂದ[1]

೨೬. ಶಂಬರನ ವಿದ್ಯೆ : (ಮಾಯಾ ಸೀತೆಯ ವಿಚಾರ ವಿಭೀಷಣನ ಸಾಂತ್ವನ)

ಇದು ಕಣಾ ಮಾಯಾವಿಗಳು ಮಾ
ಡಿದ ಮಹಾ ಶಾಂಬರದ ಕೆಲಸ......[2]

೨೭. ಮಾತಲಿಗೆ ರಾಮನೆನ್ನುವ ಮಾತು : (ನಾನು ಮನುಷ್ಯನೇ ಎಂದು)

ಮರುಳಲಾ ಸುರಸೂತ, ವಾಣೀ
ಶ್ವರನ ಪಿತ ತಾನಾದಡಿನನೀ
ಪರಿಯ ಜೀವಿಸುವನೆ ವಿವೇಕ ವಿಚಾರವಿನಿತಿಲ್ಲ
ನರರು ನಾವ್ ಸಾಕಿನ್ನು ನಮ್ಮನು
ಹಿರಿದು ಹೊಗಳಲು ಬೇಡವೆನುತಾ–
ವರೆಗೆ ದುಮ್ಮಿಕ್ಕಿದನು ದುಗುಡದ ಹಿಡಿಯಲಖಿಳಜನ[3]

## ಕೃತಿಯ ಸಾಹಿತ್ಯಕ ಅಧ್ಯಯನ–೨

### ತೊರವೆ ರಾಮಾಯಣದ ಪ್ರಭಾವ–ದರ್ಶನ

ಪ್ರಪ್ರಥಮವಾಗಿ ಸಂಸ್ಕೃತದ ಆದಿಕಾವ್ಯವನ್ನು ಕನ್ನಡಿಸಿದ ಕುಮಾರವಾಲ್ಮೀಕಿಯ " ತೊರವೆ ರಾಮಾಯಣ "ವು,

---

ಶಿಶುಪಾಲನ ತಲೆ-
ಕಳಕಳಿಸಿ ನಗುತ ಮಿರ್ದುದು
ತಳಿಗೆಯ ಮೇಲಸುರನಪಟದೇನಚ್ಚರಿಯೋ
ಪಂಪ-ವಿಕ್ರಮಾರ್ಜುನ ವಿಜಯ, ಆ. ೬-೬೪.

1. ತೊ. ರಾ. VI ೪೧-೬೦—ಕಾರ್ಯೇಷು ದಾಸೀ ಕರಣೇಷು ಮಂತ್ರೀ......
–ಸುಭಾಷಿತ.

2. ಇದೇ. VI ೪೧-೬೫.—(ತೊ. ರಾ. ದಲ್ಲಿ ಇನ್ನೊಂದೆಡೆ ' ಮಾಯೆಯ ಶಂಬರನು-ಎಂಬ ಉಲ್ಲೇಖವಿದೆ VI ೩೫-೨೩)

ಪ್ರಣಮತ ಚರಣವಿಂದ್ರಸ್ಯೇಂದ್ರ ಜಾಲಕಪಿನದ್ಧ ನಾಮ್ನಃ
ತತ್ರೈವ ಶಂಬರಸ್ಯ ಮಾಯಾ ಸುಪ್ರತಿಷ್ಠಿತ ಯಶಸಃ
ಹರ್ಷ-ರತ್ನಾವಳಿ ನಾಟಕ, ಅಂಕ ೪-೭ನೇ ಶ್ಲೋಕ.

3. ಇದೇ. VI ೫೦-೩೬.
ವಾ. ರಾ. ದಲ್ಲಿನ ರಾಮನ ಈ ಮಾತು ಸುಪ್ರಸಿದ್ಧವಾಗಿದೆ :
ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಮ್ (VI ೧೨೦-೧೧)

ಆಮೇಲೆ ಅದೇ ದಾರಿಯಲ್ಲಿ ಸಾಗ ಹೊರಟ ಇತರ ಕವಿಗಳ ಗಮನ ಸೆಳೆದದ್ದು ಸಹಜವೇ. 'ತರಣಿ ದರ್ಶನಕ್ಕಿಂತ ಕಿರಣಾನುಭವ ಸುಲಭ'–ಎನ್ನುವಂತೆ, ಕನ್ನಡದ ಹಲವು ರಾಮಾಯಣ–ಕವಿಗಳಿಗೆ ಮಹಾಕವಿ ವಾಲ್ಮೀಕಿಯ ಕಾವ್ಯಕ್ಕಿಂತಲೂ, ಕನ್ನಡದ ಕುಮಾರ ವಾಲ್ಮೀಕಿಯ ಕೃತಿಯೆ ಹೆಚ್ಚು ಸಮೀಪವರ್ತಿಯೂ, ಅನುಸರಣಯೋಗ್ಯವೂ–ಎನಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಕನ್ನಡದಲ್ಲಿ ವಾಲ್ಮೀಕಿ ರಾಮಾಯಣ ಪರಂಪರೆಯ 'ಮೊದಲ ಕವಿ'ಯಾದ ಕುಮಾರ ವಾಲ್ಮೀಕಿಯ ರಾಮಾಯಣದ ಪ್ರಭಾವಲಯಕ್ಕೊಳಗಾಗಿ 'ಮೈರಾವಣ–ಕಾಳಗ', ಬತ್ತಲೇಶ್ವರನ 'ಕೌಶಿಕ (ವಾಲ್ಮೀಕಿ ?) ರಾಮಾಯಣ', ಅಜ್ಞಾತಕವಿಯೊಬ್ಬನ 'ಕಪೋತ ಚರಿತೆ', ಸುಬ್ರಹ್ಮಣ್ಯಕವಿಯ 'ಹನುಮದ್ರಾಮಾಯಣ', ಕನ್ನಡ ಭಾಗವತದೊಳಗಿನ 'ರಾಮಕಥೆ', ದಾಸ ಸಾಹಿತ್ಯದ ಭಕ್ತಿಗೀತಗಳು ಮತ್ತು ರಾಮಾಯಣ ಕಥಾನಕಗಳುಳ್ಳ (ಬಹುಶಃ) ಎಲ್ಲ ಯಕ್ಷಗಾನ ಪ್ರಸಂಗಗಳು–ಇವೆಲ್ಲ ಬೆಳಕುಕಂಡಿವೆಯೆಂದರೆ, ಈ ಕೃತಿಯ ಪ್ರಭಾವದ ಸ್ವರೂಪ ಮತ್ತು ವ್ಯಾಪ್ತಿಗಳ ಪರಿಚಯವಾದೀತು.

ಕನ್ನಡದ ವಿಶಿಷ್ಟ ಕಲೆಯೆನಿಸಿರುವ 'ಯಕ್ಷಗಾನ–ಬಯಲಾಟ'ಗಳ ಪ್ರಸಂಗ ಕರ್ತೃಗಳಲ್ಲಿ ಬಹುಮಂದಿ,-ಬಹುಮಟ್ಟಿಗೆ ರಾಮಕಥಾ ಪ್ರಸಂಗಗಳ ಕವಿಗಳು–ವಾಲ್ಮೀಕಿಗಿಂತಲೂ ಹೆಚ್ಚಾಗಿ, ಕುಮಾರ ವಾಲ್ಮೀಕಿಯನ್ನೇ ಅಕ್ಷರಶಃ ಅನುಸರಿಸಿದ್ದನ್ನು ಕಂಡರೆ–ಈ ಕವಿಗಳ ಪಾಲಿಗೆ ತೊರವೆ ರಾಮಾಯಣವೇ ಆದಿಕಾವ್ಯವಾಗಿಯೂ, ಅದರ ಕವಿಯೇ "ಆದಿಕವಿ"ಯಾಗಿಯೂ ಕಂಡಿರಬೇಕು ಎನಿಸುತ್ತದೆ.

ಈ ಅಂಶಗಳ ಸಮೀಕ್ಷೆಯೇ ಪ್ರಕೃತದ ನಮ್ಮ ಉದ್ದೇಶವಾಗಿದೆ.

## ಪ್ರಭಾವ-ವಿವೇಚನೆ

### ತೊರವೆ ರಾಮಾಯಣ ಮತ್ತು 'ಮೈರಾವಣ ಕಾಳಗ'

'ವಿದ್ಯಾಶಂಕರರನ್ನು ಸ್ತುತಿಸಿ', 'ಮೈರಾವಣ ಕಾಳಗ'ವನ್ನು ರಚಿಸಿದ 'ನರಹರಿ'ಯು ಕಾಲದೃಷ್ಟಿಯಿಂದ ಕುಮಾರವಾಲ್ಮೀಕಿಗೆ ಸಮೀಪವರ್ತಿಯಾದವನೆಂದೂ, ಇವನ ಕೃತಿಯಲ್ಲಿ 'ತೊರವೆ ರಾಮಾಯಣ'ದ ಪ್ರಭಾವವು ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆಯೆಂದೂ–ಈ ಮೊದಲೇ ಸೋದಾಹರಣೆಯಾಗಿ ವಿವೇಚಿಸಲಾಗಿದೆ.[1] ಈ ಪ್ರಕರಣದಲ್ಲಿ ಆ ವಿಷಯವನ್ನು ಮತ್ತೆ ಪ್ರಸ್ತಾವಿಸುವುದು ಅನಗತ್ಯ (ಪುನರುಕ್ತ)ವೆಂದೆಣಿಸಿ, ಮೈರಾವಣ ಕಾಳಗವು ತೊ. ರಾ. ದಿಂದ ಪ್ರಭಾವಿತವಾದ ಮೊದಲ ಕೃತಿ ಎಂದು ಮಾತ್ರ ಸೂಚಿಸಿ ಮುಂದುವರಿಯುತ್ತೇವೆ.

---

1. ಇದೇ ಪ್ರಬಂಧದ 'ಕವಿಯಕಾಲ-ಪರಿಸರ' ಪ್ರಕರಣ ನೋಡಿರಿ.

"ಪ್ರಭಾವ ಸೂಚಕವಾದ ಕೆಲವು ಉದಾಹರಣೆಗಳು"

| ತೊ. ರಾ. | | | ಮೈ. ಕಾ. | |
|---|---|---|---|---|
| ಕಾಂ. | ಸಂ. | ಪ. | ಸಂ. | ಪ. |
| ೧ | ೧ | ೧೨ | ೧ | ೬ |
| ೧ | ೧೪ | ೧೬ | ೩ | ೨೩ |
| ೫ | ೩ | ೨೮ | ೨ | ೨೨ |
| ೫ | ೪ | ೧೬ | ೨ | ೬೦ |
| ೬ | ೧ | ೧೦ | ೨ | ೨೦ |
| ೬ | ೨ | ೩೬ | ೨ | ೪೮ |
| ೬ | ೧೨ | ೨೬ | ೪ | ೩೮ |
| ೬ | ೨೫ | ೬ | ೩ | ೪೩ |
| ೬ | ೫೫ | ೪೪ | ೪ | ೧೧೬ |

ಇತ್ಯಾದಿ........

## ತೊರವೆ ರಾಮಾಯಣ ಮತ್ತು ಬತ್ತಲೇಶ್ವರ ಕೃತ ರಾಮಾಯಣ

ಬತ್ತಲೇಶ್ವರನು[1] "ವಾಲ್ಮೀಕಿಯು ಕರುಣಿಸಿದ ರಾಮಕಥಾಪ್ರಸಂಗ"ವನ್ನು ಹೇಳಹೊರಟವ[2] ನಾದರೂ, ಅವನ ಕೃತಿಯಲ್ಲಿ ಆದಿಕಾವ್ಯದಲ್ಲಿಲ್ಲದ ಹತ್ತಾರು ಕಥಾಸನ್ನಿವೇಶಗಳಿವೆ. ಕಥಾದೃಷ್ಟಿಯಿಂದ ಇವನು ಕುಮಾರ ವಾಲ್ಮೀಕಿಯ ಕೃತಿಗೆ ಋಣಿಯಾಗಿದ್ದಾನೆ. ಬತ್ತಲೇಶ್ವರನ ಕೃತಿಯಲ್ಲಿ ತೊರವೆ ರಾಮಾಯಣದ ಪದ, ಪದಗುಚ್ಛ, ಪದ್ಯಗಳೂ ಅಲ್ಲಲ್ಲಿ ಸ್ವಲ್ಪ ರೂಪಾಂತರಹೊಂದಿ ದೊರೆಯುವುದರಿಂದ, 'ಋಣಿತ್ವ'ದ ಬಗ್ಗೆ ಯಾವ ಸಂದೇಹಕ್ಕೂ ಅವಕಾಶವಿಲ್ಲ.[3]

## ಬತ್ತಲೇಶ್ವರನ ಕೃತಿಯಲ್ಲಿ ತೊರವೆ ರಾಮಾಯಣದ ಕಥಾನುಸರಣೆ

(ಈ ಕೆಳಗಿನ ವಿಚಾರಗಳು ಆದಿಕಾವ್ಯದಲ್ಲಿರುವುದಿಲ್ಲ)

೧. ಸೀತಾ ಸ್ವಯಂವರ ಮಂಟಪದಲ್ಲಿ ದೇವತೆಗಳ ಉಪಸ್ಥಿತಿ, ರಾವಣನ ಆಗಮನ, ಅವನ ಗರ್ವಭಂಗ[4]

೨. ಕಾಕಾಸುರ ವೃತ್ತಾಂತ. ಅವನು ದೇವತೆಗಳಲ್ಲೆಲ್ಲಾ ಮೊರೆ ಹೊಕ್ಕು ಉಪಾಯಗಾಣದೆ, ಮತ್ತೆ ರಾಮನಿಗೇ ಮೊರೆಯಿಡುವುದು–ಈ ವೃತ್ತಾಂತವು ವಾಲ್ಮೀಕಿ ರಾಮಾಯಣದಲ್ಲಿರುವಂತೆ ಸುಂದರಕಾಂಡದಲ್ಲಿ (ಹನುಮಂತನಿಗೆ ಸೀತೆಯು ಹೇಳುವ ಕುರುಹಿನ ಕಥೆಯಾಗಿ) ಬಾರದೆ ಅಯೋಧ್ಯಾ ಕಾಂಡದಲ್ಲಿಯೇ ಬಂದಿರುವುದು.[5]

೩. ದಶರಥನ ಪತ್ನಿಯರಲ್ಲಿ ಮೂವರನ್ನುಳಿದು, ಇತರರೆಲ್ಲರೂ ದಶರಥನೊಂದಿಗೆ ಸಹಗಮನ ಮಾಡಿದ ವಿಚಾರ.[6]

---

1. (ಅ) ಶಿವರಾಮ ಕಾರಂತರು ಬತ್ತಲೇಶ್ವರನ ಕೃತಿಯನ್ನು 'ಕೌಶಿಕ ರಾಮಾಯಣ' ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ (೧೯೬೬)
   (ಆ) ಈ ಬತ್ತಲೇಶ್ವರನು ೧೦೧ (ವೀರಶೈವ) ವಿರಕ್ತರಲ್ಲಿ ಒಬ್ಬನಾದ ಶಿವಯೋಗಿ ಬತ್ತಲೇಶ್ವರನಲ್ಲ.
   (ಇ) ಈ ರಾಮಾಯಣದ ಕವಿ ಬತ್ತಲೇಶ್ವರನು 'ಕ್ರಿ.ಶ. ೧೫೦೦ರ ತುಸು ಹಿಂದು ಮುಂದಿದ್ದವನು' ಶಿವರಾಮ ಕಾರಂತ-ಕೌ. ರಾ. ಮೊದಲಮಾತು. ಪು. ೧೫.
   "ಇವನು ೧೭ನೇ ಶತಮಾನದ ಆದಿಭಾಗದವನೆಂದು ಹೇಳುವುದು ಉಚಿತ"–
   ಎಸ್. ಎನ್. ಕೃಷ್ಣಜೋಯಿಸ್–ಪ್ರ. ಕ. ೪೮-೧.
   (ಈ) ಈ ಕವಿಯ ರಾಮಾಯಣಕ್ಕೆ "ಕೌಶಿಕ ರಾಮಾಯಣ"ವೆಂಬ ಹೆಸರಿರುವ ಹಿನ್ನೆಲೆಯ ಕುರಿತು ಶಿವರಾಮ ಕಾರಂತರು "ಮೊದಲಮಾತು"ಗಳಲ್ಲಿ ಹೇಳಿಕೊಂಡಿದ್ದಾರೆ.
   "ಇದಕ್ಕೂ ವಾಲ್ಮೀಕಿ ರಾಮಾಯಣವೆಂದೇ ಹೆಸರಿದ್ದಿರಬೇಕು........"
   ಎಸ್. ಎನ್. ಕೃಷ್ಣ ಜೋಯಿಸ್-ಪ್ರ. ಕ. ೪೨-೨.
   (ಉ) ಈ ರಾಮಾಯಣದಲ್ಲಿ ಇಂದು ಸಿಗುವ ಮೈರಾವಣನ ಕಥೆಯನ್ನು ಹೇಳುವ ೪೯ ಮತ್ತು ೪೦ನೇ ಸಂಧಿಗಳು ಪ್ರತ್ಯೇಕ ಕೃತಿಯಾಗಿದ್ದು-ಇದರಲ್ಲಿ ಸೇರಿಸಲ್ಪಟ್ಟಿರಬೇಕು ಎನ್ನುವ ವಿವೇಚನೆಗೆ ನನ್ನ "ಕೌಶಿಕ ರಾಮಾಯಣ–ಒಂದು ವಿವೇಚನೆ" (ಯುಗಪುರುಷ-ಪ್ರಜಾಪ್ರಭುತ್ವಾಂಕ-೧೯೭೩) ಎಂಬ ಲೇಖನವನ್ನು ನೋಡಬಹುದು.
2. ಕೌ. ರಾ. ೧-೧೩.
3. 'ಬತ್ತಲೇಶ್ವರನ ಕೃತಿಯು ಕುಮಾರ ವಾಲ್ಮೀಕಿಯ ಕಾಲಕ್ಕಿಂತ ಈಚಿನದೆಂದು ಕಾವ್ಯ ವಿಮರ್ಶೆಯಿಂದ ನಿಷ್ಕರ್ಷಿಸಬಹುದಾಗಿದೆ'-ಎಸ್. ಎನ್. ಕೃಷ್ಣಜೋಯಿಸ್ ಪ್ರ. ಕ. ೪೨-೨.

| | ತೊ. ರಾ. | | | ಬತ್ತಲೇಶ್ವರನ ಕೃತಿ | |
|---|---|---|---|---|---|
| | ಕಾಂ. | ಸಂ. | ಪ. | ಸಂ. | ಪ. |
| 4. | ೧ | ೧೫ | | ೨ | ೧೭ |
| 5. | ೨ | ೭ | | ೪ | ೪೧ |
| 6. | ೨ | ೬ | ೬ | ೪ | ೨೨ |

೪. ಶೂರ್ಪನಖಿಯ ಮಗನಾದ ಶಂಬುಕ, ಅವನ ವಧೆ ಇದು ಸೀತಾಪಹಾರಕ್ಕೆ ಮೂಲಕಾರಣವಾಗಿರುವುದು.[1]

೫. ಮಂಡೆ ಬೋಳಾದ 'ರಾವಣ ಸನ್ಯಾಸಿ'[2] (ವಾ. ರಾ. ದಲ್ಲಿ ಶಿಖೆಯುಳ್ಳ ತ್ರಿದಂಡಿ ಸನ್ಯಾಸಿಯ ಚಿತ್ರಣ ವಿದೆ)

೬. ರಾವಣನಿಂದ ಜಟಾಯು (ಮರ್ಮ)ವಂಚನೆ.[3]

೭. ರಾಮನಿಂದ ಸಪ್ತತಾಳ ಛೇದನ ಪ್ರಸಂಗದಲ್ಲಿ ಸರ್ಪರೂಪದ ದಾನವ ವಿಚಾರ.[4]........

೮. ಸಮುದ್ರೋಲ್ಲಂಘನೆಯ ಸಂದರ್ಭದಲ್ಲಿ ವಿರಸೆ, ಆಮೇಲೆ ಮೈನಾಕ–ಈ ಅನುಕ್ರಮದ ಅನುಸರಣೆ.[5]

೯. ತೃಣಬಿಂದುವು ಹನುಮಂತನ ಸತ್ತ್ವ ಪರೀಕ್ಷೆಮಾಡಿದ ಕಥೆ.[6]

೧೦. ಅಶೋಕವನದಲ್ಲಿ, ಹನುಮಂತನು ಸೀತೆಗೆ ವಿಶ್ವಾಸ ಮೂಡುವುದಕ್ಕಾಗಿ ತನ್ನ "ತ್ರಿವಿಕ್ರಮರೂಪ" ತೋರುವುದು.[7]

೧೧. ಹನುಮಂತನು ತನ್ನ ಬಾಲದ ಬೆಂಕಿಯಿಂದ ರಾವಣನ ಗಡ್ಡ ಸುಡುವುದು, ರಾವಣನು ಪುಷ್ಪಕವನ್ನೇರಿ, ಮೇಲೆ ನೆಗೆದು ಪಾರಾದದ್ದು.[8]

೧೨. ಲಂಕಾದಹನನಂತರ, ಮತ್ತೆ ತನ್ನನ್ನು ಬೆನ್ನಟ್ಟಿದ ಇಂದ್ರಜಿತುವನ್ನು ಹನುಮಂತನು ಕಡಲಲ್ಲಿ "ಹುಡುಕು ನೀರದ್ದಿದುದು"[9]

೧೩. ಸೇತುಬಂಧನಾರಂಭದಲ್ಲಿ "ಮೀನುಗಳಿಂದ ಆತಂಕ"[10]

೧೪. ವಿಷ್ಣುಭಕ್ತ-ಮೋಕ್ಷಕಾಮಿ-ಅತಿಕಾಯ.[11]

೧೫. ನೀಲನು ರಾವಣನನ್ನು ತನ್ನ "ಬಾಲಕ್ಕೆ ಕಟ್ಟಿ, ಜೋಗುಳ ಹಾಡುವುದು".[12]

೧೬. ಇಂದ್ರಜಿತುವನ್ನು ಕೊಲ್ಲಲು ನಿದ್ರಾಹಾರವರ್ಜಿತ ಲಕ್ಷ್ಮಣನೇ ಅರ್ಹನೆಂಬ ರಹಸ್ಯ.[13]

೧೭. ರಾವಣನ ಯಜ್ಞಭಂಗದ ವಿವರಣೆ-ರಾವಣನು ಅಂಗದನನ್ನು ಕಡಿದುದು-ಮತ್ತೆ ಅಂಗದನ ಉಜ್ಜೀವನ.[14]

೧೮. ರಾವಣನಿಂದ ತಲೆಗಳ ಬಲಿ–ಹರಾನುಗ್ರಹದಿಂದ ಮತ್ತೆ ತಲೆಗಳು ಚಿಗುರುವುದು.[15]

---

| | ತೊ. ರಾ. | | | ಬತ್ತಲೇಶ್ವರನ ಕೃತಿ | |
|---|---|---|---|---|---|
| | ಕಾಂ. | ಸಂ. | ಪ. | ಸಂ. | ಪ. |
| 1. | ೨ | ೩ | | ೫ | ೨ರಿಂದ೧೧ |
| 2. | ೩ | ೯ | ೧೭ | ೬ | ೩೧ |
| 3. | ೩ | ೧೦ | ೨೫ರಿಂದ೨೭ | ೬ | ೪೦, ೪೧ |
| 4. | ೪ | ೨ | ೪೫ | ೮ | ೭ |
| 5. | ೫ | ೧ | ೧ರಿಂದ೧೪ | ೯ | ೫೦ರಿಂದ೫೪ |

(ಈ ಎಲ್ಲ ಕಥಾನುಸರಣೆಗಳಲ್ಲಿ ಬತ್ತಲೇಶ್ವರನು ಸಂಸ್ಕೃತದ ಅ. ರಾ. ವನ್ನು ತಾನು ಅನುಸರಿಸಬಹುದಾದರೂ, ಶೈಲಿ, ಭಾಷಾಪ್ರಯೋಗಗಳಲ್ಲಿ ತೊ. ರಾ. ದ ಪ್ರಭಾವ ಸ್ಪಷ್ಟ)

| | ಕಾಂ. | ಸಂ. | ಪ. | ಸಂ. | ಪ. |
|---|---|---|---|---|---|
| 6. | ೫ | ೧ | ೨೫ | ೯ | ೫೪ |
| 7. | ೫ | ೩ | ೮೦ | ೧೧ | ೪ |
| 8. | ೫ | ೮ | ೩೪–೩೭ | ೧೨ | ೨೮ |
| 9. | ೫ | ೯ | ೫ | ೧೩ | , ೧೪ |
| 10. | ೬ | ೫ | ೭ | ೧೬ | ೬ |
| 11. | ೬ | ೩೪ | | ೨೭ | |
| 12. | ೬ | ೨೨ | ೨೫–೨೮ | ೩೪ | ೪೧–೪೨ |
| 13. | ೬ | ೪೨–೪೪ | | ೩೬ | ೨೫ |
| 14. | ೬ | ೪೮ | | ೩೮ | ೪೪ |
| 15. | ೬ | ೪೮ | ೫೧–೧೯ | ೪೨ | ೮ |

೧೯. ರಣರಂಗದಲ್ಲಿ ರಾವಣನಿಗೆ ರಾಮನಿಂದ 'ವಿಶ್ವರೂಪ'ದರ್ಶನ.[1]

೨೦. ವಿಭೀಷಣನಿಂದ ದಶಕಂಠನ 'ಮರ್ಮಸ್ಥಾನ ಸೂಚನೆ'.[2]—ಇತ್ಯಾದಿ—

**ಭಾಷೆ, ವರ್ಣನೆ, ಶೈಲಿಗಳ ವಿಚಾರದಲ್ಲಿ–ಬತ್ತಲೇಶ್ವರನ 'ರಾಮಾಯಣ'ದ ಮೇಲೆ ತೊರವೆ ರಾಮಾಯಣದ ಪ್ರಭಾವ**

ಕೆಲವು ಉದಾಹರಣೆಗಳು :

| | ತೊರವೆ ರಾಮಾಯಣ | ಬತ್ತಲೇಶ್ವರನ ರಾಮಾಯಣ |
|---|---|---|
| ೧. | ಐಸಲೇ ನೀವ್ ಬೇಡಿದುದು ತಾ | ಐಸಲೇ ಪಿತ್ತನಿತ್ತ ಸತ್ಯದ |
| | ನೇಸು ದೊಡ್ಡಿತು, ತಂದೆಯಾಡಿದ | ಭಾಷೆಯಂದರೆ ಸಾಕು ರಾಜ್ಯದ |
| | ಭಾಷೆಗಿದಕೋ ಭಾಷೆಯೆನುತಾ ಜನನಿಗಾ ರಾಮ | ಲಾಸೆತಾನೆನಗಿಲ್ಲ ಸಲಿಸಿದೆ ಭರತಗವನಿಯನು, |
| | ಭರತನಾಳಲಿ ರಾಜ್ಯವನು ನೀವ್[3] | ಈಸು ಬೇಡಿದ ಬಯಕೆ ನಿಮ್ಮಭಿ |
| | | ಲಾಷೆ ಸಹಜದೊಳೀವೆ[4] |
| ೨. | ಬಿಗಿದು ಬೆಳುಪಟ್ಟೆಯ ಕಠಾರಿಯ | ಮೊಗವ ನೋಡುತ ಜನಕಜಾತೆಯ |
| | ಮಿಗೆ ಕಟಿಗೆ ಸಿಂಗರಿಸಿ ಹೊನ್ನಾ | ಬಿಗಿದ ಜಡೆಗಳ ಜಾಲವೆಲ್ಲವ |
| | ಯುಗದ ಖಡುಗವನಕ್ಷಯದ ಮೂಡಿಗೆಯದಕ್ಷಿಣದ | ತೆಗೆದು, ಭಸಿತವ ಜಪಿಸೆ ಬಿಗಿದು ಭಾಳದಲಿ |
| | ಹೆಗಲಿಗೇರಿಸಿ ಹರದ ಜಡೆಗಳ | ಉಗುಚಿ ಬಿಲುಗವಸಣಿಗೆ ಸೆಳೆದನು |
| | ಜಗುಳದವೊಲೊಳಚಾಚಿ ಚಾಪವ | ಬಿಗಿದು ನಾರಿಯ ನೀವಿ, ಸರಳನು |
| | ತೆಗೆದು ಕೊಳುತೆಲೆಸನೆಯ ಹೊರವಂಟನು | ತೆಗೆದು ಸೀತಾರಾಮನಿಳಿದನು ಪರ್ಣಮಂದಿರವ[6] |
| | ರಘುಪ್ರಭವ.[5] | |
| ೩. | ನಾಟುವವು ಸ್ಮರಶರಗಳಾವೊಳ | ಆಲಿಸಲು ಕಾಮಾಸ್ತ್ರ ವ್ಯಯಲಿ |
| | ತೋಟಿಯಲಿ ಜಾನಕಿಯ ನೆನಹಿಗೆ | ಕಾಲನಿಟ್ಟುದು ಕೇಳಿವದರಿಂ |
| | ನಾಟುವುದು ಸತ್ಕ್ರೋಧ ಹುತವನನುಜರಳಿವಿಂಗೆ[7] | ಗೋಲು ಮರುಮೊನೆದೋರೆ ಮನದಲಿ ಛಲವು |
| | | ಬೇರೂರೆ[8] |
| ೪. | ಮಾಯಾಮೃಗವು ಮುಂದೆ ಸುಳಿದಾಗ : | |
| | ಹೊದ್ದಿದನು ರವಿಯುಪರದಿಗ್ವಧು | ತಿರುಗುತಿರಲರವಿಂದ ಮಿತ್ರನ |
| | ವಿದ್ದ ಮಂಚವನಿಸ್ಸು ನಿಳಯನ | ಕಿರಣ ಕೆಂಪಡಸಿತ್ತು ಗಗನವು |
| | ಹೊದ್ದಬೇಕೆನುತಡಸಿ ಮೇಲ್ವಾಯಿದನು | ಸಿರಿ ಸವೆದ ಮನೆಯಾಯ್ತು ದಿನಪತಿಗಿರಿಯ |
| | ಹೊಮ್ಮರಿಯ.[9] | ಮರೆಗಿಳಿದ[10] |

---

| | ತೊ. ರಾ. | | | | ಬತ್ತಲೇಶ್ವರನ ರಾ. | |
|---|---|---|---|---|---|---|
| | ಕಾಂ. | ಸಂ. | ಪ. | | ಸಂ. | ಪ. |
| 1. | ೬ | ೫೧ | ೪೪ | | ೪೨ | ೯-೧೦ |
| 2. | ೭ | ೫೧ | ೬೧ | | ೪೨ | ೧೫ |
| 3. | ೨ | ೨ | ೪೯ | 4. | ೩ | ೪೯ |
| 5. | ೩ | ೬ | ೫ | 6. | ೫ | ೨೪ |
| 7. | ೩ | ೭ | ೧೨ | 8. | ೬ | ೭ |
| 9. | ೩ | ೮ | ೬೭ | 10. | ೬ | ೨೩ |

| | |
|---|---|
| ೫. ರಾಮನಳಿವರೆ ಕಮಲ ಭವಸು<br>ತ್ರಾಮರುಳಿವರೆ ?......[1] | ರಾಯನಳಿವರೆ ಭೂಮಿ ಕದಡದೆ ಮಾಂಬುದೆ ?[2] |
| ೬. ಕೆಡಿಸಿದೆಯಲಾ ತಮ್ಮ ದುರ್ಭಯ<br>ದಡವಿಯಲಿ ಭಯಭರಿತ ವನಿತೆಯ<br>ಬಿಡುವರೇಯಕಟಕಟ ಬಲ್ಲನನೆಲ್ಲರಿಗೆಸೀನು[3] | ಅನುಜ ಕೆಡಿಸಿದೆಯಕಟ ದೇವಿಯ<br>ದನುಜರೊಯ್ಯದೆ ಮಾಣರ್ಶ್ಯೆ ಶಿವ<br>ವನಿತೆಯರ ಬಿರುನುಡಿಗೆ ಮನಗುಂದುವರೆ ಬಲ್ಲವರು ?[4] |
| ೭. ಕನಕ ಮೃಗನನು ತಾರನೆಂಬೀ<br>ಮುನಿಸದೊಂದಿಡೆ ತಮ್ಮ, ತನ್ನಯ<br>ಮನದ ಸಂಶಯನನು ನಿವಾರಿಸು ಹೊಗುಗೃಹಾಂತರವ<br>ಕನಲ ಮೃಗವನು ತಂದೆನೆಂದೇ<br>ವನಿತೆಗನೃತವ ನುಡಿಸು ಮಡದಿಯ<br>ನೆನಗೆ ತೋರಿಸು ಸಾಕು ಬಳಿಕ ಕೃತಾರ್ಥ ನಾನೆಂದ[6] | ಬಂದು ಮನೆಯೊಳಗರಸಿ ಕಾಣದೆ<br>ಇಂದುಮುಖಿ ಕಡುಮುನಿಯದಿರಳೆನು<br>ತೆಂದ ರಾಘವ ಹೇಮಮೃಗವಿದ ತಂದೆನೋಡೆನಲು...[5] |
| ೮. ಮರನ ಮುರಿಯಲು ಬಹುದು ದೈತ್ಯನ<br>ಶಿರವನೊಡೆಯಲು ಬಹುದು ನಿರ್ಜರ<br>ನರಭುಜಂಗಮರೊಳಗೆ ಹಳಚಲು ಬಹುದು-<br>ಹರಿಸುತನ<br>ಹರಣಗೊಂಬುದು ಸೂರೆಯೆ ? ಶಂ<br>ಕರಗೆ ತೀರದು ನಿನ್ನ ಪಾಡೇ<br>ನರಸ ರಕ್ಷಿಸಿದಾತನೆನ್ನನು ಬಿಜಯ ಮಾಡೆಂದ.[7], | ಒಣಮರನ ನೆಸಬಹುದು, ಕೋಣನ<br>ಹೆಣನ ನೆಗಹಲು ಬಹುದು, ಚೌಕದ<br>ಲುಣಲು ಬಹುದತಿನಂಟುಗೊಳಬಹುದರಿಯ ಕಡುಗಲಿಸಿ<br>ರಣದೊಳಗೆ ರಾವಣನು ವಾಲಿಯ<br>ಕೆಣಕಿ ಗೆಲಿದರೆ ನಿನ್ನ ಹರಣೇ ?<br>ತ್ರಿಣಯಗರಿದೆಲೆ ನಂಟಮನದಂಘವಣೆ ಲೇಸೆಂದ.[8] |
| ೯. **ವಾಲಿಯ ಆತ್ಮನಿವೇದನೆ :**<br>ಉಡಿಯನೇ ತರುಗಾಳಿಯಲಿ ? ಗಿರಿ<br>ಕೆಡೆಯನೇ ಸಿಡಿಲಿನಲಿ ? ಯಿಾಕೆಡು<br>ವೊಡಲುರ್ಬೀಳಲಿಕಂಗಲಾಚಿದೆ ದೇವನಿನ್ನೊಡನೆ–<br>ಹಿಡಿಯದೆನ್ನಪರಾಧವನು ಕೈ<br>ವಿಡಿದು ನಿನ್ನಪದಾರವಿಂದದ<br>ಲಡಗಿಸುವ ಘನ ಕೃಪೆಯನೆನ್ನಲಿ ಬೀರಬೇಕೆಂದ[9] | <br>ಉರಗವಿಷ ತಲೆಗೇರಿಸಾಯರೇ ?<br>ಮರನ ಕೊಂಬುಡಿದಲ್ಲಿ ಸಾಯರೆ ?<br>ಶರಭ ಹರಿಶಾರ್ದೂಲ ಘಾತದಲುಗ್ರ ರೋಗದಲಿ<br>ಹರಣವಳಿಯದೆ ?–ನಿನ್ನಮಂಗಲ<br>ಸಿರಿಪದಾಂಬುಜದಿದಿರಲಳಿವಂ<br>ತರರೆ ತನ್ನಂತಾರು ಧನ್ಯರು-ಸುಡಲಿ ಸಂಸ್ಕೃತಿಯ ;[10] |
| ೧೦. ಉಸುರಬಿಡೆ ಹೊರಬೀಳ್ವನೆಳದೆಗ<br>ದುಸುರಿನಲಿ ಮುಳುಗುವನು ಮೂಗಿನ<br>ಕಸುಮಳದ ಕಾವಳದ ಕಲಿತಶ್ಲೇಷ್ಮ ಶರಧಿಯಲಿ | ಉಸುರ ಪಥದೊಳಗಾಗೆ ಬೇಸ<br>ತ್ತುಸುರಬಿಟ್ಟರೆ ತೊಲೆಗೆ ತಾಗುವ<br>ನುಸುರ ತೆಗೆವರೆ ಮೂಗ ತಾಗುವ, ಬೆಳೆದನಾಕ್ಷಣಕೆ...[12] |

(ಹನುಮಾನನು ಕುಂಭಕರ್ಣನ ಮೂಗಿನೊಳಗೆ ಬೆಳೆದು, ರಕ್ಕಸನ ಸೀನಿಗೆ ಹೊರಗೆ ತಳ್ಳಲ್ಪಟ್ಟ ವರ್ಣನೆ...ಕಂಬಕ್ಕೆ ತಾಗಿದ ಹೇಳಿಕೆ)[11]

---

| ತೊ. ರಾ. | ಕಾಂ. | ಸಂ. | ಪ. | ಬತ್ತಲೇಶ್ವರ ರಾ. | ಸಂ. | ಪ. |
|---|---|---|---|---|---|---|
| 1. | ೩ | ೯ | ೭ | 2. | ೬ | ೨೭ |
| 3 | ೩ | ೧೧ | ೬ | 4. | ೬ | ೪೮ |
| 5. | ೩ | ೧೧ | ೧೩ | 6. | ೬ | ೪೯ |
| 7. | ೪ | ೩ | ೨೨ | 8. | ೮ | ೨೦ |
| 9. | ೪ | ೪ | ೫೮ | 10. | ೮ | ೩೪ |
| 11. | ೫ | ೨ | ೪೪-೪೬ | 12. | ೧೦ | ೩೫ |

ಹೀಗೆ, ಬತ್ತಲೇಶ್ವರನ ರಾಮಾಯಣವು ಕಥೆ ಮತ್ತು ಕಥೆ ಹೇಳುವರೀತಿ (ಶೈಲಿ) ಗಳೆರಡರಲ್ಲೂ ತೊರವೆ ರಾಮಾಯಣದಿಂದ ಪ್ರಭಾವಿತವಾಗಿದೆ ಎನ್ನುವುದಕ್ಕೆ ಇನ್ನಷ್ಟು ಉದಾಹರಣೆಗಳನ್ನು ಕೊಟ್ಟು ಪಟ್ಟಿಯನ್ನು ಬೆಳೆಸ ಬಹುದು.[1] ಪ್ರಭಾವ ನಿರ್ದೇಶನ ಮಾತ್ರವೇ ನಮ್ಮ ಉದ್ದೇಶ ನಮ್ಮದಾಗಿರುವುದರಿಂದ ಇನ್ನಷ್ಟು ಪದ್ಯಗಳನ್ನು ಉಲ್ಲೇಖಿಸಲೆಳಸುವುದಿಲ್ಲ.

## ಕನ್ನಡ ಭಾಗವತದ ' ರಾಮ ಕಥೆ 'ಯಲ್ಲಿ ತೊರವೆ ರಾಮಾಯಣದ ಕಥಾನುಸರಣೆ

ಕನ್ನಡ ಭಾಗವತದ[2] ನವಮ ಸ್ಕಂಧದ ಮೂರು ಸಂಧಿಗಳಲ್ಲಿ ಒಟ್ಟು ೧೫೧ ಪದ್ಯಗಳಲ್ಲಿ[3] 'ರಾಮಾಯಣ' ಕಥೆಯು ಸಂಕ್ಷಿಪ್ತವಾಗಿ ಬಂದಿದೆ. ಭಾಗವತದ ಕವಿಯು[4] ಈ ರಾಮಕಥೆಯನ್ನು ಹೇಳುವಲ್ಲಿ ವಾಲ್ಮೀಕಿಯ 'ಆದಿಕಾವ್ಯ' ರಾಮಾಯಣದಲ್ಲಿಲ್ಲದ ಈ ಕೆಳಗಿನ ಕಥಾಂಶಗಳನ್ನು ಅಳವಡಿಸಿಕೊಂಡಿದ್ದಾನೆ. ಹೀಗೆ, ಭಾಗವತದಲ್ಲಿ ವಾ. ರಾ. ಕ್ಕೆ ಹೊರತಾದ ಅಂಶಗಳು ಹೇಳಲ್ಪಟ್ಟಿರುವುದಕ್ಕೆ, ಆ ಕಾಲಕ್ಕಾಗಲೇ ಕುಮಾರ ವಾಲ್ಮೀಕಿಯ ರಾಮಾಯಣವು ಸೃಷ್ಟಿ

---

| | ತೊ. ರಾ. | | | ಬತ್ತಲೇಶ್ವರನ ರಾ. | | |
|---|---|---|---|---|---|---|
| | ಕಾಂ. | ಸಂ. | ಪ. | ಸಂ. | ಪ. | |
| 1. | ೩ | ೭ | ೪೫ | ೬ | ೧೨ | |
| | ೩ | ೧೦ | ೮ | ೬ | ೩೭ | |
| | ೩ | ೧೧ | ೧೪ | ೬ | ೫೧ | |
| | ೩ | ೧೧ | ೩೪ | ೬ | ೫೩ | |
| | ೪ | ೬ | ೧೦ | ೯ | ೧ | |
| | ೪ | ೬ | ೧೯ | ೯ | ೪ | |
| | ೪ | ೬ | ೨೩ | ೯ | ೭ | |
| | ೪ | ೧೨ | ೩೦ | ೯ | ೪೬ | |
| | ೫ | ೨ | ೧೯ | ೧೦ | ೨೮ | |
| | ೫ | ೨ | ೫೬ | ೧೦ | ೩೯ | |
| | ೫ | ೩ | ೪೧ | ೧೦ | ೬೨ | |
| | ೫ | ೩ | ೫೨ | ೧೦ | ೬೮ | |
| | ೫ | ೩ | ೫೩ | ೧೦ | ೬೯ | |
| | ೫ | ೩ | ೫೭ | ೧೦ | ೭೦ | |
| | ೫ | ೩ | ೫೯ | ೧೦ | ೭೩ | |
| | ೫ | ೩ | ೬೦ | ೧೦ | ೭೨ | |
| | ೫ | ೩ | ೭೧ | ೧೦ | ೫೫ | |
| | ೫ | ೩ | ೯೭ | ೧೧ | ೧೦ | |
| | ೫ | ೩ | ೧೦೫ | ೧೧ | ೮ | |
| | ೫ | ೬ | ೨೬ | ೧೧ | ೩೮ | |
| | ೫ | ೬ | ೩೨ | ೧೧ | ೪೦ | (ಇದರಂತೆಯೇ ಯುದ್ಧಕಾಂಡದ |
| | ೫ | ೮ | ೭೭ | ೧೨ | ೨೨ | ಸುಮಾರು ೯೦ ಪದ್ಯಗಳಲ್ಲಿ |
| | | | | | | ತೊ. ರಾ. ದ ಸ್ಪಷ್ಟ ಪ್ರಭಾವವಿದೆ) |

2. ಕನ್ನಡ ಭಾಗವತದ ಕಾಲ ಸು. ೧೫೩೦–ರಂ. ಶ್ರೀ ಮುಗಳಿ–ಕ. ಸಾ. ಚ. ಪು.೨೩೩. ಮತ್ತು ಕ. ಕ. ಚ. ೨-೨೨೨.
3. ಕನ್ನಡ ಭಾಗವತ–ನವಮಸ್ಕಂಧ–ಸಂಧಿ ೯. ಪದ್ಯಗಳು ೪೧
   ಸಂಧಿ ೧೦ ೫೩.
   ಸಂಧಿ ೧೧ ೫೭ ಒಟ್ಟು ೧೫೧ ಪದ್ಯಗಳು.
4. ಇದರ ಕುರಿತ ವಿವೇಚನೆಗೆ: ಬೆಟಗೇರಿ ಕೃಷ್ಣಶರ್ಮ–ಕನ್ನಡ ಭಾಗವತದ ಕವಿ ಯಾರು?-ಕ. ಸಾ. ಪ. ೧೨-೩ ನೋಡಬಹುದು

ಯಾಗಿದ್ದು, ಜನಮನದಲ್ಲಿ (ಕವಿಸಮೂಹದಲ್ಲಿ) ಅದು ಪ್ರಚಲಿತವಾಗಿದ್ದುದೇ ಕಾರಣವಾಗಿರಬಹುದೇ ? ಈ ಬತ್ತಲೇಶ್ವರನ 'ರಾಮಾಯಣ'ದಲ್ಲಿ ತೊ. ರಾ. ದ ಪ್ರಭಾವದ ಆಳ ಮತ್ತು ವ್ಯಾಪ್ತಿಗಳನ್ನು ಗಮನಿಸಿದಾಗ, ಕನ್ನಡ ಭಾಗವತದ ಮೇಲೂ ಅದರ ಪ್ರಭಾವವು ಆಗಿರುವುದು ಅಸಂಭವವೇನೂ ಅಲ್ಲ.[1] ಈ ಊಹೆಯು ವಾಸ್ತವವಾಗಿದ್ದಲ್ಲಿ 'ಕನ್ನಡ ಭಾಗವತ' ದೊಳಗಣ ರಾಮಾಯಣದಲ್ಲಿನ ಈ ಕೆಳಗಿನ ಅಂಶಗಳು ತೊರವೆ ರಾಮಾಯಣದಿಂದ ಪ್ರೇರಿತವಾಗಿರಬೇಕು.

೧) ಮನುಜ ದನುಜೇಶ್ವರರ ಸೀತಾಸ್ವಯಂವರ ಸಭೆ.[2] ಅಲ್ಲಿ ರಾವಣನು ಧನುರ್ಭಂಗ ಪ್ರಯತ್ನದಲ್ಲಿ ವಿಫಲನಾದುದು.[3]

೨) ಶೂರ್ಪನಖಿಯು ಸುಂದರ ರೂಪವನ್ನು ತಾಳಿ ರಾಮಲಕ್ಷ್ಮಣರನ್ನು ಮೋಹಿಸಬಂದದ್ದು.[4]

೩) ಮಾಯಾಮೃಗ ಹಂಚಿಕೆ ರಾವಣನದಲ್ಲ, ಮಾರೀಚನದು.[5]

೪) ರಾವಣನಿಂದ ಜಟಾಯು ಮರ್ಮವಂಚನೆ.[6]

೫) ಸಮುದ್ರರಾಜನು ರಾಮನಿಗೆ 'ಕಾಣಿಕೆ' ಕೊಟ್ಟ ವರ್ಣನೆ.[7]

## ಸುಬ್ರಹ್ಮಣ್ಯ ಕವಿಯ 'ಹನುಮದ್ರಾಮಾಯಣ'ದ[8] ಮೇಲೆ ತೊ. ರಾ. ಪ್ರಭಾವ

ಆಡುವಳ್ಳಿ[9] ವೆಂಕಾರ್ಯ ತನುಜನಾದ ಸುಬ್ರಹ್ಮಣ್ಯನೆಂಬ ಕವಿಯಿಂದ[10] ಕಂದಪದ್ಯ ರೂಪದಲ್ಲಿ ರಚಿತವಾದ 'ಹನುಮದ್ರಾಮಾಯಣ'ದ[11] ಮೇಲೆ ಕುಮಾರ ವಾಲ್ಮೀಕಿಯ ರಾಮಾಯಣದ ಪ್ರಭಾವವು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಹನುಮಂತನೇ ನಾಯಕನಾಗಿ ಉಳ್ಳ 'ಹನುಮದ್ರಾಮಾಯಣ' ರಚನೆಯಲ್ಲಿ 'ನರಹರಿಯ ನಿಜದೂತ' (ಜೀವೋತ್ತಮ—ಅನುಪಮ—ಭಾವೀಬ್ರಹ್ಮ) ಮಾರುತಿಯ (ಮಧ್ವಾಚಾರ್ಯರ) ಶಿಷ್ಯನೆನಿಸಿದ ಕುಮಾರವಾಲ್ಮೀಕಿಯ—ಹನುಮಂತನ ವ್ಯಕ್ತಿತ್ವಕ್ಕೆ ಅಸಾಧಾರಣ ಪ್ರಾಶಸ್ತ್ಯ ಕೊಡಲ್ಪಟ್ಟ—ರಾಮಾಯಣವು ಮಹತ್ತ್ವದ ಮಾರ್ಗದರ್ಶನ ನೀಡಿದ್ದು ಸಹಜವೇ.

---

1. ವಾ. ರಾ. ದಲ್ಲಿಲ್ಲದ ಅಂಶಗಳಿಂದಾಗಿ ಈ ಊಹೆಗೆ ಅವಕಾಶ. (ಭಾಗವತದ ಕವಿಯು ಇತರ ರಾಮಾಯಣಗಳನ್ನು ನೋಡಿರಲಾರ ಎಂಬ ಹಟ ನಮಗಿಲ್ಲ)

ಕನ್ನಡ ಭಾಗವತ—ನವಮಸ್ಕಂಧ

| | ಸಂಧಿ | ಪದ್ಯ | | ಸಂಧಿ. | ಪದ್ಯ. |
|---|---|---|---|---|---|
| 2. | ೯ | ೫೦ | 5. | ೧೦ | ೯ |
| 3. | ೯ | ೫೧ | 6. | ೧೦ | ೧೨ |
| 4. | ೯ | ೫೨ | 7. | ೧೦ | ೨೫ |

8. ಕನ್ನಡ ಭಾಗವತ ಮತ್ತು ಹನುಮದ್ರಾಮಾಯಣಗಳ ನಡುವಣ ಕಾಲದ ಲಕ್ಷ್ಮೀಶನ ಜೈಮಿನಿಭಾರತದಲ್ಲಿ ೧೧ ಷಟ್ಪದಿಗಳಲ್ಲಿ (ಸಂಧಿ ೧೪ರಲ್ಲಿ ಪದ್ಯ ೧ ರಿಂದ ೧೧ ರವರೆಗೆ) ರಾಮಕಥೆಯು ಸಂಗ್ರಹಿತವಾಗಿದೆಯಷ್ಟೆ. ಈ ಭಾಗದಲ್ಲಿ ೧. ವಿಷ್ಣುವೇ ರಾಮನಾಗಿ ಜನಿಸಿದ್ದು ಎಂದು ಹೇಳಿದ್ದಲ್ಲದೆ ಎಲ್ಲವೂ 'ಮನುಜ ಲೀಲೆ'—ಎನ್ನುವುದಕ್ಕೆ ಕೊಟ್ಟ ಮಹತ್ತ್ವ, ೨. ಅಹಲ್ಯೆಯ ಆಘ ಕಳೆದರೀತಿ ೩. ರಾಮನಿಂದ ಹನುಮಂತನಿಗೆ ಮನ್ನಣೆ (?) ೪. ರಾಮನು ಕಂಡ ಕನಸು—ಇವೆಲ್ಲವೂ ತೊ. ರಾ. ದ ಜನಪ್ರಿಯತೆ, ಪ್ರಚುರತೆ, ಪ್ರಭಾವ ಸೂಚಕವಾಗಿರಬಹುದೇ ? ? ?

9. ಆಡುವಳ್ಳಿಯೆಂದರೆ ಅಜಪುರವೆಂದೂ, ಯಕ್ಷಗಾನ ಪ್ರಸಂಗಗಳ ಕರ್ತೃವಾದ 'ಅಜಪುರ'ದ ವೆಂಕಯ್ಯನಮಗ ಸುಬ್ಬಯ್ಯನೇ ಹನುಮದ್ರಾಮಾಯಣ ರಚಿಸಿ ರಾಜಮನ್ನಣೆ ಪಡೆದಿರಬೇಕು—ಶಿವರಾಮ ಕಾರಂತ-ಯಕ್ಷಗಾನ ಬಯಲಾಟ—ಪು. ೨೪೪-೨೪೫.

10. ಸುಬ್ರಹ್ಮಣ್ಯ ಕವಿಯ ಕಾಲ ಸುಮಾರು ಕ್ರಿ.ಶ. ೧೬೫೦ ಆಗಿರಬಹುದೆಂದು ತೋರುತ್ತದೆ—ಕ. ಕ. ಚ. ೩-೪೯.

11. ಈ ಕಾವ್ಯವು—ಮುಸ್ಸೂರು ಶಿವರಾಮಯ್ಯನವರಿಂದ (ಉಡುಪಿಯ ಮಿಷನ್ ಹೈಸ್ಕೂಲಿನ ಕರ್ಣಾಟಕ ಪಂಡಿತರು) ಪರಿಶೋಧಿತವಾಗಿ ಪ್ರಕಟೀಕರಿಸಲ್ಪಟ್ಟಿತು; ೧೯೧೩ರಲ್ಲಿ.
ಶ್ರೀ 'ಸದಾನಂದ' ಮುದ್ರಾಶಾಲೆಯಲ್ಲಿ ಮುದ್ರಿತ. ಬೆಲೆ: ರೂ. ೨-೧-೦.

ಉದಾಹರಣೆಗಾಗಿ ಕೆಲವು ಅಂಶಗಳನ್ನು ಮಾತ್ರ ಈ ಕೆಳಗೆ ಉಲ್ಲೇಖಿಸಲಾಗಿದೆ :

೧) ರಾವಣನು ಸೀತಾಸ್ವಯಂವರಕ್ಕೆ ಹೋಗಿ, ಬಿಲ್ಲಡಿಯಲ್ಲಿ ಬಿದ್ದ ಭಂಗದ ಪ್ರಕರಣ.[1]

೨) ವಾಲಿವಧಾನಂತರ ಸುಗ್ರೀವ ಪಟ್ಟಾಭಿಷೇಕಕ್ಕೆ ರಾಮನು ಲಕ್ಷ್ಮಣನನ್ನು ಕಳುಹಿಸಿಕೊಡುವ ವಿಚಾರ.[2]

೩) ರಾವಣನ ಹೋರಾಟದ ಗುರಿಯೆಲ್ಲವೂ ರಾಮಾನುಗ್ರಹ ಸಂಪಾದನೆಯೇ–ಎಂಬ ಅಂಶ.[3]

೪) ಹನುಮಂತನನ್ನು–ಮೈನಾಕ ಸಂದರ್ಶನದ ಮೊದಲೇ_ಸುರಸೆಯ ಮೂಲಕ ದೇವತೆಗಳು ಪರೀಕ್ಷಿಸುತ್ತಾರೆ.[4]

೫) ರಾವಣನ ಶಯ್ಯಾಗೃಹದಲ್ಲಿ ಕಂಡ ಸ್ತ್ರೀಯು ಸೀತೆಯಲ್ಲವೆಂದು–ಹನುಮಂತನು ಆಕೆಯ ಕಾಲಿನ 'ಕಾಕರೇಖೆ'ಯ ಆಧಾರದಿಂದ ನಿರ್ಣಯಿಸುತ್ತಾನೆ.[5]

೬) ಇಂದ್ರಜಿತುವು ಬ್ರಹ್ಮಾಸ್ತ್ರ ಪ್ರಯೋಗಿಸಿದಾಗ ಬ್ರಹ್ಮನು ಹನುಮಂತನೊಡನೆ ತನ್ನ ಅಸ್ತ್ರದ ಮಹಿಮೆಯನ್ನುಳಿಸಬೇಕೆಂದು ಪ್ರಾರ್ಥಿಸುವುದು.[6]

೭) ಇಂದ್ರಜಿತು ಹನುಮಂತನ ಮೈಗೆ ಬೆಂಕಿ ಇರಿಸಿದ್ದು (ಇದರಿಂದ ಹನುಮಂತನು 'ಲಂಕಾ ದಹನ'ಕ್ಕೆ ಮನ ಮಾಡಿದ್ದು)[7]

೮) ಅಂಗದನು ತನ್ನ ಬಾಲಾಸನದ ಮೇಲೆ (ರಾವಣಾಸ್ಥಾನದಲ್ಲಿ) ಮುಂಡಿಸಿದ್ದು.[8]

೯) ಅತಿಕಾಯನ ಮೋಕ್ಷಾಕಾಂಕ್ಷೆ.[9]

೧೦) ಕಾಲನೇಮಿ ವೃತ್ತಾಂತ.[10]

೧೧) ರಾವಣ ಅಭಿಚಾರಾಧ್ವರ.[11]

೧೨) ಅಂಗದನಿಂದ ಮಂಡೋದರಿಯ ವಸ್ತ್ರಾಪಹಾರ ಪ್ರಯತ್ನ (ರಾವಣನ ಯಜ್ಞ ಭಂಗದ ಉದ್ದೇಶಕ್ಕಾಗಿ)[12]....
...................ಇತ್ಯಾದಿ...........

ಕಥೆಯ ವಿಚಾರದಲ್ಲಿ ತೊರವೆ ರಾಮಾಯಣವನ್ನು ಬಹುಮಟ್ಟಿಗೆ ಅನುಸರಿಸಿದ, 'ಹನುಮದ್ರಾಮಾಣ'ವು 'ಕಥನ' (ರೀತಿ, ಶೈಲಿ) ಕ್ರಮದಲ್ಲಿಯೂ ಆ ಕೃತಿಯಿಂದ ಪ್ರಭಾವಿತವೆನ್ನುವುದಕ್ಕೆ ಕೆಲವೇ ಉದಾಹರಣೆಗಳು ಸಾಕಾದೀತು.

| | ತೊರವೆ ರಾಮಾಯಣ | ಹನುಮದ್ರಾಮಾಯಣ |
|---|---|---|
| ೧. | ಕುಂಭಕರ್ಣನು–ನಿದ್ರೆಯು– | |
| | 'ಭರದಲಿರ್ದನು ನೀಲಗಿರಿಯನು | 'ನೀಳಗಿರಿ ನಿದ್ದೆಗೆಳಸಿ ಕ |
| | ಸರಸಿಜೋದ್ಭವ ಕಡೆದು ಕೆಡಹಿದ ತೆರದಲಸುರೇಂದ್ರ[13]' | ರಾಳತರಾಕೃತಿಯನಾಂತು ಮಲಗಿರ್ಪುದೆನಲ್....[14] |

---

| | ಅ. | ಪ. | ಹನುಮದ್ರಾಮಾಯಣ | ಆಶ್ವಾಸ. | ಪದ್ಯ. |
|---|---|---|---|---|---|
| 1. | ೬ | ೧೦೨ | 7. | ೬ | ೫೨ |
| 2. | ೨ | ೧೮೧ | 8. | ೮ | ೩೨ |
| 3. | ೩ | ೯೦. ೧೩-೨೫. | 9. | ೯ | ೧೩೩ |
| 4. | ೫ | ೭ | 10. | ೧೧ | ೫೮ |
| 5. | ೫ | ೬೧ | 11. | ೧೩ | ೭೧ |
| 6. | ೬ | ೪೪ | 12. | ೧೩ | ೧೫. |

ಈ ಕಥಾವೈಶಿಷ್ಟ್ಯಗಳೆಲ್ಲವೂ–ತೊ. ರಾ. ದಲ್ಲಿವೆ. ಇವು ಯಾವುವೂ ಆದಿಕಾವ್ಯದಲ್ಲಿಲ್ಲ.–'ಕೃತಿಯ ಕಥಾವೈಶಿಷ್ಟ್ಯಗಳು' ಪ್ರಕರಣ_ನೋಡಿರಿ.

| | ತೊ. ರಾ. | | | ಹನುಮದ್ರಾಮಾಯಣ | | |
|---|---|---|---|---|---|---|
| | ಕಾಂ. | ಸಂ. | ಪ. | | ಆಶ್ವಾಸ. | ಪದ್ಯ. |
| 13. | ೫ | ೨ | ೩೮ | 14. | ೫ | ೫೨ |

| | | |
|---|---|---|
| ೨. | ಹರಿಕಥಾ ಸಂಗತಿಯ ಚಿತ್ರೋ | ಹರಿನಾಮಕೀರ್ತನೆಗಳಿಂ |
| | ತ್ಕರದ ಮಯಭಿತ್ತಿಗಳ ನೋಡಲು | ಹರಿದಾಸರ ನಾಟ್ಯದಿಂದೆ ಬೃಂದಾವನದಿಂ |
| | ಹರಿಯ ನಾಟಕದಂಗನಾವಿಭ್ರಮವಿಲಾಸ ಮಯ.... | ಕರವೆಸೆವ ಗೃಹಮನೀಕ್ಷಿಸಿ |
| | ಹರಿಯ ಗೀತದ[1]............... | ಕರಿವರದನ ಭಕ್ತನೀತನೆಂದು ಮರಳ್ದಂ[2] |
| ೩. | ಅರಸುಗಳೊಳಧಿರಾಜ ಚಕ್ರೇ | ಜನಕಧರಾನಾಥನೊಳಂ |
| | ಶ್ವರನ ಬಸುರಲಿ ಬಂದು ಲಕ್ಷ್ಮೀ | ಜನಿಸುತೆ ಜಗದೀಶನರಸಿಯೆನಿಸುತ ಮಿರ್ಪ |
| | ವರನ ತೂಕದ ಸಾರ್ವಭೌಮನ ಕೈವಿಡಿದು ಕಡೆಗೆ | ಳ್ಗಿನಿತೊಂದು ಬವಣೆಯನುಚಿತ |
| | ನಿರಯ ನಿಳಯನ ನಿಳಯದಲಿ ಕೈ | ಮೆನುತಂ ಮರುಗುತ್ತಮಿರ್ದನಾಮರದುದಿಯೊಳ್[4] |
| | ಸೆರೆಗೆ ಸಂದೌ ತಾಯೆಯೆಂದಿಳೆ | |
| | ಗುರುಳಿಸಿದನಶ್ರುಗಳನಾ ಕೈಯೊಡನೆ ಕಲಿಹನುಮ.[3] | ನೋಡಿದನುರುದೇವತೆಯಂ |
| ೪. | ದೇವಿಯಿದ್ದಳು ಬಾಗಿದೊಡಲಿನ, | ಬಾಡಿದ ಸಸಿವೊಗದ, ಬತ್ತಿದೊಡಲಿನಸಲೆ ಕ |
| | ಕೈವೆರಳ ಹತ್ತುಗೆಯ ಕದಪಿನ, | ಯ್ಗೂಡಿದ ಗಲ್ಲದ ದುಃಖಿವೆ |
| | ಜೀವನವನುದುಗಲಿಪನಯನದ, ಮಣಿದ ಮಸ್ತಕದ.[5] | ಕೋಡಿವರಿವ ನೇತ್ರಜಲದ ಜನಕಾತ್ಮಜೆಯಂ[6] |
| ೫. | ಕುಲದಲ್ಪನೆ ನೀನು ಮುನಿಕುಲ | ನೀನೇನಾದೊಡೆಯುಂ ಮತಿ |
| | ತಿಲಕ ಪೌಲಸ್ತ್ಯಜನಲಾ ನಡ | ಹೀನನೆ ಪೌಲಸ್ತ್ಯ ಮುನಿಪಸುತನಲ್ತೆ ; ಮಹಾ |
| | ವಳಿಯಲಧಮನೆ ನೀನು ಶಿವ ಪೂಜಾಪ್ರಸಿದ್ಧನಲ....[7] | ಜ್ಞಾನಿಯಲಾ ಶ್ರುತಿ ನಿನ್ನಾ |
| | | ಧೀನಮಲಾ ಶಂಕರಾರ್ಚಕಂ ನೀನೆಯಲಾ.[8] |
| ೬. | ನಿನಗೆ ನಾಚಿಕೆಯಾದಡದಕೇ | ನಿನಗಿಂ ಲಜ್ಜೆಯದಾದೊಡೆ |
| | ನೆನಗೆ ನೇಮಿಸು ಜಗದಮಾತೆಯ | ಮೆನಗಪ್ಪಣೆಗೊಟ್ಟು ಕಳಿಪೆಯವನೀಸುತೆಯಂ |
| | ನಿನಕುಲೇಂದ್ರಂಗಿತ್ತು ಮನ್ನಿಸಿಕೊಂಡು ಬಹೆಬಳಿಕ[9] | ಇನಕುಲತಿಲಕಂಗೊಪ್ಪಿಸಿ |
| | | ವಿನಯದಿನೆಳ್ತರ್ಪೆನರಸಬಿಡು ಮೂರ್ಖತೆಯಂ[10] |
| ೭. | ಏನೆಲವೊ ನಿನಗಿನಿತು ಹೊಗಳುವ | ಎಲವೊ ನಿನಗೀವಿದ್ಯೆಯ |
| | ಡೇನಹನೊ ನೀನಾ ನರೇಂದ್ರನ | ಕಲಿಸಿದ ಖಳನಾವನೆಮ್ಮ ಸತ್ಪೋನ್ನತಿಯಂ |
| | ಸೂನುವೋ ಮೊಮ್ಮಗನೋ ಮರಿಮಗನೋ ವಿಚಾರಿ | ಸಲೆ ಪಳಿದುಂ ವಾನರರ |
| | ಸಲು....[11] | ಗ್ಗಳಿಕೆಯನುಂ ಪೇಳಲವರ ವಂಶೋದ್ಭವಿಯೇ[12] |
| ೮. | ಮುಖ ಚತುಷ್ಟಯದಾತನಾರೀ | |
| | ಮುಖಗಳೈದರವುಹಿಮನಾರೀ | ಮೂರಯ್ದು ನಾಲ್ಕುಪತ್ತರ |
| | ಮುಖವೆರಡು ಮೂರಾರು ನೋಡಲು ಹತ್ತುಪರಿ ಯಂತ | ಮೋರೆಯರಿಲ್ಲೆಪ್ಪರಿವರೊಳವನೀಸುತೆಯಂ |

---

| | ತೊ. ರಾ. | | | | ಹನುಮದ್ರಾಮಾಯಣ | |
|---|---|---|---|---|---|---|
| | ಕಾಂ. | ಸಂ. | ಪ. | | ಆಶ್ವಾಸ. | ಪದ್ಯ. |
| 1. | ೫ | ೨ | ೫೪ | 2. | ೫ | ೬೫ |
| 3. | ೫ | ೩ | ೨೮ | 4. | ೫ | ೮೯ |
| 5. | ೫ | ೩ | ೩೩ | 6. | ೫ | ೯೬ |
| 7. | ೬ | ೨ | ೨೪ | 8. | ೭ | ೫೪ |
| 9. | ೬ | ೨ | ೩೩ | 10. | ೭ | ೫೯ |
| 11. | ೬ | ೨ | ೩೪ | 12. | ೭ | ೬೨ |

ಮುಖಗಳಿವೆ ತಾನಿವರೊಳಗೆ ಶಶಿ
ಮುಖಿಯ ಮಾಯೆ ಬಳಸಿ ರಜನೀ
ಮುಖದೊಳಗೆ ತಂದಧನು ರಕ್ಕಸರಿವರೊಳಾರೆಂದ[1]

ಚೋರತ್ವದಿಂದೆ ಯತ್ರಾ
ಕಾರಂದಳೆದುಯ್ದು ತಂದ ರಕ್ಕಸನಾವೊಂ[2]

ಇನ್ನೂ ಕೆಲವು ಉದಾಹರಣೆಗಳು :

| ತೊರವೆ ರಾಮಾಯಣ | | | ಹನುಮದ್ರಾಮಾಯಣ | |
|---|---|---|---|---|
| ಕಾಂ. | ಸಂ. | ಪದ್ಯ. | ಅಶ್ವಾಸ | ಪದ್ಯ |
| ೪ | ೧ | ೧೯–೨೦ | ೨ | ೩೫–೩೬ |
| ೪ | ೨ | ೧೧ | ೨ | ೬೩ |
| ೪ | ೨ | ೨೨ | ೧ | ೨೫ |
| ೪ | ೪ | ೩೪ | ೨ | ೧೬೪ |
| ೪ | ೧೨ | ೨೭ | ೪ | ೧೪೬ |
| ೫ | ೩ | ೭೯ | ೫ | ೧೩೮ |
| ೫ | ೩ | ೯೩ | ೫ | ೧೪೮ |
| ೫ | ೬ | ೩೩ | ೬ | ೪೪ |
| ೫ | ೭ | ೩೯ | ೬ | ೭೯ |
| ೫ | ೭ | ೪೦ | ೬ | ೮೧ |
| ೫ | ೭ | ೪೧ | ೬ | ೮೦ |
| ೬ | ೨ | ೪೬ | ೭ | ೬೪ |
| ೬ | ೩ | ೩೬ | ೭ | ೮೩ |
| ೬ | ೪ | ೨೨ | ೭ | ೯೯ |
| ೬ | ೧೦ | ೨೭ | ೮ | ೩೫ |
| ೬ | ೧೦ | ೪೦ | ೮ | ೪೫ |
| ೬ | ೧೦ | ೪೧ | ೮ | ೪೬ |
| ೬ | ೧೦ | ೪೨ | ೮ | ೪೭ |
| ೬ | ೫೫ | ೫೪ | ೧೫ | ೮೧ |
| ೬ | ೫೫ | ೬೦ | ೧೫ | ೯೦ |

ಹೀಗೆ, ಇನ್ನೂ ಸುಮಾರು ೩೦ ಪದ್ಯಗಳಲ್ಲಿ, ಒಟ್ಟು ೮೫ ಪದ್ಯಗಳಲ್ಲಿ ತೊ. ರಾ. ದ ಸ್ಪಷ್ಟ ಪ್ರಭಾವವನ್ನು ಗುರುತಿಸಬಹುದು.

---

| | ತೊ. ರಾ. | | | | ಹನುಮದ್ರಾಮಾಯಣ | |
|---|---|---|---|---|---|---|
| | ಕಾಂ. | ಸಂ. | ಪದ್ಯ. | | ಅಶ್ವಾಸ. | ಪದ್ಯ. |
| 1. | ೬ | ೧೦ | ೨೨ | 2. | ೮ | ೪೩ |

## 'ಕಪೋತ ಚರಿತೆ' ಮೇಲೆ ತೊರವೆ ರಾಮಾಯಣದ ಪ್ರಭಾವ

'ಕಪೋತಚರಿತೆ'ಯು "ಇನ್ನೂ ಮುದ್ರಿತವಾಗಿಲ್ಲದ ಕೃತಿ."[1] ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಈ ಕೃತಿಯ ೩ ತಾಳೆಗರಿ ಪ್ರತಿಗಳಿವೆ.[2]

ಈ ಕಪೋತ ಚರಿತೆಯಲ್ಲಿ ಒಟ್ಟು ೧೨೭ ಭಾಮಿನೀ ಷಟ್ಪದಿಗಳಿವೆ. ಇದರ ಕರ್ತೃ ವಿಚಾರ ಕಾಲ–ಏನೂ ತಿಳಿಯದು.[3] ಕಾವ್ಯದಲ್ಲಿ ಆ ಕುರಿತು ಸ್ಪಷ್ಟ ಸೂಚನೆಗಳೂ ದೊರೆಯುವುದಿಲ್ಲ. ಆದರೂ, ಕೃತಿಯ ಕೊನೆಯ ಪದ್ಯವು–

ರವಿಸುತನ ನುಡಿಗಳಿಗೆ ಹರುಷಿಸಿ
ರವಿಕುಲಾಂಬುಧಿ ಸೋಮನೆನಿಪಾ
ಭವ ವಿದೂರನು "ವೆಂಕಟಾಚಲವಾಸನತಿಮುದದಿ"–

ಎಂದಿದ್ದು, ಇದರಲ್ಲಿ 'ವೆಂಕಟಾಚಲವಾಸ' ಎನ್ನುವುದು ಕವಿಯ ಇಷ್ಟದೈವವಾಗಿರಬಹುದೆಂದು ಊಹಿಸಬಹುದಾಗಿದೆ.

೧೬ನೆಯ ಪದ್ಯದಲ್ಲಿ–

ಕರುಗಳನು ಕಾವವ ದಿವಾಣದ
ಭರವಸದ ಕಾರ್ಯವನು ಕೇಳ
ಲ್ಕರಿವನೇ ?............................ಎಂದಿದೆ.

ಇದರಿಂದ, ಮೈಸೂರು ಸಂಸ್ಥಾನದಲ್ಲಿ 'ದಿವಾಣ'ರ ಆಡಳಿತದ ಪ್ರಭಾವ ಮತ್ತು ಪ್ರಸಿದ್ಧಿ ತುಂಬಿದ್ದ ಕಾಲದಲ್ಲಿ ಕವಿಯು ಬಾಳಿದವನಾಗಿರಬೇಕು. ಬಹುಶಃ ೧೯ನೆಯ ಶತಕದ ಉತ್ತರಾರ್ಧದಲ್ಲಿ ಈ ಕೃತಿ ರಚಿತವಾಗಿದ್ದಿರಬಹುದು ಎಂದು ಮಾತ್ರ ಪ್ರಕೃತದಲ್ಲಿ ಹೇಳಬಹುದಾಗಿದೆ.

'ಕಪೋತಚರಿತ'ಕ್ಕೆ ಪ್ರೇರಣೆಯು ರಾಮಾಯಣದ್ದೆನ್ನುವುದು ಸ್ಪಷ್ಟ. ವಾ. ರಾ. ಯುದ್ಧಕಾಂಡದಲ್ಲಿ, ವಿಭೀಷಣನು ರಾಮನಲ್ಲಿಗೆ ಶರಣು ಬಂದಾಗ, ಸುಗ್ರೀವನು ಅವನ ವರ್ತನೆಯ ಬಗ್ಗೆ ಸಂದೇಹ ವ್ಯಕ್ತಪಡಿಸುತ್ತಾನೆ. ಆಗ ರಾಮನು 'ಕಪೋತ ಚರಿತೆ'ಯನ್ನು ನೆನಪಿಸಿ, ಶರಣಾಗತ ರಕ್ಷಣೆಯ ಹಿರಿಮೆಯನ್ನು ಸುಗ್ರೀವನಿಗೆ ಶ್ರುತಪಡಿಸಿ, ವಿಭೀಷಣನನ್ನು ಸ್ವೀಕರಿಸುತ್ತಾನೆ.[4]

ಕುಮಾರ ವಾಲ್ಮೀಕಿಯೂ ತನ್ನ ಕೃತಿಯಲ್ಲಿ, ರಾಮನು ಸುಗ್ರೀವನಿಗೆ:

"ಕೇಳಿದರಿಯಾ ವಿನುತ ವಿಮಳ ಕಪೋತ ಚರಿತೆಯನು" ಎಂದು ಸೂಚಿಸಿ, ಶರಣಾಗತ ರಕ್ಷಣೆಗೆ ಪ್ರತಿಜ್ಞಾಬದ್ಧನಾಗುತ್ತಾನೆ.[5]

---

1. ಈ ಕೃತಿಯ ತಾಳೆಗರಿ ಪ್ರತಿಗಳನ್ನು ನನ್ನ ಅಭ್ಯಾಸಕ್ಕೆ ಒದಗಿಸಿ ಸಹಕರಿಸಿರುವ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಡಾ. ಹಾ. ಮಾ. ನಾಯಕ ಮತ್ತು ಶ್ರೀ ಬಿ. ಎಸ್. ಸಣ್ಣಯ್ಯನವರಿಗೆ ನಾನು ಕೃತಜ್ಞ.
2. ಕೆ. ೫೫೧, ಕೆ. ೫೫೩ ಮತ್ತು ಕೆ. ೬೭೩ನೇ ಸಂಖ್ಯೆಯ ಪ್ರತಿಗಳು.
3. ಕ. ಕ. ಚ. ದಲ್ಲಿ ೨-೫೪೦ರಲ್ಲಿ ನಂಜ (ವೀರಶೈವ) ಕವಿ (ಕಾಲ ಸು. ೧೭೦೦)ಯ ಸಾಂಗತ್ಯರೂಪದ ಕಪೋತ ವಾಕ್ಯ.
   ಕ. ಕ. ಚ. ದಲ್ಲಿ ೩-೧೦೦ರಲ್ಲಿ ನಂಜಯ್ಯ (ಕಾಲ ಸು. ೧೭೫೦) ರಚಿತ 'ಕಪೋತವಾಕ್ಯ' (ಯಕ್ಷಗಾನ)
   ಕ. ಕ. ಚ. ದಲ್ಲಿ ೩–೩೧೦ರಲ್ಲಿ 'ಗುರುಸಿದ್ಧವೀರನ ಚರಣವ ಬಲಗೊಂಬೆ' ಎಂಬ ಉಲ್ಲೇಖವಿರುವ ಸಾಂಗತ್ಯ-ಛಂದಸ್ಸಿನ ೧೨೦ ಪದ್ಯಗಳಿರುವ 'ಕಪೋತ ಪಕ್ಷಿಚಾರಿತ್ರ';–ಹೀಗೆ ಮೂರು ಕೃತಿಗಳ ಕುರಿತು ಇದೆ. ಆದರೆ ಪ್ರಕೃತ ನಮ್ಮ ಪರಿಶೀಲನೆಗೊಳಗಾದ, ಕಪೋತ ಚರಿತೆಯೇ ಬೇರೆಯಾಗಿದೆ.
4. ಶ್ರೂಯತೇ ಹಿ ಕಪೋತೇನ ಶತ್ರುಃ ಶರಣಮಾಗತಃ
   ಅರ್ಚಿತಶ್ಚ ಯಥಾನ್ಯಾಯಂ ಸ್ವೈಶ್ಚ ಮಾಂಸೈರ್ನಿಮಂತ್ರಿತಃ
   ಸಹಿ ತಂ ಪ್ರತಿಜಗ್ರಾಹ ಭಾರ್ಯಾಹರ್ತಾರಮಾಗತಮ್...........
   ವಾ. ರಾ. ಯುದ್ಧಕಾಂಡ ೧೮-೨೪, ೨೫.
5. ತೊ. ರಾ. VI ೩-೧೯.

ತೊ. ರಾಮಾಯಣದ ಯುದ್ಧಕಾಂಡದ ಸಂಧಿ ೩ನೆಯ ಪದ ೧೫ರ ಪದದಲ್ಲಿ 'ಕಪೋತ ಚರಿತೆ'ಯ ಪ್ರಸ್ತಾವವಿದ್ದು, ಈ 'ಕಪೋತ ಚರಿತೆ'ಯ ಪ್ರತಿಯಲ್ಲಿ—[1]

'ಸಂಧಿ ೩ನೆಯ ಪದ ೧೫ರ ಮೇಲೆ, ವಿಭೀಷಣನು ಶ್ರೀರಾಮ ದೇವರ ಪಾದಾಕ್ರಾಂತನಾಗುವಂದು, ಸೂರ್ಯಕುಮಾರನಾದ ಸುಗ್ರೀವನಿಗೆ ಶ್ರೀ ರಾಮದೇವರು ಅಪ್ಪಣೆ ಕೊಡುತ್ತಿದ್ದರು'—ಎಂದು ಇದೆ. ಇದರಿಂದ ಈ ಕೃತಿಯು ತೊ. ರಾ. ಕ್ಕೆ ಪೂರಕವಾಗಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ತೊ. ರಾ. ದ ಒಂದು ಪ್ರತಿಯಲ್ಲಿ[2] 'ಕಪೋತ ಚರಿತೆ'ಯು ಇರುವುದೂ ಅದರ ಪ್ರಭಾವ—ಸಂಬಂಧವನ್ನು ಖಚಿತಗೊಳಿಸುತ್ತದೆ.

ಪ್ರಭಾವ ಸೂಚಕವಾದ ಕೆಲವು ಪದ್ಯಗಳನ್ನು ಪರಿಶೀಲಿಸಬಹುದು :

| | ತೊರವೆ ರಾಮಾಯಣ | ಕಪೋತ ಚರಿತೆ |
|---|---|---|
| ೧. | ಹರಿಬಲಾಂಬುಧಿ ಪಾಲ್ಗಡಲ ವೈ | ತಿಳಿಯಲೀತನ ಕಣ್ಗೆ ಹರಿಬಲ |
| | ಸಿರಿಯವೊಲು ರಘುನಾಥ ಲಕ್ಷ್ಮೀ | ಜಲಧಿ ಕ್ಷೀರಾರ್ಣವದವೊಲ್ ವರ |
| | ವರನವೊಲು ಭುಜ ಲಕ್ಷ್ಮಿ ಲಕ್ಷ್ಮೀ ದೇವಿಯಂದದಲಿ | ನಳಿನ ಮಿತ್ರನ ಕುಲಜ ರಘುಪತಿ ವಿಶ್ವಪತಿಯಂತೆ |
| | ವರ ಸುಮಿತ್ರಾಸೂನು ಶೇಷನ | ಬಳಿಕ ರಾಮನ ಬಾಹುಭಾರ್ಗವಿ |
| | ಪರಮ ವೈಭವದಂತೆ ಮಾರುತಿ | ಲಲಿತ ಲಕ್ಷ್ಮಿಯತೆರದಿ ನಿಜಕರ |
| | ಗರುಡನವೊಲೆಸೆದಿರ್ದನಿದಿರಿನೊಳಾ ವಿಭೀಷಣನ[3] | ತಳೆದ ಧನುವೇ ಶಾರ್ಙ್ಗ ವೆಂಬೋಲ್ ಮೆರೆದುದೇನೆಂಬೆ[4] |
| | | ವರಸುಮಿತ್ರಾಸೂನು ಫಣಿಪನ |
| | | ತೆರದಲನಲಸಖಾತ್ಮಜನು ಖಗ |
| | | ವರನ ರೂಪಿನಲಬುಜ ಸಖಸುತನಬುಜ ಸಖನಂತೆ[5] |
| ೨. | ವರದ ಸದ್ಯೋಜಾತ ಘನ ತ | ಎಸೆವ ನಾಲ್ವರಮಾತ್ಯರೀತಗೆ |
| | ತ್ಪುರುಷ ನಿರ್ಮಳ ವಾಮದೇವ | ಎಸೆವ ವೈಷ್ಣವ ಪೌಳಿಸಣಿ ಕಾ |
| | ಸ್ಫುರದಘೋರ ಮಹಾಮಹೇಶಾನ ಪ್ರವಿಸ್ತರದ | ಣಿಸಿದನೆಂತೆನೆ ವಿಮಲ ಸದ್ಯೋಜಾತ ಮೊದಲಾದ |
| | ಹರನವೊಲು ನಾಲ್ದೆಸೆಯ ಮಂತ್ರೀ | ಹಸನೆನಿಪ ಪಂಚಾಸ್ಯನೋಲ್ ಕಾ |
| | ಶ್ವರರರ ಸಹಿತ ವಿಭೀಷಣನು ಭಾ | ಣಿಸಿತಲ್ಲೆ ಕಪಿಬಲಕೆ ಕೇಳ್ಳೆ |
| | ಸುರತೆ ಮಿಗಿಲೆಸೆದಿರ್ದನಾ ಕಪಿಬಲದ ಕಣ್ಮನಕೆ[6] | ಕುಶಕುಮಾರಕ ಸಿನ್ನವನ ಭಾಗ್ಯೋದಯದ ಪರಿಯೆಂದಾ[7] |
| ೩. | ಅವಧರಿಸು ನೃಪಸೂನು ವರ ವೈ | ಯೇನನೆಂಬೆನು ಭಕ್ತಜನ ಸಂ |
| | ಷ್ಣವದ ವಿಮಲ ಪ್ರಭೆಗೆ ಭುವನದೊ | ತಾನನಂಘ್ರಿ ಸರೋಜಯುಗಳವ........... |
| | ಳವಧಿಯಾವುದು ಮುಸುಕಿ ಕೊಂಡುದು ನಿಮ್ಮವರ ಬಲವ | ............ |
| | | ವಾನರೇಂದ್ರನ ಬಲಜಲಧಿ ಸಮ |
| | ತವಕದಲಿ ತುದಿ ಪಾಳಯದ ಕಪಿ | ರಾನುಭಾವವ ನಾಂತುನಿಂದುದು ತರುಗಿರಿಯ ಪಿಡಿದು.[8] |

---

1. ಕನ್ನಡ ಅಧ್ಯಯನ ಸಂಸ್ಥೆಯ ಕೆ. ೫೫೧ರ ಪ್ರತಿ.
2. ಇದೇ. ೬೩೨ರ ಪ್ರತಿ.

ತೊ. ರಾ.

3. ೬-೩-೩
6. ೬-೩-೪

ಕಪೋತ ಚರಿತೆ

4. ಪದ್ಯ ೮.
5. ಪದ್ಯ ೯.
7. ಪದ್ಯ ೧.
8. ಪದ್ಯ ೧೨.

ನಿವಹ ಭೋಯೆಂದೆದ್ದು ಮುತ್ತಿದ
ರವನಿಜೌ ಘದಲಧಿಕ ನಾರಯಣ ಪರಾಯಣನ.[1]

೪. ಒಸೆದು ಹೊಗಳುವ ಶ್ರುತಿತತಿಯನಾ
ಲಿಸದ ದೈವದ ಕರ್ಣದಲಿ ಸೊಗ
ಯಿಸಿತಲ್ಲೆ ಶರಣನ ಸುಧಾ ಸಂಭೃತವಜೋ ಲಹರಿ
ಎಸಳು ಗಂಗಳ ನುರು ಕೃಪೋದಯ
ದೆಸಕದಲಿ ನೋಡಿದನು ನೂತನ
ಪಶುಪತಿಯವೊಲು ಮೆರೆವ ತೇಜೋಮಯ

ಅನವರತ ನುತಿಸೈವ ಶ್ರುತಿಗಳ
ಮನವಚನ ಕಾಯದಲಿ ಗಣಿಸದ
ವನರುಹಾಕ್ಷನ ಕರ್ಣಯುಗಳಕೆ ಲಾಲಿತಮುದಾಗೆ,
ದನುಜ ವಾಕ್ಯ ಸುಧಾರಸಕೆ ಮಿಗೆ
ಮನದೊಳಗೆ ಸಂಭ್ರಮಿಸಿ ನೋಡಿದ
ಘನ ಕೃಪಾದೃಷ್ಟಿಯಲಿ ಪಾಲಿಸೆನೆಂಬತನಕದಲಿ.[3]

ವಿಭೀಷಣನ[2]

೫. ತುಂಗಬಲ ಬಳಿಕಾಗಲಾ ಗಗ
ನಾಂಗಣದ ಗಮನದ ನಿಜೈಕ್ಯನ
ನಿಂಗಿತದಲರಿದರಿದನಂದಿನಪೂರ್ವ ದರ್ಶನವ
ಹೊಂಗಿದಾನಂದಾಶ್ರುಗಳಲಾ..........[4]

..........ಅನಿಲಜನ ನೀಕ್ಷಿಸ
ಲವಕೃಪಾನಿಧಿಯಿಂಗಿತವ ನೆರೆ ತಿಳಿದು ಮನದೊಳಗೆ....
ತವಕದಿಂಲಂಘಿಸಿದನವ ನಭಕಾಗಿ ಸಂತಸದಿ...
ಚಂಡ ವಿಕ್ರಮ ಹನುಮನಾ ದೋ
ರ್ದಂಡ ಬಲ ಸಾಹಸಿಯ ಕಾಣುತ
ಖಂಡಿತಾಮೋದದಲಿ ಹರುಷಾಶ್ರುಗಳ ಹೊನಲಿಡಲು[5]

**ದಾಸ-ಸಾಹಿತ್ಯದಲ್ಲಿ ತೋರವೆ ರಾಮಾಯಣದ ಸುಳವು-ಹೊಳವುಗಳು**

ಹರಿಭಕ್ತಿ ಪಂಥಕ್ಕೆ ಸಂಪೂರ್ಣವಾಗಿ ನಿಷ್ಠವಾದ ಕುಮಾರ ವಾಲ್ಮೀಕಿಯು "ರಾಮಾಯಣ"ವು ಮಾಧ್ವ ತತ್ತ್ವ ಮತ್ತು ಆಚಾರಧರ್ಮವನ್ನು ಕನ್ನಡದಲ್ಲಿ ಪ್ರಚಾರಿಸಿದ ದಾಸವಾಙ್ಮಯದ ಮೇಲೆ ತನ್ನ ಛಾಯೆಯನ್ನು ಬೀರಿದ್ದರೆ

---

| | ತೊ. ರಾ. | | | | ಕಪೋತ ಚರಿತೆ |
|---|---|---|---|---|---|
| | ಕಾಂಡ. | ಸಂಧಿ. | ಪದ್ಯ. | | ಪದ್ಯ. |
| 1. | ೬ | ೩ | ೫ | | |
| 2. | ೬ | ೩ | ೯ | 3. | ೨೦ |
| 4. | ೬ | ೩ | ೧೧ | 5. | ೨೧-೨೨ |

ಮೇಲಿನ ಉದಾಹರಣೆಗಳಿಂದಲೇ 'ಕಪೋತ ಚರಿತೆ'ಯು ಹೇಗೆ, ಯಾವ ಪ್ರಮಾಣದಲ್ಲಿ 'ತೊ. ರಾ.'ವನ್ನು ಅವಲಂಬಿಸಿದೆ-ಎನ್ನುವ ಅಂಶ ಮನವರಿಕೆಯಾದೀತು. ಇಷ್ಟಲ್ಲದೆ, ಇನ್ನಷ್ಟು ಉದಾಹರಣೆಗಳನ್ನು ಹೋಲಿಸಿ ನೋಡಬಹುದು:

| ತೊ. ರಾ. | | | ಕಪೋತ ಚರಿತೆ |
|---|---|---|---|
| ಕಾಂಡ. | ಸಂಧಿ. | ಪದ್ಯ. | ಪದ್ಯ. |
| ೩ | ೬ | ೫೪ | ೧೦೨ |
| ೩ | ೧೧ | ೨೬ | ೪೦ |
| ೩ | ೧೧ | ೩೧ | ೪೪ |
| ೩ | ೧೧ | ೩೬–೩೭ | ೫೫ |
| ೬ | ೩ | ೨ | ೭ |
| ೬ | ೩ | ೧೨ | ೨೩ |
| ೬ | ೩ | ೧೩ | ೨೪ |
| ೬ | ೩ | ೧೪ | ೨೫ |
| ೬ | ೩ | ೧೫ರಿಂದ ೧೯ | ೨೬ರಿಂದ ೩೦ |

ಆಶ್ಚರ್ಯವಿಲ್ಲ. " ರಾಮ ನಾಮ ಮಹಿಮೆಯನ್ನೇ " ಮುಖ್ಯವಾಗಿರಿಸಿಕೊಂಡ, ಮಾಧ್ವ ದರ್ಶನದ ಹಲವು ಅಂಶಗಳನ್ನೂ ತನ್ನಲ್ಲಿ ಅಂತರ್ಗತಿಸಿಕೊಂಡ[1] ಕುಮಾರ ವಾಲ್ಮೀಕಿಯು ಒಂದು ದೃಷ್ಟಿಯಿಂದ 'ದಾಸ ಕೂಟದವನೇ.'

ಪ್ರಚಲಿತ 'ಹರಿದಾಸ ಸಾಹಿತ್ಯ ' (ಕೀರ್ತನೆಗಳು)ದಲ್ಲಿ ಭಕ್ತಪ್ರಿಯವಾದ ಕೆಲವು " ರಚನೆ "ಗಳಲ್ಲಿ ತೊ. ರಾ. ವೂ ತಾನು ಪಾಲ್ಗೊಂಡಿರಬಹುದೇ ? ಈ ಪ್ರಶ್ನೆಯೇನೂ ನಿರಾಧಾರವಾದುದು ಎಂದೆನಿಸುವುದಿಲ್ಲ.[2] ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

| | ತೊ. ರಾ. ದಲ್ಲಿನ ಉಲ್ಲೇಖಗಳು | ಹರಿದಾಸ ಸಾಹಿತ್ಯದ 'ಭಕ್ತಿವಾಣಿ' |
|---|---|---|
| ೧. | ಬೇಡನು ರಾಮನಾಮದಿಂದಾಗಿ ಕವಿಯಾದ ಕಥೆ[3]– | 'ಆ ಮರ ಈ ಮರ–ಧ್ಯಾನಿಸುತಿರುವಾಗ– |
| | | ರಾಮನೆಂಬೋ ನಾಮವೇ ಕಾಯಿತು.' |
| | | ನೀನ್ಯಾಕೋ ನಿನ್ನ ಹಂಗ್ಯಾಕೋ ರಂಗ– |
| | | ನಿನ್ನ ನಾಮದಬಲವೊಂದಿದ್ದರೆ ಸಾಕೋ[4]– |
| ೨. | ಮೊಳೆತುದಾ ಮನುವಿಂ ವಿಕುಕ್ಷಿಯೊ | ನಾರಾಯಣನೆಂಬ ನಾಮದ ಬೀಜನ |
| | ಳೆಲೆಸಸಿಯನ್ನೈದಿತು, ದಿಲೀಪನೊ | ನಾರದ ಬಿತ್ತಿದ ಧರೆಯೊಳಗೆ.... |
| | ಳೆಲೆವಡೆದುದಾ, ರಘುವಿಂ ಪಲ್ಲವಿಸಿತಜನಿಂದ | ವರಪ್ರಹ್ಲಾದನಿಂದ ಅಂಕುರಿಸಿತು ಅದು...... |
| | ನಳನಳಿಸಿತಜ ಪುತ್ರನಿಂದು | ......... |
| | ತ್ಕಳಿಕೆ ತೋರಿತು, ರಾಮ ನಿನ್ನಲಿ | ವಿಜಯನ ಸತಿಯಿಂದ ಫಲವಾಯಿತು ಅದು... |

1. ಇದೇ ಪ್ರಬಂಧದ 'ಕೃತಿಯ ತಾತ್ತ್ವಿಕ ಅಧ್ಯಯನ'–ಪ್ರಕರಣ ನೋಡಿರಿ.

2. ಪುರಂದರ ದಾಸರು ತೊರವೆಗೆ ಹೋಗಿದ್ದರು, ಅಲ್ಲಿಯ 'ಗಾನಯೋಗಿ' ನರಹರಿಯ ಬಗ್ಗೆ ೩ ಕೀರ್ತನೆಗಳನ್ನು ರಚಿಸಿದ್ದಾರೆ (ಇವುಗಳನ್ನು ಇದೇ ಪ್ರಬಂಧದ ಪುಟ. ೯೮ರಲ್ಲಿ ಉಲ್ಲೇಖಿಸಲಾಗಿದೆ) ಪುರಂದರದಾಸರು ತೊರವೆಯಿಂದ ಆಕರ್ಷಿತರಾದುದಕ್ಕೂ, ಅಲ್ಲಿನ ನರಹರಿಯನ್ನು ಗಾನ (ಕುಮಾರ ವಾಲ್ಮೀಕಿಯ ರಾಮಾಯಣಗಾನ?) ವಿನೋದಿ ಎಂದು ಸ್ತುತಿಸಿರುವುದಕ್ಕೂ ತೊ. ರಾ. ವೇ, ಅದರ ಪ್ರಸಿದ್ಧಿಯೇ ಹಿನ್ನೆಲೆಯಾಗಿರಬಹುದೇ ?–ಈ ಊಹೆ, ಅದಕ್ಕೆ ಸಂಬಂಧಿಸಿದ ಇತರ ಅಂಶಗಳು. ಇವುಗಳ ವಿವೇಚನೆ ಇದೇ ಪ್ರಬಂಧದ 'ಕೃತಿಯ ಕಾಲ, ಪರಿಸರ' ಪ್ರಕರಣದಲ್ಲಿದೆ.

3. ತೊ. ರಾ. I ೨ ೧೧, ೧೨ (ಕನ್ನಡದಲ್ಲಿ ಈ ಕಥೆಯನ್ನು ಪ್ರಚಾರಕ್ಕೆ ಮೊದಲಾಗಿ ತಂದವನು ಕು. ವಾಲ್ಮೀಕಿಯೇ. ಇದೇ ಪ್ರಬಂಧದ 'ಕಥಾ ವೈಶಿಷ್ಟ್ಯಗಳು' ನೋಡಬಹುದು.

4. ಪುರಂದರದಾಸರ ಕೀರ್ತನೆಯಿದು. ಅಧ್ಯಾತ್ಮರಾಮಾಯಣದಲ್ಲಿ (II ೬–೮೦) " ವ್ಯತ್ಯಸ್ತಾಕ್ಷರ " ಎಂದು ಮಾತ್ರ ವಿದೆ. ಆದರೂ " ರಾಮನಾಮ " ಹೇಗೂ, ಯಾರಿಂದಲೂ ಉಚ್ಚರಿಸಲ್ಪಟ್ಟರೂ ಎಲ್ಲರನ್ನೂ " ಕಾಯುತ್ತದೆ" ಎಂಬ ಭಾವನೆಯೇ ಇಲ್ಲಿ ಮುಖ್ಯ. (ವಾಲ್ಮೀಕಿಯು ಕನ್ನಡಿಗನಾಗಿದ್ದನೆಂದು ತರ್ಕಿಸುವುದು ಸರಿಯಾಗದು) ರಾಮನಾಮ ಮಹಿಮೆಯನ್ನು ತಿಳಿಸುವ ಅಸಂಖ್ಯ " ಹೇಳಿಕೆ "ಗಳಿವೆ. ಅವುಗಳಲ್ಲಿ ಒಂದು (ಮಾದರಿಗಾಗಿ) ಕೆಳಗಿದೆ :

ವನೇ ಚರಾಮೋ ವಸುಧಾಂ ಚರಾಮೋ
ನದೀಸ್ತರಾಮೋ ನಭಯಂ ಸ್ಮರಾಮಃ
ಇತಿಬ್ರುವಂತೋ ವಿಪಿನೇ ಕಿರಾತಾಃ
ಮುಕ್ತಿಂಗತಾರಾಮಪದಾನುಷಂಗಾತ್

(ವನದಲ್ಲಿ ತಿರುಗೋಣ, ಭೂಮಿಯಲ್ಲಿ ಚಲಿಸೋಣ, ಭಯವನ್ನು ನೆನೆಯದಿರೋಣ–ಎಂದು ಕಿರಾತರು ಎಂದರೂ " ರಾಮ " ಶಬ್ದದಿಂದ ಉದ್ಧೃತರಾದರು) ಶ್ರೀಮಚ್ಛಂಕರಭಗವತ್ಪಾದರ " ರಾಮಕರ್ಣಾಮೃತ "–ರಾಮ ಮಹಿಮಖಂಡ

ಫಲಸಿತಗ್ಗದ ಸತ್ಯತರುವೆಂದನು ವಸಿಷ್ಠಮುನಿ.[1]

ಅಜಾಮಿಳ ತಾನುಂಡು ರಸ ಸವಿದ.........[5]

೩. ಹಡೆದಡೆ ಇವನ ಹೆಸರಿಡಬೇಕು...[2]
ಮಕ್ಕಳ ಹೆತ್ತರೆ ಈತನ ಹೆಸರಿಡಲುಬೇಕು...[3]
ರವಿಸುತಾದ್ಯರು ತನುಜರನು ಹೆಸರಿಟ್ಟಡೆಯು ಬಿಡೆ
ಹಾನಕಿಯ....[4]

ಮೋಸ ಮಾಡುವ ಹೆಸರು ಮಗನಿಗಿಡಬೇಕು....
ಧರ್ಮವೇ ಜಯವೆಂಬ ದಿವ್ಯಮಂತ್ರ....[6]

೪. ನುಡಿಯೆ ನಾಲಗೆಯಿಲ್ಲ....[7]

ಬಿನ್ನಹಕೆ ಬಾಯಿಲ್ಲವಯ್ಯಾ...[8]

೫. ಸಿರಿಹರಿಪರಾಯಣರೇನು ಜಗದಲಿ ಧನ್ಯರೋ....[11]

ಸಿರಿಹರಿಬಕುತರೇನು ಧನ್ಯರೋ....
ಹರಿಹರಿ ವಾಸುದೇವಾಯ ನಮಃ[9]

೬. ರಕ್ಷಿಸೆನ್ನನನಾಥಬಂಧುವೆ
ರಕ್ಷಿಸೈ ಕಾರುಣ್ಯಸಿಂಧುವೆ....[12]

ರಕ್ಷಿಸೈ ಅನಾಥ ಬಂಧು
ಕಾರುಣ್ಯಸಿಂಧು ರಕ್ಷಿಸೈ ಅನಾಥಬಂಧು[10]

೭. ದೇವ ನಿಮ್ಮಯ ವ್ಯೆಸಿರಿಯ ಸೊಬ
ಗಾವ ದೇವರಿಗುಂಟು ?....[13]

ಈ ಪರಿಯ ಸೊಬಗಾವ ದೇವರೊಳು ನಾ
ಕಾಣೆ....[14]

೮. ........ತೊಡೆಯೊಳ
ಗಿರಿಸಿ ಕೊಳನೆ ಹಿರಣ್ಯನ–ಮೂ
ರ್ಖರ ಮನೋದ್ಯಮಬಿಡು ವೈರವನು....[15]

ಇದು ಏನಂಗ ಮೋಹನಾಂಗ,
ಮದನ ಜನಕ ತೊರವೆಯ ನರಸಿಂಗ–
................
ಸಿರಿಯಿಪ್ಪತೊಡೆಯೊಳು ಅರಿಯನಿಟ್ಟಿರುವುದು ?
ಇದು ಏನಂಗ ಮೊಹನಾಂಗ ?....[16]

೯. ಅಳದಿರೆನ್ನಯ ಕಂದ ಜೋ ಮ
ಕ್ಕಳಮಹಾಮಾಣಿಕವೆ ಜೋ ಮೂ
ಗಳದವಳ ಕಡುಮುದ್ದೆ....ಜೋ....[17]

ಜೋ ಜೋ ಶ್ರೀ ಕೃಷ್ಣ ಪರಮಾನಂದ
ಜೋ ಜೋ ಗೋಪಿಯ ಕಂದ ಮುಕುಂದ
........ನೀನಾರ ಮಾಣಿಕವೋ....[18]

---

| ತೊ. ರಾ. | ಕಾಂ. | ಸಂ. | ಪ. |
|---|---|---|---|
| 1. | ೨ | ೩ | ೨೪ |
| 2. | ೩ | ೭ | ೪೬ |
| 3. | ೪ | ೩ | ೨೦ |
| 4. | ೬ | ೧೦ | ೫೬ |
| 7. | ೪ | ೬ | ೨೯ |
| 11. | ೬ | ೩ | ೮ |
| 12. | ೬ | ೩ | ೨೩ |
| 13. | ೬ | ೩ | ೨೦ |
| 15. | ೬ | ೮ | ೫೩ |
| 17. | ೬ | ೨೨ | ೧೧ |

5. 6. 8. 9 (ದ್ರೌಪದೀ ವಸ್ತ್ರಾಪಹರಣ)
10. 14.-ಎಲ್ಲವೂ ಪುರಂದರದಾಸರ ಕೀರ್ತನೆಗಳು
16. 18.–ಪುರಂದರ ದಾಸರ ಕೀರ್ತನೆಗಳು.

ಹನುಮಂತನು ಸಮುದ್ರೋಲ್ಲಂಘನಕ್ಕಾಗಿ ಮಹೇಂದ್ರಗಿರಿಯನ್ನೊದ್ದು ನೆಗೆದ ರಭಸಕ್ಕೆ ‘ ಅದ್ದುದತಳಕೆ ಗಿರಿ ’–ಎಂದು ಕುಮಾರ ವಾಲ್ಮೀಕಿಯು ವರ್ಣಿಸಿದ್ದಾನೆ (ತೊ. ರಾ. IV ೧೨–೩೪) ‘ ಅತಳ ’ಕ್ಕೆ ಗಿರಿ ಮುಳುಗಿದ ಈ ಹೇಳಿಕೆಯೊಂದಿಗೆ, ಶ್ರೀವಾದಿರಾಜಸ್ವಾಮಿಗಳ ಈ ವರ್ಣನೆಯನ್ನು ಸ್ಮರಿಸಬಹುದು :

ತರಣಿರಿವ ಹನುಮಾನ್ ಪ್ರಾಪಲಂಕಾಂ ದಿದೃಕ್ಷುಂ
ಧರಣಿತವ ತನೂಜಾಂ ನೈವ ಭೀತವ್ಯಮಂಬ
ಇತಿಗದಿತುಮಿವಾಂತಃ ಪ್ರಾಪಿತೋ ಭಾತಿ ಭೂಮೌ
ಪವನಸುತಜ ವೇನಾಮುಂದ ಮಾಹೇಂದ್ರಶೈಲಃ
ತೀರ್ಥಪ್ರಬಂಧ–ದಕ್ಷಿಣಪ್ರಬಂಧ–೩೧.

## ರಾಮಕಥೆಯನ್ನು ಹೇಳುವ ಯಕ್ಷಗಾನ ಪ್ರಸಂಗ ಸಾಹಿತ್ಯದ ಮೇಲೆ ತೊ. ರಾ. ದ ಅದ್ವಿತೀಯ ಪ್ರಭಾವ

ಕರ್ನಾಟಕದ ವಿಶಿಷ್ಟ ಕಲೆಗಳಲ್ಲೊಂದಾದ ‘ ಯಕ್ಷಗಾನ ’ ಪ್ರಪಂಚಕ್ಕೆ ಕುಮಾರ ವಾಲ್ಮೀಕಿಯ ತೊರವೆ ರಾಮಾಯಣದ ಕೊಡುಗೆಯು ಅಸಮಾನವಾಗಿದೆ. ಈ ಕೃತಿಯಲ್ಲಿ ಅಲ್ಲಲ್ಲಿ ಸರಳತೆ, ಸರಸತೆ, ಸಹಜ ತಾರ್ಕಿಕತೆಗಳಿಂದೊಡಗೂಡಿ ಮಿಂಚುವ ಸಂಭಾಷಣೆ, ಸಲ್ಲಾಪಗಳು[1] ಕುಮಾರ ವಾಲ್ಮೀಕಿಯ ‘ ನಾಟ್ಯ ಪ್ರತಿಭೆ ’ಗೆ ಸಾಕ್ಷಿಗಳಾಗಿದ್ದು, ಜಾನಪದ ನಾಟ್ಯರಂಗವಾದ ಯಕ್ಷಗಾನ ಕ್ಷೇತ್ರದ ಕವಿ ಕಲಾವಿದರುಗಳನ್ನು ತನ್ನೆಡೆಗೆ ಸೆಳೆದದ್ದು ಸಹಜವೇ. ತೊ. ರಾ. ವು ರಾಮಕಥೆಯನ್ನು ಹೇಳುವ ‘ ಪ್ರಸಂಗ ’ಗಳ[2] ಮೇಲೆ ಬೀರಿದ ವ್ಯಾಪಕವಾದ ಪ್ರಭಾವವನ್ನು ಪರಿಶೀಲಿಸಿದರೆ–ಈ ಹಿಂದೆಯೇ ಸೂಚಿಸಿರುವಂತೆ–ಕುಮಾರ ವಾಲ್ಮೀಕಿಯು ‘ ಯಕ್ಷಗಾನ ಕವಿಗಳ ಗುರು, ಆದಿಕವಿ.’

## ತೊರವೆ ರಾಮಾಯಣ–ಪುತ್ರಕಾಮೇಷ್ಟಿ ಮತ್ತು ಸೀತಾಕಲ್ಯಾಣ ಪ್ರಸಂಗ[3]

ಕುಮಾರ ವಾಲ್ಮೀಕಿ ಕೃತಿಯಲ್ಲಿರುವಂತೆ ಈ ಪ್ರಸಂಗದ ಕಥಾನುಸರಣೆಯಿದೆ.

---

“ ಅಮ್ಮಾ ಭೂದೇವಿ, ನಿನ್ನ ಮಗಳಾದ ಸೀತೆಯನ್ನು ನೋಡಲು ಮತ್ತು ಅವಳ ದುಃಖಸಾಗರವನ್ನು ದಾಟಿಸಲು ದೋಣಿಯಂತಿರುವ ಹನುಮಂತನು ಲಂಕೆಯನ್ನು ತಲಪಿದನು. ಅಮ್ಮ, ಮಗಳಿಗೋಸ್ಕರ ಭಯ ಬೇಡ–ಈ ರೀತಿ ಹೇಳಲೋಸುಗವೋ ಎಂಬಂತೆ ಹನುಮಂತನ ಕಾಲಿನ ಒತ್ತಡಕ್ಕೆ ವೇಗವಾಗಿ ಭೂವಿಯ ಒಳಗೆ ಸೇರಿ ಹೋಗಿರುವ ಮಹೇಂದ್ರ ಪರ್ವತವು ಶೋಭಿಸುತ್ತದೆ ”–(ಈ ಪ್ರದೇಶವು “ ದರ್ಭಶಯನ ”ದ ಬಳಿಯಿದೆ ?)

1. ಉದಾ : ವಾಲಿ–ರಾಮ
   ವಿಭೀಷಣ–ರಾವಣ
   ಅಂಗದ–ಪ್ರಹಸ್ತ
   ಅತಿಕಾಯ–ಲಕ್ಷ್ಮಣ
   ಇಂದ್ರಜಿತು–ಲಕ್ಷ್ಮಣ
   ರಾಮ–ರಾವಣ
   ರಾಮ–ಮಾತಲಿ

2. ೧) ಪುತ್ರಕಾಮೇಷ್ಟಿ ಮತ್ತು ಸೀತಾಕಲ್ಯಾಣ
   ೨) ಪಾದುಕಾ ಪಟ್ಟಾಭಿಷೇಕ (೨ ಕೃತಿಗಳು)
   ೩) ಪಂಚವಟಿ-ವಾಲಿಸುಗ್ರೀವರ ಕಾಳಗ (೩ ಕೃತಿಗಳು)
   ೪) ಚೂಡಾಮಣಿ ಪ್ರಸಂಗ
   ೫) ಸೇತುಬಂಧನ
   ೬) ಅಂಗದ ಸಂಧಾನ
   ೭) ನಾಗಾಸ್ತ್ರ–ಕುಂಭಕರ್ಣಕಾಳಗ
   ೮) ಕುಂಭಕರ್ಣಕಾಳಗ
   ೯) ಅತಿಕಾಯ ಕಾಳಗ
   ೧೦) ಕಾಲನೇಮಿ ಕಾಳಗ
   ೧೧) ಇಂದ್ರಜಿತು ಕಾಳಗ
   ೧೨) ರಾವಣ ವಧೆ
   ೧೩) ಶ್ರೀರಾಮ ಪಟ್ಟಾಭಿಷೇಕ

3. ಈ ಪ್ರಸಂಗದ ಪ್ರಕಾಶಕರು : ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ ೧೯೩೭.
   ಅ) ಈ ಪ್ರಸಂಗದ ಮೊದಲ ಪ್ರಾರ್ಥನೆಯ ಪದ್ಯದ ಕೊನೆಯಲ್ಲಿ,

   ಶರಣ ಜನ ಕುಲರಕ್ಷ । ಸಕಲದೇವಾಧ್ಯಕ್ಷ
   ಶರಪುರಸ್ಥಿರವಾಸ । ಶರಣು ವಿಘ್ನೇಶ–ಎಂದಿದೆ

ಇದರಿಂದ ಕವಿಯು ಮಂಗಳೂರಿನ “ ಶರವು ಗಣಪತಿ ”ಯ ಭಕ್ತನೂ, ಮಂಗಲ ಪದ್ಯದಲ್ಲಿ,
“ ಪಲಿಮಾರು ಮಠಾಧೀಶಗೆ ಶುಭಮಂಗಲಂ ”–ಎಂದಿರುವುದರಿಂದ, ಉಡುಪಿಯ ಪಲಿಮಾರು ಮಠದ ಶಿಷ್ಯನೂ–ಆಗಿರಬೇಕೆಂದು ಹೇಳಬಹುದು.

ಮುದ್ರಿತ ಪ್ರತಿಯ ೩ನೇ ಪುಟದಿಂದ ೯ನೇ ಪುಟದವರೆಗೆ ಮೂಲಪ್ರತಿಯಲ್ಲಿ ಇಲ್ಲದ್ದರಿಂದ, ಬೇರೆ ಕಥಾಭಾಗವನ್ನು ಸಂದರ್ಭೋಚಿತವಾಗಿ ಸೇರಿಸಲಾಗಿದೆ. ಹೀಗೆ ಪ್ರಕಾಶಕರು ಸೇರಿಸಿದ ಭಾಗವನ್ನು ಬಿಟ್ಟು–ಉಳಿದ ಭಾಗದಲ್ಲಿ (ಕವಿಯದೇ ರಚನೆಯಲ್ಲಿ) ತೊರವೆ ರಾಮಾಯಣದ ಪ್ರಭಾವವು ಹೆಚ್ಚು ಸ್ಫುಟವಾಗಿದೆ. ಇದರಿಂದ ಕವಿಯು ಕುಮಾರ ವಾಲ್ಮೀಕಿಯನ್ನೇ ಅನುಸರಿಸಿರಬೇಕೆಂದು ತೋರುತ್ತದೆ.

**ಉದಾಹರಣೆಗಳು :** (ಈ ಯಾವ ಅಂಶಗಳೂ ವಾ. ರಾ. ದಲ್ಲಿಲ್ಲ. ತೊ. ರಾ. ದಲ್ಲಿವೆ.)

೧. " ರಜತಾದ್ರಿಯಲಿ ಪಾರ್ವತಿಗೆ ಮೃಡ ಪೇಳ್ದ ರಾಮಾಯಣ "[1]

೨. ರೋಮಪಾದನು ಪೂರ್ವದಲ್ಲಿ ಯಜ್ಞಮಾಡಲಾಗಿ ಇಂದ್ರನು ಮಳೆಯನ್ನು ತಡೆದುದು.[2]

೩. ನಾರದನು ಆಗಮಿಸಿ, ರೋಮಪಾದನಿಗೆ ಋಷ್ಯಶೃಂಗನನ್ನು ಬರಮಾಡಲು ಸೂಚಿಸಿದ್ದು.[3]

೪. ತಾಟಕಿಯು ರಾಮನಿಗೆ ಶೂಲವನ್ನೆಸೆದ ಉಲ್ಲೇಖ.[4]

೫. ಜನಕನಲ್ಲಿಂದ ವಿಶ್ವಾಮಿತ್ರನಿಗೆ ' ಸೀತಾವಿವಾಹ ಪತ್ರಿಕೆ 'ಯು ಬಂದ ವಿಚಾರ.[5]

೬. ಸೀತಾ ಸ್ವಯಂವರಸಭೆ—ಅಲ್ಲಿ ನೆರೆದ ರಾಜರ ವರ್ಣನೆ.[6]

೭. ದೇವತೆಗಳೂ ಆ ಸಭೆಗೆ ' ಕನ್ಯಾರ್ಥಿ ' ಗಳಾಗಿ ಬಂದಂತೆ ಸೀತೆಯು ಸಕಾರಣವಾಗಿ ಅವರನ್ನು ಸ್ವೀಕರಿಸದಿರುವ ವಿಚಾರ :

| ತೊ. ರಾ. | ಪ್ರಸಂಗದಲ್ಲಿ |
|---|---|
| ಮಗಳ ಗಂಡನು ಶಿವನು ಬೊಮ್ಮನು | ಸರಸಿಜಭವನೆನ್ನಯಬಾಲಕ |
| ಮಗನು ಮಿಕ್ಕಿನ ಸುರರು ಬಂಟರು | ಪುರಹರನೆನ್ನ ರಮಣನ ಮಿತ್ರಾ |
| ಬಗೆವಡಮಲಬ್ರಹ್ಮಋಷಿಗಳು ನಿರ್ಜಿತೇಂದ್ರಿಯರು | ಸುರರು ಕಿಂಕರರೆಲ್ಲ ನರರು ಕೀಟಕರೆನ್ನ |
| ಜಗದರಸುಗಳು ನರರು ತೊರವೆಯ | ವರನ ಸಮಾನರಾಗುವರೇ |
| ನಗರದಧಿಪತಿ ಗಂಡನೆಂದೊಗು | ಉರಗನ ಹಾಸುಗೆಯಾದದಯಾನಿಧಿ |
| ಮಿಗೆಯ ಹರುಷದಲಬಲೆಬಂದಳು ಜನಕನಿದ್ದೆಡೆಗೆ.[7] | ಹರಿ ಎನ್ನ ರಮಣನಾಗಿಹನು.[8] |

೮. ರಾವಣನು ಶಿವಧನುವನ್ನು ಮುರಿಯಲು ಪ್ರಯತ್ನಿಸಿ ವಿಫಲನಾದ ಸಂಗತಿ.[9]

ಅಸುರಬಿಲ್ಲ ಹಿಡಿದುಕೊಂಡು
ವಸುಧೆಯಲ್ಲಿ ಹಾಕಿ ಮತ್ತೆ
ಅಸುರರೆಲ್ಲ ನೋಡುತಿರಲು....

೯. ಸೀತಾ ವಿವಾಹ ವರ್ಣನೆ—' ಮೆಟ್ಟಕ್ಕಿಯಲಿ ನಿಂತು ಗುಡ ಜೀರಿಗೆಯನಿತ್ತ '—ವಿವರಣೆ.[10]

## ತೊರವೆ ರಾಮಾಯಣ ಮತ್ತು ' ಪಾದುಕಾ ಪಟ್ಟಾಭಿಷೇಕ ' ಪ್ರಸಂಗ

" ಪಾದುಕಾ ಪಟ್ಟಾಭಿಷೇಕ "ದ ವಸ್ತುವುಳ್ಳ ಎರಡು ಯಕ್ಷಗಾನ ಕೃತಿಗಳನ್ನು ಇಲ್ಲಿ ಪರಿಶೀಲನೆಗೆ ಒಳಪಡಿಸಲಾಗಿದೆ.

| | ತೊ. ರಾ. | | | ಯಕ್ಷಗಾನಪ್ರಸಂಗ |
|---|---|---|---|---|
| | ಕಾಂ. | ಸಂ. | ಪದ್ಯ. | ಪುಟ. |
| 1 | ೧ | ೨ | ೧೦ | ೩ |
| 2. | ೧ | ೪ | ೧೪-೧೫ | ೧೨ |
| 3. | ೧ | ೫ | ೨೧ | ೧೨ |
| 4. | ೧ | ೧೦ | ೧೬-೧೭ | ೨೮ |
| 5. | ೧ | ೧೨ | ೨ | ೩೨ |
| 6. | ೧ | ೧೪ | ೧೫ | ೩೭ |
| 7. | ೧ | ೧೪ | ೩೩ | ೩೭ |
| 8. | | | | ೩೭ |
| 9. | ೧ | ೧೫ | ೯-೨೮ | ೩೯ |
| 10. | ೧ | ೧೬ | ೪೬ | ೪೩ |

## ೧. ಯಕ್ಷಗಾನ ಶ್ರೀರಾಮ ಪಟ್ಟಾಭಿಷೇಕ (ಅಯೋಧ್ಯಾಕಾಂಡ)[1]

ಈ ಕೃತಿಯು ತೊ. ರಾ. ದಿಂದ ಪ್ರಭಾವಿತವಾದುದೆನ್ನುವುದಕ್ಕೆ ಒಂದೆರಡು ಉದಾಹರಣೆಗಳೇ ಸಾಕು.

ಇಲ್ಲಿ ವಾ. ರಾ. ದಲ್ಲಿರುವಂತೆ ಭರತನ ದುಸ್ವಪ್ನ ವಿಚಾರವನ್ನು ಹೇಳಿಲ್ಲ ; ತೊ. ರಾ. ದಂತೆ ನೇರವಾಗಿ ದಶರಥ ಮರಣದ ವಾರ್ತೆ ಅವನನ್ನು ಸೇರುತ್ತದೆ.

‘ ಸೀತೆಯನ್ನು ಮನದಿ ಎನ್ನರೀತಿ ನೋಡಿಕೋ
ತಾತ ರಾಮಚಂದ್ರನೆಂದು ಮಾತನಾಡಿಕೋ....[2] ತೊ. ರಾ. ವನ್ನು ಅನುಸರಿಸುತ್ತದೆ.

ಸುಮಂತ್ರನಿಗೆ ರಾಮನು ಹೇಳುವ ಮಾತು :

| ತೊ. ರಾ. | ಪಟ್ಟಾಭಿಷೇಕ ಪ್ರಸಂಗ |
|---|---|
| ತಂದೆಯೇನಾಗಿಹನೋ ಭರತನು | ಚಿಂತಿಪ ಜನಕ ಮುಪ್ಪಿನ ಕಾಲ ವೆಂದು |
| ಬಂದುದಿಲ್ಲಾ ಪುತ್ರರುಗಳಯ್ಯನ | ನೀಂ ತಿಳಿದೆಲ್ಲರ ಸಲಹಿಕೋ |
| ಮುಂದಿರರು ನಡೆ ಪಿತನನಾರೈ ಹೋಗು ನೀನೆಂದ.[3] | ಭರತ ಶತ್ರುಘ್ನರುಬರಲಿಲ್ಲ....[4] |

## ೨. ಯಕ್ಷಗಾನ ಪಾದುಕಾ ಪಟ್ಟಾಭಿಷೇಕ[5]

ದಶರಥನಿಂದ ಹತನಾದ ವೈಶ್ಯಮುನಿ ಪುತ್ರನ ಹೆಸರು ‘ ತಾಂಡವ ’ ಎಂದಿದೆ ಈ ಪ್ರಸಂಗದಲ್ಲಿ.[6] ತೊರವೆ ರಾಮಾಯಣವನ್ನುಳಿದು ಇನ್ನಿತರ ರಾಮಕಥೆಯಲ್ಲಿ ‘ ತಾಂಡವ ’ ಎಂದಿಲ್ಲ.[7] ಈ ಅಂಶವೊಂದೇ ಈ ಪ್ರಸಂಗದ ಮೇಲೆ ತೊ. ರಾ. ದ ಪ್ರಭಾವವನ್ನು ನಿರ್ಣಯಿಸಲು ಸಾಕಾಗುತ್ತದೆ.

| ತೊ. ರಾ. | ಪ್ರಸಂಗ |
|---|---|
| ವಾರಿಜಪ್ರಿಯನಸ್ತಶೈಲವ | ಸೀತೆಯಣುಗರುಕೇಳಿ[9] ಬಲು ಶೋ |
| ಸಾರೆ..........ರಾಜ | ಕಾತುರದಿ ಸೊರಗುತ ಸಚಿವ ಸಾ |
| ದ್ವಾರವನು ಹೊಕ್ಕನು ಸುಮಂತ್ರನು ಶೂನ್ಯಹರುಷದಲಿ.[8] | ಕೇತಪುರ ಕೈದಿದನು ರವಿಯಸ್ತಮಯದ ಸಮಯದಲಿ.[10] |
| ಬಿಟ್ಟು ಬಂದ್ಯೆ ನಂದನರನಿಳಿ | ಎಲ್ಲಿ ಬಿಟ್ಟು ಬಂದೆ ಮಂತ್ರಿ । ಮುದ್ದು ಮಕ್ಕಳ |
| ವಿಟ್ಟು ಬಂದ್ಯೆ ರಾಜಪುತ್ರರ | .......... |

---

1. ಪ್ರಕಾಶಕರು : ಪಾವಂಜೆ ಗುರುರಾವ್ ಎಂಡ್ ಸನ್ಸ್–ಉಡುಪಿ (ಏಳನೇ ಅಚ್ಚು) ೧೯೬೨.
   ಕಣ್ವನಾಮ ಪುರದೊಳ್ ನಿಂತಿರ್ದ ಶ್ರೀಕೃಷ್ಣನಾ ತತ್ಪಾದಾಂಬುಜ ದಿವ್ಯನಾಮ ವರದಿಂದ ಪಾರ್ವತೀ ನಂದನ ಹೇಳಿದ ಕಥೆ ಇದು.

   ಕೊನೆಯಲ್ಲಿ ‘ ಕಣ್ವಪುರದೊಡೆಯ ಗೋಪಾಲ ರಕ್ಷಿಸುಬಿಡದೆ ’ ಎಂಬ ಮಂಗಲವಾಚನವಿದೆ.
2. ತೊ. ರಾ. ೨-೩-೪೭ ಪ್ರಸಂಗ ಪುಟ ೧೨.
3. ಇದೇ. ೨-೪-೧೦
4. ಇದೇ. ೫
5. ಈ “ ಚಾರಿತ್ರಮಂ ಕಡಂದಲೆಯ ಗ್ರಾಮದೊಳು ಭಕ್ತರ ಗುತ್ತು ಮಂದಿರವನ್ನು । ಸ್ವಾರಸ್ಯದಿಂದಾಳುತ್ತಿದ್ದ ಸುಬ್ರಾಯನ ಕು । ಮಾರ ವಿಧಿವಶದಿ ಸ್ವಗ್ರಾಮ ತೊರೆವುತ ಷಣಂ । ಬೂರಿನೊಳು ನೆಲಸಿರುವ ರಾಮಾಖ್ಯನೆಂಬವಂ ಯಕ್ಷಗಾನದಿ ನುಡಿದನು ”– ಎಂದಿದೆ. ಪ್ರಸಂಗ ಪುಟ. ೪೫.

   ಪ್ರಕಾಶಕರು : ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ (ಮೂರನೆ ಅಚ್ಚು ೧೯೫೪)
6. ಪ್ರಸಂಗ ಪುಟ. ೫ (ತೊ. ರಾ. ೨–೫–೧೦)
7. ಈ ಕರಿತು ವಿವರಣೆಗೆ ಇದೇ ಪ್ರಬಂಧದ “ ಕಥಾ ವೈಶಿಷ್ಟ್ಯಗಳು–ತುಲನಾತ್ಮಕ ವಿವೇಚನೆ ” ಪ್ರಕರಣ ನೋಡಿರಿ.
8. ತೊ. ರಾ. ೨-೫-೩.
9. ಲವಕುಶರಿಗೆ ಕಥೆ ಹೇಳಿದಂತಿರುವುದು ತೊ. ರಾ. ಪ್ರಭಾವವೇ.
10. ಪ್ರ. ಪು. ೩.

ನಟ್ಟಡವಿಯಲಿ ನಿರ್ಜನಾರಣ್ಯ ಪ್ರದೇಶದಲಿ
ಕೆಟ್ಟು ನುಡಿದರೆ ತನ್ನನೇನೆಂ
ದಟ್ಟಿದರು ನಿನ್ನವನು ತನುವಿದು
ತುಟ್ಟಸದ ಮುನ್ನಿದ್ದುದನು ಹೇಳಯ್ಯ ತನಗೆಂದ.[1]

ಸೀತೆ ನುಡಿದಳೇನು ಎನ್ನ । ಜಾತ ಲಕ್ಷ್ಮಣಾಂಕನಾವ
ರೀತಿಯಿಂದಲಿರುವನಕಟ । ನೀ ತವಕದಿ ಪೇಳಯ್ಯ.[2]

## ಯಕ್ಷಗಾನ ಪಂಚವಟಿ ರಾಮಾಯಣ ಮತ್ತು ಖರದೂಷಣರ ಕಾಳಗ[3]

೧. ವಾಲ್ಮೀಕಿ ಮುನಿಯು ಲವಕುಶರಿಗೆ ಕಥೆ ಹೇಳುವುದು.[4]

೨. ಸೀತಾಪಹರಣ ಪೂರ್ವದಲ್ಲಿ ' ಶಂಬುಕವಧಾ ವೃತ್ತಾಂತ.[5]

೩. ಶೂರ್ಪನಖಿಯು ಸುಂದರ ' ಹದಿನಾರುವರ್ಷ 'ದ ಪೆಣ್ಣಾದುದು.[6]

೪. ತನ್ನಿಂದ ಲಕ್ಷ್ಮಣನು (ನಾಕುಮಡಿ, ನೂರ್ಮಡಿ) ಚೆಲುವನೆಂದು ರಾಮನು ಶೂರ್ಪನಖಿಗೆ ಹೇಳುವುದು.[7]

೫. " ನಿನಗೆ ಬ್ರಹ್ಮಚಾರಿತ್ರ್ಯ ಸಾಕರಿಸುತಿದೆ "........ಶೂರ್ಪನಖಿಯ ನುಡಿ.[8]

೬. ತಂಗಿಯನ್ನು ಕಂಡು ರಾವಣನು ' ಸಭೆಯನ್ನು ಬೀಳ್ಕೊಂಡು ಒಳಮಂದಿರಕ್ಕೆ ನಡೆದ ' ಉಲ್ಲೇಖ.[9]

೭. ಸೀತೆಯನ್ನು ರಾವಣನಿಗಾಗಿ ತರಬೇಕೆಂದು ತಾನು ಉದ್ದೇಶಿಸಿದ್ದಾಗಿ ಶೂರ್ಪನಖಿಯ (ಪುಸಿ) ನುಡಿ.[10]

೮. ರಾವಣನಿಂದ ಜಟಾಯು (ಮರ್ಮ) ವಂಚನೆ.[11]

೯. ಅಯೋಮುಖಿ ವೃತ್ತಾಂತ.[12]

೧೦. ರಾಮ ಸೀತಾ ವಿರಹ-ವಿಲಾಪ.[13]

೧೧. ವಾಲಿಯಿಂದ ರಾಮನ ವರ್ತನೆಯ ಕುರಿತು ಆಕ್ಷೇಪ.[14]

೧೨. ವಾಲಿಗೆ ಮುಕ್ತಿ.[15]

---

1. ತೊ. ರಾ. ೨-೫-೪. 2. ಪ್ರ. ಪು. ೪.
3. ' ಲೀಲಾವಿನೋದ ನರಸಿಂಹನಿಗೆ ಮಂಗಲ '-ಎಂದು ಕೊನೆಗೊಳ್ಳುವ ಈ ಕೃತಿಯ ಪ್ರಕಾಶಕರು : ಮೈಸೂರು ಶ್ರೀರಂಗನಾಥವಿಲಾಸ ಬುಕ್ ಡಿಪೋ. (ಮೈಸೂರು ಬಿ. ರಾಮರಾಯರ ಟೀಕು ಸಹಿತ)

| | ತೊ. ರಾ. | ಕಾಂ. | ಸಂ. ಪ. | ಪ್ರಸಂಗ–ಪು. |
|---|---|---|---|---|
| 4. | ೧ | ೩ | ೧೧ | ೨ |
| 5. | ೩ | ೩ | ೧-೨೫ | ೩ |
| 6. | ೩ | ೪ | ೫ | ೯ |
| 7. | ೩ | ೪ | ೧೩ | ೧೦ |
| 8. | ೩ | ೪ | ೨೧ | ೧೧ |
| 9. | ೩ | ೬ | ೧೫ | ೧೭ |
| 10. | ೩ | ೬ | ೨೦ | ೧೬ |
| 11. | ೩ | ೧೦ | ೨೬ | ೩೦ |
| 12. | ೩ | ೧೨ | ೧೨ | ೩೮ |
| 13. | ೩ | ೧೨ | ೩೮-೪೨ | ೩೬-೩೮ |
| 14. | ೪ | ೪ | ೩೪-೪೫ | ೫೪-೫೫ |
| 15. | ೪ | ೪ | ೫೪ | ೫೭ |

## ಯಕ್ಷಗಾನ ಪಂಚವಟಿ-ವಾಲಿಸುಗ್ರೀವರ ಕಾಳಗ[1]

| ತೊರವೆ ರಾಮಾಯಣ | ಯಕ್ಷಗಾನಪ್ರಸಂಗ |
|---|---|
| ಇದು ಲವಂಗ ವಿಳಂಗ ಕುರವಕ<br>ಕದಳಿ ಕಕ್ಕೆಕವುಂಗು ಕಮ್ಮರ....[2] | ಇದೆ ಲವಂಗ ವಿಳಂಗ ಕುರವ ಕದಳಿಗಳು<br>ಇದೆ ಕಕ್ಕೆ ಕಲಕು ಕಮ್ಮರದ ನಿಕರಗಳು....[3] |
| .......ಉರಿಗಣ್ಣ ಜಂಬುಕ<br>ಕೋಡಗವು............[4] | ಉರಿಗಣ್ಣ ಜಂಬುಕವು ಕೋಡಗಾದಿಗಳ....[5] |
| ಲಲನೆಯೊಬ್ಬಳ ವ್ರತವವಗೆ ಗಡ<br>ಹಳುವದಿದಿರಿಗೆ ಬೊಮ್ಮಚರಿಯದ<br>ಬಳಕೆ ಗಡ....[6] | ಏಕಪತ್ನಿಯ ವ್ರತನಿನಗೆ। ಬ್ರಹ್ಮಚಾರಿತ್ವ।<br>ಸಾಕರಿಸುತಿದೆ ತಮ್ಮನಿಗೆ....[7] |

ಶೂರ್ಪನಖಿಯು ಮಾಯಕದಿಂದ ಸುಂದರ ಸ್ತ್ರೀ ರೂಪತಾಳಿದ ವರ್ಣನೆ.[8]

ಸೀತೆಯನ್ನು ಕಂಡು ರಾವಣನಿಗೆ ಆಕೆಯನ್ನು ಕಾಣಿಕೆಯಾಗಿ ತರುವ ಯೋಚನೆಮಾಡಿದುದಾಗಿ, ಅಣ್ಣನೊಡನೆ ಶೂರ್ಪನಖಿಯು (ಸುಳ್ಳು) ನುಡಿಯುವ ಸಂಗತಿ.[9]

## ಯಕ್ಷಗಾನ–ವಾಲಿ ಸುಗ್ರೀವ–(ದುರಂತ ನಾಟಕ)[10]

ಈ ಶತಮಾನದ ಕೃತಿಯಿದು. ಬರೆದವರು ಯಕ್ಷಗಾನ ಪ್ರಪಂಚದಲ್ಲಿ ಹೆಸರಾದ ಕವಿಭೂಷಣ ವೆಂಕಪ್ಪಶೆಟ್ಟರು.–'ಪ್ರಬಂಧದ ಉದ್ದೇಶ' ಎಂಬ ಮುನ್ನುಡಿಯಲ್ಲಿ–ತಮ್ಮದೇ ಆದ ರೀತಿಯಲ್ಲಿ–'ಆರ್ಯ ದ್ರಾವಿಡ ಸಂಸ್ಕೃತಿಗಳ ಸಂಘರ್ಷದ ವಿಚಾರ' ಪ್ರಸ್ತಾವಿಸಿದ್ದು ಆ ಸಂಘರ್ಷದ ರೀತಿಯಾಗಿ, ವಾಲಿ–ಸುಗ್ರೀವರ ಕಾಳಗವನ್ನು ರಚಿಸಿರುವ ಕುರಿತು ಹೇಳಿಕೊಂಡಿರುವ, ಕವಿಭೂಷಣರು ತಾವು ಬಹುಮಟ್ಟಿಗೆ ಅವಲಂಬಿಸಿರುವ ತೊರವೆ ರಾಮಾಯಣದ ಕುರಿತು ತಮ್ಮ 'ಋಣಿತ್ವ'ದ ಬಗ್ಗೆ ಒಂದು ಸೂಚನೆಯನ್ನೂ ನೀಡದಿರುವುದು ವಿಸ್ಮಯಕಾರಿಯಾಗಿದೆ.

---

1. ಈ ಕೃತಿಯು 'ಕಣ್ವಪುರದೊಡೆಯನಾಗಿರುವ ಶ್ರೀ ಕೃಷ್ಣ' ಎಂಬ ಅಂಕಿತದಿಂದ ಕೊನೆಗೊಳ್ಳುತ್ತದೆ.
   ಪ್ರಕಾಶನ: ಪಾವಂಜೆ ಗುರುರಾವ್ ಅಂಡ್ ಸನ್ಸ್. ಉಡುಪಿ (ಹದಿನೇಳನೆಯ ಅಚ್ಚು–೧೯೬೬)

| ತೊ. ರಾ. | ಪ್ರಸಂಗ ಪು. |
|---|---|
| 2. ೩ ೧ ೨೬ | 3. ೩ |
| 4. ೩ ೧ ೩೦ | 5. ೪ |
| 6. ೩ ೪ ೨೧ | 7. ೮ |
| 8. ೩ ೪ ೫ | ೬ |
| 9. ೩ ೭ ೨೦ | ೧೩ |

ಇಷ್ಟಲ್ಲದೆ, ತೊರವೆ ರಾಮಾಯಣದ ಈ ಕೆಳಗಿನ ಪದ್ಯಗಳು ಈ ಪ್ರಸಂಗದಲ್ಲಿ ಸಂದರ್ಭೋಚಿತವಾಗಿ ಸೇರಿಸಲ್ಪಟ್ಟಿವೆ.

| ತೊ. ರಾ. ಕಾಂ. | ಸಂ. | ಪ. |
|---|---|---|
| ೩ | ೭ | ೨, ೯, ೧೦, ೧೨, ೩೫, ೪೪. |
| ೩ | ೮ | ೭, ೧೧, ೧೩. |
| ೩ | ೧೦ | ೩೧ |
| ೪ | ೪ | ೧೨ |
| ೪ | ೪ | ೩೩-೪೫, ೫೩, ೫೮, ೫೯. |

(ಜಟಾಯು ಮರ್ಮವಂಚನೆ, ಹನುಮಂತನು ತನ್ನ ತಾಯಿಯ ನುಡಿಗಳನ್ನು ಸ್ಮರಿಸಿದುದು (ತೊ. ರಾ. ೪-೧-೮) ಸೀತೆಯ ಆಭರಣಗಳನ್ನು ಮುಂದೆ ಪಡೆಯುವುದಾಗಿ ಸುಗ್ರೀವನಲ್ಲೇ ಇರಿಸಿದ್ದು (೪-೨-೧೧) ವಾಲಿಯು ಸಾಯುಜ್ಯವನ್ನು ಹೊಂದುವುದು (೪-೪-೫೪ ರಿಂದ ೫೮) ಪ್ರಸಂಗದಲ್ಲಿ ಇವೆಲ್ಲ ಅನುಸರಣೆ ಇದೆ.

10. ಮೊದಲ ಪ್ರಕಾಶನ ೨೫–೨–೧೯೩೬.
    ತಿದ್ದಿದ ಪ್ರತಿ–೧೯೫೨–ನವಂಬರ್
    ಪ್ರಕಾಶಕರು: ಅಂತರಂಗ ಕಾರ್ಯಾಲಯ, ಉಡುಪಿ, ದ. ಕ.

ಈ ಕೃತಿಯಲ್ಲಿ ತೊ. ರಾ. ದ ಪ್ರಭಾವ ದರ್ಶನಕ್ಕೆ ಕೆಲವೇ ಉದಾಹರಣೆಗಳು ಸಾಕು. (ಕೆಲವೆಡೆಗಳಲ್ಲಿ ತೊ. ರಾ. ದ ಷಟ್ಪದಿಗಳನ್ನೇ–ಯಾವ ಮೂಲದ್ದೆಂದು ಹೇಳದೆ– ಅಳವಡಿಸಿಕೊಳ್ಳಲಾಗಿದೆ)

| | ತೊ. ರಾ. | ಯಕ್ಷಗಾನ 'ವಾಲಿಸುಗ್ರೀವ' |
|---|---|---|
| ೧. | ವಿತತ ವಿಮಳಾಮ್ನಾಯ ಮಯ ವಿ | ವಿತತ ವಿಮಳಾಮ್ನಾಯದಲಿ ವಿ |
| | ಶ್ರುತದ ಮಣಿಕುಂಡಲದ ವಿವಿಧ– | ಶ್ರುತದ ಮಣಿಕುಂಡಲದ ವಿವಿಧ |
| | ಸ್ಮೃತಿ ವಿಲಾಸಬ್ರಹ್ಮದಂಡದ ನಿರ್ಜಿತೇಂದ್ರಿಯದ | ಸ್ಮೃತಿವಿಲಾಸದ ಯೋಗದಂಡದ ನಿರ್ಜಿತೇಂದ್ರಿಯದ |
| | ನುತಕನಕ ಕೌಪೀನದಾಗನು | ನುತಕನಕ ಕೌಪೀನದಾಗನು |
| | ದತಿಶಯದ ಯಜ್ಞೋಪವೀತದ | ದತಿಶಯದ ಯಜ್ಞೋಪವೀತದ |
| | ಯತಿಕುಲೋತ್ತಮನೈದಿದನು ನರರೂಪಿನಚ್ಯುತನ.[1] | ಯತಿಕುಲೋತ್ತಮನೈದಿದನು ರಘುರಾಮನಿದ್ದೆಡೆಗೆ.[2] |
| | ....ಅಂಘ್ರಿಗಾನತನಾದನಾ ಹನುಮ | ಹನುಮಂತನು– |
| | ನೀವು ವಿಪ್ರರು ವೀರ ಪ್ರಾರ್ಥಿವ | ಮಣಿದವನುತಿಸಲ್ ರಾಘವ |
| | ರಾವು, ನಮಗಭಿವಂದಿಸುವುದಿದು | ನನುನಯದಿಂದಚ್ಚರಿಗೊಳುತಾ ಪಾರ್ವನೊಳಂ |
| | ಭಾವಿಸಲು ಮಾಯಾವಿಲಾಸಕವೆಂಬ ಬಗೆಮನವ....[3] | ಮನನರಿದುಸುರಿದ ವಿಬುಧನೆ |
| | (ಹೀಗೆ ಹನುಮಂತನು ವಂದಿಸುವುದು, ರಾಮನು ಪ್ರಶ್ನಿಸುವುದು ವಾ. ರಾ. ದಲ್ಲಿಲ್ಲ. ತೊ. ರಾ.ದಲ್ಲಿಯೇ ಇದೆ.) | ಯನುಚಿತವೆಸಗಿದೆ ಧರಾಣ್ಮರಿಂಗೆರಗುವುದೇಂ ?[4] |
| | ಬರಸೆಳೆದು ತಕ್ಕೈಸಿ ಮೈತ್ರ | ಬರಸೆಳೆದು ರವಿಜನನು ಮೈತ್ರಿ |
| | ಸ್ಫುರಣೆಯಲಿ ಮನವುಬ್ಬಿ ವಾನರ | ಸ್ಫುರಣೆಯಲಿ ಬಿಗಿದಪ್ಪಿ ರಾಘವ |
| | ರೆರಸನನು ಮನ್ನಿಸಿದನುಚಿತ ಸುಭಾಷಿತಂಗಳಲಿ[5] | ನರಿದು ಮಿಕ್ಕಿನ ವೀರರನಿಬರನುಚಿತ ವಚನದಲಿ[6] |
| | ದೇವ ಬಳಿಕೀಚೆಯಲಿ ಗತಮಾ | (ರಾಗ–ಬೇಗಡೆ–ಅಷ್ಟತಾಳ) |
| | ಯಾವಿಯಯ್ಯನು ಮಗನ ಕೊಂದವ | ಮೃತನ ಮಾಯಾವಿಯ ತಾತಾ । ಹತಿಸಿದ । |
| | ನಾವನೆಂದರಿಯಲು ಸುರೇಂದ್ರನ ಬೇಡಿದನು ರಣವ | ಸುತನದಾರೆನುತಲಾ ತಾ ಹುಡುಕುತೆ। |
| | ದೇವಪತಿಯವಗಂಜಿ ಶೂಲಿಯ | ಖತಿಯಿಂದ ಶಕುನ ಕೇಳ್ದಡಾತಾ । ಪತಿಗ್ರಾವ |
| | ಮಾವನನು ತೋರಿದನು ಬಳಿಕಾ | ನನು ತೋರೆ ಖಳನಿಗತ್ತಾ....[8] |
| | ಗ್ರಾವಪತಿ ಕೈಮುಗಿದು ಕಳುಹಿದನಬುಧಿಪನ ಬಳಿಗೆ.[7] | |

---

| ತೊ. ರಾ. | | | | | |
|---|---|---|---|---|---|
| | ಕಾಂ. | ಸಂ. | ಪ. | | ವಾಲಿಸುಗ್ರೀವ–ಪುಟ. |
| 1. | ೪ | ೧ | ೭ | 2. | ೨೧. |
| 3. | ೪ | ೧ | ೯ | 4. | ೨೨. |
| 5. | ೪ | ೧ | ೨೭ | 6. | ೨೫. |
| 7. | ೪ | ೨ | ೭೭ | 8. | ೭೨. |

ಕುಲವಿಘಾತನ, ಕುಪಿತ ಚಿತ್ತಾ
ಕಲಿತ ಕಾಯನ, ಕಷ್ಟ ಹೃದಯನ,
ಕಲುಷ ಕರ್ಮನ ಕಾಪಿಶಾಯನ, ಮುದಿತಮಾನಸನ
ನೆಲನು ಹೊರದೆಲೆ ದೇವ ಭೂಮಿಯ
ತಲೆಯ ತಿಣ್ಣವ ತಿದ್ದುವೀಯ
ಗ್ಗಳವ ಕೃತ್ಯವು ನಿನ್ನದಾಗಿಹುದಾಗಿ ಕೇಳೆಂದ.[1]

ಮರುಳಲಾ ಸುಗ್ರೀವ ಪೂರ್ವದ
ಚರಿತ ದುಷ್ಕೃತ ಸುಕೃತವಿವು ಜೀ
ವರಿಗೆ ಜಂಜಡವಾಗಿಹವು ನೀನಳಲಲೇಕಿದಕೆ ?....[3]

ಅವ ಜನ್ಮದ ಸೋದರನು ತಾ
ನಾವ ಜನ್ಮದಲಣ್ಣ ಸೋಡಲಿ
ಕಾವುದೈನಿಶ್ಚಯವು ಮುಂದಣ ಜನ್ಮಕೇನಹಿರಿ ?....[5]

ಸೋಕದಪರಾಧಿಯನು ನಾವವಿ
ವೇಕ ಮುಖದಲಿ ಕೊಂದೆವೆಮ್ಮು ವ
ನೌಕಿಕೊಂಡಿಹ ಕಾರ್ಯಕೋಸುಗವೆಂದನಾ
ರಾಮು....[7]

ಕುಲ ವಿಘಾತನ, ಜಗದ ಧೂರ್ತನ
ದಳಿತ ಕಾಯನ, ಕಷ್ಟ ಹೃದಯನ
ನೆಲನು ಹೊರದೆಲೆ ರಾಮು ಭೇದಿಸು ತನ್ನನೀಕ್ಷಣದೀ....[2]

(ರಾಗ : ಕೇತಾರಗೌಳ–ತಾಳ ತ್ರಿವುಡೆ)
ಮರುಳಲಾ ಸುಗ್ರೀವ ಪೂರ್ವದ।
ಚರಿತ ದುಷ್ಕೃತವಾಗೆ ಜೀವರ।
ದುರಿತ ರೂಪದ ಕರ್ಮಮೀಪರಿ। ವರಿಸಲಾಯ್ತು[4]

ಅವ ಜನ್ಮದ ಸೋದರನುನೀ। ನಾವ ಜನ್ಮದೊಳಣ್ಣ
ನಾತನು। ಸಾವು ಜೀವನಿಗಿಲ್ಲ ನಿತ್ಯನು। ಭಾವಿಸಲ್ಕೆ.[6]
ಕಾರ್ಯಕೋಸುಗ ಕೊಂದು ದೂಣಯ।

ಭಾರ್ಯೆಗೋಸುಗ ಕೊಲಿಸಿದೂಣಯ।
ವಾಯ್ತು ನಮ್ಮೊಳು ಕಾರ್ಯ ದೋಷ।
ವಿದಾರ್ಯ ತನಯ....[8]

ಹೀಗೆ, 'ವಾಲಿ ಸುಗ್ರೀವ'ವು ಎಷ್ಟೇ ಹೊಸದೃಷ್ಟಿಯದಾದರೂ, ತೊರವೆ ರಾಮಾಯಣದ ಪ್ರಾಚೀನ-ಸತ್ತ್ವದ ಪ್ರಭಾವಕ್ಕೆ ಒಳಗಾಗಿದೆಯೆನ್ನುವುದು ಖಚಿತ.[9]

### ತೊರವೆ ರಾಮಾಯಣ—ಯಕ್ಷಗಾನ 'ಚೂಡಾಮಣಿ' ಪ್ರಸಂಗ[10]

೧. ಸೀತಾನ್ವೇಷಣೆಗಾಗಿ ಹೊರಟ ಕಪಿ ವೀರರು ದೇಶದೇಶಗಳ ರಾಜರಿಂದ–ತಮ್ಮಲ್ಲಿ 'ನಾರೀಚೋರ ದಶಕಂಠ ನಿಲ್ಲ'–ಎಂದು ಆಣೆಗಳನ್ನು ತೆಗೆದುಕೊಳ್ಳುತ್ತಾರೆ, ಓಲೆಗಳನ್ನು ಬರೆಯಿಸಿಕೊಳ್ಳುತ್ತಾರೆ. ಈ ಅಂಶವು ವಾ. ರಾ.ದಲ್ಲಿಲ್ಲ; ತೊ. ರಾ.ದಲ್ಲಿಯೇ ಇದರ ಮೊದಲ ಉಲ್ಲೇಖವಿದೆ.

---

| | ತೊ. ರಾ. ಕಾಂ. | ಸಂ. | ಪ. | | ವಾಲಿಸುಗ್ರೀವ ಪುಟ |
|---|---|---|---|---|---|
| 1. | ೪ | ೪ | ೬೬. | 2. | ೫೬. |
| 3. | ೪ | ೪ | ೬೭ | 4. | ೫೭. |
| 5. | ೪ | ೪ | ೬೮ | 6. | ೫೭. |
| 7. | ೪ | ೪ | ೬೯ | 8. | ೫೭. |

9. ಪ್ರಭಾವ ಸೂಚಕವಾದ ಇನ್ನಷ್ಟು ಸಂದರ್ಭಗಳು.

| ಕಾಂ. | ಸಂ. | ಪ. | ವಾಲಿಸುಗ್ರೀವ ಪುಟ |
|---|---|---|---|
| ೪ | ೧ | ೧೮-೧೯ | ೨೩. |
| ೪ | ೨ | ೧೦ | ೨೯. |
| ೪ | ೨ | ೨೨ | ೩೧. |
| ೪ | ೨ | ೨೮ | ೩೧. |
| ೪ | ೩ | ೨೮ | ೪೦. |

10. ಈ ಪ್ರಸಂಗದ ಕೊನೆಯಲ್ಲಿ 'ಕಣ್ವಪುರದೊಡೆಯ ಶ್ರೀಕೃಷ್ಣ' ಎಂಬ ಅಂಕಿತವಿದೆ. ಇದರ ಪ್ರಕಾಶಕರು–ಪಾವಂಜೆ ಗುರುರಾವ್ ಅಂಡ್ ಸನ್ಸ್, ಉಡುಪಿ (೧೨ನೆಯ ಅಚ್ಚು-೧೯೬೨) 'ಕಣ್ವಪುರ'ದ ಅಂಕಿತವುಳ್ಳ ಕವಿಯು ಯಾರು ? ಪಾರ್ತಿಸುಬ್ಬನೇ, ಅವನು ಯಾವ ಸೀಮೆಯವನು ? ಕಣ್ವಪುರವೆಂದರೆ ಕುಂಬಳೆಯೆ (ಕಣಿಯರೆ) ? ಅಜಪುರ-ಕಣ್ವಪುರಗಳ ಸಂಬಂಧ ಹೇಗೆ ?-ಈ ಕುರಿತು ವಿವಿಧ ವಿಚಾರಗಳಿಗೆ ಕಾರಂತರ 'ಯಕ್ಷಗಾನ ಬಯಲಾಟ'–ಪು. ೨೦೯–೨೨೨ ನೋಡಬಹುದು.

೨. ಕೈಲಾಸಕ್ಕೂ ಹೋಗಿ, ಶಿವನ ಸೆರಗುಹಿಡಿದು 'ಸೀತೆಯ ಕಳ್ಳನು ನಿನ್ನ ಭಕ್ತನಂತೆ, ಅವನನ್ನು ತೋರು'– ಎನ್ನುತ್ತಾರೆ ಕಪಿನಾಯಕರು.[1] ಆಗ–ಶಿವನು ಹೀಗೆನ್ನುತ್ತಾನೆ :

ಬಾಲರೀ ಗುಹಗಣಪರಾಣೆ ವಿ
ಶಾಲಬಲ ಹನುಮಂತ ಕಾಂಬನು
ಲೋಲನಯನೆಯನಿಂದಿನಿರುಳಿಂದವರ ಬೀಳ್ಕೊಟ್ಟ.[2]

ನಿಪುಣರು ನೀವು ಸುಮ್ಮನೆಬಳಲುವು
ದೇಕೆ। ಗುಸಿತದಿ ಹನುಮಂತ ಮುಂದೆ।
ತಪನಕುಲೇಶನ ರಾಣಿಜಾನಕಿಯ ಕಂ।
ಡಪನಿದು ಪುಸಿಯಲ್ಲ ಮಾತು.[3]

೩. ಸ್ವಯಂ ಪ್ರಭೆಯ ಪಟ್ಟಣದಲ್ಲಿ ಹಾಸ್ಯಮಾಡಿದ ಆಕೆಯ ಮುಂದೆ, ಕನಲಿದ ಹನುಮಂತನು ತನ್ನ ಸಾಹಸ ಪ್ರದರ್ಶನಕ್ಕೆ ತೊಡಗಿದಾಗ, ಅವಳು ಬೆದರಿ, ಕಾಣಿಕೆಯಿತ್ತು ದಾರಿ ತೋರುತ್ತಾಳೆ.[4]

೪. ಹನುಮಂತನೇ ಲಂಕಾಗಮನಕ್ಕೆ ಸಮರ್ಥ ಎನ್ನುತ್ತಾ ಜಾಂಬವರು ಹೀಗೆ ಸೂಚಿಸುವುದಿದೆ :

ತೊಡಕಲರಿಭಟಪುರವನೊಮ್ಮೆಗೆ
ಸುಡಲು ಬಲ್ಲವನಾಗಬೇಕು....[5]

ರಾಗ : ಮಧ್ಯಮಾವತಿ ಅಷ್ಟತಾಳ

.....................................................

ನೀನೆ ಕಲಿ ಹನುಮ। ನಮ್ಮವರೊಳು !
ನೀನೇ ಕಲಿ ಹನುಮ। ಪ।

.....................................................

ಕೆಟ್ಟರಕ್ಕಸ ರಡ್ಡ। ಗಟ್ಟಿ ನಿಲ್ಲುವರನ್ನು–
ಕುಟ್ಟಿ ಲಂಕಾಪುರ। ಸುಟ್ಟುಬರುವುದಕ್ಕೆ
ನೀನೇ ಕಲಿ ಹನುಮ.......[6]

| ತೊರವೆ ರಾಮಾಯಣ | ಚೂಡಾಮಣಿ |
|---|---|
| ಹನುಮಂತನು– | |
| ೧. ಲಂಕಾಪುರವನೆಡಕಿಕ್ಕಿ ಹಾರಿದನತ್ತ ಮೇಲೇಳ್ನೂರು ಯೋಜನವ[7] | ಹಾರಿದನು ಲಂಕೆಯನು ಟಿಟ್ಟೇಳ್ನೂರು ಯೋಜನ ಮುಂದೆ ನಡೆಯುತ[8] |
| ೨. ತೃಣಬಿಂದು ಮುನಿಯನ್ನು ಕಂಡ ವಿಚಾರ[9] | ಸಾರಿದನು ತೃಣಬಿಂದುಮುನಿಪನ ಶಾಲೆಯೆಡೆಗೆ.[10] |

೩. ಕುಂಭಕರ್ಣನ ಮೂಗಿನೊಳಗೆ ಸಿಕ್ಕಿಕೊಂಡು ಮತ್ತೆ ಅವನು ಸೀತಾಗ ವಜ್ರಕಂಭಕ್ಕೆ ಬಂದುತಾಗಿದುದು.[11]

೪. ಲಂಕೆಯನ್ನೇ ಎತ್ತಿ ರಾಮನ ಮುಂದಿರಿಸುವ ಹನುಮನ ಯೋಚನೆ[12]

೫. ಸೀತೆಯು, ಅಶೋಕವನದಲ್ಲಿ ರಾವಣನಿಗೆ ಚುಚ್ಚಿನುಡಿಯುತ್ತಾ 'ತನ್ನ ಸ್ವಯಂವರದಲ್ಲಿ ಶಿವಧನುವನ್ನು ಮುರಿಯದೆ ಮರಳಿದ ಅವನ ನಿರ್ಬಲತೆಯನ್ನು' ನೆನಪಿಸುತ್ತಾಳೆ.[13]

---

| | ತೊ. ರಾ. ಕಾಂ. | ಸಂ. | ಪದ್ಯ | | ಪ್ರಸಂಗ ಪುಟ. |
|---|---|---|---|---|---|
| 1. | ೪ | ೯ | ೩೧ | 3. | ೫ |
| 2. | ೪ | ೯ | ೩೭ | | |
| 4. | ೪ | ೧೦ | ೨೮ | | |
| 5. | ೪ | ೧೨ | ೯ | 6. | ೧೦. |
| 7. | ೫ | ೧ | ೨೪ | 8. | ೧೧. |
| 9. | ೫ | ೧ | ೨೫ | 10. | ೧೧. |
| 11. | ೫ | ೨ | ೪೩-೪೬ | | ೧೩. |
| 12. | ೫ | ೩ | ೬ | | ೧೪. |
| 13. | ೫ | ೩ | ೫೨ | | ೧೭. |

೬. ಹನುಮಂತನು ಸೀತೆಗೆ ಹೇಳುವ ಜಲಕ್ರೀಡೆಯ ಕುರುಹು.[1]

೭. ಕೊಲ್ಲು, ಕಡಿ, ತಿದಿಯನುಗಿ ಹೊಯ್
ಹಲ್ಲನಿರಿ, ತರಿ, ಕೊರೆಯೆನುತ ಕಿಡಿ
ಯಲ್ಲೊಗುವ ಕೋಪದಲಿ ಖಳತಿ ಬೆಸಸೆ ಭಟನಿಕರ
ಘಲ್ಲಿಸಿದರೀತನನು, ಘಾಡಿಯ
ಘಲ್ಲಣೆಯ ಘಾಯದಲಿ ಹನುಮನು
ಹುಲ್ಲಕಡ್ಡಿಗೆ ಬಗೆಯದಿರ್ದನು ನಿಖಿಳ ಕೈದುಗಳ[2]

ಕೊಲ್ಲು, ಕಡಿ, ತಿವಿ, ಕಟ್ಟು, ಇರಿ, ಬಾಣಬಿಡು ಕಪಿಯ
ಹಲ್ಲುಮುರಿಹಾಕು ಹೊಯ್ ಹೊಯ್ಕರುಳನುಗಿಸೆಳೆದು
ಬಿಲ್ಲಿನಲಿ ಸೆಳೆಖಡ್ಗ ಕುಂತತೋಮರ ಪರಶು ಗದೆ
ಕಣೆಯ ಕಂಪನಗಳು–
ಚೆಲ್ಲಬಡಿ, ಕೆಡಹುನೂಕೆನುತಾರ್ಭಟಿಸುತ್ತ
ಲಲ್ಲಿ ಬಿಟ್ಟಸ್ತ್ರಗಳು ಮುರಿದುದಲ್ಲದೆ ಹನುಮ
ಹುಲ್ಲು ಕಡ್ಡಿಗೆ ಬಗೆಯದಿರಲಿಂದ್ರಜಿತು ಮೆಲ್ಲರೊಡ
ನಿಂತೆಂದನು.[3]

ಹನುಮಂತನನ್ನು ಕುಂಭಕರ್ಣನ ವಜ್ರದ ರಥದ ಮೇಲೇರಿಸಿದ್ದು. ಅದು ಹನುಮನ ಭಾರಕ್ಕೆ ಮುರಿದು ಸಾವಿರಾರು ರಕ್ಕಸರು ನುಚ್ಚುನೂರು ಆದುದು.[4]

ಇಂದ್ರಜಿತುವು ಹನುಮನಿಗೆ 'ಬೆಂಕಿಯೊಡ್ಡಲು' ಆಜ್ಞಾಪಿಸಿದ್ದು, ಮುಂದೆ ಲಂಕೆಯನ್ನು ದಹಿಸುವುದಕ್ಕಿದ ಸೂಚನೆಯೆಂದು ಹನುಮಂತನು ಮನದಲ್ಲಿಯೇ ನಿರ್ಧರಿಸಿದ್ದು.[5]

ಚರನಾಗಿ ಬಂದ ಹನುಮಂತನು 'ವನವನ್ನು ಸುಟ್ಟುದೇಕೆ?' ಎಂದು ಪ್ರಹಸ್ತನ ಪ್ರಶ್ನೆ, ಅದಕ್ಕೆ, 'ಅದು ನನ್ನ ತಪ್ಪಲ್ಲ. ನನ್ನ ಹುಲು ಬಾಲವೆಸಗಿದ ತಪ್ಪು' ಎಂದು ಹನುಮನ ಉತ್ತರ. ಹಾಗಾದರೆ. ಆ ತಪ್ಪು ಮಾಡಿದ ಬಾಲವನ್ನು ಸುಡಿಸುವುದೇ ಸೂಕ್ತ ಎಂದು ರಾವಣನ ನಿರ್ಣಯ.[6]

ಹನುಮಂತನ ಬಾಲವು ಹಿಡಿತ ಮೀರಿ ಬೆಳೆದದ್ದು, ಲಂಕಾ ದಹನ ವರ್ಣನೆ.[7]

ಕರಗಿಹರಿದವು ಹೇಮರಸ ಹೆ
ದ್ದೊರೆಯವೊಲು ಬಹುರತ್ನ ಚಯ ಬಿಡ
ದರಳಿದವು ಹುರಿದರಳಿನಂತಿರೆ ಹೊಳಲೊಳಗಲದಲಿ[8]

ರಾಗ : ಸೌರಾಷ್ಟ್ರ ತ್ರಿಪುಡೆ ತಾಳ

ಕರಗಿದವು ನವರತ್ನ ಖಚಿತದ । ನೆರವಿ
ಕನಕದ ಬೊಂಬೆಸಹಿತಲಿ । ಪರಿಪರಿಯ
ನೂತನದ ಪೀತಾಂಬರಗಳೆಲ್ಲ.[8]

ಕಥೆಯನ್ನೆಲ್ಲ ವಾಲ್ಮೀಕಿಯು ಲವಕುಶರಿಗೆ ಹೇಳಿದ್ದೆಂಬ ಉಲ್ಲೇಖ.[9]

ತೊರವೆ ರಾಮಾಯಣ

ಸ್ಪಷ್ಟ ಪ್ರಭಾವಸೂಚಕವಾದ " ಕೆಲವು ಸನ್ನಿವೇಶಗಳು :

೧. ಉದಧಿಮಥನದೊಳಮಳ ಕೌಸ್ತುಭ

ಯಕ್ಷಗಾನ 'ಸೇತುಬಂಧನ'[10]

ರಾಗ : ಭೈರವಿ ರೂಪತಾಳ

ಅತಿಶಯ ಸಾಗರದ । ಮಥನದಲಿ ಜನಿಸಿ ಸುರ ।

---

| | ತೊ ರಾ. ಕಾಂ. | ಸಂ. | ಪ. | | 'ಚೂಡಾಮಣಿ' ಪ್ರಸಂಗ ಪುಟ. |
|---|---|---|---|---|---|
| 1. | ೫ | ೩ | ೮೪ | | ೨೨. |
| 2. | ೫ | ೭ | ೨೦ | 3. | ೨೬. |
| 4. | ೫ | ೭ | ೪-೭ | | ೨೬. |
| 5. | ೫ | ೭ | ೯ | | ೨೬. |
| 6. | ೫ | ೭ | ೪೨ | | ೨೮. |
| 7. | ೫ | ೮ | ೧–೮೫ | | ೨೮. |
| 8. | ೫ | ೮ | ೮೦ | | |
| 9. | ೧ | ೩ | ೧೧ | | ೧ ಮತ್ತು ೩೦. |

10. ಈ ಪ್ರಸಂಗವು " ನಿರತ ಸನ್ಮಂಗಲ ಶ್ರೀಕೃಷ್ಣಗೆ " ಎಂದು ಕೊನೆಗೊಳ್ಳುತ್ತದೆ.

ದುದಯದಂತರದಲ್ಲಿ ಜನಿಸಿ
ತ್ರಿದು ಸುರೇಂದ್ರಂಗಾಯ್ತು ಹಸುಗೆಯಲೀ ಮಹಾ ಮಣಿಯ
ತ್ರಿದಶಪತಿ ಜನಕಂಗೆ ನೃಪಯ
ಜ್ಞದಲಿ ಕೊಟ್ಟನು, ಜನಕ ಸೀತೆಯ
ಮದುವೆಯಲಿ ತನಗಿತ್ತನಿತ್ತೆನು ಸೀತೆಗಾನೆಂದ.[1]

ಪತಿಯಿಂದ ಬಂತುಮಣಿ । ಜನಕ ಭೂವರಗೆ ॥
ಮಗಳ ಪೈವಾಹದಲಿ । ವಶವಾಯಿತೆನ್ಮೊಡನೆ ।
ತೆಗೆದು ಸಲೆ ಮೋಹದಲಿ । ಕೊಟ್ಟೆನಾ ಸತಿಗೆ ॥

ರಾಗ : ಯದುಕಲಾಕಾಂಭೋಜಿ, ಅಷ್ಟತಾಳ

೨. ಅಣ್ಣ ಕೇಳೀತಗಳ ಮಾತಿನ
ಬಣ್ಣನೆಗಳಂತರಲಿ ಭೂಮಿಯ
ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ,
ಹೆಣ್ಣನೆವದಲಿ ನಮ್ಮನೆಲ್ಲರ
ಮಣ್ಣ ಕೂಡಿಸದಿರನು ನಾವಿ
ನ್ನಣ್ಣ ದುರಿಯಲು ಬೇಡ ಸೀತೆಯ ಬಿಟ್ಟು ಕಳು ಹೆಂದ.[2]

ಅಣ್ಣ ಕೇಳೀ ರಾಮಚಂದ್ರನು ಭೂಮಿಯ ।
ತಿಣ್ಣ ವಿಳುಹಲಾಗಿ ಅವತರಿಸಿದನೊಂದು ।
ಹೆಣ್ಣ ನೆವನ ಹಿಡಿದು ॥ ನಮ್ಮೆಲ್ಲರ ।
ಮಣ್ಣಿಗಿಕ್ಕುವ ಬಡೆದು । ಈ ಕಾರ್ಯ ದೊ ।
ಉಣ್ಣ ದುರಿವುದುಚಿತಗಳಲ್ಲ ತಿಳಿದು ॥ ಇನ್ನಾದರು ।

ರಾಗ : ಸಾಂಗತ್ಯ, ರೂಪಕ ತಾಳ

೩. ನಿನಗೆ ನಾಚಿಕೆಯಾದಡದಕೇ
ನೆನಗೆ ನೇಮಿಸು. ಜಗದ ಮಾತೆಯ
ನಿನಕುಲೇಂದ್ರಂಗಿತ್ತು ಮನ್ನಿಸಿಕೊಂಡು ಬಹೆ ಬಳಿಕ.[3]

ನಿನಗೆ ನಾಚಿಕೆಯಾದರೆನಗಾದರುಹಯ್ಯ ।
ವನದೊಳಿದ್ದವಳ ಕೊಂಡೊಯ್ದು ॥
ಇನಕುಲಾಧಿಪನಿಗಿತ್ತೀಗ ನಮ್ಮೊಳು ಮನ ।
ಮುನಿಸಿಲ್ಲದಂತೆ ಮಾಡುವೆನು ॥

ತೊರವೆ ರಾಮಾಯಣ

೪. ಏನೆಲವೊ ನಿನಗಿನಿತು ಹೊಗಳುವ
ದೇನಹನೊ ? ನೀನಾ ನರೇಂದ್ರನ
ಸೂನುವೋ ? ಮೊಮ್ಮಗನೊ ? ಮರಿಮಗನೋ ?[4] ವಿಚಾರಿಸಲು

ಯಕ್ಷಗಾನ ' ಚೂಡಾಮಣಿ '

ರಾಗ : ತೋಡಿ, ಅಷ್ಟತಾಳ

ಆತನಿಗುಪಕಾರವೆಂಬಡೆ ನಿನ್ನ । ತಾತನೊ ತಮ್ಮನೊ
ಮಗನೊ ಮೈದುನನೊ ?।
ಕೋತಿಗಳರಸನ ಕೊಂಡಾಡುವುದಕೆ । ಸೀತೆಯು
ನೆಂಟನೊ ? ಬಳಿಯ ದಾಯಾದಿಯೊ ?॥

---

ತೊ. ರಾ. ದಂತೆ–ಕಥೆಯು ' ರಾಮನ ತನಯರಿಗೆ ' ವಾಲ್ಮೀಕಿಯು ಹೇಳಿದ್ದಾಗಿದೆ. ಪಾವಂಜೆ ಗುರುರಾವ್ ಅಂಡ್ ಸನ್ಸ್, ಉಡುಪಿ (ಆರನೆಯ ಅಚ್ಚು–೧೯೬೩)

| | ತೊ. ರಾ. ಕಾಂ. | ಸಂ. | ಪದ್ಯ. | ಪ್ರಸಂಗ–ಪುಟ |
|---|---|---|---|---|
| 1. | ೫ | ೯ | ೨೯ | ೭. |
| 2. | ೬ | ೨ | ೨೦ | ೩. |
| 3. | ೬ | ೨ | ೩೩ | ೫. |
| 4. | ೬ | ೨ | ೩೪ | ೪. |

| | | |
|---|---|---|
| ೫. | ನೂಕಲೇತಕೆ ನಮ್ಮ ನಾವೇ<br>ನೂಕಿಕೊಂಬೆವೆನುತ್ತ ಸುಜನ ಜ<br>ನೈಕ ಚೂಡಾಮಣಿ ಮಹೋತ್ಸಾಹದಲಿ ಮನ<br>ದೊಳಗೆ[1] | ನೂಕಲೇತಕೆ ಚರರು ನಾವೇ<br>ನೂಕಿ ಕೊಂಬೆವೆನುತ್ತ ಕಂಗಳ<br>ಲೌಕಿಮುದಕದ ಶರಣ ಬಂದನು ಮಾತೆಯಿಪ್ಪೆಡೆಗೆ. |
| | | ರಾಗ : ಸಾಂಗತ್ಯ, ರೂಪಕ ತಾಳ |
| ೬. | ಹುಲು ಪರಿಯ ರಕ್ಕಸನನಿದು ಬಡ<br>ಕೆಲಸ ಕೇಳೀ ಬಾಲವೊಂದನೆ<br>ಕಳುಹಿ ಹಿಡಿತರಿಸುವೆನೆನುತ್ತ ಗವಾಕ್ಷ ಗರ್ಜಿಸಿದ.[2] | ಸೀಳುವುದೇತಕಂಬುಧಿಯನ್ನು ಲಂಕೆಗೆ।<br>ಪಾಳ್ಯವು ನಡೆವುದಿನ್ನೇಕೆ ?<br>ಬಾಲನ ಕಳುಹಿ ರಾವಣನ ತರುವೆನೆಂದು।<br>ನೀಲ ಕೈಮುಗಿದ ರಾಮನಿಗೆ, |

ಹೀಗೆ 'ಸೇತುಬಂಧನ'ದಪುಟಪುಟದಲ್ಲಿಯೂ ತೊರವೆ ರಾಮಾಯಣದ ಸಾಲುಸಾಲುಗಳೇ ತುಂಬಿವೆ. ಇಷ್ಟಲ್ಲದೆ ತೊ. ರಾ. ದಲ್ಲಿ ವಿಶಿಷ್ಟವಾಗಿರುವ ಈ ವೃತ್ತಾಂತಗಳೂ 'ಸೇತುಬಂಧನ'ದಲ್ಲಿವೆ.

ಅ) ರಾಮನು ಹನುಮಂತನಿಗೆ ಬ್ರಹ್ಮ ಪದವಿ ಕೊಟ್ಟುದು.[3] ಆ) ರಾಮನಲ್ಲಿಗೆ ಬರುವ ಮೊದಲು ವಿಭೀಷಣನು ತನ್ನ ತಾಯಿಯನ್ನ ಕಾಣಹೋದುದು.[4] ಇ) ಸೇತುಬಂಧನ ಪ್ರಾರಂಭದಲ್ಲಿ ಕಲ್ಲುಗಳನ್ನು ತಿಮಿಂಗಿಲಗಳು ನುಂಗಿದುದು.[5] ಈ) ಕೈಲಾಸ, ಬ್ರಹ್ಮಲೋಕಗಳಿಂದಲೂ ಪರ್ವತಗಳನ್ನು ತರಲು ವಾನರ ವೀರರು ತೆರಳಿದುದು.[6] ಉ) ಜಾಂಬವನ ಅಸಾಧಾರಣ ಸಾಹಸ[7].......ಇತ್ಯಾದಿ.

ತೊರವೆ ರಾಮಾಯಣ — ಯಕ್ಷಗಾನ ಅಂಗದ ಸಂದಾನ[8]

"ಅಂಗದ ಸಂಧಾನ"ವು ಪೂರ್ಣವಾಗಿ ತೊರವೆ ರಾಮಾಯಣವನ್ನು ಅವಲಂಬಿಸಿದೆ. ಕಥೆ ಮತ್ತು ಕಥನರೀತಿ ಗಳೆರಡರಲ್ಲೂ ತೊ. ರಾ. ದ ಪ್ರಭಾವವು ನಿಚ್ಚಳವಾಗಿದೆ. ಉದಾ :

| | | |
|---|---|---|
| | | ರಾಗ : ಸೌರಾಷ್ಟ್ರ, ತ್ರಿಪುಡೆ ತಾಳ |
| ೧. | ಕುಶನೈ ಕೇಳ್ಳೈ ಪುಷ್ಯ ಶುದ್ಧದ<br>ದಶಮಿಯಲಿ ದಿನ ಮುಖದಲಾರಂ<br>ಭಿಸಿತು ಮುಗಿದುದು ಸೇತು ದಿನನಾಲ್ಕರ<br>ಸಮಾಪ್ತಿಯಲಿ.[9] | ಕುಶನೆ ಕೇಳ್ಳೈ ಪುಷ್ಯ ಶುದ್ಧದ। ದಶಮಿಯಲಿ<br>ಪ್ರಾರಂಭವಾಯಿತು। ಉಸಿರಲದು ಸಂಪೂ–<br>ರ್ಣ ವರ ತ್ರಯೋದಶಿಯೊಳಾಯ್ತು ॥[9] |

---

| | ತೊ. ರಾ. ಕಾಂ. | ಸಂ. | ದಪ್ಯ. | ಸೇತುಬಂಧನ–ಪುಟ |
|---|---|---|---|---|
| 1. | ೬ | ೨ | ೪೭ | ೬ |
| 2. | ೬ | ೪ | ೪ | ೧೦ |
| 3. | ೫ | ೯ | ೩೦ | ೨ |
| 4. | ೬ | ೨ | ೪೯-೫೧ | ೬ |
| 5. | ೬ | ೫ | ೭-೮ | ೧೨ |
| 6. | ೬ | ೫ | ೨೮–೪೧ | ೧೧-೧೨ |
| 7. | ೬ | ೫ | ೪೨-೪೭ | ೧೫ |

8. ಈ ಕೃತಿಯಲ್ಲಿ 'ಕಣ್ವಪುರದೆರೆಯ'–ಎಂಬ ಅಂಕಿತವಿದೆ.
ಪ್ರಕಟನೆ : ೧) ಪಾವಂಜೆ ಗುರುರಾವ್ ಅಂಡ್ ಸನ್ಸ್, ಉಡುಪಿ ; ೨) ಯಂ. ವೆಂಕಟರಾವ್, ಮಂಗಳೂರು.

| | ತೊ. ರಾ. ಕಾಂ. | ಸಂ. | ಪ. | ಅಂಗದ ಸಂಧಾನ-ಪುಟ. |
|---|---|---|---|---|
| 9. | ೬ | ೬ | ೧ | ೧ |

೨. ಪಡೆಯ ಪದಘಟ್ಟಣೆಯ ಪಟ್ಟಣೆ
ಗಡಿಗಡಿಗೆ ಸಂಗವಿಸಿದಬುಧಿಯ
ಹಡಗಿನವೊಲೊಲೆದಾಡುತಿರ್ದುದು ಕಟ್ಟೆ ಕಡಲಿನಲಿ[1]

ರಾಗ : ಸೌರಾಷ್ಟ್ರ, ತ್ರಿಪುಡೆ ತಾಳ

ನಡೆದು ಪದತಳಹತಿಯ ರಭಸಕೆ । ನಡುಗುತಿರ್ದು
ದು ಸೇತು ನೀರಿನ। ಹಡಗಿನಂತೊಲೆದಾಡು–
ತಿರ್ದುದು । ಬುಡವು ತುದಿಗೆ॥[1]

೩. ಚರರು ತಮ್ಮತಮ್ಮರಸುಗಳ ಭುಜ
ಸಿರಿಯನಾಹವದುಬ್ಬುಗೊಬ್ಬಿನ
ಹರುಹ ನೂರ್ಜಿತ ಸುಪ್ರತಾಪವನಧಿಕ ವೈಭವವ,
ಪರಮ ಕೀರ್ತಿಯ ವೈರಿರಾಯರ
ಲೊರೆವುದೇ ಭೂಷಣವಲಾ......[2]

ರಾಗ : ಭೈರವಿ-ಝಂಪೆತಾಳ

ಬಂಟರಾದವರುಗಳು । ಬಲ್ಲಾ ತನೊಡೆಯನೆಂ !
ದೆಂಟು ಮಡಿ ಗುಣವ ನಿಜ । ವೆಂಬುದೇ ಸಹಜ ॥[2]

೪. ಶರಧಿ ಕಾಣಿಕೆ ಕೊಟ್ಟ ರತ್ನಾ
ಭರಣಗಳವರ್ಗಿತ್ತು.........[3]

ಕಡಲಾಧಿಪತಿ ಕೊಟ್ಟ । ಕಾಣಿಕೆಯ ವಸ್ತುಗಳ ।
ನುಡುಗರೆಗಳನು ಕೊಟ್ಟು । ಕಳುಹಿದರುಬಿಟ್ಟು[3]

೫. ಜಾಂಬವನ ವಯಸ್ಸು :
ಇವನ ಜನನದ ಮೇಲೆ ಜನಿಸಿದು
ದವನಿ ಬಳಿಕಾದವೀ ತ್ರೈಲ
ಭುವನ ಗಡ ಸಲೆ ಜಗದೊಳೀತಗೆ ಹಿರಿಯರಿಲ್ಲ ಗಡ,
ಶಿವನ ಮದುವೆಯಲೀತ ಛನ್ನವ
ದವನು ಗಡ ಚಿತ್ತೈಸು ವಿಲಯದ
ಜವನ ಜೂಜಿಗೆ ಸಿಕ್ಕ ಗಡ ಲೇಸಾಗಿ ನೋಡೆಂದ.[4]

ರಾಗ : ಕೇದಾರಗೌಳ ಅಷ್ಟ ತಾಳ

ಕುಂಭಿನಿಯುದಿಸವ ಮುನ್ನ ಪುಟ್ಟಿದನೀತ ।
ನೆಂಬರು ಜಗದೊಳೆಲ್ಲ ॥
ಅಂಬಿಕೆ ಶಿವನಿಗೆ ಮದುವೆಯಾದಾಗ ಹ ।
ತ್ತೊಂಬತ್ತು ವರುಷವಂತೆ ॥[1]

೬. ಹೇಳಲಾಗದೆ ಬಲ್ಲವರು ಭೂ
ಪಾಲ ಹೇಳಿದು ಕಳುಹಿದನಿದನು
ಹೇಳಿ ಹೋಗಲು ಬಂದೆವಾವ್ ಪ್ರತಿಭಟರು ನಾವಲ್ಲ
ಲೋಲನಯನೆಯ ತಂದ ರಕ್ಕಸ
ಖೂಳನಿನನೀಗೆಂದು ನಮ್ಮೊಡ
ನೂಳಬಾರದೆ ಹಿರಿದು ನಾಚಿಕೆಯೇಕೆ ನಿಮಗೆಂದ್

ರಾಗ : ಮಧ್ಯಮಾವತಿ

ಹೇಳಲಾಗದೆ ಬಲ್ಲವರು ಭೂಮಿ ಪಾಲಕ ।
ಹೇಳಿಕಳುಹಿದಂಥ ರಾಜಕಾರ್ಯವನು ॥
ಹೇಳಿ ಹೋಗಲು ಬಂದೆ ಪ್ರತಿಭಟನಾನಲ್ಲ ।
ಹೇಳಿ ಸೀತೆಯ ತಂದ ಕಳ್ಳನಾರಯ್ಯ[5] ॥

೭. ಲೇಸು ಕೇಳುವ ಕಣಿಯುದಭಿ ವಿ
ನ್ಯಾಸವೊಳ್ಳಿತು ಕೇಳು ಲಂಕಾ

ರಾಗ : ಪಹಡಿ ಅಷ್ಟತಾಳ

ಲೇಸು ನಾ ಪೇಳ್ವೆ ಬಂದೊಳವ । ಕೇ । ಳಾ ಶೂ
ರ್ಪನಖಿಯ ಕೃತ್ರಿಮವ । ಕಂಡು । ನಾಸಾಛೇದಿಸಿ

| | ತೊ. ರಾ. ಕಾಂ. | ಸಂ. | ಪ. | ಅಂಗದ ಸಂಧಾನ-ಪುಟ. |
|---|---|---|---|---|
| 1. | ೬ | ೬ | ೧೧ | ೫ |
| 2. | ೬ | ೬ | ೪೪ | ೯ |
| 3. | ೬ | ೬ | ೪೫ | ೯ |
| 4. | ೬ | ೮ | ೨೧ | ೧೧ |
| 5. | ೬ | ೧೦ | ೩೩ | ೧೪ |

ಧೀಶನೆಂಬ ನಿಶಾಚರೇಂದ್ರನ ನಿಜ ಸಹೋದರಿಯು
ನಾಸಿಕವ ಕೊಯ್ದನನ ರಣದಲಿ
ದೂಷಣಾದ್ಯರ ಶಿರವನಿಳುಹಿದ
ದಾಶರಥಿಯನು ಕೇಳಿಬಲ್ಲೈ ಹಿಂದೆ ನೀನೆಂದ.[1]
...........
ಜೋಳಿಯರ ಬಲ್ಲಹನನಾತನ ದೂತ ತಾನೆಂದ.

ಕೊಳುಗುಳವ | ಗೈದು | ದೂಷಣಾದ್ಯರ ಶಿರ
ವಿಳಿಸಿ ಮೆರೆವಂಥ | ದಾಶರಥಿಯ ಕಡೆ ದೂತ
ನಾಗಿರುವೆನೈ |[1]

ತೊರವೆ ರಾಮಾಯಣ

೧. ಧರಣಿ ತಲೆಕೆಳಗಾಗಲುಗುಳಲಿ
ತರಣಿ ಬಿಂಬವನಭ್ರವಜ ಶಂ
ಕರರು ಕೂಗಿಡಲಬುಧಿ ಮುಸುಕಲಿ ಮುರಿಯ-
ಲಮರಾದ್ರಿ
ತಿರುಗಿ ಸೀತೆಯ ಬಿಟ್ಟೆನಾದರೆ
ಕರೆಯಿ ಪೇಶುಗನೆಂದು ನಮ್ಮನು
ಕರಕರಿಸ ಬೇಡೇಳಿಯೆಂದಡದಿರುಹಿದನು ಮುಖವ[3]

೨. ಇಂದಿನಾಹವದೊಳಗೆ ನೊಂದುದು
ಮಂದಿ ನಮ್ಮದು ದೇವಿ ಕೇಳ್ ರಘು
ನಂದನನ ಮುಂದಾರು ನಿಂದಿರಬಹುದು ಬವರದಲಿ
ಕೊಂದನಗಣಿತ ರಾಕ್ಷಸರ ಬಳಿ
ಕೊಂದು ಮಾಯಾ ರೂಪಿನಲಿ
ಸಂಧಿಸಿದನಾಜಿಯಲಿ ತಂದೆನು ತಲೆಯ ತಾನೆಂದ.[4]

ಯಕ್ಷಗಾನ " ನಾಗಾಸ್ತ್ರ, ಕುಂಭಕರ್ಣ ಕಾಳಗ[2]

ರಾಗ : ಮಾರವಿ ಏಕತಾಳ

ಧರಣಿಯ ತಲೆ ಕೆಳಗಾಗಲಿ ಬೀಳಲಿ |
ತರಣಿಯುಮರಿಬಿಂಬ | ಸುರಗಿರಿ ಜರಿಯಲಿ
ಅಂಬುಧಿ ಮುಸುಕಲಿ | ಸುರತತಿ ಮೊರೆಯಿ
ಡಲಿ || ತಿರುಗಿ ನಾ ಸೀತೆಯ ಕಳುಹಿದೆನಾ-
ದರೆ | ಕರೆ ಪೇಶುಗನೆಂದು | ಕರಕರಿಸದೆ
ಪೋಗಿರಿ ಜೇಗೆನ್ನುತ | ತಿರುಹಿದ ಮೋರೆಯನು[3] |

ರಾಗ : ಕಾಂಭೋಜ-ಝಂಪೆತಾಳ

ಇಂದಿನಾಹವದಿ ನೊಂದೆವು ನಾವು ರಘುವರನ
ಮುಂದೆ ನಿಲ್ಲುವರಾರು ರಣದಿ |
ಕೊಂದನಗಣಿತ ರಾಕ್ಷಸರ ಬಳಿಕ ಮಾಯೆಯಲಿ
ತಂದೆವೀ ರಾಮಮಸ್ತಕವ |[4]

---

ತೊ. ರಾ. ಕಾಂ. ಸಂ. ಪ. ಅಂಗದ ಸಂಧಾನ-ಪುಟ

1. ೬ ೧೦ ೩೬ ೧೪

ಇದೇ ರೀತಿ ಇನ್ನೂ ೧೮ (ತೊ. ರಾ. ದ) ಷಟ್ಪದಿಗಳನ್ನು ಮೇಲಿನಂತೆ ತುಸು ವ್ಯತ್ಯಾಸಗೊಳಿಸಿ ಪ್ರಸಂಗದಲ್ಲಿ ಬಳಸಲಾಗಿದೆ. ಕಥೆಯಂತೂ ಪದಶಃ ತೊ. ರಾ. ವನ್ನನುಸರಿಸಿದೆ.

2. ಈ ಪ್ರಸಂಗದ ಪ್ರಕಾಶಕರು : ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ. (೨ನೆಯ ಅಚ್ಚು ೧೯೫೨) ಕವಿಯು ಪ್ರಾರಂಭದಲ್ಲಿ ೧. ಮಧುಪುರದ ಶ್ರೀ ದ್ವೈಮಾತುರನನ್ನೂ
೨. ಶ್ರೀ ಲೋಲ ನರಸಿಂಹ ಮೂರ್ತಿಯನ್ನೂ
೩. ಶ್ರೀ ಮಧ್ವಮುನಿಪತಿಯನ್ನೂ
ಕೊನೆಯಲ್ಲಿ ೪. ಕರುಣಿಸೆನಗೆ ಇಷ್ಟಾರ್ಥಗಳ ನೀನೊಲಿದು ನರಹರಿಯೆ ಎಂದೂ-ಸ್ಮರಿಸಿದ್ದಾನೆ.

3. ತೊ. ರಾ. ೬-೧೨-೧೬ ಪ್ರಸಂಗ ಪು. ೫

4. ಇದೇ. ೬-೧೨-೨೨ ಇದೇ. ೫

ಇದೇ ರೀತಿ ೧೬ ಸಂದರ್ಭಗಳಲ್ಲಿ ತೊ. ರಾ. ಪ್ರಭಾವವು ಯಕ್ಷಗಾನ ಪ್ರಸಂಗ (ನಾಗಾಸ್ತ್ರ ಕುಂಭಕರ್ಣ-ಕಾಳಗ) ದಲ್ಲಿ ವ್ಯಕ್ತವಾಗುತ್ತದೆ. ೮ ಸಂದರ್ಭಗಳಲ್ಲಿ ತೊ. ರಾ. ದ ೮ ಷಟ್ಪದಿಗಳನ್ನೇ ನೇರವಾಗಿ ಬಳಸಲಾಗಿದೆ.

| ತೊರವೆ ರಾಮಾಯಣ | ಯಕ್ಷಗಾನ ಕುಂಭಕರ್ಣ ಕಾಳಗ[1] |
|---|---|

೧. ವಾಲ್ಮೀಕಿಯು ಕುಶನಿಗೆ ಹೇಳಿದ ಕಥೆ.[2]

೨. ರಾವಣನು ರಣಕಣದಲ್ಲಿ ನಿರ್ವಸನನಾಗಿ ಲಜ್ಜೆಯಿಂದ ಅರಮನೆಗೆ ಮರಳಿದುದು.[3]

೩. ಕುಂಭಕರ್ಣನನ್ನು ನಿದ್ದೆಯಿಂದೆಬ್ಬಿಸಲು ವಿವಿಧ ಪ್ರಯತ್ನಗಳು ನಿಷ್ಫಲವಾಗಲು, ಅವನಿಗೆ ನಿದ್ರಾವರವನ್ನು ಕೊಟ್ಟ ಬ್ರಹ್ಮನನ್ನೇ ಬರಮಾಡಿ, ಅವನು ಮಂತ್ರಿಸಿದ ಜಲವನ್ನು ಚಿಮುಕಿಸಿದಾಗ, ಕುಂಭಕರ್ಣನು ಎಚ್ಚೆತ್ತ ವರ್ಣನೆ.[4]

೪. ಇದರಂತೆಯೇ, ಎಚ್ಚೆತ್ತ ಕುಂಭಕರ್ಣನ 'ಉದರಾಗ್ನಿಯನ್ನು' ನಂದಿಸಲು, ಬ್ರಹ್ಮನೇ ಸಿದ್ಧಗುಳಿಗೆ ಯನ್ನಿತ್ತ ಹೇಳಿಕೆ.[5]

೫. ಹನ್ನೆರಡು ವರ್ಷ ನಿದ್ರಾಹಾರಸ್ತ್ರೀಸಂಗ ವರ್ಜಿತನಾದವನು ಮಾತ್ರ ಇಂದ್ರಜಿತುವನ್ನು ಕೊಲ್ಲಬಹು ದೆಂಬ ಸಂಗತಿ.[6]

ಎಚ್ಚೆತ್ತ ಕುಂಭಕರ್ಣನ ಬಾಯಿಗೆ 'ಆಹಾರ'ದ ವಿವರ

ಹಂದಿಗಳನೂರೊಳಗಣಗಲದ ಹರದ ಹಾರುವರ
ಮಂದರನೊಳುಳ್ಳೆತ್ತುಕತ್ತೆಯ...ನಾಯಿಗ
ಳೊಂದನುಳುಹದೆ ತಿಂದನವ ಲಯ ಮೃತ್ಯುರೂಪವಲಿ.
ಸೆರೆವನೆಯ ಸಿಕ್ಕಿರ್ದ ಕಳ್ಳರ
ನಿರಿದಿರಿದು ನೂಕಿದರು, ಲಾಯದ
ಲರಸಿ ವೃದ್ಧಮದೇಭ ಹಯ, ರುಜೆಯಶ್ವ, ಗಜಘಟೆಯ
ಅರಸಿ ಪುರವಲಿ ಸತ್ತ ಹೆಣಗಳ
ತುರುಗಿದರು ತಿನಿಸಿಂಗೆ, ಹಸಿವಿಂಗೆ
ನರೆಯದಾದುದು, ನೆನೆದನವ ಪುರಜನದ ಭಕ್ಷಣವ.[7]

ದ್ವಿಪದಿ

ಮುದಿಯಾನೆಕುರಿಕೋಣಗಳ ತಿಂದಪೂರ್ಣ
ಕದನಕೊದಗದ ಹೇಡಿಕುದುರೆಗಳ ತಿಂದ
ಬದಲು ಸತ್ತೆಮ್ಮೆ ಸಾವಿರದ ನೂರೊಂದ
ಕತ್ತೆಗಳ ಕೊಂದು ತಂದಿತ್ತರ್ಕೈನೂರು
ಮತ್ತು ಹಸುವಡಗದಿರೆ ಹೇಳಿದರು ದೂರು.[7]

ನಿನ್ನ ಸೇನೆಯಲುಂಟೆ ವತ್ಸರ
ಹನ್ನೆರಡರುಪವಾಸದವರು ವಿ
ಭಿನ್ನ ನಿದ್ರಾವಶರು, ವನಿತಾ ಸಂಗವರ್ಜಿತರು

ನಿನ್ನ ಸೇನೆಯೊಳುಂಟೆ ನಿದ್ರೆಯು ಸತಿಸಂಗ ।
ಅನ್ನ ವರ್ಜಿತವಾದ ವ್ರತವು ।
ಹನ್ನೆರಡಬ್ದ ಸಾಧಿಸಿದವನುಳ್ಳಡೆ

1. ಪ್ರಕಾಶಕರು : ಪಾವಂಜೆ ಗುರುರಾವ್ ಅಂಡ್ ಸನ್ಸ್, ಉಡುಪಿ. (೨ನೆಯ ಅಚ್ಚು ೧೯೫೯) ಪ್ರಸಂಗದ ಕೊನೆ ಯಲ್ಲಿ 'ಕಣ್ವ ನಗರೇಶ ಶ್ರೀ ಕೃಷ್ಣ' ಎಂಬ ಅಂಕಿತವಿದೆ.

| | ತೊ. ರಾ. ಕಾ. | ಸಂ. | ಪ. | ಪ್ರಸಂಗ–ಪು. |
|---|---|---|---|---|
| 2. | ೧ | ೩ | ೧೧ | ೧ |
| 3. | ೬ | ೨೫ | ೨೭ | ೧ |
| 4. | ೬ | ೨೪ | ೪೪ | ೩ |
| 5. | ೬ | ೨೦ | ೧೮ | ೪ |
| 6. | ೬ | ೪೨ | ೧೪ | ೧೫ |
| 7. | ೬ | ೨೬ | ೫೫–೫೬ | ೪ |

ಉನ್ನತಾಹವ ವೀರರುಳ್ಳಡೆ
ತನ್ನ ಬಳಿಯಲಿ ಕಳುಹು ತಡವೇ
ಕಿನ್ನು ವಿಚಾರಿಸೆಂದು ವಿಭೀಷಣನು ನುಡಿದ.[1]

ನಿರ್ನಾಮವನು ಶಕ್ರಾರಿ ।[1]

## ಇಂದ್ರಜಿತು-ಲಕ್ಷ್ಮಣ ಸಂವಾದ

### ಇಂದ್ರಜಿತು

ರಾಗ : ಸಾಂಗತ್ಯ ರೂಪಕತಾಳ

ಕರೆಸಿಕೋನಿಮ್ಮಣ್ಣದೇವನ
ನಿರಲಿ ಹತ್ತಿರೆ ಭರತ ಶತ್ರು
ಘ್ನರಿಗೆ ಬರೆಸೋಲೆಗಳ, ಬದುಕಿದರಲ್ಲಿಯೇ ನಿಮ್ಮ
ಶರಣು ಹೊಕ್ಕನ ಕಳುಹು ದೇಶಾಂ
ತರಕೆ, ಲಕ್ಷ್ಮಣ ಕೇಳು ಮುಂದಣ
ಪರಕೆ ನೆನೆ ನಿನ್ನಿಷ್ಟ ದೈವವನೆನುತ ತೆಗೆದೆಚ್ಚ.[2]

ಹರಣದಾಸೆಗಳುಳ್ಳಡಣ್ಣನ ಕರೆಸಿಕೋ
ಚರಣ ನಂಬಿದ ವಿಭೀಷಣನ
ತಿರಿದುಂಬುದಕ್ಕೆ ವೀಳ್ಯನಿತ್ತು ಕಳುಹು ದೇಶಾಂ
ತರಕೆಂದು ನುಡಿದ ಶಕ್ರಾರಿ.

### ಲಕ್ಷ್ಮಣ

ಕರೆಸುವೆನು ನಮ್ಮಣ್ಣನನು ದಶ
ಶಿರನ ವಧೆಗೋಲೆಯನಯೋಧ್ಯೆಗೆ
ಬರೆಸುವೆನು ರಿಪು ವಿಜಯವಾರ್ತಾ ವಿಮಳಸಂಗತಿಗೆ
ಶರಣ ಹೊಕ್ಕ ವಿಭೀಷಣನ ತಂ
ದಿರಿಸುವೆನು ಲಂಕಾಮಹಾಪುರ
ದರಸುತನಕೆಲೆ ಖೂಳ ಕೇಳೆನುತೆಚ್ಚನಾ ಖಳನ.[3]

ಅಣ್ಣನ ಕರೆಸುವೆನಸುರ ರಾವಣನನ್ನು
ಮಣ್ಣ ಕೂಡಿಸುವೆ ಲಂಕಾಪುರನ
ಬಣ್ಣದಿಂದಲಿ ಶರಣಗೆ ಕೊಡಿಸುವರೆ ಕೇ
ಳಿನ್ನು ಶಶಾರ್ಕರಿಪ್ಪನಕ.

ತೊರವೆ ರಾಮಾಯಣ — ಯಕ್ಷಗಾನ ' ಅತಿಕಾಯ ಕಾಳಗ '[4]

ವಾಲ್ಮೀಕಿ ರಾಮಾಯಣದ ' ದಾನವ ಸಮೂಹ ' ದಲ್ಲಿ ' ಹತ್ತರಲ್ಲಿ ಹನ್ನೊಂದಾಗಿ ' ಪರಿಗಣಿಸಲ್ಪಟ್ಟ ' ಅತಿಕಾಯ ' ಪಾತ್ರಕ್ಕೆ ಅಂತರಂಗ ಘರ್ಷಣೆಯ ' ಹೂರಣ ' ವನ್ನೂ, ವೈಷ್ಣವ–ಸ್ವರೂಪದ ಒಪ್ಪವನ್ನೂ ಕೊಟ್ಟವನು ಕುಮಾರ ವಾಲ್ಮೀಕಿ. ಇಂದು ' ಯಕ್ಷಗಾನ ರಂಗಭೂಮಿ ' ಯಲ್ಲಿ ನಲಿದಾಡುತ್ತಾ ಜನಪರಿಚಿತನಾದ ಅತಿಕಾಯನೆಂದರೆ, ' ತೊರವೆ ರಾಮಾಯಣ 'ದ ವೀರ ವೈಷ್ಣವ ಅತಿಕಾಯನೇ, ವಿನಾ ವಾಲ್ಮೀಕಿ ರಾಮಾಯಣದ ' ಅದ್ರಿಸಂಕಾಶನೂ, ' ದೇವದಾನವದರ್ಪಹಾ ' ನೂ ಆದ[5] ಅತಿಕಾಯನಲ್ಲ.[6]

---

| ತೊ. ರಾ. | ಕಾ. | ಸಂ. | ಪ. | ಕುಂಭಕರ್ಣಕಾಳಗ–ಪು. |
|---|---|---|---|---|
| 1. | ೬ | ೪೨ | ೧೪ | ೧೫ |
| 2. | ೬ | ೪೩ | ೧೬ | ೧೫ |
| 3. | ೬ | ೪೩ | ೧೭ | ೧೭ |

ಹೀಗೆಯೇ ಇನ್ನೂ ೧೦ ಷಟ್ಪದಿಗಳನ್ನು ಪ್ರಭಾವ ಸೂಚಕವಾಗಿ ಉದಾಹರಿಸಬಹುದು.

4. ದಿ. ಹಟ್ಟಿಯಂಗಡಿ ರಾಮ ಭಟ್ಟರಿಂದ ವಿರಚಿತವಾದುದು.
   ಪ್ರಕಾಶಕರು : ಪಾವಂಜೆ ಗುರುರಾವ್ ಅಂಡ್ ಸನ್ಸ್, ಉಡುಪಿ (೫ನೆಯ ಅಚ್ಚು ೧೯೬೯)
   ಪ್ರಾರ್ಥನಾ ಪದ್ಯದಲ್ಲಿ ' ಗೋಷ್ಪ ಪಟ್ಟಣ ನಿಲಯ ಭುಜಗ ವಿಭೂಷಣ ' ನ ಸ್ತುತಿಯಿದೆ. ಕೊನೆಯಲ್ಲೂ ವರಗೋಷ್ಪಾಪುರದ ಶಂಕರನ ಸ್ಮರಣೆಯಿದೆ. ಈ ಕವಿಯ ಕಾಲದ ಕುರಿತು ಶಿವರಾಮ ಕಾರಂತರ " ಯಕ್ಷಗಾನ ಬಯಲಾಟ "–ಪು. ೨೩೮ರಲ್ಲಿ ವಿವೇಚನೆಯಿದೆ.
5. ವಾ. ರಾ. ಯುದ್ಧಕಾಂಡ ೭೧–೩.
6. ' ಅತಿಕಾಯ ಪಾತ್ರ ' ವೈಶಿಷ್ಟ್ಯದ ಪರಿಶೀಲನೆ ಇದೇ ಪ್ರಬಂಧದ " ಪಾತ್ರ ಪರಿಶೀಲನೆ " ಪ್ರಕರಣದಲ್ಲಿದೆ

ತೊ. ರಾ. ದ 'ಅತಿಕಾಯ ಪಾತ್ರಕಲ್ಪನಾ ವೈಶಿಷ್ಟ್ಯ'ದಿಂದ ಯಕ್ಷಗಾನ 'ಅತಿಕಾಯ ಕಾಳಗ'ವು ಪ್ರೇರಿತವಾದುದು, ಪ್ರಭಾವಿತವಾದುದು– ಎನ್ನುವುದರಲ್ಲಿ ಎರಡು ಮಾತಿರಲಾರದು.

**ರಾವಣನ ಆರ್ಭಟ :**

| ತೊ. ರಾ. | 'ಅತಿಕಾಯ ಕಾಳಗ'<br>ರಾಗ : ಸೌರಾಷ್ಟ–ತ್ರಿವುಡ ತಾಳ |
|---|---|
| ಇಂದು ರಾಮನ ರಣದಿ ಕೆಡಹದೆ | ಇಂದು ರಾಮನ ರಣದಿ ಕೆಡಹದೆ । ಹಿಂದುಮುಂದಾನಾ |
| ಹಿಂದುಮುಂದಾನಾದೆನಾದರೆ | ದೆನಾದೊಡೆ । ತಂದೆತಾಯಿಗಳಿಂಗೆ ಜನಿಸಿದ ಕಂದನಲ್ಲ[1] |
| ತಂದೆ ಮುನಿಪತಿ ವಿಶ್ರವಸು ಕೈಕಸೆಗಳುದರದಲಿ | |
| ಬಂದವನೆ ?[1] | |

**ಅತಿಕಾಯನ ಹಿತಬೋಧೆ :**

| ತೊರವೆ ರಾಮಾಯಣ | ಯಕ್ಷಗಾನ 'ಅತಿಕಾಯ ಕಾಳಗ'<br>ರಾಗ : ಕಾಪಿ–ಅಷ್ಟತಾಳ |
|---|---|
| ಇರಿತಕಂಬರವಳುಕುವುದೆ ನೊರ | ಇರಿತಕಂಬರವಳುಕುವುದೆ ?। ನೊರ । ಜುರುಬಿದಡಗ್ನಿ |
| ಜುರುಬಲಗ್ನಿಗೆ ನೋವಹುದೆ ? ಕ | ಗೆ ನೋವು ತಾಗುವುದೆ ?॥ ಇರುವೆ ಕಚ್ಚಿದರೆ |
| ಟ್ಟಿರುಹೆ ಕಚ್ಚಿದರಳುಕುವುದೆ ಸುರಗಿರಿ ? ನಿಧಾನಿಸಲು | ಬೆಚ್ಚುವುದೆ ಸುರಗಿರಿಯು ನಿನ್ನಧಟು ರಾಘು |
| ಉರುಬುಗೊಂಡೆಳೆಗುಬ್ಬಿ ಕುಡಿದರೆ | ವನೊಳೊಪ್ಪುವುದೆ ?॥[2] |
| ಬರುವುದೇ ಜಲರಾಶಿ ? ರಾಮನೊ | |
| ಳರಿತಕೊಂಬುದೆ ನಿನಗೆ ಹೇಳಲೆ ತಂದೆ ತನಗೆಂದ.[2] | |

| **ರಾವಣ ಪ್ರಶ್ನೆ–ನಿರ್ಧಾರ** | ರಾಗ : ಭೈರವಿ–ಏಕತಾಳ |
|---|---|
| ಕಥೆಯನಿದನಾ ಕೇಳಿದನು ಕಡು | ಅತಿಕಾಯನೆ ನೀ ಕೇಳು । ರಿಪು । ಮಥನಕೆ |
| ಶಿಥಿಲ ವಾದವು ಹಿಂದಕಿವು ರಿಪು | ಪೋಪಡೆ ಪೇಳು ॥ ಕಥನದ ಮಾತಂತಿರಲಿ । |
| ಮಥನವುಂಟೇ ಹೇಳು ಬೊಮ್ಮದ ಮಾತದಂತಿರಲಿ | ಪಶು । ಪತಿಯಾಪಹಕಯ್ತ್ತುರಲಿ ॥ |
| ಮಿಥಿಳಜೆಯ ಬಿಡೆ ಬಿಡೆ ಛಲವನತಿ | ಕೊಡೆ ರಾಮುಗೆ ಸೀತೆಯನು । ನಿಲು । |
| ಮಥನವನು ಬಿಡೆ ರಾಮನಲಿ ಪುರ | ಗಡೆಯಿದು ತೊಟ್ಟ ಛಲವನು ॥ ಬಿಡುನವನೇ |
| ಮಥನ ಕೂಗಿಟ್ಟಡೆಯು ಕಡೆಯಣ ಮಾತಿದೀಗೆಂದ[3] | ತಾನೆಂದುನೆಲ–। ನೊಡೆಯಲು ಕೂಗಿದನಂದು[3] |

---

| ತೊ. ರಾ. ಕಾಂ. ಸಂ. ಪ. | | | | ಅತಿಕಾಯಕಾಳಗ ಪು. |
|---|---|---|---|---|
| 1. | ೬ | ೩೪ | ೫ | ೪ |
| 2. | ೬ | ೩೪ | ೧೨ | ೪ |
| 3. | ೬ | ೩೪ | ೨೩ | ೫ |

ಇನ್ನೂ "ಪ್ರಸಂಗದ" ಸಾಲು ಸಾಲುಗಳಲ್ಲಿಯೂ ತೊ. ರಾ. ಅನುಸರಣೆ ಕಣ್ಣು ಸೆಳೆಯುವಂತಿದೆ.

| ಉದಾ : | | | | |
|---|---|---|---|---|
| | ೬ | ೩೪ | ೨೪ | ೫ |
| | ೬ | ೩೪ | ೨೫ | ೫ |
| | ೬ | ೩೪ | ೨೬ | ೫ |

| ತೊರವೆ ರಾಮಾಯಣ | ಯಕ್ಷಗಾನ ' ಕಾಲನೇಮಿ ಕಾಳಗ ' |
|---|---|

೧. ತೊ. ರಾ. ದಂತೆಯೇ ' ಕಾಲನೇಮಿ ಕಾಳಗ 'ದ ಕಥೆಯು ಈಶ್ವರನು ಪಾರ್ವತಿಗೆ ಹೇಳಿದ್ದಾಗಿದೆ.

೨. ರಾವಣನು ಮಂಡೋದರಿಗೆ ತನ್ನ ಅಂತರಂಗದ ರಹಸ್ಯವನ್ನು ಹೀಗೆ ತಿಳಿಸುತ್ತಾನೆ. (ಈ ಅಂಶವು ಆದಿಕಾವ್ಯ ರಾಮಾಯಣದಲ್ಲಿಲ್ಲ ಎನ್ನುವುದು ಇಲ್ಲಿ ಸ್ಮರಣೀಯ)

| ತೊರವೆ ರಾಮಾಯಣ | ಯಕ್ಷಗಾನ ' ಕಾಲನೇಮಿ ಕಾಳಗ ' |
|---|---|
| | ರಾಗ : ಕಾಂಬೋಧಿ–ಝಂಪೆ ತಾಳ |
| ಕೇಳು ಮಂಡೋದರಿ ವಿಚಾರಿಸಿ | ಅರಸಿ ನೀನೆನ್ನ ಮೂಢಾತ್ಮನೆನ ಬೇಡೀಗ । |
| ಖೂಳನನು ಮಾಡೆನ್ನ ಜನ್ಮಗ | ಧರೆಯ ಭಾರವ ಕಳೆವ ನೆವದಿ । |
| ಳೇಳನೊಲ್ಲದೆ ಬಂದೆವಾವ್ ಜನ್ಮತ್ರಯಂಗಳಲಿ | ಹರಿಮನುಜ ರೂಪಿನೊಳು ಉದಿಸಿರುವನೆಂದು ನಾ |
| ಹೇಳಿಕೆಯಲಿನ್ನೊಂದು ಜನ್ಮದ | ನರಿಯದವನಲ್ಲ ಕೇಳ್ ಮಡದಿ. |
| ಪಾಳಯವು ನಮಗುಂಟು ಕಳೆದರೆ | |
| ಮೇಲೆ ಜಗದೊಳುತ್ತಮದ ಜಯವಿಜಯರಾನೆಂದ.[1] | |
| ಬಲ್ಲೆನೀ ರಘುನಾಥ ಲಕ್ಷ್ಮೀ | |
| ವಲ್ಲಭನು ತಾನೆಂಬುವನು..........[2] | |
| | ರಾಗ : ಭೋಗ, ಮಟ್ಟೆ ತಾಳ |
| ಅಳವಿಯಟ್ಟೆಸೆ ನೆಗೆದು ಗಿಡುಗನು | ಮಿಡುಕರೀರ್ವರುರುಬಿ ಗಿಳಿಗೆ |
| ಗಿಳಿಗೆ ಹಾಯ್ಪಂದದಲಿ ನೆಗೆದ | ಗಿಡುಗವೆರಗುವಂತೆ ಖಳನ । ಪಿಡಿದು ಬಾಲದಲ್ಲಿ |
| ಪ್ಪಳಿಸಿ ಬಿಗಿದನು ನೀಲ ಬಾಲದಲಾ ದಶಾನನನ[3] | ಕಟ್ಟೆ । ಜಡಿದು ತೂಗಿದ.[3] |
| | ರಾಗ : ಜೋಗುಳ-ಅಷ್ಟತಾಳ |
| ಅಳದಿರೆನ್ನಯ ಕಂದ ಜೋ ಮು | ಅಳಲದಿರೆನ್ನಯ ಕಂದ ದುಶ್ಶೀಲ ಜೋ |
| ಕ್ಕಳಮಹಾಮಾಣಿಕವೆ ಜೋ ಮೂ | ಕಳ್ಳರಕುಲ ಶಿರೋಮಣಿಯೆ ಜೋ....[4] |
| ಗಳಿದವಳ ಕಡುಮುದ್ದೆ ಸಿತಗರ ಶಿಶುವೆ ಜೋಯೆಂದ.[4] | |

---

| ತೊ. ರಾ. ಕಾಂ. | ಸಂ. | ಪ. | ಅತಿಕಾಯ ಕಾಳಗ-ಪು. |
|---|---|---|---|
| ೬ | ೩೪ | ೨೮ | ೫ |
| ೬ | ೩೪ | ೩೫ | ೫ |
| ೬ | ೩೪ | ೪೦ | ೬ |
| ೬ | ೩೪ | ೪೧-೪೩ | ೭ |
| ೬ | ೩೪ | ೫೩ | ೮ |

ಇನ್ನೂ ೧೮ ಷಟ್ಪದಿಗಳು ಪ್ರಸಂಗದಲ್ಲಿ ರೂಪಾಂತರಗೊಂಡಿವೆ.

1. ಪ್ರಕಾಶಕರು : ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ ಉಡುಪಿ (೧ನೆಯ ಮುದ್ರಣ ೧೯೨೯) " ಶ್ರೀಪತಿಯ ದಯದಿಂದ " ಬರೆದುದಾಗಿ ಕವಿಯ ಹೇಳಿಕೆ.

| | ತೊ. ರಾ. ಕಾಂ. | ಸಂ. | ಪ. | | ಕಾಲನೇಮಿ ಕಾಳಗ ಪುಟ. |
|---|---|---|---|---|---|
| 2. | ೬ | ೪೬ | ೨೧-೨೨ | | ೧೦ |
| 3. | ೬ | ೨೨ | ೧೦ | | ೨೦ |
| 4. | ೬ | ೨೨ | ೧೧ | | ೨೦ |
| ಇನ್ನೂ- | ೬ | ೨೨ | ೧೨ | | ೨೦ |
| | ೬ | ೨೪ | ೮ | | ೨೨ |
| | ೬ | ೨೪ | ೧೭ | | ೨೨ |
| | ೬ | ೨೪ | ೨೨ | | ೨೨ |
| | ೬ | ೨೪ | ೨೬ | ಇತ್ಯಾದಿ... | ೨೩ |

ತೊರವೆ ರಾಮಾಯಣ

ಚಿಂತೆಯೇಕೆಲೆ ಜೀಯ ರಿಪು ಬಲ
ಕಂತಕನು ತಾನಿರಲು ನಿನ್ನಮು
ಖಾಂತರದಲಹುದೆನಿಸಿಕೊಂಬೆನು ಕಡೆಯ ಮಾತೇನು
ಕಂತುಹರ ಕಮಲಾಕ್ಷ ಕಮಲಜ
ರಂತಕಿದೆಕೋ ಬಾಣವೀ ನೃಪ
ರಂತರವದೇನೆನುತ ಗರ್ಜಿಸಿ ನುಡಿದನಿಂದ್ರಾರಿ.[1]

ತಾತ ಚಿತ್ತೈಸಿಂದು ರಣದಲಿ
ಸೋತು ನಗರವ ಹೊಕ್ಕೆನಾದರೆ
ಮಾತೆ ಮಂಡೋದರಿಗೆ ನಿಮಗಾ ತನುಜನಲ್ಲೆಂದ[2]

ಯಕ್ಷಗಾನ 'ಇಂದ್ರಜಿತು ಕಾಳಗ'

ಚಿಂತೆಯೇಕೆಲೆ ಜೀಯ ರಿಪುಕುಲ
ದಂತಕನು ತಾನಿರಲು ನಿಮ್ಮಮು
ಖಾಂತರದಲಹುದೆನಿಸಿಕೊಂಬೆನು ಕಡೆಯ ಮಾತೇನು
ಕಂತುಹರ ಕಮಲಜರೆನಗೆ ಮಾ
ರಾಂತರಿದಕೋ ಬಾಣವರಿನೃಪ
ರಂತರವಿದೇನೆನುತ ಗರ್ಜಿಸಿ ನುಡಿದನಿಂದ್ರಾರಿ.[1]

ರಾಗ : ಶಂಕರಾಭರಣ–ಏಕತಾಳ

ತಂದೆ ಕೇಳ್ಮರ್ಕಟರುಗಳ | ನಿಂದು ರಣದಿ ಗೆಲದೆ
ಪಿಂದೆ | ಬಂದನಾದರೆಯು ನಿನ್ನ | ಕಂದನಲ್ಲೆಂದ.[2]

## ಮಾಯಾ ಸೀತೆಯ ವಿಲಾಪ

ಆರಿಗೋಸುಗ ಸಮರವಿದು ತಾ
ನಾರಿಗೀಯಭಿಮಾನ ಲಜ್ಜಾ
ದಾರುಣವು ನಿಮಗಿನ್ನು ಕೇಳೈ ತಂದೆ ಹನುಮಂತ
ಕ್ರೂರಕರ್ಮದ ಖಳನ ಕೈಯಲಿ
ತೀರುವಂತಾಯ್ತುಕಟಕಟ ಕ
ಣ್ಣಾರೆ ಕಂಡೈ ತನ್ನ ಪಾಪವನೆಂದುದಾ ಮಾಯೆ.[3]

ರಾಗ : ನೀಲಾಂಬರಿ ಏಕತಾಳ

ನೋಡಿದೇನಯ್ಯಾ ಹನುಮ | ರಕ್ಕಸನೆನಗೆಮಾ
ಡುವುದಾಜ್ಞೆಯನು || ಯಾರಿಗಾಗಿ ಕಾದುವಿರಿ ?
ಎನ್ನನು ಕೊಂದು ವಾರಿಧಿಗೇಕೆ ಸೇತು ?
ಉಬ್ಬಸ ಘನವಾಯಿತೆ | ಕಾಯ್ವರೆನ | ಗೊಬ್ಬರಿಲ್ಲ
ವೆ ಹೋಯಿತೆ ?

---

ಪ್ರಕಾಶಕರು : ಪಾವಂಜೆ ಗುರುರಾವ್ ಅಂಡ್ ಸನ್ಸ್, ಉಡುಪಿ (೫ನೆಯ ಅಚ್ಚು ೧೯೬೦) ಕೊನೆಯಲ್ಲಿ–"ಒಡೆಯ ಕಾಂತೇಶನ ಮಿತ್ರನಿಗೆ ಮಂಗಲಂ"–ಎಂದಿದೆ.

| | ತೊ. ರಾ. ಕಾಂ. | ಸಂ. | ಪ. | ಇಂದ್ರಜಿತು ಕಾಳಗ–ಪುಟ. |
|---|---|---|---|---|
| 1. | ೬ | ೪೧ | ೨ | ೨ |
| 2. | ೬ | ೧೩ | ೨ | ೨ |
| 3. | ೬ | ೪೧ | ೨೪ | ೩ |
| ಇನ್ನೂ ಕೆಲವು ಸಂದರ್ಭಗಳು : | | | | |
| | ೬ | ೪೧ | ೧೮ | ೩ |
| | ೬ | ೪೧ | ೩೧ | ೩ |
| | ೬ | ೪೧ | ೩೪ | ೩ |
| | ೬ | ೪೧ | ೩೬–೩೯ | ೪ |
| | ೬ | ೪೧ | ೪೫ | ೪ |

ಇನ್ನೂ ತೊ. ರಾ. ಯುದ್ಧಕಾಂಡದ ೪೧–೪೫ ಸಂಧಿಗಳ ೧೭ ಪದ್ಯಗಳನ್ನ ಹೀಗೆ ಉದಾಹರಿಸಬಹುದು.

**ಮಂಡೋದರಿಯ ನುಡಿ:**

| ತೊರವೆ ರಾಮಾಯಣ | ಯಕ್ಷಗಾನ "ರಾವಣ ವಧೆ"[1] |
|---|---|
| ಹೇಳಲಮ್ಮೆನು ಹೇಳಿದರೆ ನೀ<br>ಕೇಳುವೆಯೊ ಕೇಳೆಯೊ ಮಹಾ ಮು<br>ಟ್ಟಾಳವಾಗಿದೆ ನಿನ್ನ ಮಹದೈಶ್ವರ್ಯದಾಯುಷಕೆ,<br>ಹೇಳದಿಹುದನುಚಿತವು ಮಾತನು<br>ಕೇಳು, ಕೇಳದೆ ಮಾಣು, ರಾಮನ<br>ರಾಮನ ಕಾಲಹಿಡಿ ಬಿಡು ಜಾನಕಿಯನಿಹಪರನ ಬಯ<br>ಸುನಡೆ.[2] | ಹೇಳಲಮ್ಮೆನು ನಿನಗೆ ನೀತಿಯ<br>ಪೇಳಿದರೆ ನೀ ಕೇಳುವೆಯಾ ಮು<br>ಟ್ಟಾಳುತನದಲಿ ನಡೆವ ನಿನಗಿದು ತಿಳಿದಿಹರೆ ಮುಂದೆ<br>ಹಾಳು ಮಾಡದೆ ಕರ್ಬುರಾನ್ವಯ<br>ದೇಳಿಗೆಗೆ ನೀನೊಂದು ಮಾತನು<br>ಕೇಳು. ಬಿಡು ಸೀತೆಯನು ಕೊಡಿಸಾ ದಾಶರಥಿಗಿನ್ನು[2] |
| ಅಕ್ಷಯದ ಫಲವೊಲಿವಡಂಭೋ<br>ಜಾಕ್ಷಿಯನು ಬಿಡು ಮಗನಿನ ವಿರೂ<br>ಪಾಕ್ಷನೊಬ್ಬನೆ ಸಾಕು ಕರೆಸು ವಿಭೀಷಣನ ಮರಳಿ<br>ರಕ್ಷಿಸೀ ಪಟ್ಟಣವನಾ ಕಮ<br>ಲಾಕ್ಷನತಿ ಕರುಣಾಳು ನಮ್ಮನು<br>ಪೇಕ್ಷಿಸನು ಬಳಿಕಿನಿತರಲಿ ಕೇಳೆಂದಳಾ ಕಾಂತೆ.[2] | ರಾಗ : ನೀಲಾಂಬರಿ-ಝಂಪೆತಾಳ<br>ರಕ್ಷಿಸುವನಾ ರಾಮಚಂದ್ರ। ನಿನಗಿನ್ನು। ಪೇ<br>ಕ್ಷಿಸನು ಸಹಜ ವಿಭೀಷಣ ಸುಗುಣ ಸಾಂದ್ರ॥<br>ಸಾಕೊರ್ವಮಗ ವಿರೂಪಾಕ್ಷ। ಇವನಿಂದ।<br>ಬೇಕಾದಸುಖದೊಳಿರಬಹುದು ಸುರಶಿಕ್ಷ॥[3] |
| ಕರೆಸಿದನು ಭಂಡಾರಿಗಳನಾ<br>ಹರಿ ಹುತಾಶನ ಯಮ ನಿಶಾಚರ<br>ವರುಣ ವಾಯು ಕುಬೇರ ಶಂಕರರಿತ್ತ ಕಪ್ಪಗಳ,<br>ಹಿರಿದು ಕಾಲದ ಹಳೆಯ ಟಂಕದ<br>ಪರಿಪರಿಯ ನಾಣಯವನೆಲ್ಲವ<br>ತರಿಸಿ ಸೂಸಿದನಖಿಳ ಯಾಚಕ ಜನದ ಸಂದಣಿಗೆ.[3] | ವಾರ್ಧಿಕ ಷಟ್ಪದಿ<br>ತರಿಸಿದಂ ದಿಕ್ಪಾಲರಿತ್ತಕಪ್ಪಗಳೆಲ್ಲ।<br>ಹೊರಿಸಿದಂ ಭಂಡಾರದಿಂದಖಿಳ ನಾಣ್ಯಗಳ<br>ಬರಿಸಿದಂ ದ್ವಿಜರ ಸಂಕುಲಗಳಂ ದಾನಗಳನಿತ್ತ<br>ನೇನದ್ಭುತವದು. |

ತೊರವೆ ರಾಮಾಯಣ—ಯಕ್ಷಗಾನ "ರಾವಣ ವಧೆ"

೫೦ ಪುಟಗಳ ಯಕ್ಷಗಾನ 'ರಾವಣ ವಧೆ' ಪ್ರಸಂಗದಲ್ಲಿ ೧೩೪ (ತೊ. ರಾ.) ಷಟ್ಪದಿಗಳು ಅಲ್ಪ ಸ್ವಲ್ಪ ವ್ಯತ್ಯಾಸ ದೊಂದಿಗೆ ಬಳಸಲ್ಪಟ್ಟಿವೆ[4]–ಎಂದರೆ, ಇದರ ರಚನೆಯಲ್ಲಿ ಯಕ್ಷಗಾನ ಕವಿಯ ಪಾಲಿಗೆ ಕೇವಲ ರಾಗ, ತಾಳಗಳ ಸೂಚನೆ

---

ಪ್ರಕಾಶಕರು : ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ (೩ನೆಯ ಅಚ್ಚು ೧೯೬೧) ಕಾಸರಗೋಡು ಪುರದ ಕೃಷ್ಣಯ್ಯನ ಮಗ ಸುಬ್ರಾಯ–ಎಂಬ ಕವಿಯ ರಚನೆ.

| | ತೊ. ರಾ. ಕಾಂ. | ಸಂ. | ಪ. | "ರಾವಣ ವಧೆ"–ಪುಟ. |
|---|---|---|---|---|
| 1. | ೬ | ೪೯ | ೯ | ೬ |
| 2. | ೬ | ೪೯ | ೧೦ | ೭ |
| 3. | ೬ | ೪೯ | ೨೬ | ೧೦ |

4. ಉದಾ : ತೊ. ರಾ. ಕಾಂ. ೬ ಸಂ. ೪೬ ಪದ್ಯಗಳು. ೧, ೩, ೬, ೮, ೯, ೧೦, ೧೧, ೧೩, ೧೪, ೧೫, ೧೬, ೧೭, ೧೯, ೨೦, ೨೩, ೨೬-೨೮, ೩೧, ೩೨, ೩೩-೩೬, ೩೯. ೪೦ ೫೧, ೫೭.

(ಅದಕ್ಕೆ ತಕ್ಕಂತೆ, ತೊ. ರಾ. ದ ಷಟ್ಪದಿಗಳ ಮಾರ್ಪಾಡು ಮಾಡಿ) ನೀಡುವ ಕೆಲಸ ಮಾತ್ರ ಉಳಿದಂತೆ ತೋರುತ್ತದೆ. ಹೀಗೆ ಧಾರಾಳವಾಗಿ ಷಟ್ಪದಿಗಳನ್ನು ತಮ್ಮ ಪ್ರಸಂಗದಲ್ಲಿ ಉಪಯೋಗಿಸಿಕೊಂಡ ಕವಿಗಳು 'ಮೂಲ ಕೃತಿ ಅಥವಾ ಅನರ ಕವಿ 'ಯ ಹೆಸರನ್ನೇ ಸೂಚಿಸದಿರುವುದಕ್ಕೆ ಏನು ಕಾರಣ ಹೇಳಬಹುದೋ–ತಿಳಿಯದು.

| ತೊರವೆ ರಾಮಾಯಣ | ಯಕ್ಷಗಾನ 'ಶ್ರೀರಾಮ ನಿಜ ಪಟ್ಟಾಭಿಷೇಕ '[1] |
|---|---|

ರಾಮನಿಂದ ಸ್ವೀಕೃತಳಾಗುವ ಮೊದಲು ಸೀತೆಯ ಶಂಕೆ :

| ತೊ. ರಾ. | ಪ್ರಸಂಗ |
|---|---|
| | ರಾಗ : ಕೇದಾರಗೌಳ–ಅಷ್ಟ ತಾಳ |
| ಕಳುಹಿದೆನು ಕಾಂಚನದ ಹರಿಣನ | ಕ್ರೋಧವಿರಲು ಸಾಕು ಮಾಗಧಿಯನು ನಾನು |
| ಬಳಿಯ ಬಯಕೆಯ ಭರದಲರಸನ | ಬಯ್ದು ಟ್ಟಿದೆನು ಕಾಡಿಗೆ \| |
| ಕಳುಹಿದೆನು ಕೆಡೆನುಡಿದು ಕಾಂತಾರದಲಿ ಮೈದುನನ...[2] | ಮೃಗಕೆ ಮೋಹಿಸಿ ಸ್ವಾಮಿಯನು ನಾನು ಕಳು |
| | ಹಿದ \| ಬಗೆಯಪರಾಧವುಂಟು.[3] |

ವಿಭೀಷಣ ವಿನಂತಿ :

| | |
|---|---|
| ದೇವರೊಡೆಯರು ತೋರುವೀ ಭುವ | ದೇವರಂಕೆಯನವಧರಿಸಬೇ |
| ನಾವಳಿಗೆ, ರಾಜ್ಯಾಭಿಲಾಷೆಯ | ಕಾವು ಸ್ವಾತಂತ್ರ್ಯವನು ನೀಗಿಹೆ |
| ಸೇವಕರಿಗೀವುದು ಭವತ್ಪದ ಭಕ್ತಿ ಭೂತಳಕೆ ;– | ಕಾವ ಕೊಲ್ಲುವ ಕರ್ತೃ ಚರಣದಿ ಮನವನರ್ಪಿಸಿಹೆ. |
| ದೇವರೆನ್ನನು ನಿಲಿಸುವುದು ಮ | ಈ ವಿಭವ ಮತ್ತೇಕೆ ? ಪದರಾ |
| ತ್ತಾವ ಮಾತನು ಬೆಸಸಬೇಡೆಂ | ಜೀವದೈಕ್ಯವ ಬೇಡುವೆನು ಕೈ |
| ದಾ ವಿಭೀಷಣನೆರಗಿದನು ಮುಗುಳರಸನಂಘ್ರಿಯಲಿ[3] | ಗಾವುದೆಂದೆರಗಿದರೆ ಕರುಣದೊಳೆತ್ತುತಿಂತೆಂದ.[3] |

---

| ತೊ. ರಾ. ಕಾಂ. | ಸಂ. | ಪದ್ಯಗಳು |
|---|---|---|
| ೬ | ೪೭ | ೬, ೭, ೮, ೧೪, ೧೫, ೨೨, ೨೩. ೩೩, ೩೪, ೩೫, ೪೦, ೪೨, ೪೩, ೪೪, ೪೫, ೫೧, ೫೪. |
| ೬ | ೪೮ | ೨-೬, ೮, ೯, ೧೩, ೧೫, ೧೬–೧೮, ೨೦, ೨೫, ೨೬, ೨೭, ೩೦, ೩೩, ೩೪–೩೬, ೩೭-೪೦. |
| ೬ | ೪೯ | ೧, ೧೨, ೧೩, ೧೪, ೧೯, ೨೦-೨೨, ೪೦, ೪೧. |
| ೬ | ೫೦ | ೩೮, ೩೯, ೪೦, ೪೧. |
| ೬ | ೫೧ | ೬, ೧೦, ೨೭, ೨೯, ೪೦, ೪೩, ೪೪, ೫೪, ೫೫, ೫೬, ೬೯. |

1. ಪ್ರಕಾಶಕರು : ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ (೨ನೆಯ ಅಚ್ಚು ೧೯೫೧) ಕವಿ : ಎ. ಆರ್. ಶಗ್ರಿತ್ತಾಯ. (ಕವಿಗಳು ಪ್ರಸ್ತಾವನೆಯನ್ನು ಬರೆದಿದ್ದರೂ, ತಮ್ಮ ಆಕರ ಗ್ರಂಥವ ಕುರಿತು ಏನನ್ನೂ ಹೇಳಿಲ್ಲವೆನ್ನುವುದು ವಿಸ್ಮಯಕರ)

| | ತೊ. ರಾ. ಕಾಂ. | ಸಂ. | ಪ. | ಪ್ರಸಂಗ ಪುಟ. |
|---|---|---|---|---|
| 2. | ೬ | ೫೨ | ೧೦ | ೪ |
| 3. | ೬ | ೫೩ | ೫ | ೫ |
| ಇನ್ನೂ | ೬ | ೫೩ | ೩ | ೭ |
| | ೬ | ೫೩ | ೫೭ | ೧೦ |
| | ೬ | ೫೩ | ೮೧ | ೧೧ |
| | ೬ | ೫೩ | ೧೨೨ | ೧೩ |
| | ೬ | ೫೫ | ೪೮, ೫೪ | ೨೫ |

**ಪ್ರಭಾವ ಸ್ಪಷ್ಟ–ಆದರೂ ಕೃತಿಯ ಕೀರ್ತನೆ ಅಸ್ಪಷ್ಟ–ಇದು ಕವಿಯ ದುರದೃಷ್ಟ.**

ಹೀಗೆ, ‘ರಾಮಾಯಣ ಕಥಾನಕ’ವುಳ್ಳ ಪ್ರಸಿದ್ಧ (ಹಾಗೂ ಜನಪ್ರಿಯ) ಯಕ್ಷಗಾನ–ಪ್ರಸಂಗಗಳನ್ನು ತೊರವೆ ರಾಮಾಯಣದೊಂದಿಗೆ ಹೊಂದಿಸಿ ಪರಿಶೀಲಿಸಿದಾಗ, ಪ್ರತಿಯೊಂದು ಕೃತಿಯಲ್ಲೂ ಕುಮಾರ ವಾಲ್ಮೀಕಿಯ ‘ಕೈ’ಯಿರುವುದು ವಿದಿತವಾಗುತ್ತದೆ. ಯಕ್ಷಗಾನಕವಿಗಳು ತಮ್ಮ ಪ್ರಸಂಗ ಸಾಹಿತ್ಯದ ಮೂಲಕ ‘ಶ್ರೀರಾಮಕಥೆ’ಯನ್ನು ಜನಮನದ ‘ಕಣ್ಕಟ್ಟುವಂತೆ, ಕಣ್ಮುಟ್ಟುವಂತೆ’ ಮಾಡಿ, ಆದಿಕಾವ್ಯವನ್ನು ಪ್ರಪ್ರಥಮವಾಗಿ ಕನ್ನಡಕ್ಕಿಳಿಸಿದ ಕುಮಾರ ವಾಲ್ಮೀಕಿಯ ಸದಾಶಯವನ್ನು ಕಾರ್ಯಗತಗೊಳಿಸುವಲ್ಲಿ ನೆರವಾಗಿದ್ದಾರೆ ಎನ್ನಬೇಕು.

‘ರಾಮಾಯಣ ಪ್ರಸಂಗ’ಗಳಲ್ಲಿ ತೊರವೆ ರಾಮಾಯಣದ ‘ಅನಿವಾರ್ಯವಾದ’ ಪ್ರಭಾವವು ಸುಸ್ಪಷ್ಟವಾಗಿರುವುದು–ಕುಮಾರ ವಾಲ್ಮೀಕಿಯ ಕೀರ್ತಿಕಿರೀಟದಲ್ಲೊಂದು ವಜ್ರಮಣಿ, ಅವನ ಕಾವ್ಯದ ಸರಳತೆ ಮತ್ತು ಜನಪ್ರಿಯತೆಗಳಿಗೆ ಅಚ್ಚಳಿಯದ ದಾಖಲೆ.

ವಸ್ತುಸ್ಥಿತಿ ಹೀಗಿದ್ದರೂ, ಕುಮಾರ ವಾಲ್ಮೀಕಿ ಮತ್ತು ಅವನ ಕೃತಿಗೆ ಸಲ್ಲಬೇಕಾಗಿದ್ದ ಮನ್ನಣೆ, ಕೃತಜ್ಞತೆಯ ಭಾವ–ಇನ್ನೂ ಸಂದಾಯನಾಗಿಲ್ಲ ಎಂದೇ ಹೇಳಬೇಕಾಗಿದೆ. ಅವನಿಂದ ಸಾಕಷ್ಟು ‘ಲಾಭ’ ಹೊಂದಿದ ಎಲ್ಲ ಕವಿಗಳೂ, ವಿಮರ್ಶಕರೂ, ವಿದ್ವಾಂಸರೂ,–ಈ ಕುರಿತು ಮೌನವಾಗಿರುವುದು ಆ ಕವಿಯ (ಆ ಕೃತಿಯ) ದುರದೃಷ್ಟವೆನ್ನಬಹುದೇ?[1]

---

1. ಯಕ್ಷಗಾನಕವಿಗಳ ‘ಪ್ರಸಂಗ ಸಾಹಿತ್ಯ’ದ ಕುರಿತು ಬರೆಯುತ್ತಾ ಶಿವರಾಮ ಕಾರಂತರು ತಮ್ಮ ‘ಯಕ್ಷಗಾನ ಬಯಲಾಟ’ (ಪುಟ ೨೨೨-೨ನೆಯ ಮುದ್ರಣ)ದಲ್ಲಿ, “ಪೂರ್ವಕವಿಗಳಿಂದ ಕಥಾನಕಗಳನ್ನು ಓದಿ ತಿಳಿದುಕೊಂಡ ಈ (ಯಕ್ಷಗಾನ) ಕವಿಗಳು ಹಲವು ಬಾರಿ ಕುಮಾರವ್ಯಾಸನನ್ನೂ, ಲಕ್ಷ್ಮೀಶನನ್ನೂ ಅನುಕರಿಸಿದ್ದುಂಟು”-ಎಂದಿದ್ದಾರೆ. ಈ ಎರಡು ಹೆಸರುಗಳೊಂದಿಗೆ ಅವರು, ಕುಮಾರ ವಾಲ್ಮೀಕಿ ಅಥವಾ ಅವನ ಕೃತಿಯ ಬಗ್ಗೆ ಏನನ್ನೂ ಹೇಳದೆ ಇರುವುದಕ್ಕೆ–ದುರದೃಷ್ಟ ಎಂದಲ್ಲದೆ ಇನ್ನೇನೆನ್ನಬಹುದು?

# ಅಧ್ಯಾಯ ೪

## ತೊರವೆ ರಾಮಾಯಣದ ಸಾಮಾಜಿಕ ಮತ್ತು ರಾಜಕೀಯ ಅಧ್ಯಯನ

ಯಾವನೇ ಕವಿಯು ತನ್ನ ಕಾಲದ ಸಾಮಾಜಿಕ ಪರಿಸರ, ಜೀವನ ಪ್ರಜ್ಞೆ ಮತ್ತು ಮೌಲ್ಯಗಳ ಪ್ರಭಾವಕ್ಕೆ ಒಳಗಾಗದೆ ನಿರ್ಲಿಪ್ತನಾಗಿರುವುದು ಸಾಧ್ಯವಿಲ್ಲ. ಯಾವುದೇ ಸಾಹಿತ್ಯ (ಕಲಾ) ಕೃತಿಯು ತಾನು ಸೃಷ್ಟಿಗೊಂಡ ಪರಿಸ್ಥಿತಿ, ಸನ್ನಿವೇಶಗಳ ಕಡೆಗೆ ಕಿವುಡಾಗಿ, ಕುರುಡಾಗಿ, 'ಒಂದು ಶೂನ್ಯ-ಸಮಾಧಿ ಸ್ಥಿತಿಯಲ್ಲಿ' ರೂಪುಗೊಳ್ಳುವುದು ಅಸಂಭವ, ಹೀಗಾಗಿ 'ಶ್ರೀರಾಮನ ದಿವ್ಯಕಥೆ'ಯನ್ನು ಹೇಳುವುದೇ ಮುಖ್ಯ ಉದ್ದೇಶವಾಗಿರುವ ತೊರವೆ ರಾಮಾಯಣದಲ್ಲೂ ಸಮಕಾಲೀನ ಜನಜೀವನದ 'ರೂಪ-ರೇಖೆ'ಯು ಅಷ್ಟಿಷ್ಟಾಗಿಯಾದರೂ ಸೂಚಿತವಾಗಿದೆ.

ಕುಮಾರ ವಾಲ್ಮೀಕಿಯ ರಾಮಾಯಣದಲ್ಲಿ ಬರುವ ತತ್ಕಾಲೀನ (-ಎಂದರೆ ಆದಿಕಾವ್ಯ ರಾಮಾಯಣ[1] ಮತ್ತು ಇತರ ಆಕರ ಕೃತಿಗಳಲ್ಲಿ ಸಿಗದೆ ಇರುವ) ರಾಜಕೀಯ, ಸಾಮಾಜಿಕ, ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದ 'ಹೇಳಿಕೆ'ಗಳನ್ನು ವಿವೇಚಿಸಿ, ಕೃತಿಯಲ್ಲಿ ಮೂಡಿಬಂದ 'ಪರಿಸರದ ಚಿತ್ರಣ' ವನ್ನು ಪತ್ತೆಹಚ್ಚುವುದೇ ನಮ್ಮ ಉದ್ದೇಶ.

### ರಾಜಕೀಯ ಚಿತ್ರಣ

ರಾಜಕೀಯ ಕ್ಷೇತ್ರಕ್ಕೆ ಸಂಬಂಧಿಸಿದ ಈ ಕೆಳಗಿನ ಉಲ್ಲೇಖಗಳು ತೊರವೆ ರಾಮಾಯಣದಲ್ಲಿ ಸಿಗುತ್ತವೆ.

ಮಂಡಳೇಶ್ವರ[2]
ಮಂಡಳಿಕ[3]
ಸಾವಂತ[4]
ಮನ್ನೆಯ[5]

---

1. ವಾಲ್ಮೀಕಿ ರಾಮಾಯಣದಲ್ಲಿ 'ಸೂಚಿತ'ವಾಗುವ ಸಮಾಜ ವ್ಯವಸ್ಥೆಯ ಕುರಿತು-ಈ ಕೆಳಗಿನ ಗ್ರಂಥಗಳನ್ನು ಗಮನಿಸಬಹುದು.

    1. Evolution of Morals in the Epics-Vora D. P.
    2. Epic India & Riddles of the Ramayana-Vaidya C. V.
    3. Indian Epic Poetry & Indian Wisdom-Monier Williams.
    4. The concept of Dharma in Valmiki Ramayana-Benjamin Khan.
    5. Hindu Polity-Jayaswal. K. P.
    6. Lectures on the Ramayana-V. S. S. Sastri.
    7. A Social Political Study of the Valmiki Ramayana-Ramashraya Sharma.
    8. ರಾಮಾಯಣಕಾಲೀನ ಸಮಾಜ-Vyasa S. N.
    9. ರಾಮಾಯಣ ಕಾಲೀನ ಸಂಸ್ಕೃತಿ-Vyasa S. N.
    10. ಜನತಂತ್ರವಾದ-ರಾಮಾಯಣ ಔರ್ ಮಹಾಭಾರತ ಕಾಲೀನ-Pandya Shyamalal.

ಇತ್ಯಾದಿ.........

ತೊ. ರಾ.
ಕಾ. ಸಂ. ಪ.

2. ೧ ೮ ೧
   ೧ ೧೨ ೩೦, ೨ ೩-೫೦, ೨ ೬-೯, ೪ ೯-೨೨
3. ೧ ೧೫ ೯, ೬ ೨೦-೩.
4. ೧ ೧೫ ೯, ೪ ೯-೨೨, ೬ ೩೪-೨.

ತೊ. ರಾ.
ಕಾಂ. ಸಂ. ಪ.

5. ೧ ೧೨ ೩೦, ೧ ೧೫-೯, ೨ ೩-೫೦.
   ೨ ೬ ೯, ೪ ೯-೨೨, ೪ ೧೦-೫,೬.
   ೬ ೨೦ ೩

ನಿಯೋಗಿ[1]
ಅಷ್ಟಾದಶ ಮಹಾಪ್ರಜೆ[2]
ಪಸಾಯ್ತ (ಯತ) ಸಂಧಿ ವಿಗ್ರಹಿ[3]
ಸುಂಕಿಗ[4]
ತಳವರ[5]
ಬೇಹುಗ[6]
ಮಹಾಜನಪದ[7]
ಜನಪದ[8]
ಮಂಡಲ[9]
ನಾಯಕವಾಡಿ[10]

ತೊರವೆ ರಾಮಾಯಣದಲ್ಲಿ ಈ ಕೆಳಗಿನ ರಾಜ್ಯ ಮತ್ತು ರಾಜ ಮನೆತನಗಳ ಹೆಸರುಗಳೂ ಸಿಗುತ್ತವೆ.

ಲಾಳ, ಚೋಳ, ವರಾಳ, ಯವ, ಬಂಗಾಳ, ಬಾಹ್ಲಿಕ, ಬೋಟ, ಪಾಂಚಾಲ, ಪುಷ್ಕರ, ಪಾರಿಯಾತ್ರ, ಕರೂಷ, ಕಾಂಭೋಜ, ಗೌಳ, ಆಂಧ್ರ, ಕಳಿಂಗ, ಕುರು, ನೇಪಾಳ, ನಿಷಧ, ವಿದರ್ಭ.[11]

ಅಂಗ, ಸಿಂಧು, ಬರ್ಬರ, ಗುರ್ಜರ,[12]

ಪಾಂಡ್ಯ ಮಂಡಲ–ಪಾಂಡ್ಯ,[13] ಹಮ್ಮೀರ, ಮಾಳವ,[14]
ಕಾಶ್ಮೀರ, ಸೌರಾಷ್ಟ್ರ, ಗುರ್ಜರ,[15]
ಕುಂತಳ[16]
ಕೊಂಕಣ[17]
ಸೇವಣ[18]
ಸಿಂಗಣ[19]
ಸುಶರ್ಮ,[20]

---

ತೊ. ರಾ.

| | ಕಾಂ. | ಸಂ. | ಪ. |
|---|---|---|---|
| 1. | ೧ | ೬ | ೯, ೨ ೧-೧೩, ೨ ೨-೧೩, ೨೪. |
| 2. | ೨ | ೬ | ೯, ೫ ೮-೫೪, ೬ ೧೦-೧೪. |
| 3. | ೫ | ೮ | ೫೪, ೬ ೧೦-೧೪. |
| 4. | ೫ | ೮ | ೫೪. |
| 5. | ೫ | ೨ | ೧೭, ೫ ೮-೫೪. |
| | ೬ | ೩೭ | ೬ |
| 6. | ೬ | ೧ | ೨೯ |
| 7. | ೪ | ೧೦ | ೧೧ |
| 8. | ೧ | ೫ | ೧೬, ೨೦, ೧೦ ೭-೧೭. |
| | ೪ | ೯ | ೬, ೪ ೧-೧೧. |
| 9. | ೪ | ೧೦ | ೪, ೪ ೧೧-೬. |
| 10. | ೪ | ೧೧ | ೨೧, ೬ ೧-೧೯. |
| | ೬ | ೪೨ | ೩೫. |

ತೊ. ರಾ.

| | ಕಾಂ. | ಸಂ. | ಪ. |
|---|---|---|---|
| 11. | ೧ | ೭ | ೧೮ |
| 12. | ೧ | ೧೨ | ೨೯ |
| 13. | ೧ | ೧೫ | ೭ |
| 14. | ೬ | ೫ | ೧೭ |
| 15. | ೪ | ೧೦ | ೨ |
| 16. | ೩ | ೧೨ | ೨೫ |
| 17. | ೪ | ೯ | ೪ |
| | ೪ | ೧೦ | ೩ |
| 18. | ೪ | ೧೦ | ೪ |
| | ೬ | ೫ | ೧೭ |
| 19. | ೧ | ೧೨ | ೨೯, ೪ ೧೦-೫, ೬ ೨೮-೬೬. |
| 20. | ೪ | ೧೦ | ೪ |

## ಮಂಡಲೇಶ್ವರ, ಮಂಡಳಿಕ, ಸಾವಂತ

ಕ್ರಿ.ಶ. ೧೨–೧೪ನೇ ಶತಮಾನಗಳ ಕಾಲದ ಕನ್ನಡನಾಡಿನ ರಾಜಕೀಯದಲ್ಲಿ ದ್ವಾರಸಮುದ್ರದ ಹೊಯ್ಸಳ ಮತ್ತು ದೇವಗಿರಿಯ ಸೇವು(ಊ)ಣರ ಹೆಸರುಗಳು ಅಗ್ರಸ್ಥಾನದಲ್ಲಿ ನಿಲ್ಲುತ್ತವೆ. ಈ ಅರಸುಮನೆತನಗಳ ಆಳ್ವಿಕೆಯೊಳಗಿನ ಆಶ್ರಿತ ರಾಜವರ್ಗದವರಲ್ಲಿ 'ಮಹಾಮಂಡಲೇಶ್ವರ'ರು ಮುಖ್ಯರಾಗಿದ್ದರು.[1] 'ಮಹಾಮಂಡಲೇಶ್ವರ' ಮತ್ತು 'ದಂಡನಾಯಕ' ಗಳೆರಡು ಆಡಳಿತ ವ್ಯವಸ್ಥೆಯಲ್ಲಿ ಸಮಾನ ಸ್ಥಾನ ಮಹತ್ತ್ವ ಪಡೆದ 'ಪದವಿ'ಗಳಾಗಿದ್ದವು.[2] ಇವರು ಕೆಲವು ವಿಶಿಷ್ಟ ಹಕ್ಕುಗಳನ್ನೂ, ಸೌಲಭ್ಯಗಳನ್ನು ಹೊಂದಿದವರಾಗಿದ್ದು. ರಾಜನ ನಿರಂಕುಶ ಪ್ರಭುತ್ವವನ್ನು ನಿಯಂತ್ರಣದಲ್ಲಿರಿಸುವಲ್ಲಿ ತಮ್ಮ ಪಾತ್ರವನ್ನು ವಹಿಸುತಿದ್ದರು.[3] ಆದರೆ ಈ ಪದವಿಯು 'ವಂಶ ಪರಂಪರಾಗತವಾದುದಲ್ಲ'–ಎಂಬ ಇತಿಹಾಸಜ್ಞರ ಅಭಿಪ್ರಾಯವಿದೆ.[4]

'ಮಹಾಮಂಡಲೇಶ್ವರ' ಮತ್ತು 'ಸಾವಂತ'–ಈ ಎರಡು ಪದವಿಗಳಲ್ಲಿ ವ್ಯತ್ಯಾಸವಿಲ್ಲವೆಂದೂ[5] ಅವುಗಳು ಪ್ರತ್ಯೇಕವಾದವುಗಳೆಂದೂ[6]–ಎರಡು ಅಭಿಪ್ರಾಯಗಳಿವೆ. ಆ ಎರಡು ಹುದ್ದೆಗಳು ಭಿನ್ನವೆಂದು ಸೂಚಿಸಿ, ಸೇವುಣರಾಜ ಸಿಂಗಣನ ಆಶ್ರಿತರಲ್ಲೊಬ್ಬನಾದ ಮಲ್ಲಿದೇವರಸನು 'ಮಹಾಮಂಡಲೇಶ್ವರ'ನಾಗಿದ್ದು ಅವನ ಪೂರ್ವಜರು 'ಮಹಾಸಾಮಂತ'ರು ಮಾತ್ರ ಆಗಿದ್ದರೆಂದೂ, ಇವನು ತನ್ನ ಹಿರಿಯರ 'ಮಹಾಸಾಮಂತ' ಹುದ್ದೆಯಿಂದ 'ಮಹಾಮಂಡಲೇಶ್ವರ ಸ್ಥಾನಕ್ಕೆ ಉತ್ತೀರ್ಣಗೊಳಿಸಲ್ಪಟ್ಟಿದ್ದಿರಬೇಕೆಂದೂ ಹೇಳಲಾಗಿದೆ.[7] ಮಂಡಲೇಶ್ವರರು ಆಶ್ರಿತರಾಜರಲ್ಲಿ ಉನ್ನತ ವರ್ಗದವರೆಂದೂ, ಮಂಡಳಿಕ ಸ್ಥಾನ ಎರಡನೆಯದೆಂದೂ, ಸಾಮಂತರು ಮಂಡಳಿಕರಿಗಿಂತಲೂ ನಂತರದ ಸ್ಥಾನದವರೆಂದೂ–ವಿವರಣೆ ದೊರೆಯುತ್ತದೆ.[8]

ಹೊಯ್ಸಳ ನರಸಿಂಹನ (ಕ್ರಿ.ಶ. ೧೧೪೨–೧೧೭೩) ಆಸ್ಥಾನದಲ್ಲಿ 'ಎಕ್ಕಲ, ಸೋಮ'ರೆಂಬವರು 'ಮಹಾಮಂಡಲೇಶ್ವರ'ರಾಗಿದ್ದರು.[9]

ಹೊಯ್ಸಳ ವಿಷ್ಣುವರ್ಧನ (೧೧೦೮-೧೧೪೨)ನಿಗೆ 'ತೊಂಡ ಮಂಡಳಿಕ ಬಡಬಾಗ್ನಿ'–ಎಂಬ ಪ್ರಶಸ್ತಿಯಿದ್ದಿತಾಗಿ ಶಾಸನಾಧ್ಯಯನದಿಂದ ತಿಳಿಯುತ್ತದೆ.[10]

'ಲಕ್ಷ್ಮೀ ಪಾಲದೇವ'ನೆಂಬವನು ಸೇವಣರಾಜ ಸಿಂಗಣ (೧೨೦೦-೧೨೪೭)ನ ಮಹಾಮಂಡಲೇಶ್ವರರಲ್ಲಿ ಒಬ್ಬನಾಗಿದ್ದನು.[11]

ಕುಮಾರವಾಲ್ಮೀಕಿಯು ಪ್ರಚಲಿತ ರಾಜಕೀಯದ ಪ್ರಭಾವದಿಂದಲೇ ತನ್ನ ಕೃತಿಯಲ್ಲಿ 'ಮಂಡಲೇಶ್ವರ,' ಮಂಡಳಿಕ, ಸಾವಂತ–ಈ (ವಾ. ರಾ.ದಲ್ಲಿ ದೊರೆಯುವ) ಪದಗಳನ್ನು ಹೇಳಿರಬೇಕು.

---

1. The Majority of the feudatories are referred to as Mahamandaleshwaras-A. V. Narasimhamurthy-The Sevunas of Devagiri. p. 152.
2. 'Thus in the whole administrative set up in South India the Mahamandaleshwara. Udaiyara, wraiyar and arasu-had as much a place as the 'dandnayaka'—T. V. Mahalingam, South Indian polity p. 9.
3. Each subordinate chieftain (Mahamandaleswara or Savanta) claimed certain rights, privileges and precedence and actually enjoyed them and at least to the exlent to which they were in the enjoyment of such rights, the absolutism of the King was under restraint'-T. V. Mahalingam-South India polity-p. 18.
4. T. V. Mahalingam-South Indian polity-p. 18.
5. T. V. Mahalingam-South Indian polity. p. 18.
6. J. Duncan M. Derrett-The Hoysalas. p. 188.
7. A. N. Narasimha murthy-The Sevunas of Devagiri-p. 152.
8. J. D. M. Derrett-The Hoysalas-p. 188.
9. Do p. 75.
10. Do p.63 (ಶ್ರವಣಬೆಳಗೊಳ ಶಾಸನ) 1131.
11. A. V. Narasimhamurthy-The Sevunas of Devagiri. p. 153.

## ಮನ್ನೆಯ

'ಮನ್ನೆಯ' ಎನ್ನುವುದು ಒಂದು ಹುದ್ದೆಯ ಹೆಸರು.[1]

'ಕೆಲವೆಡೆ ಮಂಡಲೇಶ್ವರನಿಗೂ, ನಾಡಪ್ರಭುವಿಗೂ ಮಧ್ಯೆ 'ಮನ್ನೆಯ' ಅಥವಾ 'ಮಾನ್ಯ' ಎಂಬ ಹೆಸರಿನ ಅಧಿಕಾರಿಯ ಹೆಸರೂ ಸುಳಿಯುವುದುಂಟು. ಕೆಲವೆಡೆ, 'ಮನ್ನೆಯ' ಎಂಬುದು ನಾಡಪ್ರಭುವಿನ ಸ್ಥಾನದಲ್ಲಿ ಕಾಣಿಸಿಕೊಳ್ಳುವುದೂ ಉಂಟು.[2]

ತೊರವೆ ರಾಮಾಯಣದ ಕಾಲ ಸಮೀಪವರ್ತಿಗಳಾದ ಹಲವು ಶಾಸನಗಳಲ್ಲಿ 'ಮನ್ನೆಯ' ಪದವು ಬಳಸಲ್ಪಟ್ಟಿರುವುದನ್ನು ಕಾಣಬಹುದು. ಉದಾ:

೧. ಹೊಸೂರಿನ ಶಾಸನ–'ಹನ್ನೆರಡರ ಮನ್ನೆಯ'[3]

೨. ತಾಂಬ್ರ ಗಂಡಿಯ ಶಾಸನ.[4]

೩. ಸಿರೋಲ್ ಶಾಸನ.[5]

ದೇವಗಿರಿಯ ಸೇವುಣರ ಕಾಲದ ಶಾಸನಗಳಲ್ಲಿ 'ಮನ್ನೆಯ' ಪದದ ಉಲ್ಲೇಖವು ಹೆಚ್ಚಾಗಿ ದೊರೆಯುತ್ತದೆ. ಉದಾಹರಣೆಗಾಗಿ ಕೆಲವನ್ನು ಇಲ್ಲಿ ಹೇಳಬಹುದು:

೪. ಅಕ್ಕಲ್ಕೋಟೆಯ ಶಾಸನಗಳು.[6]

೫. ತದವಾಲ್ ಶಾಸನ.[7]

೬. ಕಾರಕ್ಕಲ್ ಶಾಸನ[8]

ಇನ್ನೂ ಕೆಲವು ಉಲ್ಲೇಖಗಳು:

೭. ಸತ್ತಿಗೆ ನಾಡಿನ 'ಮನ್ನೆಯ'ನಾದ ಬೊಪ್ಪದೇವರಸ.[9]

೮. ನಾಗರಖಂಡ ಕಂಪನದ 'ಮನ್ನೆಯ'ನಾದ ಬೊಪ್ಪದೇವ[10]

೯. 'ಮನ್ನೆಯ' ಬೊಪ್ಪಯ್ಯ.[11]

---

1. ಬಿ. ಎ. ಸಾಲೆತ್ತೂರ್–Social and political life in the Vijayanagar Empire I ರ ಪುಟ ೧೪೯ರ ಅಡಿಟಿಪ್ಪಣಿ.
2. ಎಂ. ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ-ಪು. ೩೪೨.
3. ಎಸ್. ಐ. ಐ. ಸಂಪುಟ ೧೧-೧ರ ಸಂಖ್ಯೆ ೪೬ನೇ ಕ್ರಿ.ಶ. ೯೯೫ರ ಹೊಸೂರ ಶಾಸನ-ಸಾಲು. ೧೧.
4. ಇದೇ. ೯೨ನೇ ಕ್ರಿ. ಶ. ೧೦೫೪ರ ಶಾಸನ–ಸಾಲು ೨೯.
5. ಇದೇ. ೧೧-೨ರ ಸಂಖ್ಯೆ ೧೬೨ನೇ ಕ್ರಿ.ಶ. ೧೧೨೧ರ ಶಾಸನ-'ಮನ್ನೆಯ ಬಂಗಾರ'-ಸಾಲು ೧೯.
6. ೧) ಕರ್ನಾಟಕ ಇನ್ಸ್ಕ್ರಿಪ್ಶನ್ಸ್-ಸಂಪುಟ ೨-ಸಂಖ್ಯೆ ೩೩ನೇ ಕ್ರಿ.ಶ. ೧೨೧೧ರ–ಸಿಂಗಣನ ಉಲ್ಲೇಖವಿರುವ ಶಾಸನ ಸಾಲು–೨೧.
   ೨) ಇದೇ ಸಂಖ್ಯೆ ೩೯ನೇ ಕ್ರಿ.ಶ. ೧೨೫೫ರ ಶಾಸನ-ಸಾಲು ೮.
7. ಕರ್ನಾಟಕ ಇನ್ಸ್ಕ್ರಿಪ್ಶನ್ಸ್-ಸಂಪುಟ–೩ರ ಸಂಖ್ಯೆ ೪೧ನೇ–ಯಾದವ ಕಂಧರ ದೇವನ ಉಲ್ಲೇಖವಿರುವ ಶಾಸನ. ಸಾಲು-೬.
8. ಹೈದರಾಬಾದ್ ಆರ್ಕಿಯಲೋಜಿಕಲ್ ಸೀರೀಸ್-೧೮ರ ಸಂಖ್ಯೆ ೧೪ನೇ ಕ್ರಿ.ಶ. ೧೧೯೧ರ ಯಾದವ ಭಿಲ್ಲಮನ ಕಾಲದ ಶಾಸನ. ಸಾಲು-೫-'ಮಂನೆಯ ಗೊಡತಿ'
   (ಸಂಖ್ಯೆ ೫ನೇ ಕ್ರಿ.ಶ. ೧೦೫೭ರ ಮಾನ್ವಿ ಶಾಸನ)
   (ಸಂಖ್ಯೆ ೬ನೆ ಕ್ರಿ.ಶ. ೧೦೬೬ರ ಹೈದರಾಬಾದ್ ಶಾಸನ)
9. E. C. ೮–೨೭೬. ಪು. ೪೬
10. E. C. ೬ ಪು. ೫೬—ಈ ೩ ಮತ್ತು ೪ ಬಿ. ಎ. ಸಾಲೆತ್ತೂರರಿಂದ-Social and Political life in the V. Empire-vol I ಪು. ೧೪೯ರಿಂದ.
11. ತಿ. ತಾ. ಶರ್ಮ-ವಿಚಾರ ಕರ್ನಾಟಕ–ಪು. ೨೪೪.

ಹೀಗೆ ಶಾಸನಗಳಲ್ಲಿ ' ಮನ್ನೆಯ ' ಪದದ ವಿಪುಲ ಉಲ್ಲೇಖಗಳನ್ನು ಕಂಡಾಗ, ತತ್ಕಾಲೀನ ಆಡಳಿತದ ವ್ಯವಸ್ಥೆಯನ್ನು ಗಮನಿಸಿದಾಗ, ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ ' ಮನ್ನೆಯ ' ಪದವನ್ನು ' ಪರಿಸರದ ರಾಜಕೀಯ ಪ್ರಜ್ಞೆ 'ಯಿಂದಲೇ ಬಳಸಿರಬೇಕೆಂದೆನಿಸುತ್ತದೆ.

## ನಿಯೋಗಿ

ಸೇವುಣರ ಕಾಲದಲ್ಲಿ ' ಬಾಹತ್ತರ ನಿಯೋಗಾಧಿಪತಿ ' ಎಂಬ ಮಂತ್ರಿ (ಅಧಿಕಾರಿ) ಇದ್ದಂತೆ ತಿಳಿದು ಬರುತ್ತದೆ. ಈ ಪದವಿಯನ್ನು ಸೂಚಿಸುವ ' ಬಾಹತ್ತರ ' ಪದದ ಅರ್ಥವೇನೆಂದು ಸ್ಪಷ್ಟವಾಗಿಲ್ಲವಾದರೂ, ಅದು ಉನ್ನತ ಅಧಿಕಾರವನ್ನು ಸೂಚಿಸುತ್ತದೆ ಎಂದೂ, ' ಬಾಹತ್ತರ ' ಎನ್ನುವುದರ ವಾಚ್ಯಾರ್ಥ ೭೨ ಎಂದಾದರೂ, ಅದು ' ಹೆಚ್ಚಿನ ', ' ಬಹಳ ' ಎನ್ನುವುದನ್ನು ಧ್ವನಿಸುತ್ತಿರಬಹುದೆಂದೂ ಇತಿಹಾಸಕಾರರಲ್ಲಿ ಸಹಮತವಿದೆ.[1]

" ಸಂಧಿ ವಿಗ್ರಹಿ " ಯಾಗಿದ್ದ ರವಿದೇವನು, ರಾಜನ ಪರವಾಗಿ ' ನಿಯೋಗಿ 'ಯಾಗಿ ಹೋಗಿಬರುತ್ತಿದ್ದನು...... ಸಂಧಿವಿಗ್ರಹಿಗಳಲ್ಲದ ಇತರರೂ ' ನಿಯೋಗಿ 'ಗಳಾಗಿ ಕೆಲಸಮಾಡುತ್ತಿದ್ದರು. ಈ ' ನಿಯೋಗಿ 'ಗಳನ್ನು ಮಹತ್ತರರೆಂದೂ ಕರೆಯುತ್ತಿದ್ದರು "[2]

ಸೇವುಣರ ಕಾಲದಲ್ಲಿ ಸರ್ವಾಧಿಕಾರಿ ಲಕ್ಷ್ಮೀಧರ ಮತ್ತು ಸರ್ವಾಧಿಕಾರಿ ಬಸವರಸ-ಇವರು ' ಬಾಹತ್ತರ ನಿಯೋಗಾಧಿಪತಿ ' ಗಳಾಗಿದ್ದರು.[3]

ಹೊಯ್ಸಳರ ಕಾಲದಲ್ಲಿಯೂ ' ಬಾಹತ್ತರ ನಿಯೋಗಾಧಿಪತಿ ' ಎಂಬ ಹುದ್ದೆಯಿತ್ತು.[4]

ಕ್ರಿ.ಶ. ೧೨೧೭, ೧೩೧೫ ಮತ್ತು ೧೩೨೪ರ ಶಾಸನಗಳಲ್ಲಿ ' ಬಾಹತ್ತರ ನಿಯೋಗ ' ಎಂಬ ಉಲ್ಲೇಖ ಸಿಗುತ್ತದೆ.[5] ಈ ಶಾಸನಗಳ ಕಾಲವು ಕುಮಾರ ವಾಲ್ಮೀಕಿಯ ಕಾಲಕ್ಕೆ ಸಮೀಪವರ್ತಿಯಾದುದು–ಎನ್ನುವ ಅಂಶವನ್ನು ಗಮನಿಸಬೇಕು.

## ಸಂಧಿ ವಿಗ್ರಹಿ[6]

ಈಗಿನ ವಿದೇಶಾಂಗ ಮಂತ್ರಿಯಂತೆ, ಆಗಿನ ಆಡಳಿತವ್ಯವಸ್ಥೆಯಲ್ಲಿ ' ಸಂಧಿವಿಗ್ರಹಿ ' ಎಂಬ ಹೆಸರಿನ ಅಧಿಕಾರಿಯಿದ್ದಂತೆ ತಿಳಿದು ಬರುತ್ತದೆ.

---

1. (1) B. A. Saletore-Ancient Karnataka Vol. I p. 184.
   (2) Derrett-The Hoysalas p. 191.
   (3) K. V Ramesh-A History of South Kanara p. 248.
   (4) A. V. Narasimha murthy-The Sevunas of Devagiri p. 149.
2. ಎಂ. ಚಿದಾನಂದ ಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ–ಪು. ೨೫೩.
   ಇದೇ ಪುಟದ ಅಡಿ ಟಿಪ್ಪಣಿಯಲ್ಲಿ 'ಮಹತ್ತರ ಎಂಬುದು ಅಧಿಕಾರ ಸೂಚಕವಾದ ಸಾಮಾನ್ಯಪದ. (General term) ಬಹುಶಃ ' ಪೆರ್ಗಡೆ ' ಎಂಬುದು ಅದಕ್ಕೆ ಸಮಾನವಾದ ಕನ್ನಡ ಪದ. ' ನಿಯೋಗಿ 'ಯು ಒಬ್ಬ ಅಧಿಕಾರಿಯಾಗಿದ್ದುದರಿಂದಲೇ ಅವನನ್ನು ' ಆದಿಪುರಾಣ 'ದಲ್ಲಿ ' ಮಹತ್ತರ 'ನೆಂದೂ, ಪಂಪ ಭಾರತದಲ್ಲಿ ' ಪೆರ್ಗಡೆ ಎಂದೂ ಕರೆದಿರುವುದು.'
3. A. V. N. Murthy-The Sevunas of Devagiri. p. 149.
4. Derrett-The Hoysalas-p. 191.
5. K. V. Ramesh-A. History of South Kanara-p. 125, 131, 133 ಇದೇ ಪುಟ. 139. 140, 248ರಲ್ಲೂ ಈ ಕುರಿತು ಇದೆ.
6. ' ಸಂಧಿ ವಿಗ್ರಹಿ 'ಯ ಕುರಿತಾಗಿ ' ಮಿತಾಕ್ಷರ 'ದ ಒಂದು ಶ್ಲೋಕವನ್ನು ಎ. ಎಸ್. ಅಲ್ತೇಕರರು ತಮ್ಮ Rastrakutas and their times- ಪುಟ ೧೬೬ರಲ್ಲಿ ಉದ್ಧರಿಸಿರುತ್ತಾರೆ :

   ಸಂಧಿವಿಗ್ರಹ ಕಾರೀತು ಭವೇದ್ಯಸ್ತಸ್ಯ ಲೇಖಕಃ ।
   ಸ್ವಯಂ ರಾಜ್ಞಾ ಸಮಾದಿಷ್ಟಸ್ಸ ಲಿಖೇದ್ರಾಜಶಾಸನಮ್ ॥

ಶ್ರೀನಾಯಕನು ಸೇವುಣ ಚಂದ್ರ–೨ನೆಯವನ ಕಾಲದಲ್ಲಿ (ಕ್ರಿ.ಶ. ೧೦೬೯–೧೦೯೮) 'ಸಂಧಿ ವಿಗ್ರಹಿ'ಯಾಗಿದ್ದ ನೆಂದೂ,[1] ಹೊಯ್ಸಳ ಆಡಳಿತ ವ್ಯವಸ್ಥೆಯಲ್ಲೂ 'ಸಂಧಿ ವಿಗ್ರಹಿ' ಅಥವಾ 'ಸಂಧಿ ವಿಗ್ರಹಿಕ' ನೆಂಬ ಪದವಿಯಿದ್ದು, ಅವರಲ್ಲೊಬ್ಬನಾದ 'ಪುಣೀಶ'ನಿಗೆ, ಸಂಧಿ ವಿಗ್ರಹಿ ಎಂಬ ಬಿರುದಿನೊಂದಿಗೆ–ದಂಡನಾಯಕ, ಮಹಾ ಪ್ರಧಾನ– ಎನ್ನುವ ಪ್ರಶಸ್ತಿಗಳಿದ್ದುವೆಂದೂ ಗೊತ್ತಾಗುತ್ತದೆ.[2]

"ಸೂಕ್ತಿ ಸುಧಾರ್ಣವ"ದಲ್ಲಿ[3] ಸಂಧಿವಿಗ್ರಹಿಯ ಯೋಗ್ಯತೆಗಳನ್ನು ಹೀಗೆ ಹೇಳಲಾಗಿದೆ : 'ಚದುರಂ, ಭಾವುಕನ್, ಇಂಗಿತಜ್ಞನ್, ಅರಿವುಳ್ಳಂ, ದೇಶಭಾಷಾನ್ವಿತಂ, ಪದವಾಕ್ಯಾರ್ಥ ವಿವಕ್ಷಿತಂ, ಬಹುಕಳಾ ಸಂಪನ್ನನ್, ವಾಗ್ಮೀತ್ತನ್.'[4]

ಧಾರವಾಡ ಜಿಲ್ಲಾ ಯಳಿಶಿರೂರು (Yalisirur) ಶಾಸನ,[5] ಗದಗ ತಾಲ್ಲೂಕು ಸೊರಟೂರು ಶಾಸನ[6]–ಗಳಲ್ಲೂ 'ಸಂಧಿ ವಿಗ್ರಹಿ'ಯ ಉಲ್ಲೇಖವಿದೆ.

## ದಂಡನಾಯಕ (ದಣ್ಣಾಯಕ), ನಾಯಕ, ನಾಯಕ ವಾಡಿ, ಪಸಾಯಿತ.

ಸೇವುಣ, ಹೊಯ್ಸಳರ ಆಡಳಿತ ವ್ಯವಸ್ಥೆಯಲ್ಲಿ, ದಂಡನಾಯಕ (ದಂಡನಾಥ, ದಣ್ಣಾಯಕ) ಹುದ್ದೆಗೆ ಹೆಚ್ಚಿನ ಮನ್ನಣೆ ಸಲ್ಲುತಿತ್ತು.

## ಸೇವುಣರ ಕಾಲದ ಶಾಸನಗಳಲ್ಲಿ,

ಸೇನಾಧಿಪತಿ (ದಂಡನಾಯಕ) ವಂಕದೇವ.
ಸೇನಾಪತಿ ದಾಮೋದರ,
ಸೇನಾಧಿಪತಿ ಬಮ್ಮೆಯ ನಾಯಕ,
ದಂಡನಾಯಕ ಬೀಚ
ದಂಡನಾಯಕ ಮಾಯಿದೇವ–

ಈ ಹೆಸರುಗಳು ದೊರೆಯುತ್ತವೆ.[7] ಇವರು ಯುದ್ಧಕಾಲದಲ್ಲಿ ದಳಪತಿಗಳಾಗಿರುತಿದ್ದು, ಶಾಂತಿಕಾಲದಲ್ಲಿ ಒಳಾಡಳಿತದ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತಿದ್ದರು.

ಹೊಯ್ಸಳರ ರಾಜಕೀಯದಲ್ಲೂ ದಣ್ಣಾಯಕ, ಪಸಾಯತರೆಂಬ[8] ಪದವಿಗಳಿದ್ದವು. ವೀರಬಲ್ಲಾಳ (೨ನೆಯ

---

1. A. V. Narasimha Murthy-The Sevunas of Devagiri-p. 149.
2. Derrett-The Hoysalas-p. 47.
3. ಮಲ್ಲಿಕಾರ್ಜುನ ರಚಿತ 'ಸೂಕ್ತಿಸುಧಾರ್ಣವ' ಕಾಲ ಸು. ೧೨೪೫-ಕ. ಕ. ಚ. ೧-ಪುಟ ೪೧೯.
   ಸೂಕ್ತಿಸುಧಾರ್ಣವ-ಸಂ : ಎನ್. ಅನಂತರಂಗಾಚಾರ್-ಕಾಲ ಸು. ೧೨೪೦ ಎಂದಿದೆ.
4. ಸೂಕ್ತಿ ಸುಧಾರ್ಣವಂ–ಪುಟ. ೩೬೧, ೩೭೩.
5. S. I. I. vol XI-೫೦ನೇ ಕ್ರಿ.ಶ. ೧೧೩೪ರ ಶಾಸನ-ಈ ಸಾಲು ೨೫ರಲ್ಲಿ 'ಕನ್ನಡ ಸಂಧಿವಿಗ್ರಹಿ' ಎಂದಿದೆ.
6. S. I. I. vol XI-I ೧೧೧ನೆ ಕ್ರಿ.ಶ. ೧೦೭೧ರ ಶಾಸನ–ಸಾಲು ೧೩ರಲ್ಲಿ "ಸಂಧಿವಿಗ್ರಹಿ" ಎಂದೂ, ಸಾಲು ೭೨ ರಲ್ಲಿ 'ಕನ್ನಡ ಸಂಧಿವಿಗ್ರಹಿ' ಎಂದೂ ಇದೆ.
   'ಸಕಳ ಕಳಾಬ್ರಹ್ಮ ಬ್ರಹ್ಮಕವಿಚೂಡಾಮಣಿ' ಯೆನಿಸಿದ 'ಸಂಧಿವಿಗ್ರಹಿ' ಪದ್ಮ;
   ತನ್ನ 'ವಿದ್ಯಾವಿಭವದಿಂದ' 'ಲಾಳ ಸಂಧಿವಿಗ್ರಹ' ಪದವಿ ಪಡೆದ 'ಸಂಧಿ ವಿಗ್ರಹಿ' ರವಿಚಮೂಪತಿ;
   'ಶಸ್ತ್ರಶಾಸ್ತ್ರಸಾಹಿತ್ಯ ಕಳಾ ಜನನಿಧಿ' ಯಾಗಿದ್ದ ತ್ರಿಭುವನ ಮಲ್ಲದೇವನ 'ಸಂಧಿವಿಗ್ರಹಿ"–ಇಂತಹ ಶಾಸನೋಕ್ತ ವಿವರಗಳಿಗೆ–ಎಂ. ಚಿದಾನಂದ ಮೂರ್ತಿಯವರ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ–ಪುಟ ೨೫೨-೨೫೩ ನೋಡಬಹುದು.
7. A. V. Narasimhy Murthy-The Sevunas of Devagiri-p. 148.
8. Derrett-The Hoysalas-191. Mahapasayata (principal master of the robes) (ಪಸಾಯತ ಎಂಬ ಪದವು "ಪ್ರಸಾಧನ" ಎಂಬ ಪದದಿಂದ ಬಂದಿರಬಹುದೇ ?-ಪ್ರಚ್ಛದ (ಆಭರಣ-ಪಚ್ಚಾಯ್ಲ– ಪಚ್ಚಾಯಿಲ–ಪಸಾಯಿತ-ಹೀಗೆ ನಿಷ್ಪನ್ನವಾಗಿರಬಹುದೆ ?)

ಬಲ್ಲಾಳ. ೧೧೭೩–೧೨೨೦)ನ ಆಸ್ಥಾನದ 'ಪೋಲಾಳ್ವ'ನು 'ವೈಷ್ಣವ ಚಕ್ರವರ್ತಿ' ಯೆಂದೂ, ರಣರಂಗದಲ್ಲಿ "ತೊಲಗದ ಕಂಬ"[1] ಎಂದೂ ಖ್ಯಾತಿ ಪಡೆದ ದಂಡನಾಯಕನಾಗಿದ್ದನು.

"ನಾಯಕ" ಎಂಬ ಶಬ್ದವು, ಹೊಯ್ಸಳರ ಕಾಲದಲ್ಲಿ–ಜಹಗೀರುದಾರ ಅಥವಾ ಪಾಳಯಗಾರ ಎಂಬ ವಿಶಿಷ್ಟವಾದ ಅರ್ಥದಲ್ಲಿ ಬಳಕೆಯಲ್ಲಿತ್ತೆಂದೂ ಅಭಿಪ್ರಾಯವಿದೆ.[2]

## ಅಷ್ಟಾದಶ ಮಹಾಪ್ರಜೆ

ಶ್ರೀರಾಮನು ವನವಾಸಕ್ಕೆ ಹೊರಟಾಗ, ಅವನನ್ನು ಹಿಂಬಾಲಿಸಿಕೊಂಡು

> ತೆರಳಿತಷ್ಟಾದಶ ಮಹಾಪ್ರಜೆ
> ಪುರದೊಳಿಲ್ಲೊಳಿಕೆ ನಾಯ್....

ಅಯೋಧ್ಯೆಯ 'ಅಷ್ಟಾದಶ ಮಹಾಪ್ರಜೆಗಳೂ' ಹೊರಟರು, ನಗರವು ಒಂದು ನಾಯಿಯೂ ಇಲ್ಲದಷ್ಟು ಶೂನ್ಯವಾಗಿತ್ತು–ಎಂದು ಕುಮಾರ ವಾಲ್ಮೀಕಿಯು ವರ್ಣಿಸುತ್ತಾನೆ.[3] ಅಷ್ಟಾದಶ ಮಹಾಪ್ರಜೆ ಎಂಬ ಪದ ಪ್ರಯೋಗಕ್ಕೆ ಕವಿಯ ಸಮಕಾಲೀನ ಪ್ರಜ್ಞೆಯೇ ಕಾರಣ. (ಇಂತಹ ಹೇಳಿಕೆಯು ವಾ. ರಾ. ದಲ್ಲಿಲ್ಲ.)

೧೨ನೇ ಶತಮಾನದಲ್ಲಿ 'ನಗರ ಸಮೂಹ' (ಆಧುನಿಕ ಕಾಲದ ನಗರ ಸಭೆ)ದ ಅಸ್ತಿತ್ವದ ಕುರುಹಾಗಿ, ಆ ಕಾಲದ ಶಾಸನಗಳಲ್ಲಿ 'ಪದಿನೆಂಟು ಪಟ್ಟಣ'ದ ವ್ಯವಸ್ಥೆಯ ಉಲ್ಲೇಖವು ನಮಗೆ ದೊರೆಯುತ್ತದೆ.[4]

ತುಳುನಾಡಿನ ಅಲೂಪರಕಾಲದ ಉದ್ಯಾವರದ ಶಾಸನವೊಂದರಲ್ಲಿ 'ಪದಿನೆಂಟು ಪಟ್ಟಣ'ದ ಪತ್ತಿಯ ಉಲ್ಲೇಖವಿದೆ.[5] 'ಅರುವತ್ತೊಕ್ಕಲು ಬ್ರಾಹ್ಮಣರು,'[6] ಹದಿನೆಂಟೊಕ್ಕಲು, ಹತ್ತೊಕ್ಕಲುಗಳೆಂಬ ಪದಗಳು ಒಂದು 'ಸಾಮೂಹಿಕ ವ್ಯವಸ್ಥೆ'ಯನ್ನು ಸೂಚಿಸುತ್ತವೆ. ಇದೇ ಸಂಬಂಧವಾಗಿ **ಅಷ್ಟಾದಶ: ಜಾತಿಭಿ:** ಎಂಬ ಪದವೂ ದೊರೆಯುತ್ತದೆ.[7]

ಸೇವುಣರ ಕಾಲದಲ್ಲಿ ಇಂತಹ 'ಹಳ್ಳಿಗಳ ಒಕ್ಕೂಟ'ದ ವ್ಯವಸ್ಥೆಯಿದ್ದು **'ಹದಿನೆಂಟರ'** ವ್ಯವಸ್ಥೆಯ ಸೂಚನೆಯೂ ಶಾಸನದಲ್ಲಿದೆ.[8]

ಇವನ್ನೆಲ್ಲಾ ಗಮನಿಸಿದಾಗ, ಕವಿಯು ತನ್ನ ಕಾಲದಲ್ಲಿ ರೂಢಿಯಲ್ಲಿದ್ದ ಒಂದು 'ಸಂಘಟನಾ ವ್ಯವಸ್ಥೆ'ಯನ್ನೇ 'ಅಷ್ಟಾದಶ ಮಹಾಪ್ರಜೆ' ಎಂಬ ಪದದ ಬಳಕೆಯಿಂದ ಧ್ವನಿಸಿದ್ದಾನೆ–ಎನ್ನಬೇಕು.

## ಜನ ಜೀವನ ಚಿತ್ರಣ

### ವಿವಿಧ ವೃತ್ತಿಗಳು

ಬೇಸಾಯವೇ ಮುಖ್ಯ ಜೀವನ ವೃತ್ತಿಯಾಗಿ ಉಳ್ಳ "ಬದುಕಿ"ಗೆ ಸಂಬಂಧಿಸಿದ ಈ ಕೆಲವು ಸುಳಿವು–ಹೊಳವುಗಳು ತೊರವೆ ರಾಮಾಯಣದಲ್ಲಿ ಗೋಚರಿಸುತ್ತವೆ.

---

1. ಕುಮಾರ ವಾಲ್ಮೀಕಿಯು ತೊ. ರಾ. (VI ೪೫-೫೮)ದಲ್ಲಿ 'ತೊಲಗದ ಕಂಬ ಎಂಬ ಉಬ್ಬಾಳು' ಎಂದಿದ್ದಾನೆ.
2. These who held lands from the King came to be called 'Nayakas', though in later times, the term was used to dencte a variety of offices and castes. T. V. Mahalingam-South Indian polity. p. 32)
3. ತೊ. ರಾ. ಅಯೋಧ್ಯಕಾಂಡ, ೩–೬೦.
4. B. A. Sal:tore-An ient Karnataka Vol. I p. 177.
5. K. V. Ramesh-A History of South Kan ra-p 85
6. ನಾ. ಶ್ರೀ. ರಾಜಪುರೋಹಿತ–ಅರುವತ್ತೊಕ್ಕಲು ಬ್ರಾಹ್ಮಣರು–ಜಯಕರ್ನಾಟಕ, ೧೩–೮ (ಅಡಿಟಿಪ್ಪಣಿ)
7. R S Mugali-The Heritage of Karnataka, p 99.
8. A. V. N. Murthy-The Sevunas of Devagiri, p. 155.(18 samaya's)

### ಬೇಸಾಯಕ್ಕೆ ಸಂಬಂಧಿಸಿದ ಉಪಕರಣಗಳು

ಕುಡುಗೋಲು, ಕುಳು, (ನೇಗಿಲಿನ ಕುಳ), ಕುಡ (ಕೊಡ ?), ಕೂರಿಗೆ, ಕೊಡಲಿ, ಗುದ್ದಲಿ, ಮಡಕೆ, ಹೆಡಗೆ (ದೊಡ್ಡ ಬುಟ್ಟಿ); ಬೀಜದ ಮೂಡೆ[1] (ಮೂಟೆ), ಮೊರ, ಗಂಗಸ (ಗೊಂಗಸ–ಕಬ್ಬಿನ ಹಿತ್ತಿಲಿಗೆ ನುಗ್ಗುವ ನರಿಗಳನ್ನು ಬಂಧಿಸುವ ಒಂದು ಉಪಕರಣ) ಹೊಡಕೆ, ಮಿಣಿ, ಹೊರಜೆ, ನೊಗ, ಬಂಡಿ, ಡಾವಣಿ, ಕೀಲಚ್ಚು, ಕೂಬರ, ಬಳೆ ಮೊಳೆ, ಹಾರೆ.

### ನೀರಾವರಿಗೆ ಸಂಬಂಧಿಸಿ

ವಾಪಿ, ತಟಾಕ, ಹಳ್ಳ, ತೊರೆ, ಕೆರೆ, ಕಟ್ಟೆ, ತೂಂಬು, (ಮುಚ್ಚುದೂಂಬು) ; ಏತ, ರಾಟಾಳ, ಹೊಳೆ ಗಾಲುವೆ, ಕಾರಿಗೆ, ಕನಕದ್ರೋಣಿ, ಸಾರ (ಚಿಕ್ಕ ಸೇತುವೆ ? ಅಟ್ಟಳಿಗೆ ?) ಅಟ್ಟಣೆ ; ಕೆರೆದುಂಬುಗಳ ನೀರು[2]

### ಬೇಸಾಯ ಉತ್ಪತ್ತಿಗಳು

ಸಿರಿಯ ಶಾಲಿವನ (ಬತ್ತದ ಹೊಲ), ಧವಳೇಕ್ಷು[3] (ಒಂದು ಜಾತಿಯ ಕಬ್ಬು) ಕಳವೆ, ಕದಳಿ, ದ್ರಾಕ್ಷಿ,[4] ಅರಳೆ. ಮೆಣಸು, ಎಳೆದೆಲೆ, ಶುಂಠಿ, ಸಾಸಿವೆ, ಕುಸುಬೆ, ಅಗಸೆ, ಇಪ್ಪೆ.

### ನೇಕಾರ ವೃತ್ತಿ–ವೈವಿಧ್ಯಮಯ ಸೀರೆಗಳು

ಕುಮಾರ ವಾಲ್ಮೀಕಿಯು ಹತ್ತಿ ಹೇರಳ ಬೆಳೆಯುವ ಕರಿಮಣ್ಣಿನ ಬಯಲು ಸೀಮೆಯವನಾದುದರಿಂದ ಅವನ ಕೃತಿಯಲ್ಲಿ ' ಹತ್ತಿಯ (ಅರಳೆ) ಹೇರು 'ಗಳ ಉಲ್ಲೇಖವೂ,[5] ನೇಕಾರ ವೃತ್ತಿಯ ಕುಶಲತೆಯನ್ನು ವರ್ಣಿಸುವ, ವಿವಿಧ ವಸ್ತ್ರ, ಸೀರೆಗಳ ವರ್ಣನೆಯೂ ಸಹಜವಾಗಿ ಬಂದಿವೆ.

ಲಂಕಾ ದಹನ ಪೂರ್ವದಲ್ಲಿ ಹನುಮಂತನ ಬಾಲವನ್ನು ಸುತ್ತಿಕೊಂಡ ಸೀರೆಗಳಲ್ಲಿ, ಕವಿಯ ಕಾಲದ " ನೇಕಾರಿಕೆ "ಯ ವೈಭವದ ದರ್ಶನವಾಗುತ್ತದೆ.

ಭಾರಸಂಖ್ಯೆಯ ಬಣ್ಣ,[6]
ಬಿಳಿದಿನ ಸೀರೆ,
ಪಟ್ಟೆ, ಪಟ್ಟಾವಳಿ,
ಚೀನಿ, ಚೀನಾಂಬರ, ಝುಗೆ, ಅರುಣ ವಸನ,

ಇನ್ನೂ

ರಂಗು ಚಿತ್ರವಸಂತರತಿ, ಸಾಳಂಗ, ಗುಜ್ಜರಿ, ರತುನ ರವೆಯ ಭು
ಜಂಗ ವಲ್ಲರಿ, ಪಲ್ಲವಾವಳಿ ಮಕರ ಚಿತ್ರಲತೆ,
ಭೃಂಗ ಲತಿಕೆ ಸುಪರ್ಣಫಳಿ ಮದನಾಂಗ ರೇಖೆ ಸುರಾಗರಚಿತ ತು
ರಂಗ ವಿಲಸಿತ ವಸನ ಬಾಲಕೆ ಸೇರಿದವು ಕಪಿಯ.[7]

ಸೀರೆಗಳಲ್ಲಿನ ಚಿತ್ರ ವಿನ್ಯಾಸದ ವೈವಿಧ್ಯವನ್ನು ಈ ಪದ್ಯವುಸೂಚಿಸುತ್ತದೆ. ಹಾಗೆಯೇ ಹಳದಿ, ಸಂಧ್ಯಾರಾಗ,

---

1. ಸು. ೩೪ ಕೆ. ಜಿ. ಗಳಷ್ಟು ಅಕ್ಕಿ ಅಥವಾ ಭತ್ತವನ್ನು ತುಂಬಿಕೊಂಡ, ಭತ್ತದ ಹುಲ್ಲಿನಿಂದಲೇ ರಚಿತವಾದ ಬಹು ಸುಂದರವಾದ ಗೋಲಾಕಾರದ " ಮೂಡೆ "ಗೆ ದ. ಕ. ದಲ್ಲಿ " ಮುಡಿ " ಎನ್ನುತ್ತಾರೆ.
2. ತೊ. ರಾ. I ೯-೫.
3. ಇದೇ ಪದ್ಯ.
4. ತೊ. ರಾ. III ೧೨-೨೫.
5. ತೊ. ರಾ. V ೮-೭೪.
6. ತೊಟ್ಟಿಲ ಹೊತ್ಕೊಂಡು ತೌರ್ಬಣ್ಣ ಉಟ್ಕೊಂಡು–ಜಾನಪದ ಸಾಹಿತ್ಯ.
7. ತೊ. ರಾ. V ೮-೧೬.

ಮೇಘವಣ್ಣಿಗೆ.–ಮೊದಲಾದ ಬಣ್ಣಗಳ ವರ್ಣನೆ, ಹಯಾವಳಿ, ಹಸ್ತಿ ಹಯಮುಖವಿಲಸಿತಾವಳಿ, ಮಯೂರ ಹಂಸಾವಳಿ, ವಿವಿಧ ಚಿತ್ರ ಲತಾಂತ ಲತಿಕೆಗಳ ನಿವಸನಗಳು,[1]

ಎಳೆಗಾವಿ, ಸಂಪಗೆಗಾವಿ, ತೆಳುಗಾವಿ, ದೇಶಿ, ಸರೋಜ ವಲ್ಲರಿ, ಪಾದಪಾವಳಿ ಪಟ್ಟೆ, ಶೃಂಗಾರನಾಯಕಿಯರ ನವಾಂಬರ, ಗೌರಿಗಣೆಯ, ಪೊಪ್ಪುಳಿ ಪೊಸುರ್ಮುಡಿ[2]

ನವೀನ ಪಳಿಗಳ, ಜೀಬಿಗಳ, ಪರಿಧಾನಗಳ, ಬೊಂಬೆಗಳ ಪಟ್ಟಾವಳಿ, ಪಂಚಾನನಾಂತ[3] ವಸ್ತ್ರ ಹೀಗೆ ವರ್ಣನೆ ಮುಂದುವರಿಯುತ್ತದೆ. ಬಾಣ ಕವಿಯ ಕಾದಂಬರಿಯ "ನೆಯ್ಗೆ" (ತೊ. ರಾ. VI ೪೯-೨೬) ಎಂಬ ವರ್ಣನೆ ಕವಿ ಕಂಡ "ನೆಯ್ಗೆ"ಯಿಂದ ಪ್ರಭಾವಿತವಿರಬೇಕು.

## ಇತರ ವೃತ್ತಿಗಳ ಸೂಚನೆ

ಚಿಪ್ಪಿಗ, ಬಡಗಿ, ಶಿಲ್ಪಿ, ಬಳೆಗಾರ, ಕುಂಭಕಾರ,[4] ಕಲುಕುಟಿಕ, ರಜಕ, ನರ್ತಕ, ಮಹೇಂದ್ರಜಾಲಿಕ, ಹಾವಾಡಿಗ, ಕುಸುಮಮಾಲಿಕ, ಚಿತ್ರಿಕ, ಕಥಕ[4](ಅ) ಬಲುಗೆಲಸದ ಒಡ್ಡರು, ಕಮ್ಮಾರ (ಕರ್ಮಕಾರ–ಕಮ್ಮಾರ–ಕಮ್ಮಾರ), ವಸುವಿಭೇದಕ,[5] ತಾಮ್ರಮರ್ದನ, (ಚೆಂಬು ಕುಟ್ಟಿಗ–ಇರಬಹುದು), ತಿಲ ವಿಘಾತಕ (ಗಾಣಿಗ–ಎಂದರ್ಥವಿರಬಹುದು), ತಂಬುಲಿಗ (ವೀಳ್ಯದೆಲೆ-ವ್ಯಾಪಾರಿ ?) ಬೋಗಾರ[6] ಕಾಳಸಿಗ (?)[7] ಕದ್ದಳಿಗ,[8] ದೂಸಿಗ,[9] ಕೋಲವ (–ಕಟುಕ ?), ಜಂಗುಳಿಗ-ಗಾಣಿಗ, ವಣಿಜ, ಹರದ, ಬಚ್ಚರಣೆ.[9](ಅ) ಸೂಳೆ, (ಸೂಳೆಗೇರಿಯ ವರ್ಣನೆ-ತೊ. ರಾ VI ೮–೭೭)

## ವೃತ್ತಿ ಉಪಕರಣಗಳು

ಇಕ್ಕುಳ, ಕತ್ತರಿ, ಕರಗಸ, ಕೊಡತಿ, ಕೈವಾಚಿ, ಉಳಿ,
ಗುದ್ದಲಿ, ಚಮ್ಮಟಿಗೆ, ಚೀಲಣ (ಚಿಕ್ಕ ಕತ್ತಿ ?)
ಬೆಣೆ, ಸನ್ನೆ[10]

---

1. ತೊ. ರಾ. V ೮–೧೭.
2. ಇದೇ. V ೮–೨೦–ಮುಡಿ–ಎಂದರೆ "ಸ್ವಚ್ಛ" ಎಂದರ್ಥವಾದರೂ "ಪೂಜಾಕಾರ್ಯ ಸಂದರ್ಭ ಧರಿಸುವ ಬಟ್ಟೆ"– ಎಂದು ಬಳಕೆಯಿದೆ.
3. ತೊ. ರಾ. VI ೫೫–೮೪.

ದೇಶೀ, ಹಲವು ದೇಶದ ದೇಶಿಯರ ವಿಲಸದಂಬರ-(ತೊ. ರಾ. V ೮–೧೮, ೨೦) ಇವು ದೇಶೀಯ, ವಿದೇಶೀಯ (ಬೇರೆಕಡೆಯ) ಎಂದು ಸೂಚಿಸಿ ಬಟ್ಟೆ ವ್ಯಾಪಾರದ "ಮಾರುಕಟ್ಟೆ"ಯ ವ್ಯಾಪ್ತಿಯನ್ನು ಧ್ವನಿಸುತ್ತವೆ.

4. (ಅ) ನರ್ತನ, ಸಂಗೀತ, ಸಾಹಿತ್ಯ, ಶಿಲ್ಪ–ಇವುಗಳ ಸೂಚನೆ, ಗಾಯಕ ವೀಣಾಜನ, ಕಲಾವಿದ, ಸರಸಕವಿ ವಾಗ್ಮಿ ಈ ಉಲ್ಲೇಖಗಳು-ಆ ಕಾಲದ ಸಾಂಸ್ಕೃತಿಕ ಪರಿಸ್ಥಿತಿಯ ರೂಪರೇಖೆಗಳಂತಿವೆ.
4. ಕುಂಭಕಾರನ ಕಲೆಯ ಸೊಗಸಿನ ಸೂಚನೆ ತೊ. ರಾ. VI ೩೧–೩೫ರಲ್ಲಿದೆ.
5. ವಸ್ತುವಿಭೇದಕ-ರತ್ನವ್ಯಾಪಾರಿಯಾಗಿರಬಹುದೇ ?
6. ಬೋಗಾರ–ವ್ಯೋಕಾರ-(ಕಮ್ಮಾರ ಅಥವಾ ಚೆಂಬುಕುಟಿಗ)
7. ಕಾಳಾಸ-ಎಂದರೆ ಕಾವ್ಯದ ಒಂದು ಸಲ್ಲಕ್ಷಣ, ಔಚಿತ್ಯ. (ತೊ. ರಾ. ದಲ್ಲಿಯೇ–ಕಾಳಾಸ ತಪ್ಪಿದ ಕಳುವಿನಸುಗೆಯ ಚಿತ್ರಕರ–VI ೮–೩೫) ಇಲ್ಲಿ ಕಾಳಸಿಗ ಎಂದರೆ ಒಪ್ಪ ಕೊಡುವವ–ಎಂದಿರಬಹುದೇ ?

ಅಥವಾ ಕಳಸ-(ಕಲಶ), ಕಾಳಾಸ-(ನಿಶಾನೆ, ಧ್ವಜ) ಇವುಗಳಿಗೆ ಈ ವೃತ್ತಿ ಸಂಬಂಧಿಸಿರಬಹುದೇ ?.

8. ಕದ್ದಳಿಗ-ಜನರ ಒಂದು ಪಂಗಡ. ಜಂಗುಳಿಗವೂ ಇದನ್ನೇ ಸೂಚಿಸುತ್ತದೆ ?
9. ದೂಸಿಗ-ಜವಳಿ (ಬಟ್ಟೆ) ವ್ಯಾಪಾರಿ
9. (ಅ) ಬಚ್ಚರಣೆ-ವಜ್ರ-ಬಚ್ಚರ-ವಜ್ರ ಕೆಲಸಕ್ಕೆ ಸಂಬಂಧಿಸಿದ್ದಿರಬಹುದೇ ?
10. ಸೇತುಬಂಧನದ ಕಾರ್ಯ ವ್ಯವಸ್ಥೆಯಲ್ಲಿ ಕವಿಯಕಾಲದ ಒಂದು ದೊಡ್ಡ ಕೆರೆ ಕಟ್ಟೆ ನಿರ್ಮಾಣದ ಚಿತ್ರ ಫಲಿಸಿದಂತಿದೆ. (ತೊ. ರಾ. VI ೫–೧೦ ರಿಂದ ೧೪) ಸನ್ನೆ, ಬೆಣೆ, ಸಾರಕಟ್ಟು, ಸೂತ್ರಯಂತ್ರ, ಸೂತ್ರಿಸು ಈ ಅಂಶಗಳನ್ನು ಗಮನಿಸಬಹುದು.

ಸಲಿಕೆ (ಶಲಾಕಾ-ಕಬ್ಬಿಣದ ಸರಳು) ಹಾರೆ, ಪೊಳಿ,
ಸಂಕಲೆ, ಸಂವರಣೆ ಬಿರಡೆ, ಅಖಿಳ ಜಂತ್ರ, ರಾಟಾಳ ಸೂತ್ರ, ಸೂತ್ರಯಂತ್ರ[1]

## ವ್ಯಾಪಾರ, ವ್ಯಾಪಾರದ ಮಾನಗಳು, ಹಣಕಾಸು

ಮಾಸಿಗರು, ಹರದರು, ವಣಿಜರು, ವೈಶ್ಯರು–ಇವರನ್ನು ಉಲ್ಲೇಖಿಸಿದ ಕವಿಯು ಇವರ ವ್ಯವಹಾರಗಳಿಗೆ ಸಂಬಂಧಿಸಿದ ಈ ಕೆಳಗಿನ ಅಂಶಗಳನ್ನೂ ಸೂಚಿಸಿದ್ದಾನೆ. ಕಪೋತವಣಿಜರು[1](ಅ) ಎಂದೂ ಇದೆ.

## ವ್ಯಾಪಾರ ಕೇಂದ್ರ

ಅಂಗಡಿ,[2] ಸಂತೆ[3], ಕೋಟಾರ, ಮಂಟೆಯ[4], ಹರದರಗೇರಿ[5]

## ವ್ಯಾಪಾರದ ಮಾನಗಳು

ಬಳ್ಳ, ಸೊಲ್ಲಗೆ, ಕೊಳಗ, ಮಾನ,[6]
ಕೊಸರು[7]
ಅರಳೆಯ ಹೇರು, ಮೆಣಸಿನ ಕಂಟಣಿ[8], ಎಣ್ಣೆಯ ಹಾಡ[9]
ಕೋಲಳತೆ, ಬಿಲ್ಲು ಪ್ರಮಾಣ, ಎವೆ (ಐದೆವೆ)[10] ಪುರುಷ ಪ್ರಮಾಣ
ಗಾವುದ, ಯೋಜನ,[11]

---

1. ತೊ. ರಾ. I ೧೩-೧೦.
2. (ಅ) ತೊ. ರಾ. VI ೨೬-೧ ಇದು ಮತ್ತು " ಹಡಗು " (VI ೬-೧೧)–ನೌಕಾ ವ್ಯಾಪಾರವನ್ನು ಸೂಚಿಸುತ್ತಿವೆ?

2–3. ತೊ. ರಾ. V ೨-೧೩.

4. ತೊ. ರಾ. VI ೨೧-೨೪, ೩೦-೧೬.

ಸಂತೆಗಳ ಕುರಿತಾದ ಶಾಸನೋಕ್ತ ವಿಚಾರಗಳನ್ನು-ಎಂ. ಚಿದಾನಂದ ಮೂರ್ತಿ-ಕ. ಶಾ. ಸಾಂ. ಅಧ್ಯಯನ ಪು. ೩೭೭ರಲ್ಲಿ ನೋಡಬಹುದು.

5. ತೊ. ರಾ. V ೮-೭೫.
6. ಸೊಲ್ಲಗೆ, ಕೊಳಗಗಳೆಂಬ ಮಾನಗಳು ಕನ್ನಡನಾಡಿನಲ್ಲಿ ೧೩-೧೪ನೇ ಶತಮಾನಗಳಲ್ಲಿ ಬಳಕೆಯಲ್ಲಿದ್ದವು.

೧ ಖಂಡುಗ : ೪ ಪಂಚಕ
೧ ಪಂಚಕ : ೫ ಕೊಳಗ
೧ ಕೊಳಗ : ೪ ಬಳ್ಳ
೧ ಬಳ್ಳ : ೪ ಮಾನ
೧ ಮಾನ : ೪ ಸೊಲ್ಲಗೆ.

ಈ ಉದ್ಧರಣೆ–ರಾಜಾದಿತ್ಯನ ವ್ಯವಹಾರಗಣಿತದಿಂದ, ವ್ಯವಹಾರಗಣಿತ-ಎಂ. ಮರಿಯಪ್ಪಭಟ್ಟ ಮತ್ತು ಎಂ. ಚಿದಾನಂದಮೂರ್ತಿ-ಕ. ಶಾ. ಸಾಂ. ಅ. ಪು. ೩೯೫.

A. S. Altekar: Rastrakutas and their times-ಈ ಪುಸ್ತಕದ ಪು. ೩೭೬ ರಿಂದ ೩೮೬ರವರೆಗೆ ವಿವಿಧ ಧಾನ್ಯ ಪ್ರಮಾಣ, ದರ, ವ್ಯಾಪಾರವ್ಯವಸ್ಥೆಗಳ ಕುರಿತು ಇದೆ.

7. ತೊ. ರಾ. II ೨-೪೮. ನಿಶ್ಚಿತ ಅಳತೆಗಿಂತಲೂ ಹೆಚ್ಚಾಗಿ–ಗಿರಾಕಿಗಳನ್ನು ಆಕರ್ಷಿಸುವ ದೃಷ್ಟಿಯಿಂದ–ಕೊಡುವ ರಿಯಾಯಿತಿ ಕೊಡುಗೆ.

8-9. ತೊ. ರಾ. V ೮-೩, ೮-೭೪ ಬತ್ತಲೇಶ್ವರನು ತನ್ನ ರಾಮಾಯಣದಲ್ಲಿ (೧೨-೪) ಎಣ್ಣೆಯ ಹಾಡ ಎಂದಿದ್ದಾನೆ.

10. ತೊ. ರಾ. I ೧೫-೨೪.

11. ತೊ. ರಾ. I ೭-೫.

ಈ ಮೊದಲೇ ಸೂಚಿಸಿದ ವಜ್ರದ ಕೆಲಸ, ನೆಯ್ಗೆಯ ಕುಶಲತೆಗಳಿಗೆ ಸಂಬಂಧಿಸಿ ' ದೇವಗಿರಿ 'ಯು ಪ್ರಸಿದ್ಧವಾಗಿತ್ತು ಎನ್ನುವ ಕಾವ್ಯದ ಸೂಚನೆಗೆ ಪೋಷಕವಾಗಿ ಇದನ್ನು ಗಮನಿಸಬಹುದು :

Ibn Battutah refers to Devagiri as a great centre of jewellery art. According to Marcopolo, Devagiri region was famous for mats of very rich variety-which were exported to other countries. A. V. N.-The Seunas of Devagiri. p. 176.

## ಹಣಕಾಸಿನ ವ್ಯವಸ್ಥೆ

ಉಂಬಳಿ[1]
ಸಂಬಳ[2]
ಜೀವಿತ[3]
ನಾಣೆಯ[4], ಕಮ್ಮಟ[5], ಕೋಶ[6],
ಸುಂಕಿಗ[7], ಸಾಲಿಗ[8]
ತೆರಿಗೆ[9], ತೆರಿಗೆಯ ಬರಹ,[10]
ಕಪ್ಪ[11], ಕೇಣಿ (ಗೇಣಿ)[12] ಕೊಳು–ಕೊಡೆ[12](ಅ)

ಈ ಪದಗಳಿಂದ ಕವಿಯು ಬದುಕಿದ ಸಮಾಜದಲ್ಲಿನ ಆರ್ಥಿಕರಂಗದ ಕೆಲವಂಶಗಳನ್ನು ಹೀಗೆ ರೂಪಿಸಿಕೊಳ್ಳಬಹುದು :

(ಅ) ವ್ಯಾಪಾರವ್ಯವಹಾರಗಳಲ್ಲಿ ನಾಣ್ಯದ ಬಳಕೆಯಿತ್ತು, ನಾಣ್ಯಗಳು "ಕಮ್ಮಟ"ದಲ್ಲಿ ತಯಾರಾಗುತ್ತಿದ್ದವು, ರಾಜನ ಕೋಶಕ್ಕೆ ತೆರಿಗೆ, ಸುಂಕ, ಕಪ್ಪ ಮೊದಲಾದುವುಗಳು ಆದಾಯದ ಮೂಲಗಳು.

(ಆ) ವ್ಯಾಪಾರ ವ್ಯವಹಾರಗಳಲ್ಲಿ ಸಾಲ[13]ದ ರೂಢಿಯಿತ್ತು. ಸರಕುಗಳನ್ನು ಕೋಟಾರ, ಮಂಟಿಯಗಳಲ್ಲಿ ಸಂಗ್ರಹಿಸಲಾಗುತ್ತಿದ್ದು, ಅಂಗಡಿ (ಹರದರ ಕೇರಿ), ಸಂತೆಗಳು "ವಾಣಿಜ್ಯ ಕೇಂದ್ರ" ಗಳಾಗಿದ್ದವು ಅಲ್ಲಿ "ಕೊಳು–ಕೊಡೆ"ಗಳು ನಡೆಯುತ್ತಿದ್ದವು.

(ಇ) ರಾಜರಿಂದ "ಉಂಬಳಿ"ಯಾಗಿ ಕೊಡಲ್ಪಟ್ಟ ಭೂಮಿಯು ಇದ್ದಿತಲ್ಲದೆ, ಸೇನೆಯಲ್ಲಿ ಸೇರಿಕೊಂಡವರಿಗೆ "ಜೀವಿತ"ಕ್ಕಾಗಿ "ಉಂಬಳಿ" ಬಿಡಲಾಗುತ್ತಿತ್ತು.

(ಈ) ಸಮಾಜದಲ್ಲಿ ನಿಶ್ಚಿತ ರೂಪದ ಕೇಣಿ (ಗೇಣಿ) ವ್ಯವಸ್ಥೆಯಿತ್ತು.

(ಉ) ಕೋಶ, ಕಮ್ಮಟಗಳಿಗೆ ಸಂಬಂಧಿಸಿದ ಅಧಿಕಾರಿಗಳಿದ್ದರು. ತೆರಿಗೆ, ಸುಂಕ ವಸೂಲಿಗಾಗಿ ಸುಂಕಿಗ ಎಂಬ ಹುದ್ದೆಯೂ ಪ್ರಚಲಿತವಾಗಿತ್ತು.

---

| | ತೊ. ರಾ. | | | |
|---|---|---|---|---|
| | ಕಾ. | ಸಂ. | ಪ. | |
| 1. | ೬ | ೬ | ೩೭ | ಸೇವುಣರ ಕಾಲದಲ್ಲಿ "ಉಂಬಳಿ", ಸರ್ವಮಾನ್ಯ, ಅರ್ಧಮಾನ್ಯ ಸಾಮಸ್ಯ ಭೂಮಿಗಳಿದ್ದವು. A. V. N. The sevunas of Devagiri p. 162. |
| 2. | ೬ | ೬ | ೩೬ | |
| 3. | ೪ | ೮ | ೩೦ | "ಜೀವಿತ" ವಿಚಾರ K. A. Neelakanta Sastry A History of S. India p. 203. |
| 4. | ೧ | ೭ | ೨, ೪. | |
| 5-6. | ೫ | ೮ | ೫೦ | |
| 7. | ೫ | ೮ | ೫೪ | ಸೇವುಣರಲ್ಲಿ ಸಮರ್ಥರಾದ "ಸುಂಕಾಧಿಕಾರಿ" (ಹೆಗ್ಗಡೆ) ವರ್ಗವಿತ್ತು. A. V. N. p. 163 |
| 8. | ೫ | ೮ | ೭೫ | |
| 9-10. | ೬ | ೪೬ | ೨೭ | |
| 11. | ೧ | ೩ | ೨೨, ೭-೩ | |
| 12. | ೩ | ೨ | ೨ | |

12. (ಅ) I ೧೬–೨೫.
13. ಸಾಲಿಗರಂಡಲವರಿನ್ನೇನಕೊಡುವವು ? (ತೊ. ರಾ. V ೮–೭೫)

## ಕೆಲವು ಸಾಮಾಜಿಕ ಪದ್ಧತಿಗಳು, ಸಂಪ್ರದಾಯಗಳು, ನಂಬಿಕೆಗಳು

### ಸಹಗಮನ ಪದ್ಧತಿ

ದಶರಥನ ಐನೂರರಸಿಯರು "ಸಹಗಮನ" ಮಾಡಿದಂತೆಯೂ,[1] ರಾವಣನ ಪತ್ನಿಯರು ಪತಿಯೊಂದಿಗೆ ಸಹಗಮನ ಮಾಡಿ ನಿಜತನುವ ನೀಗಿಕೊಂಡಂತೆಯೂ,[2] ಕುಮಾರ ವಾಲ್ಮೀಕಿಯು ಹೇಳುವುದಕ್ಕೆ (ಆನಂದ ರಾಮಾಯಣದ "ಆಕರ" ದೊಂದಿಗೆ[3]) ಅವನ ಸಮಕಾಲೀನ "ಸಾಮಾಜಿಕ ಪರಿಸ್ಥಿತಿ"ಯೂ ಹಿನ್ನೆಲೆಯಾಗಿದ್ದಂತೆ ತೋರುತ್ತದೆ.

ಸೇವುಣರ ಕಾಲದಲ್ಲಿ "ಸತೀ ಪದ್ಧತಿ"ಯು ಪ್ರಚಲಿತವಾಗಿತ್ತು.[4] "ಜ್ಞಾನೇಶ್ವರಿ" ಯಿಂದ ತಿಳಿಯುವಂತೆ, ಆ ಕಾಲದಲ್ಲಿ ಪತಿವ್ರತಾ ನಾರಿಯರು ಸಂತೋಷದಿಂದ ತಮ್ಮ ಪತಿಯ ಚಿತಾರೋಹಣ ಮಾಡುತ್ತಿದ್ದರು. ಸೇವುಣ ರಾಮಚಂದ್ರನ ಕಾಲದ ದಾಖಲೆಯೊಂದು–ಗಣೇಶ್ವರನೆಂಬುವನ ಪತ್ನಿ ಬೊಮ್ಮಾಯಿ ಎಂಬುವಳು "ಸಹಗಮನ" ಮಾಡಿದ ಘಟನೆಯನ್ನು ಸೂಚಿಸುತ್ತದೆ.[5] ರಾಮಚಂದ್ರನ ಪತ್ನಿ "ಕಾಮಾಯಿ"ಯು ಸತಿ ಹೋಗಲು ಒಪ್ಪದಿದ್ದಾಗ, ಅವಳ ವರ್ತನೆಯನ್ನು ಎಲ್ಲರೂ ಖಂಡಿಸಿದ ಉಲ್ಲೇಖವೂ ದೊರೆಯುತ್ತದೆ.[6]

೧೪ನೆಯ ಶತಮಾನದ ಪೂರ್ವ ಭಾಗದಲ್ಲಿ (ಕ್ರಿ.ಶ. ೧೩೨೧) ಭಾರತಕ್ಕೆ ಬಂದ ಫ್ರೈಯರ್ ಒಡೋರಿಕ್ ಎಂಬ ಪ್ರವಾಸಿಯು "ಇಲ್ಲಿ ಸತ್ತವನನ್ನು ಸುಟ್ಟು, ಬದುಕಿರುವ ಅವನ ಹೆಂಡತಿಯನ್ನೂ ಸುಡುತ್ತಾರೆ"–ಎಂದು ಇಲ್ಲಿ ಬಳಕೆಯಲ್ಲಿದ್ದ ಸತಿ ಪದ್ಧತಿಯ ಕುರಿತು ಹೇಳುತ್ತಾನೆ.[7]

ಇದೇ ಕಾಲದಲ್ಲಿ ನಮ್ಮಲ್ಲಿಗೆ ಬಂದಿದ್ದನೆಂದು ನಂಬಲಾದ 'ಸರ್ ಜಾನ್ ಮಾಂಡ ವಿಲ್ಲೆ'[8]

ಕ್ರಿ.ಶ. ೧೩೩೩–೧೩೪೭ರ ನಡುವೆ ಇಲ್ಲಿ ಪ್ರವಾಸಮಾಡಿದ 'ಇಬೆನ್ ಬತೂತಾ'[9]

ಕ್ರಿ.ಶ. ೧೫ನೆಯ ಶತಕದಲ್ಲಿ ಭಾರತ ಸಂಚಾರಮಾಡಿದ 'ನಿಕೊಲೊದಾಂತಿ'[10]

---

1. ತೊ. ರಾ. II ೬–೬.
2. ತೊ. ರಾ. VI ೫೨–೧೮.
3. ವಾ. ರಾ. ದಲ್ಲಿ 'ಸಹಗಮನ' ವಿಚಾರವಿಲ್ಲ.–ಆನಂದ ರಾಮಾಯಣದ ಕಥಾನುಸರಣೆ ಕುರಿತು ಇದೇ ಪ್ರಬಂಧದ "ಕಥಾವೈಶಿಷ್ಟ್ಯಗಳು" ಪ್ರಕರಣ ನೋಡಬಹುದು.
4. 'Sati' was practised during the period-A. V. Narasimha murthy, The Sevunas of Devagiri p 174.
5. E. C. Vol. VII ಸಂ. ೧೪೧ರ ಶಿಕಾರಿಪುರ ಶಾಸನ
6. A. V. N -The Sevunas of Devagiri-p. 174.

ದ. ಭಾರತದಲ್ಲಿ ಉತ್ತರ ಭಾರತಕ್ಕಿಂತ ತಡವಾಗಿ "ಸಹಗಮನ" ಬಳಕೆಗೆ ಬಂದಂತೆ ತೋರುತ್ತದೆ. ಕರ್ನಾಟಕದಲ್ಲಿ ಸಹಗಮನದ ಸ್ಪಷ್ಟ ಐತಿಹಾಸಿಕ ನಿರ್ದೇಶನವು ಕ್ರಿ.ಶ. ೯೮೦ರ ಶಾಸನವೊಂದರಲ್ಲಿ ದೊರೆಯುತ್ತದೆ.......ಕರ್ನಾಟಕದಲ್ಲಿ ವೀರಯುಗ (೯–೧೧ನೇ ಶತಮಾನ)ದೊಡನೆ ಪ್ರಬಲಗೊಂಡ "ಸಹಗಮನ" ಪದ್ಧತಿಯು ಹೊಯ್ಸಳ ವಿಜಯನಗರ ಸಾಮ್ರಾಜ್ಯಗಳ ಕಾಲದಲ್ಲಿ (ವಿಜಯನಗರ ಕಾಲದಲ್ಲಿ ರಾಜ ಸತ್ತಾಗ ಎರಡು ಅಥವಾ ಮೂರು ಸಾವಿರ ಸ್ತ್ರೀಯರು ಚಿತೆಯೇರುತ್ತಿದ್ದರು.) ತನ್ನ ತುದಿಯನ್ನು ಮುಟ್ಟಿತು.......

ಕನ್ನಡ ನಾಡಿನ ಜೈನರಲ್ಲಿಯೂ ಸಹಗಮನವಿದ್ದಿತೆಂಬುದಕ್ಕೆ ರನ್ನನು ತನ್ನ ಅಜಿತಪುರಾಣ (೧–೪೭ವ.)ದಲ್ಲಿ ವರ್ಣಿಸಿದ ಗುಂಡಮಬ್ಬೆಯ ಸಹಗಮನವು ಉತ್ತಮ ಆಧಾರವಾಗಿದೆ.......

ಜನ್ನನ "ಅನಂತನಾಥಪುರಾಣ"ವು ((೧೨–೧೦–೨೦) ಒಬ್ಬ ರಾಜನು ಮಡಿದ ತಕ್ಷಣ, ಅಥವಾ ಮಡಿಯುವ ಸೂಚನೆಯೂ ದೊರಕಿದರೂ ಸಾಕು, ಸಾಯಲು ಸಿದ್ಧರಾಗುತ್ತಿದ್ದ ರಾಣಿಯರ ವಿಷಯವನ್ನು ವರ್ಣಿಸುತ್ತದೆ.

ಎಂ. ಚಿದಾನಂದ ಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ–ಪು. ೩೧೫–೩೧೬ಗಳಿಂದ ಸಂಗ್ರಹಿತ.

ಈ ವಿವರಗಳು ಕುಮಾರ ವಾಲ್ಮೀಕಿ ಕಾಲದಲ್ಲಿ 'ಸತಿ ಸಹಗಮನ ಪದ್ಧತಿ'ಯ ಪ್ರಚುರತೆಯನ್ನು ನಿರ್ದೇಶಿಸುತ್ತವೆ.

7. ಎಚ್. ಎಲ್. ನಾಗೇಗೌಡ–ಪ್ರವಾಸಿ ಕಂಡ ಇಂಡಿಯಾ ಸಂಪುಟ ೨–ಪು. ೫೫ ಮತ್ತು ೫೯.
8. ಇದೇ. ಪು ೬೪.
9. ಇದೇ. ಪು. ೭೫.
10. ಇದೇ. ಪು. ೧೨೬.

ಇವರ ಬರವಣಿಗೆಗಳಲ್ಲಿ ನಮ್ಮ ನಾಡಿನಲ್ಲಿ ಆ ಕಾಲದಲ್ಲಿ ಬಳಕೆಯಲ್ಲಿದ್ದ 'ಸತಿ ಸಹಗಮನ' ಪದ್ಧತಿಯ ಕುರಿತು ದಾಖಲೆ ದೊರೆಯುತ್ತದೆ.[1]

ಸಹಗಮನ ಕೈಗೊಳ್ಳದ ವಿಧವೆಯ ತಲೆಕೂದಲನ್ನು 'ನುಣ್ಣಗೆ ಕ್ಷೌರಮಾಡುವ' ಸಂಪ್ರದಾಯವೂ ಆ ಕಾಲದಲ್ಲಿ ಇದ್ದಿರಬಹುದು. ಬಹುಶಃ, ಆದುದರಿಂದಲೇ ಮಾರೀಚನು ರಾವಣನಿಗೆ ಸೀತಾಪಹಾರ ಸಲ್ಲದೆಂದು ಬೋಧಿಸುತ್ತಾ 'ಮುನಿ ಪೌಲಸ್ತ್ಯ ವಂಶದ ಮೆರೆವ ಜನ್ಮನ ಜಾಣ ವನಿತೆಯ ತುರುಬ ಬೋಳಿಸಬೇಡ' ಎಂದು ಎಚ್ಚರಿಸಿದುದಾಗಿ ತೊರವೆ ರಾಮಾಯಣವು ಹೇಳುತ್ತದೆ.[2]

ಅಲ್ಲದೆ, ಹನುಮಂತನಿಂದ ಭಂಗಹೊಂದಿದ 'ಅಶೋಕವನ'ವು–

> ಹೊಗಳಲೇನದ ಪತಿಯ ಮರಣದ
> "ಅಗಲಿ ಬದುಕಿದ ಸತಿಯ ಶಿರದವೊ"
> ಲಗಲದಲಿ ರಂಜಿಸಿತು ರಮ್ಯೋದ್ಯಾನ ರಾವಣನ.[3]

ಎಂದು ಕವಿಯು ವರ್ಣಿಸುವಲ್ಲಿ, ಅವನ ಕಾಲದ "ಕಟ್ಟಳೆ"ಯೇ ನಮ್ಮ ಕಣ್ಣಿಗೆ ಕಟ್ಟುವಂತಿದೆ.

**ಕೆಲವು ನಂಬಿಕೆಗಳು; ಕೆಲವು ಆಚಾರಗಳು**

೧. ದಶರಥನ ಮನವನ್ನು ಹಿಗ್ಗಿಸಿದ "ಹಕ್ಕಿಗಳ ಶಕುನ"

> ತಳಿತ ಪಾಲ್ಮರನೇರಿ ಪಿಂಗಲಿ
> ಬಳಿದು ಬಾಯ್ಗೊಂಡವು ಸರಾಗದಿ
> ನೊಲಿದು ದಂಪತಿ ತಾರನಿತ್ತವು "ಕರಿಯ ಹಕ್ಕಿಗಳು";
> ಸುಳಿದವೆಡದಲಿ "ಹಂಗ" ಬಲದಲಿ
> ವಲಿಯ ಸೂಚಿತ ಪುತ್ರಲಾಭದ
> ಫಲ ವಿಶೇಷಿತ ಶಕುನ ಹಿಗ್ಗಿಸಿತವನಿಪನ ಮನವ.[4]

೨. ವಿಶೇಷ ಸಂದರ್ಭಗಳಲ್ಲಿ ಮಕ್ಕಳಿಗೆ, ವೀರರಿಗೆ "ಬಳುವೆ" ತೆಗೆಯುವುದು.[5]
"ಉಪ್ಪು ಸೂಸುವುದು"[6]
"ಆರತಿಯೆತ್ತುವುದು"[7]

---

1. ಪಿಯೆಟ್ರೋ ಡೆಲ್ಲ ವಲ್ಲೆ ಎಂಬ ಒಬ್ಬ ಪ್ರವಾಸಿ ಕ್ರಿ.ಶ. ೧೬೨೩ರಲ್ಲಿ ತಾನು ಇಕ್ಕೇರಿಯಲ್ಲಿ ಕಂಡ ಸಹಗಮನವನ್ನು ವರ್ಣಿಸುತ್ತಾ, ಸತಿಯ ಒಂದು ಕೈಯಲ್ಲಿ ನಿಂಬೆಯ ಹಣ್ಣೂ, ಇನ್ನೊಂದರಲ್ಲಿ ಕನ್ನಡಿಯೂ ಇದ್ದ ಸಂಗತಿಯನ್ನು ಹೇಳುತ್ತಾನೆ– ಎಂ. ಚಿದಾನಂದ ಮೂರ್ತಿ-ಕ. ಶಾ. ಸಾಂ. ಅಧ್ಯಯನ-ಪು. ೩೧೯ರ ಅಡಿ ಟಿಪ್ಪಣಿ.
2. ತೊ. ರಾ. III ೭–೪೦.
3. ಇದೇ. V ೪–೧೨.

ತುರುಬು ಬೋಳಿಸುವುದು ಎಂದರೆ–ತಲೆಯನ್ನೊಪ್ಪಿಸುವುದು-ಇದು ಆತ್ಮಾರ್ಪಣೆಯ ಒಂದು ಸಂಕೇತವೇ ಇರಬೇಕು. ದೇವಮೂರ್ತಿಯೆದುರು ಒಡೆಯುವ ತೆಂಗಿನಕಾಯಿಯಲ್ಲೂ ಇದೇ ತತ್ತ್ವ ಇರಬಹುದು.

ತೊ. ರಾ.
ಕಾ. ಸಂ. ಪ.

4. ೧ ೬ ೬ ಹರಡೆ ಕೆದರಿತು ಬಲದಲುಯವ! ಉರಿಯತೊಡರಿತು ಹಸುಬನೆಡದಲಿ ಕರಿಯ ಹಕ್ಕಿಯ ತಾರು ಹಂಗನ

ವಾಮುದುಡಿಕಗಳ–ಗದುಗಿನಭಾರತ II ೧೩–೨.

5. ೬ ೨೦ ೧೮ ಇನ್ನೂ... ಇದೇ. III ೪–೩೩.
6. ೬ ೫೫ ೧೬ ಇದೇ. V ೧–೧೮.
7. ೬ ೨೦ ೧೮ ಇಂತಹ 'ಶಕುನ'ಗಳ ಸೂಚನೆ ಬತ್ತಲೇಶ್ವರನ ಕೃತಿಯಲ್ಲಿ ೧–೩೩.

೩. ದೊಡ್ಡ ವ್ಯಕ್ತಿಗಳು ಚಿತ್ರೈಸುತ್ತಿರಲು " ಮಡಿ ವಾಸನ್ನು " ಹಾಸುವುದು.[1]

೪. ವಿಶೇಷವಸ್ತುಗಳಿಗೆ (ಬಿಲ್ಲು ; ರಥ) " ಕುರಿ ಕೋಣಗಳ ಬಲಿ " ಹಾಗೆಯೇ " ರುಧಿರಾಮಿಷ, ರಸೋದನ "[2]

೫. ಮಾನವಮಿ, ದಿವಾಳಿ, ವಸಂತದೋಕುಳಿ ಹಬ್ಬಗಳ ಆಚರಣೆ[3]

೬. ಸುಗ್ಗಿ ಹಬ್ಬದಲ್ಲಿ " ವೇಷಧರಿಸಿ ಕುಣಿಯುವುದು "[4]

೭. ಅಂಡೆಯ ಮೂಲಕ ವಸಂತದೋಕುಳಿ ಚಿಮ್ಮಿಸುವುದು.[5]

೮. ಸೂತ್ರದ ಗೊಂಬೆಯಾಟ, " ಹಗರಣ," (ಪ್ರಕರಣ–ನಾಟಕ ?) " ಮೂರು ದಿವಸದ ಹಗರಣಕೆ " ಗಡ್ಡ ಬೋಳಿಸುವುದು ಎಂಬ ಗಾದೆ–[6]

೯. ವಿವಾಹ ಪದ್ಧತಿಯಲ್ಲಿ–

ಶಿರದ ಬಾಸಿಗ,[7]
ಗುಡ ಜೀರಿಗೆಯೀಯುವಿಕೆ.[8]
ಮೆಟ್ಟಕ್ಕಿ.[9]
ಘಳಿಗೆ ವಟ್ಟಲು[10]
ಓಕುಳಿ[11]
ಮದುವಲಿ[12]
ಮಾಮನೆ[13]
ಬಳುವಳಿ[14]—ಇತ್ಯಾದಿ ಅಂಶಗಳು.

---

ತೊ. ರಾ.
ಕಾಂ. ಸಂ. ಪ.

1. ೬ ೬ ೬
2. ೧ ೧೪ ೮, ೬ ೨೦-೨೮
3. ೬ ೩೭ ೩, ೬ ೪೪-೧೩
4. ೬ ೩೯ ೨೩
5. ೬ ೨೮ ೪೯, ೬ ೩೫ ೨೧
6. ೬ ೨ ೪೦, ೬ ೪೬-೧೭
7. ೧ ೧೬ ೪೧
8. ೧ ೧೭ ೪೬ ಗದುಗಿನ ಭಾರತ I ೧೬-೬೫. (ಸಾರಿದರು ಮೆಟ್ಟಕ್ಕಗಳ ಗುಡ ಜೀರಿಗೆಗಳೊದಗಿದವು) ಜೀರಿಗೆ ಬೆಲ್ಲವ ಹಿಡಿದಂಬಿಕೆಯನು । ಸಾರಿ ಬಂದ ರುಗ್ಮಿಯನು ಕೊಂದು ಪುರಂದರದಾಸರ ಕೀರ್ತನೆಗಳು ೨-೬.

ಜೀರಿಗೆ ಬೆಲ್ಲ ಹಿಡಿದು ಸಾರುವುದು ಕಠಿಣ ಪ್ರತಿಜ್ಞೆಯನ್ನು ಮಾಡುವ ಚಿಹ್ನೆಯೆಂದು ತೋರುತ್ತದೆ.

9. ೧ ೧೬ ೪೬ ಆನೆಯ ಆಕಾರದಲ್ಲಿ ಉಪ್ಪು ಹಾಗೂ ಅಕ್ಕಿಯಲ್ಲಿ ಬರೆದ ಚಿತ್ರಗಳ ಮೇಲೆ ವಧೂವರರನ್ನು ನಿಲ್ಲಿಸುವಲ್ಲಿ, ಜೀವನಾವಶ್ಯಕವಾದ ಅಕ್ಕಿ, ಉಪ್ಪುಗಳ ಸಮೃದ್ಧಿಯ ಹಾರೈಕೆಯು ಮುಖ್ಯವಾಗಿರಬಹುದು.

10. ೧ ೧೬ ೪೬
11. ೧ ೧೬ ೫೩ 12. I ೧೬-೫೧.
13. ೧ ೧೬ ೫೫ ಮಾಮನೆ-ಮದುವೆಯನಂತರ ಮೂರನೆಯವರ ಮನೆಗೆ ಎಲ್ಲರೂ ಹೋಗಿ ಬರುವ ಸಂಪ್ರದಾಯ. ಬಿಜಾಪುರದ ಕೆಲವೆಡೆ ಈ ಪದ್ಧತಿ ಈಗಲೂ ಇದೆ.
14. ೧ ೧೬ ೫೫

೧೦. ಜೀವ ಶ್ರಾದ್ಧ.[1]

೧೧. ಕೈಮುಸಕ[2]

೧೨. ನಂಬಿಕೆ ಮೂಡಿಸುವುದುಕ್ಕಾಗಿ—ಕರತಳದ ನಂಬುಗೆ,[3]

ಆಣೆ ಭಾಷೆ ಹಾಕುವುದು.[4]
ಆಣೆ ಭಾರಗಳ ಕೊಳ್ಳು[5]
ಲಿಖಿತಾರ್ಥ ಸಾಧನ ಕೊಳ್ಳು.[6]

೧೩. ಎಚ್ಚರಿಕೆಯ ಮಾತು ಮೂರು ಸಾರಿಮಾತ್ರ–ನೀರು ಹೊರಗಿಕ್ಕುವುದು ಮೂರೇಬಾರಿ.

೧೪. ಎರಡು ನಾಲಗೆಯಾಗಲಾಗದು[7]

**ತೊರವೆ ರಾಮಾಯಣದಲ್ಲಿ ತಾಂಬೂಲ–ವಿಚಾರ**

ಕುಮಾರ ವಾಲ್ಮೀಕಿಯು ಬಾಳಿದ ಸಮಾಜದಲ್ಲಿ "ತಾಂಬೂಲಕ್ಕೆ"[8] ಬಹಳ ಮಹತ್ತ್ವವಿದ್ದಂತೆ ಅವನ ಕಾವ್ಯಾಭ್ಯಾಸದಿಂದ ತಿಳಿಯುತ್ತದೆ. ತಾಂಬೂಲದ ಮೂಲಕ ವಿವಿಧ ಭಾವಗಳ ಅಭಿವ್ಯಕ್ತಗೊಳಿಸುವ ರೀತಿಯಲ್ಲಿ ಅವನ ಕಾವ್ಯದಲ್ಲಿ ಉಲ್ಲೇಖಗಳು ದೊರೆಯುತ್ತವೆ. ಎಳೆದೆಲೆಯ ಹೇರು,[9] ಮತ್ತು "ತಂಬುಲಿಗ"[10] ಎಂಬ ಮಾತುಗಳಲ್ಲದೆ, ಕೆಳಗಿನ ಉದಾಹರಣೆಗಳನ್ನು ಗಮನಿಸಬಹುದು.

ತಂಬುಲವ ಸೂಸು (ಪ್ರಸನ್ನತೆ)
ತಳಿಗೆ ತಂಬುಲದಾರತಿ (ಮಂಗಳ ಸೂಚನೆ)[11]
ವೀಳ್ಯದ ಮೂಲಕ ಮನ್ನಣೆ (ಸ್ವಾಗತ–ಗೌರವ)[12]
ರಣ ವೀಳ್ಯನೀಡುವುದು (ರಣದ ನಾಯಕತ್ವದ ಸೂಚನೆ, ಅಪ್ಪಣೆ)[13]

---

ತೊ. ರಾ.
ಕಾಂ. ಸಂ. ಪ.

1. ೬ ೧೦ ೬೯ ಸಾಯುವ ಮೊದಲೇ ತನಗೆ ತಾನು ಮಾಡಿಕೊಳ್ಳುವ ಅಪರಕರ್ಮ.
2. ೧ ೩ ೨೭ (ಕೈ ಮುದ್ದು ಹಾಕಿ ಇತರರನ್ನು ಕೆಡಿಸುವ, ತನ್ನೆಡೆಗೆ ಸೆಳೆಯುವ 'ಮಾಟ'?)
3. ೪ ೨ ೪೨ 4. ೪, ೯-೩ ಮತ್ತು ೩೩.
5-6. ೪ ೯ ೩ ತೊ. ರಾ. ದ V ೮–೬೦ರಲ್ಲಿ 'ಭೂಸುರ'ರು ಸಿದ್ಧ ಪಡಿಸುವ
7. ೬ ೨೫ ೨೮ "ತಿಂಡಿ"ಗಳ ಪಟ್ಟಿಯಿದೆ.
ಹಪ್ಪಳ, ಪುರಿ, ಸಂಡಿಗೆ, ಸೇವಿಗೆ, ದೋಸೆ ಇತ್ಯಾದಿ.

8. ತಾಂಬೂಲಂ ಶ್ರೀಕರಂ ಭದ್ರಂ......ಎಂದು ಎಲ್ಲಾ ದಾನಗಳಲ್ಲೂ ಮುಂದಾಗಿ ತಾಂಬೂಲ ನೀಡುವ ಪದ್ಧತಿ ಈಗಲೂ ಇದೆ. ತಾಂಬೂಲವ "ಮಂಗಳಕರ" ಎನ್ನುವ ಭಾವನೆಯೇ ಇದರ ಹಿನ್ನೆಲೆಯಾಗಿರಬೇಕು. "ತಾಂಬೂಲ" ಶಬ್ದದ ನಿಷ್ಪತ್ತಿ ಬಗ್ಗೆ–ಎಚ್. ಎಲ್. ನಾಗೇಗೌಡ-ಪ್ರವಾಸಿಕಂಡ ಇಂಡಿಯಾ–೨-೩೮ ಟಿಪ್ಪಣಿ ನೋಡಬಹುದು.

9. ತೊ. ರಾ. V ೮-೭೪.
10. ಇದೇ. V ೮–೫೩.
11. ಇದೇ. VI ೫೫–೧೫.
12. ಇದೇ. VI ೫೫-೫೧ ಇಬೆನ್-ಬತೂತಾ-ತಾಂಬೂಲದ ಮೂಲಕ ಮನ್ನಣೆ ಪಡೆದದ್ದನ್ನು ಹೇಳುತ್ತಾನೆ.
ಎಚ್. ಎಲ್. ನಾಗೇಗೌಡ–ಪ್ರ. ಕಂಡ ಇಂಡಿಯಾ–೨. ಪು. ೮೪.
13. ಇದೇ. VI ೯-೯, ೧೩-೧೧, ೧೭-೧೧, ೧೯-೬, ೧೯-೧೦, ೨೬-೭೧, ೪೦-೮.

When a general was appointed, to lead the army battle, he was givan betel and nut in token of leadership-T. V. Mahalingam-S. Indian Polity, p. 272.

ಉಬ್ಬುಗನಳ (ಉತ್ಸಾಹ–ಸೂಚನ)[1]
ತಂಬುಲನ ತೋರೆ (ಶೋಕ ಸೂಚನೆ)[2]
ತಂಬುಲನನುಗುಳು (ತಿರಸ್ಕಾರ ಸೂಚನ)[3]
ಅರಿಯ ತಂಬುಕೆ ಕೈಯಾನು (ಹಗೆಯ ಹಂಗಿನಲ್ಲಿರು,)[4]
ಬಾಯ ತಂಬುಲಕೆ ಕೂಡಿಕೊಂಡಿರು (ಅನುಗ್ರಹ ಪಡೆ)[5]

## ತೊರವೆ ರಾಮಾಯಣದಲ್ಲಿ ಧಾರ್ಮಿಕ–ಮತೀಯ ಜೀವನ ಚಿತ್ರಣ

ಕುಮಾರ ವಾಲ್ಮೀಕಿಯ ಕಾಲದ ಸಮಾಜದಲ್ಲಿ ವೈಷ್ಣವ, ಶೈವ,[6] ಕಾಪಾಲಿಕ,[7] ಬೌದ್ಧ[8] ಜೈನ[9] ಮತಗಳು ಮುಖ್ಯವಾಗಿದ್ದಂತೆ ತೋರುತ್ತದೆ. ಅವರೆಲ್ಲರೂ ಸೌಮನಸ್ಯದಿಂದ ಸಹಜೀವನ ನಡೆಸುತ್ತಿದ್ದರೆಂದೂ ತಿಳಿಯ ಬಹುದು.[10]

ದೇವಾಲಯ, ಮಠಗಳು[11] ಧಾರ್ಮಿಕ (ಮತೀಯ) ಕೇಂದ್ರಗಳಾಗಿದ್ದವು. ಜಂಗಮ, ಜೋಗಿ,[12] ದಿಗಂಬರ, ಸವಣ, ಜಿನ ಋಷಿ,[13] ಗುರುಗಳು[14] ಧಾರ್ಮಿಕ ರಂಗದ ಮುಖ್ಯ ವ್ಯಕ್ತಿಗಳಾಗಿದ್ದರು.

---

1. ತೊ. ರಾ VI ೫-೫೦, ೧೯-೪೪, 2. ತೊ. ರಾ. II ೧-೪೦. 3. ತೊ. ರಾ. VI ೨೦-೧.
ಮತ್ತೊಬ್ಬನನ್ನು ತುಚ್ಛವಾಗಿ ಕಾಣಬೇಕಾದರೆ ತಾಂಬೂಲದ ರಸನನ್ನು ಅವನ ಮೇಲೆ ಉಗಿದು ಅವಮಾನ ಮಾಡುತ್ತಿದ್ದರು–ಪ್ರ. ಕಂಡ ಇಂಡಿಯಾ ೨–೩೮.

4. ತೊ. ರಾ. VI ೩೯–೧೬.

5. ಇದೇ. VI ೪೭–೭.
ಕುಂಭಕರ್ಣನಿಗೆ ಅದ್ಭುತಗಾತ್ರ–ಪರಿಮಾಣಗಳ ತಾಂಬೂಲ ನೀಡಿದ ವಿಶಿಷ್ಟ ವರ್ಣನೆ-ತೊ. ರಾ. VI ೨೬-೬೧ರಲ್ಲಿದೆ.

6. ತೊ. ರಾ. I ೭-೨೨. 7. ಇದೇ ಪದ್ಯ.

ಸ್ವಸ್ವರೂಪಾತ್ಮಕಂ ಜ್ಞಾನಂ ಸಮಂತ್ರಂ ಪ್ರತಿಪಾಲಿತಂ।
ಅನನ್ಯತ್ತ್ವಂ ಸದಾಯೇನ ಸವೈ ಕಾಪಾಲಿಕೋ ಭವೇತ್॥
–ಸಿದ್ಧ ಸಿದ್ಧಾಂತ ಪದ್ಧತಿ–೬.

ಕ್ರಿ. ಶ. ೧೧೪೮ರ ಶಾಸನವೊಂದರಲ್ಲಿ "ಮಹಾಬ್ರತಿ" ಕಾಪಾಲಿಕರ ಪ್ರಸ್ತಾವ ಇದೆ. ಎಂ. ಚಿದಾನಂದಮೂರ್ತಿ-ಕ.ಶಾ.ಸಾಂ. ಅಧ್ಯಯನ–ಪು ೧೫೩.

8. ತೊ. ರಾ. I ೭-೨೨. " ಕ್ರಿ. ಪೂ. ೩ನೇ ಶತಮಾನದಿಂದ ಕ್ರಿ. ಶ. ೧೬ನೇ ಶತಮಾನದವರೆಗೂ ಬೌದ್ಧಧರ್ಮವು ಕರ್ನಾಟಕದಲ್ಲಿ ಪ್ರಚಲಿತವಾಗಿತ್ತು. ಅದು ಬಹುಶಃ ಯಾವಾಗಲೂ ಪ್ರಬಲ ಧರ್ಮವಾಗಿರಲಿಲ್ಲ "–ಎಂ. ಚಿದಾನಂದ ಮೂರ್ತಿ ಕ. ಶಾ. ಸಾಂ. ಅಧ್ಯಯನ ಪು. ೧೨೩. ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಚಿಕ್ಕಿಂಡಿಯಲ್ಲಿ ಬೌದ್ಧ ಮತ್ತು ಜೈನ ದೇವಾಲಯಗಳೆರಡೂ ಇದ್ದವೆಂದು ಶಾಸನವು ತಿಳಿಸುತ್ತದೆ.–ಮೇಲಿನದೇ ಪು. ೧೧೭.

9. ತೊ. ರಾ. VI ೨೫-೨೭ ಮತ್ತು VI ೪೭-೩೧.

10. ವೀರಶೈವ, ಜ್ಞಾನದೇವ, ಮಹಾನುಭಾವ ಪಂಥಗಳೂ ಆ ಕಾಲದಲ್ಲಿ ಇದ್ದವು.
Thongh many religions were practised during the period there seems to have been religious toleration and harmony-A. V. N. The Sevunas of Dcvagiri. p. 188.

11. ತೊ. ರಾ. II ೨ ೩೬. 12. ತೊ. ರಾ. V ೮-೫೨.
ನಾಥಪಂಥದ ಗುರುಗಳನ್ನು " ಜೋಗಿ " ಎಂಬುದಾಗಿ ಕರೆಯುವ ವಾಡಿಕೆಯಿದೆ. ಅವರು ಹೆಚ್ಚಾಗಿ ಹಠಯೋಗ ಸಾಧಕರೆಂಬುದರಿಂದ " ಜೋಗಿ " ಎಂಬ ಬಿರುದು ಬಂದಿರಬಹುದು–ಶಿವರಾಮಕಾರಂತ-ಜಾನಪದ ಗೀತೆಗಳು-೭೦.
" ಬೌದ್ಧಮತದಿಂದ ಹೊರಟ ವಜ್ರಯಾನ ಶಾಖೆಯಿಂದ ಮೂಡಿಬಂದ ಶುದ್ಧ ಶೈವಯೋಗಮತವಾದ ನಾಥಪಂಥವು ಕ್ರಿ.ಶ. ೧೦ನೇ ಶತಮಾನದಲ್ಲಿ ಪ್ರಚಾರಕ್ಕೆ ಬಂದಿತೆಂದು ಹೇಳಬಹುದು. ಈ ನಾಥಪಂಥಿಗಳಿಗೆ ಜೋಗಿಗಳೆಂದೂ, ಇವರ ಮುಖಂಡನಿಗೆ ' ಜೋಗಿ ಅರಸ ' ನೆಂದೂ ಹೆಸರು."
–ಪಿ. ಗುರುರಾಜಭಟ್–ತುಳುನಾಡಿನ ಇತಿಹಾಸದಲ್ಲಿ ಸ್ಥಾನಿಕರು.-ಪು. ೪೨.

13. ತೊ. ರಾ. VI ೪೭–೩೧. 14. ತೊ. ರಾ. VI ೫೫-೫೪.

**ತಲೆಯು ಬೋಳಿಸಿಕೊಂಡ ಸನ್ಯಾಸಿ**

ವಾಲ್ಮೀಕಿ ರಾಮಾಯಣದಲ್ಲಿ, ಸೀತಾಪಹಾರಕ್ಕಾಗಿ ರಾವಣನು ತಾಳಿದ "ಪರಿವ್ರಾಜಕ" ರೂಪವನ್ನು ಹೀಗೆ ವರ್ಣಿಸಲಾಗಿದೆ :

ಶ್ಲಕ್ಷ್ಣ ಕಾಷಾಯ ಸಂವೀತಃ ಶಿಖೀ ಛತ್ರೀ ಉಪಾನಹೀ
ವಾಮೇ ಚಾಂಸೇಽವಸಜ್ಯಾಥ ಶುಭೇ ಯಷ್ಟಿಕಮಂಡಲೂ[1]

"ಅವನು ಮೃದುವಾದ ಕಾಷಾಯವಸ್ತ್ರವನ್ನುಟ್ಟು, ತಲೆಯಲ್ಲಿ "ಶಿಖೆಯನ್ನು ಧರಿಸಿ"[2] ಛತ್ರಿಯನ್ನು ಹಿಡಿದು ಪಾದುಕೆಗಳನ್ನು ಮೆಟ್ಟಿದ್ದನು. ಎಡಹೆಗಲಿಗೆ ದಂಡ ಕಮಂಡಲುಗಳನ್ನು ಅಳವಡಿಸಿಕೊಂಡಿದ್ದನು."

ಆದರೆ, ಕುಮಾರ ವಾಲ್ಮೀಕಿಯ ರಾವಣ ಸನ್ಯಾಸಿಯು–"ಶಿರದ ಮುಂಡನದ"....[3] ತಲೆಬೋಳಿಸಿಕೊಂಡವನು, ತಲೆಯಲ್ಲಿ ಶಿಖೆ ಧರಿಸಿದವನಲ್ಲ. ಕವಿಯು ತನ್ನ ಕಾಲದಲ್ಲಿ ಕಂಡ 'ಸನ್ಯಾಸಿ' (ತಲೆಯನ್ನು ನುಣ್ಣಗೆ ಬೋಳಿಸಿಕೊಂಡ)ಯ ಚಿತ್ರವನ್ನೇ ತನ್ನ ಕಾವ್ಯದಲ್ಲಿ ಕೊಟ್ಟಿದ್ದಾನೆನ್ನಬೇಕು.

"ಬಸಿದ ಶೂಲಕೆ "ಸವಣ"ನನು ಸೇರಿಸಿದ ಗಾದೆ"[4]–ಎನ್ನುವಲ್ಲಿಯೂ,

ರಾವಣನು ರಣರಂಗದಲ್ಲಿ ಎಲ್ಲವನ್ನೂ ಕಳೆದುಕೊಂಡು "ಜಿನ ಮುನಿ"ಯಂತೆ ತೋರುತಿದ್ದನೆನ್ನುವಲ್ಲಿಯೂ,[5]

ಇನ್ನೊಂದೆಡೆ ರಾವಣನಿಗೆ "ದಿಗಂಬರತ್ವ ಒಂದಾದುದಿಲ್ಲ" ಎಂದು ವರ್ಣಿಸುವಲ್ಲಿಯೂ,[6]

ಕವಿಯು ಬದುಕಿದ್ದ ಸಮಾಜದಲ್ಲಿ ಪ್ರಚಲಿತವಾಗಿದ್ದ ಜೈನ (ದಿಗಂಬರ ಸಂಪ್ರದಾಯ)[7] ಧರ್ಮದ ಸುಳಿವು ನಮಗಾಗುತ್ತದೆ.[8]

## ತೊರವೆ ರಾಮಾಯಣದಲ್ಲಿ ಸೂಚಿತವಾದ–ದಂಡನೆಯ ಬಗೆ

**ಕಳ್ಳನಿಗೆ ಶೂಲದ ಶಿಕ್ಷೆ**

ಕವಿಯ ಕಾಲದಲ್ಲಿ ಕಳ್ಳನಿಗೆ ಕಠಿಣವಾದ ಶಿಕ್ಷೆಯನ್ನು (ಬಹುಶಃ ಶೂಲಕ್ಕೇರಿಸುವ ಪದ್ಧತಿ) ಕೊಡಲಾಗುತಿತ್ತು–ಎಂಬ ಅಂಶವು ಈ ಕೆಳಗಿನ "ಹೇಳಿಕೆ"ಗಳಿಂದ ಸೂಚಿತವಾಗುತ್ತದೆ.

ಬಸಿದ ಶೂಲಕೆ ಸವಣನನು ಸೇರಿಸಿದ ಗಾದೆ,[9]
ಕೆಲವು ಕಳವಿಕ್ಕಿದಡೆ ಕಡೆಯಲಿ ನಿಲುವುದೆದೆಯಲಿ ಶೂಲ,[10]
ಇದ್ದುದಾ ತಲೆ ಶೂಲದಗ್ರದ ಕದ್ದ ಕಳ್ಳನ ತಲೆಯವೊಲು,[11]

---

1. ವಾ. ರಾ. ಅರಣ್ಯಕಾಂಡ-೪೬-೩.
2. ತ್ರಿದಂಡಿ ಸನ್ಯಾಸವೆಂಬ ಭೇದವುಂಟು, ಅಂತಹ ಸನ್ಯಾಸಿಗಳಿಗೆ ತಲೆಯಲ್ಲಿ ಶಿಖೆಯಿರುತ್ತದೆ.
   ದಂಡಗ್ರಹಣಮಾತ್ರೇನ ನರೋ ನಾರಾಯಣೋ ಭವೇತ್
   ತ್ರಿದಂಡ ಗ್ರಹಣಾತ್ತೇಷಾಂ ಪ್ರೇತತ್ವಂ ನೈವ ಜಾಯತೇ. (ಗರುಡ ಪುರಾಣ ೧೦-೧೦೩.)
   ವಾಗ್ದಂಡೋಽಥ ಮನೋದಂಡಃ ಕಾಯದಂಡಸ್ತಥೈವ ಚ
   ಯಸ್ಯೈತೇ ನಿಹಿತಾ ಬುದ್ಧೌ ತ್ರಿದಂಡೀತಿ ಸ ಉಚ್ಯತೇ. (ಮನುಸ್ಮೃತಿ ೧೨-೧೦.)
3. ತೊ. ರಾ. III ೯-೧೭.
4. ಇದೇ. IV ೫-೧೮. 5. ತೊ. ರಾ. VI ೨೫-೨೭. 6. VI ಇದೇ. ೪೭-೩೧.
7. ಎಂ. ಚಿದಾನಂದಮೂರ್ತಿ ಕ. ಶಾ. ಸಾಂ. ಅಧ್ಯಯನ ಪು. ೭೭.
   ಕರ್ನಾಟಕದಲ್ಲಿ ಜೈನ ಧರ್ಮವೆಂದರೆ ಮುಖ್ಯವಾಗಿ ದಿಗಂಬರ ಸಂಪ್ರದಾಯದ ಜೈನ ಧರ್ಮವೆಂದೇ ಅರ್ಥ.
8. ತನ್ನ ಕಾಲದಲ್ಲಿ ಮಧ್ವಾಚಾರ್ಯರ ಪ್ರಭಾವವೂ ಹರಡಿಕೊಡಗಿತ್ತೆನ್ನುವುದನ್ನು, ಕವಿಯು ಆ ಆಚಾರ್ಯರನ್ನು ಗುರುವೆಂದು ಸ್ತುತಿಸಿದ್ದರಲ್ಲಿಯೂ, ಅವರ ತತ್ತ್ವಗಳನ್ನು ಕೃತಿಯಲ್ಲಿ ಅಳವಡಿಸಿಕೊಂಡದ್ದರಲ್ಲಿಯೂ ವ್ಯಕ್ತ.
9. ತೊ. ರಾ. IV ೫-೧೮. 10. ತೊ. ರಾ. VI ೨೨-೭. 11. ತೊ. ರಾ. VI ೨೮-೬೦.

ಸಮಾಜದಲ್ಲಿ (ಎಲ್ಲ ಕಾಲದಲ್ಲಿಯೂ ಇರುವಂತೆ)–'ಇರುಳುಗನ್ನದ ಕೆಲಸ ದಿನದಾಚರಣೆ ಧರ್ಮದ ಸರಸ'[1] "ಇರುಳುಗಳ್ಳರಾಗಿ, ಹಗಲು ಸಂಭಾವಿತರಂತೆ ನಟಿಸುತ್ತಿದ್ದ"–ಗೋಮುಖವ್ಯಾಘ್ರ (ರಾವಣ ಸನ್ಯಾಸಿ)ಗಳು ಆಗಲೂ ಇದ್ದರು.

ಇಂತಹ ಕಳ್ಳರನ್ನು ಪತ್ತೆಹಚ್ಚುವುದಕ್ಕಾಗಿದ್ದ "ತಳವರ"ರ ಕುರಿತಾಗಿ–

"ಚೋರರಂಗದ ಮಾತು ತಳವರ ಕೇರಿಯಲಿ ನಡೆಯುವುದೇ? (ಭೂಷಣವೇ?)[2] ಎಂಬ ಮಾತು ಬಳಕೆಯಲ್ಲಿತ್ತು.

ಇಷ್ಟೆಲ್ಲ ಇದ್ದರೆ, ಕೆಲವೊಮ್ಮೆ ನಿರಪರಾಧಿಗಳಿಗೆ–ಬಸಿದ ಶೂಲಕೆ ಸವಣನನ್ನು ಸೇರಿಸಿದ ನುಡಿಯಲ್ಲಿ, ಮತ್ತು ಎಲ್ಲ ದುಷ್ಟಪ್ರಾಣಿಗಳನ್ನೂ ಬಿಟ್ಟು "ಆಡಸಿಕ್ಕಿದಂತಾಯ್ತು"[3] ಎಂಬ ಮಾತಿನಲ್ಲಿ ಧ್ವನಿತವಾದಂತೆ–ಶಿಕ್ಷೆಯಾಗುವ ಸಂಭವವೂ ಆಗ(ಲೂ) ಇದ್ದಿತ್ತೇನೋ?.

## ತೊರವೆ ರಾಮಾಯಣದಲ್ಲಿ ಚಿತ್ರಿತವಾದ–ವೀರಜೀವನ

"ಯುದ್ಧವು ಮಾನವಜೀವನದ ಅತ್ಯಂತ ಪ್ರಾಚೀನ ಅಂಶಗಳಲ್ಲೊಂದು."[4] ಎಲ್ಲ ರಾಜಕೀಯ ವ್ಯವಸ್ಥೆ–ರಾಷ್ಟ್ರ ಮತ್ತು ಪ್ರಭುತ್ವ–ಎಲ್ಲವೂ ಯುದ್ಧದ ಅನಿವಾರ್ಯತೆಯಿಂದಲೇ ಸೃಷ್ಟಿಗೊಂಡವೆಂದು ಹೇಳಬಹುದು. ಭಾರತದ ಮಹಾಕಾವ್ಯಗಳಾದ "ರಾಮಾಯಣ" ಮತ್ತು "ಮಹಾಭಾರತ"ಗಳಲ್ಲೂ ಯುದ್ಧವು ಕೇಂದ್ರವಸ್ತುವಾಗಿರುವುದು ಗಮನಕ್ಕೆ ಬರುತ್ತದೆ. ಅಶ್ವಮೇಧ, ರಾಜಸೂಯಗಳ ಯಶಸ್ಸಿಗೆ ಯಜ್ಞಕರ್ತೃವಿನ ಯುದ್ಧ ಸಾಮರ್ಥ್ಯವೇ ತಳಹದಿಯಾಗಿತ್ತು.

"ಸೇನೆ ಮತ್ತು ಕೋಶಗಳೇ ಅರಸೊತ್ತಿಗೆಯ ಮೂಲಗಳು"–ಎಂದು "ಮಹಾಭಾರತ"ವು ತಿಳಿಸುತ್ತದೆ.[5] ಕೌಟಿಲ್ಯನ "ಅರ್ಥಶಾಸ್ತ್ರ"ವು "ಸೇನೆಯು ಪ್ರಭುತ್ವದ ಸಪ್ತಾಂಗಗಳಲ್ಲಿ ಒಂದು" ಎಂದೂ, ಶುಕ್ರ ನೀತಿಯು ಸೇನೆಯಿಲ್ಲದಿದ್ದರೆ ರಾಜ್ಯವಾಗಲೀ, ಸಂಪತ್ತಾಗಲೀ, ಪ್ರಭುತ್ವವಾಗಲೀ ಇರಲಾರದೆಂದೂ–ಸಾರುತ್ತವೆ.[6]

ಕನ್ನಡ ನಾಡು ಮೊದಲಿನಿಂದಲೂ ಶೌರ್ಯಧೈರ್ಯಾದಿಗಳಿಗೆ ಹೆಸರಾಗಿದೆ.

ಸಮರಕರ್ಮಣಿ ನಿಸರ್ಗೋದ್ಭಟಾ ಏವ ಕರ್ಣಾಟಾಃ[7]

---

1. ತೊ. ರಾ IV ೫೪–೫೨. 2. ಇದೇ. VI ೨೨–೭. 3. ಇದೇ. IV ೪–೩೯.

ಸುಕವಿಯ ಕಾಲದಲ್ಲೇ (ಕ್ರಿ.ಶ. ೧೪ನೆಯ ಶತಮಾನದಲ್ಲಿ) ನಮ್ಮ ನಾಡಿಗೆ ಬಂದಿದ್ದ ಇಬೆನ್ ಬ ತೂತಾನ ಹೇಳಿಕೆಯೊಂದನ್ನು ಇಲ್ಲಿ ಸ್ಮರಿಸಬಹುದು.

ಒಂದು ತೆಂಗಿನಕಾಯಿ ಕದ್ದರೂ ಸಾಕು, ಹಿಂದುಗಳು ಕಳ್ಳನಿಗೆ ಮರಣದಂಡನೆ ವಿಧಿಸುತ್ತಾರೆ. "ಕದ್ದವನನ್ನು ದಸಿಯಿಂದ ಸೀಳಿ ಪ್ರಾಣ ತೆಗೆಯುತ್ತಾರೆ. ಇದನ್ನು ತಿಳಿದು ಪ್ರಯಾಣಿಕರು ಹುಷಾರಾಗಿರಲೆಂದು ರಸ್ತೆಯ ಪಕ್ಕದಲ್ಲಿ ನೆಟ್ಟಿರುವ ಅನೇಕ ದಸಿಗಳನ್ನು ನಾವು ನೋಡಬಹುದು."–ಎಚ್. ಎಲ್. ನಾಗೇಗೌಡ-ಪ್ರವಾಸಿ ಕಂಡ ಇಂಡಿಯಾ-೯ ಪು. ೨೪.

4. "War is a biological necessity, an indispensable regulator in the life of mankind"-Berhardi.

'It makes without all question for greatness to be for the most part in arms'-Bacon.

T. V. Mahalingam-South Indian Polity, p. 248.

5. ಮಹಾಭಾರತ-ಶಾಂತಿಪರ್ವ, ಪು. ೪೧೯.

"ಸೈನ್ಯಾತ್ ವಿನಾಸ್ಸೈವ ರಾಜ್ಯಂ ನಧನಂ ನ ಪರಾಕ್ರಮಃ"

(ಅ) 'ಶುಕ್ರನೀತಿ ಸಾರ'ದ ಪ್ರಾಚೀನತೆಯ ಬಗ್ಗೆ ಸಂದೇಹವಿದೆ. ಅದು ೧೬ನೆಯ ಶತಕಕ್ಕಿಂತ ಈಚಿನದಿರಬಹುದೆಂಬ ಅಭಿಪ್ರಾಯವಿದೆ.

6. B. P. Sinha–'Art of war in Ancient India'-an article in Studies in the cultural History of India p. 118.

7. ರಾಜಶೇಖರನ "ವಿದ್ಧಶಾಲಭಂಜಿಕಾ"(ಅಂಕ ೪)ದ ಈ ಮಾತು ಎ.ಎಸ್. ಅಲ್ತೇಕರ್‌ರ Rastrakutas and their tims ಪು. 247ರಲ್ಲಿ ಉದ್ಧೃತ.

ಎಂಬ ಪ್ರಶಂಸೆಗೆ ಪಾತ್ರವಾಗಿದೆ. ಬಂಗಾಳದ ದೊರೆಗಳು ಕರ್ಣಾಟಕದಿಂದ ಸೈನಿಕರನ್ನು ಕರೆಸಿಕೊಳ್ಳುತ್ತಿದ್ದರು.[1] ಎನ್ನುವುದು ಕನ್ನಡದ ಬಂಟರ, ಬಲ್ಲಾಳುಗಳ ಶೌರ್ಯಾತಿಶಯಕ್ಕೊಂದು ನಿದರ್ಶನವಾಗಿದೆ.

"ಪಂದೆತನ" ಮತ್ತು "ಜೋಳಗಳ್ಳತನ"ಗಳು[1] ಮರಣಕ್ಕಿಂತಲೂ ಹೀನವೆಂಬ ಭಾವನೆ ಈ ನಾಡಿನಲ್ಲಿದ್ದು,[2] ಚಾಗ, ಬೀರಗಳೆಂಬವುಗಳು ಜೀವನ ಮೌಲ್ಯಗಳಲ್ಲಿ ಮಹತ್ತ್ವದ್ದೆನಿಸಿದ್ದವು.

ಈ ನಾಡಿನಲ್ಲಿ ಸಿಗುವ ಶಾಸನಗಳಲ್ಲಿ, ವೀರಗಲ್ಲುಗಳಲ್ಲಿ ಕನ್ನಡಜನರ "ಬೀರತನ"ದ ಸುವರ್ಣೇತಿಹಾಸವೇ ಅಡಗಿದೆ.

ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇ ರಣೇ.[3]

ಅಡಿಯಮುಂದಿಡೆ ಸ್ವರ್ಗ,[4] ಹಜ್ಜೆಯೊಳಶ್ವಮೇಧ ಫಲ

ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿರು, ವೀರಸ್ವರ್ಗವಹುದು[5]—ಈ ನುಡಿಗಳಲ್ಲಿ ಕನ್ನಡ ಜನದ ವೀರ ಮನೋವೃತ್ತಿಯ ಪರಿಚಯವಾಗುತ್ತದೆ.

ಕುಮಾರ ವಾಲ್ಮೀಕಿಯು—ಕನ್ನಡ ನಾಡಿನ ವೀರ ಮನೋಧರ್ಮವು ಉಜ್ವಲವಾಗಿದ್ದ ಕಾಲದಲ್ಲಿ ಬಾಳಿದವನು, ಕೃತಿರಚನೆ ಮಾಡಿದವನು. ಇದರಿಂದ ಅವನ ಕಾವ್ಯದಲ್ಲಿ "ಬೀರ"ದ ಚಿತ್ರಣವು—ಸಹಜವಾಗಿ ಮೂಡಿಬಂದಿದೆ.

ರಣದುಬ್ಬರಕೆ ಹಿಂಗುವ ಹೇಡಿತನವುಂಟೇ ?[6]
ಐಸೆಮತ್ತೇನಸುವಿನಲಿ ಬಯಲಾಸೆಯನು ಮಾಡುವುದು ಭಟರಿಗೆ ಹೇಸಿಕೆಯ ಹೊರೆ.[7]

ಅಳುಕದಿರಿರೋ ಸ್ವರ್ಗವಿಟ್ಟಿರೆ
ಆಳತೆಗಿವೆ, ಕೈಸೋಂಕಿಗಿವೆ ಸುರ
ಲಲನೆಯರ ಕಡುಕಠಿಣಪೀನಪಯೋಧರಾಳಿಗಳು
ಬಳಿಯಲಿವೆ ಸುರಕುಜ ಸುಧಾರಸ
ಕಲಶನೈಹಿಕದಿಂದ ಪರಸತಿ
ಸುಲಭ ಸಾವಿನೆ ಸೆಡೆದರಿಹಸವಿಲ್ಲ ನಿನುಗೆಂದ.[8]

ತಲೆಯನೊಡೆಯಗೆ ಕೊಡುನಡಿದು ರಣಗಲಿಗಳಿಗೆ ತಾ ಸಮಯ.[9]

---

1. "ಜೋಳದ ಪಾಳಿ" (ಅನ್ನದಋಣ, ಉಪ್ಪಿನ ಹಂಗು)ಯನ್ನು ಪಂಪನು ಬಹಳವಾಗಿ ಕೊಂಡಾಡಿದ್ದಾನೆ : "ಸಂಗರದೊಳ್ ಜೋಳದ ಪಾಳಿಯಂ ನೆರಪಿದಂ ಗಂಡಂ, ಪೆರಂ ಗಂಡನೇ ?"-ವಿಕ್ರಮಾರ್ಜುನವಿಜಯ ೧೦-೪೩.
1. (ಅ) Indian Antiquary xv p.305-ಚಿದಾನಂದ ಮೂರ್ತಿ. ಕ. ಶಾ ಸಾಂ. ಅಧ್ಯಯನ ಪು. ೨೪೫. A. S. Altekar ' Rastrakutas and their times-p. 247.
2. ಬೇದಿನೋಡಿಮಿದು ಚಾಗದ ಬೀರದಮಾತು ಕರ್ಣನಾ-ಪಂಪ-ವಿಕ್ರಮಾರ್ಜುನ ವಿಜಯ ೧-೯.
3. ದುರ್ಗಸಿಂಹನ ಪಂಚತಂತ್ರ (ಪು. ೨೦೬) ಮತು ಅನೇಕ ವೀರಶಾಸನಗಳ ಅಂತ್ಯದಲ್ಲಿ ಕಾಣಿಸಿಕೊಳ್ಳುವ ಶ್ಲೋಕ.
4. ಸರ್ವಜ್ಞೋಕ್ತಿ.
5. ಕುಮಾರವ್ಯಾಸ—' ಗದುಗಿನ ಭಾರತ '—ವಿರಾಟಪರ್ವ, ೬-೨೨.

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 6. | ೬ | ೮ | ೩೦ |
| 7. | ೬ | ೧೯ | ೭ |
| 8. | ೬ | ೨೭ | ೩೦ |
| 9. | ೬ | ೩೫ | ೨೭ |

ಕಲಿಗಳಿಗೆ ಗುಣವಿದು ಕಣಾ ದು
ರ್ಬಲದ ರಣಗಳ್ಳರಿಗಿದೇ ಗುಣ
ವಳಿವಡೆಯು ಜೀವಿಸಿದಡೆಯು ರಣ ನಿಂದ್ಯವಲ್ಲೆಂದ.[1]

ಹೀಗೆ ರಣಗಲಿತನವನ್ನು ಅಭಿವ್ಯಕ್ತಗೊಳಿಸುವ ಹಲವು ಪದ್ಯಗಳನ್ನು ಉಲ್ಲೇಖಿಸಬಹುದು.

**ವೀರ ಜೀವನ ಚಿತ್ರಣ**

ರಣೋದ್ಯನು ಪ್ರತಾಪಿಗಳ ಕೆಲವು " ಬಿರುದು "ಗಳನ್ನು ಗಮನಿಸಬಹುದು :

ವಿಜಯ ವಲ್ಲಭ,[2]
ಅರಿದಿಶಾಪಟಮಲ್ಲ; ಅರಿದಿಶಾಪಟ ;[3] ಅರಿದಿಶಾವಶ ಪಟು ಪರಾಕ್ರಮಿ.[3](ಅ)
ಆಹವ ಚಂಡ ಚಟುಳ ಪರಾಕ್ರಮ[4]
ರಿಪು ವೇತಂಡ ಪಂಚಾನನ[5]
ವಿಬುಧ ವಂಶ ವಿಭಾಡ[6]
ಸುರಕುಲ ಬಂದಿಕಾರ[7]
ಅಸುರ ವಂಶ ಘರಟ್ಟ,ರಾಯ ವೈರಿ.ಘರಟ್ಟ[8]
ಸಂಗರ ಸಾಸಿಗನ ಬಲ್ಲಹ[9]
ಕದನ ವಿಜಯ ತ್ರಿಯಂಬಕ, ಸಂಗರ ಶೂಲಿ, ಪ್ರತಾಪಹರಾವತಾರ[10]
ಚೌಪಟಮಲ್ಲ[11] ಆಹವ ಮಲ್ಲ[11](ಅ)
ರಘುಕುಲ ಸಮುದ್ರೋದ್ಧರಣ[12]
ಮಲೆವ ರಿಪು ನೃಪಸೂರೆಕಾರ, ಮಲೆಪ ಸುಭಟರ ಗಂಡ[13]

---

ತೊ. ರಾ. ಕಾಂ. ಸಂ. ಪ.

1. ೬ ೪೨ ೪೧.
2. ೧ ೩ ೨೦.
3-3. (ಅ) ೧ ೬ ೭೨. VI ೬-೪೫. VI ೩೩–೧೦. ಎಸ್. ಐ. ಐ. ೧೧–೨ರ ಸಂ ೧೭೩ನೇ ಕ್ರಿ.ಶ. ೧೧೨೪ರ ಆಲೂರು ಶಾಸನದಲ್ಲಿ ' ಅರಿಬಿರುದು ದಿಶಾಪಟ್ಟ '- ಎಂದಿದೆ.
4-5. ೧ ೯ ೩.
6. ೧ ೧೫ ೧೮. 7. ತೊ. ರಾ. I ೮-೫೩. 8. ತೊ. ರಾ. IV ೮-೧೬ ಮತ್ತು ೨ ಸಂಧಿ ಸೂಚನೆ.
9. ೩ ೬ ೫೮.
10. ೪ ೨ ೩೭. V ೫-೨೫. ಎಸ್. ಐ. ಐ. ೧೧–೨ರ ೧೭೭ನೇ ಕ್ರಿ.ಶ. ೧೧೨೫ರ ಮುಗಾಡ್ ಶಾಸನ–' ಬೀರದ ಮಸಕಕ್ಕೆ ಪಿನಾಕಿಯೆನಿಸುವ ' ನಾಕರಸ–
11. 10 (ಅ) ೫ ೨ ೯.
12. ೨ ೧ ೫. ಎಸ್ ಐ. ಐ. ೧೧–೨ರ ೧೭೭ನೇ ಮುಗಾಡ್ ಶಾಸನದಲ್ಲಿ ' ಚತುಸ್ಸಮಯ-ಸಮುದ್ಧರಣ '–ಎಂದಿದೆ.
13. ೬ ೧೦ ೪೫. VI ೨೦–೨೨. " ಮಲೆಪರೊಳ್ ಗಂಡ " ಎನ್ನುವುದು ಹೊಯ್ಸಳ (ವೀರ ಬಲ್ಲಾಳ ರಾಜನ ಬಿರುದು-Derrett. The Hoysalas-p. 15, 84, 191.

ಎಸ್. ಐ. ಐ. ೧೧–೨ರ ೨೦೭ನೇ ಶಾಸನದಲ್ಲಿ-ಮಲಪರೊಳ್ಗಂಡಂ-ಬಿರುದಿಧೆ.

ಕರ್ನಾಟಕ ಇನ್ಸ್ಕ್ರಿಪ್ಷನ್ಸ್ ಸಂಪುಟ-೧ರ ಸಂಖ್ಯೆ ೬೧ನೆಯ ಕ್ರಿ. ಶ. ೧೪೭೧ರ ಕ್ಯಾಕಿಣಿ ಶಾಸನದಲ್ಲಿ-" ಮಲಘರ ಗಂಡ ಮರಿರಾಯ ಒಡೆಯನ ಬಂಟನು "–ಎಂದಿದೆ.

## ವೀರಜೀವನ : ಸುಭಟರ ಹೆಗ್ಗಳಿಕೆಗಳು

ತೋಳಿಡೆಯ ಪೂಜಿಸಿ ಕೊಂಬ ಸುಭಟರು,[1]
ತಲೆ ಹರಿದರಟ್ಟೆಯುಳೆ ಕಾದುವ ವೀರರು,[2]
ಕರವ ಪೂಜಿಸಿ ಕೊಂಬ ಸುಭಟರು,[3]
ನಡೆಗೋಟೆಗಾರರು,[4] ಹಣೆಗಳಲಿ ತೋರುವುದು ಕಂಗಳನಾಜಿರಂಗದಲಿ,[4](ಅ)
ತೊಲಗದಾಹವ ಭೀಮ, ತೊಲಗದ ಕಂಬ ಎಂಬುಬ್ಬಾಳು.[5]
ಹಗಲುದೀವಿಗೆಯ ಹೆಚ್ಚಾಳು[6]
ದೂಳುದೋರಿತುಕಾಣೆನೆಂಬೆಚ್ಚಾಳು, ನಡೆಸಂಕಲೆಯ ಬಿಂಕದ ಕಾಳಗದ ಕಲಿಯಾಳು[7]

ಇಂತಹ ಒಂಕ್ಕೊ ಮಿಕ್ಕಿ ಬಿರುದುಗಳು, ಹೆಗ್ಗಳಿಕೆಗಳು (ವಿಶೇಷಣಗಳು) ಕಾವ್ಯದಲ್ಲಿ ಸಿಗುತ್ತವೆ.

## ವೀರಜೀವನ : ಶಸ್ತ್ರವ್ರಣ

'ಯುದ್ಧಗಳಲ್ಲಿ ಆದ ಗಾಯಗಳು ಪುರುಷರಿಗೆ ಭೂಷಣ ಪ್ರಾಯಗಳು–ಎಂಬ ಭಾವನೆಯು 'ವೀರ ಯುಗ'ದಲ್ಲಿ ಪ್ರಚಲಿತವಾಗಿದ್ದಂತೆ ತಿಳಿದುಬರುತ್ತದೆ.[8] ವೀರರ ಮೈಯಲ್ಲಿನ 'ಶಸ್ತ್ರವ್ರಣ'ಗಳು ಅವರ ಸಾಹಸದ ಚಿಹ್ನೆಗಳೆನಿಸಿದ್ದವು

---

ಆಧುನಿಕ ಥಕಾಯತರನ್ನು ಹೋಲುವ "ಮಲೆಪ"ರ ಕುರಿತಾದ ವಿವರಣೆಗೆ :
ಎಂ. ಚಿದಾನಂದ ಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ–ಪುಟ ೨೯೫ ನೋಡಬಹುದು.

ತೊ. ರಾ. ಕಾಂ. ಸಂ. ಪ.

1. ೬ ೮ ೩೧.
2. ೬ ೨೦ ೬೭.
3. ೬ ೩೪ ೫೮.
4. ೬ ೩೩ ೨. ಎಸ್. ಐ. ಐ. ಸಂಪುಟ ೧೧–ರ ಸಂಖ್ಯೆ ೬ನೇ ಕ್ರಿ.ಶ. ೧೦೧೨ (ಬನಶಂಕರಿ)ರ ಶಾಸನದಲ್ಲಿ (ನೆಲ) ಗೋಂಟಿ ಮಲ್ಲಂ–
   ಎಸ್. ಐ. ಐ. ಸಂಪುಟ ೧೧-೧ರ ೫೬ನೆಯ ಕ್ರಿ.ಶ. ೧೦೧೨ (ಗದಗು ತಾಲ್ಲೂಕು)ರ ಶಾಸನದಲ್ಲಿ ಸತ್ಯರತ್ನಾಕರಂ ನಡೆಗೋಟೆ ಮಲ್ಲಂ-ಎಂದಿದೆ.

4. (ಅ) ೬ ೪೫ ೪೩. ಎಸ್. ಐ. ಐ. ಸಂಪುಟ ೧೧-೨ರ ೧೭೬ನೇ ಕ್ರಿ.ಶ. ೧೧೨೫ರ ಶಾಸನದಲ್ಲಿ "ನೊಸಲ ಕಣ್ಣುಮಂ ತೋರುವನೆಂಬಸದೃಶಮೆನಿಸುವ ಬೀರರ ಮುಸಕಂ" ಎಂದಿದೆ.

5. ೬ ೪೫ ೫೮. ಹೊಯ್ಸಳ (ನರಸಿಂಹನ) ದಂಡನಾಯಕ "ಪೋಲಾಳ್ವ"ನಿಗೆ (ಕ್ರಿ.ಶ. ೧೨೨೪) "ತೊಲಗದ ಕಂಬ" ಎಂಬ ಬಿರುದು ಇತ್ತು.
   –ಕೃಷ್ಣರಾವ್ ಮತ್ತು ಕೇಶವಭಟ್–ಕರ್ನಾಟಕ ಇತಿಹಾಸ ದರ್ಶನ-ಪು. ೨೬೭.
   "ಕೆಳದಿ ನೃಪ ವಿಜಯ" (೭-೧೦)ದಲ್ಲಿ "ತೊಲಗದ ಕಂಬ" ಎನ್ನುವುದು ವಿಜಯ ಸ್ತಂಭ ಎಂಬ ಅರ್ಥದಲ್ಲಿ ಬಳಸಲ್ಪಟ್ಟು, ಕಾಸರಗೋಡು, ನೀತೇಶ್ವರಗಳಲ್ಲಿ "ತೊಲಗದ ಕಂಬ"ಗಳನ್ನು ನಿಲ್ಲಿಸಿದ ಉಲ್ಲೇಖವಿದೆ.

6. ೭ ೪೫ ೫೮. "ಹಗಲು ದೀವಟಿಗೆ" ಎನ್ನುವುದು ಗೌರವ ಸೂಚಕವಾದ (ಕನ್ನಡ ನಾಡಿನಲ್ಲಿ ಹಿಂದೆ ಬಳಕೆಯಲ್ಲಿದ್ದ) ೧೬ ಮರ್ಯಾದೆಗಳಲ್ಲಿ ಒಂದು.
   -B. A. Saletore-Ancient Karnataka Vol. I. p. 304.

7. ೬ ೪೫ ೫೮.
8. ಇ. ಸಿ. ೬–೩೬–ಕ್ರಿ.ಶ. ೭೪೯–ಶಾಸನದಲ್ಲಿ ವ್ಯಕ್ತವಾಗಿದೆ–
   ಎಂ. ಚಿದಾನಂದಮೂರ್ತಿ–ಕ. ಶಾ. ಸಾಂ. ಅಧ್ಯಯನ-ಪುಟ ೨೪೮ರಲ್ಲಿ ಉದ್ಧೃತ.

ವೀರ ರಮಣಿಯರು ತಮ್ಮ ಪುರುಷರಿಂದ ಮಣಿಕನಕಗಳಿಗಿಂತ ಹೆಚ್ಚಾಗಿ, ಅವರ 'ಶಸ್ತ್ರ ವ್ರಣ'ಗಳನ್ನು ಮೆಚ್ಚುತಿದ್ದರೆಂದು ಕವಿಗಳು ವರ್ಣಿಸಿದ್ದಾರೆ.[1]

ಕುಮಾರ ವಾಲ್ಮೀಕಿಯ ಕೃತಿಯೂ ಇದಕ್ಕೆ ಹೊರತಾಗಿಲ್ಲ. ಉದಾ :

ಸಿಡಿಲು ಹೊಡೆಮುಚ್ಚಳಿಸಿದುರದು
ಗ್ಗಡದ ಗಾಯದ, ಘನಮದ ದ್ವಿಪ
ತುಡುಕಿ ತಿವಿದೇರುಗಳ, ಡೋರುಗಳ, ಅಮರರಾಯಧದ
ಪಡಿಮುಖದ ಹಳಿಗಲೆಯ, ಕರುಳ್ಗಳ
ನಡಸಿ ಬಸುರಲಿ ಹೊಲಿದ ಹೊಲಿಗೆಯ[2]
ದಡಿಗ ರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ.[3]

ಹರಿಯ ಚಕ್ರ ವಿಘಾತಿಯಲಿ ಕೊರ
ಳರೆ ಹರಿದ ರಣವೀರರದೆ, ನರ
ಹರಿಯ ನಿಶಿತನಖಾಗ್ರ ಹತಿಯಲಿ ಸೀಳಿದೊಡಲುಗಳ
ಕರುಳ ಹೊಲಿಗೆಯ ವೀರರದೆ, ಸೂ
ಕರನ ದಾಡೆಗಳಿರಿತದಂಗದ
ಬರಿಯ ಬಾದಣದಲೆಯ ಭಟರವೆ ದೇವ ನೋಡೆಂದ.[4]

**ಅರಿಶಿರದಗತಿ**

ತೊರವೆ ರಾಮಾಯಣದಲ್ಲಿ, ಹನುಮಂತನು 'ಸಿಂಹಿಕೆ'ಯನ್ನು ಸೀಳಿ ಅದರ ಒಂದು ಭಾಗವನ್ನು ದಶಶಿರನ ಊರಿಗಿಟ್ಟನು, ಮಿಕ್ಕ ಹೋಳನು ಜಾಂಬವದೇವನೆಡೆಗೆ ಎಸೆಯುತ್ತಾನೆ.[5]

ಹಾಗೆಯೇ, ಅದೇ ಹನುಮಂತನು ಅಕ್ಷ ಕುಮಾರನ ಶಿರವನ್ನು ದಶಾಸ್ಯನ ಸಭೆಯ ಸರಿಸದಲಿ ಕಿತ್ತಿಟ್ಟು, ಉಳಿದ ಮುಂಡವ ತಂದು ಬಾಗಿಲ ಬಳಿಯ ನೆಲೆಯುಪ್ಪರಿಗೆಯ ಅಗ್ರಭಾಗದಲ್ಲಿ ಸೆಕ್ಕುತ್ತಾನೆ.[6]

ಕುಂಭಕರ್ಣನ ಕಿರೀಟವು ಸಿಂಗಣ ರಾಜ್ಯದಲ್ಲಿಯೂ, ಶಿರವು 'ಇಳೆ ಪಾತಾಳಕಾಳೆ ಕೆಡೆದುದು.'[7]

ಇಂತಹ ವರ್ಣನೆಗಳು ವಾಲ್ಮೀಕಿ ರಾಮಾಯಣದಲ್ಲಿಲ್ಲ.

ವಿರೋಧಿ ಅರಸನ ತಲೆಯನ್ನು ಹೆಬ್ಬಾಗಿಲಲ್ಲಿ ತೂಗು ಹಾಕಿದ ಉಲ್ಲೇಖವು ಕವಿಯ ಕಾಲದ ಇತಿಹಾಸದಲ್ಲಿ ದೊರೆಯುತ್ತದೆ.[8] ಇನ್ನೊಂದು ಶಾಸನದಲ್ಲಿ ಇಬ್ಬರು ಸೇನಾಪತಿಗಳ ಕತ್ತರಿಸಲ್ಪಟ್ಟ ತಲೆಗಳನ್ನೂ ತೂಗು ಹಾಕಿದ ವಿಚಾರವಿದೆ.[9]

---

1. " ಮಣಿಕನಕಂ ವಸ್ತು ವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ?
   ಗಂಡರ್ಗುಣಮನೆ ಮೆರೆವುದು ಶಸ್ತ್ರ ವ್ರಣಮಂ–ರನ್ನ–ಗದಾಯುದ್ಧ (ಸಾ. ಭೀ. ವಿ.) ೨-೭
2. ಯುದ್ಧಗಾಯಾಳುಗಳಿಗೆ ಶಸ್ತ್ರ ಚಿಕಿತ್ಸೆ (ಹೊಲಿಗೆ ಇತ್ಯಾದಿ)ಯ ಸೂಚನೆ ತೊ. ರಾ. VI ೪೧–೪೬. VI ೪೨–೧೪. VI ೪೩-೨೭. VI ೪೪-೨೦. VI ೪೫-೪ ಇತ್ಯಾದಿ ಪದ್ಯಗಳಲ್ಲಿದೆ.
3. ತೊ. ರಾ. III ೭-೫.
4. ತೊ. ರಾ. VI ೨೦–೬೦ ಮತ್ತು VI ೨೦–೬೧, ೨೨ನೆಯ ಪದ್ಯಗಳಲ್ಲೂ " ಶಸ್ತ್ರ ವ್ರಣ "ಗಳ ವರ್ಣನೆ ಇದೆ. ಬತ್ತಲೇಶ್ವರನೂ ಇದೇ ವರ್ಣನೆಯನ್ನು ಅನುಕರಿಸಿದ್ದಾನೆ-ಕೌ. ರಾ. ಪುಟ ೨೫೨-೧೫. ೧೬ ಪದ್ಯಗಳು
5. ತೊ. ರಾ. V ೧-೨೨.
6. ಇದೇ. V ೫-೩೪.
7. ಇದೇ. VI ೨೮-೬೬.
8. ಕೃಷ್ಣರಾವ್ ಮತ್ತು ಕೇಶವ ಭಟ್– ಕರ್ನಾಟಕದ ಇತಿಹಾಸ ದರ್ಶನ-ಪುಟ. ೩೦೧.
9. Another inscription describes how the severed heads of two generals

ಇಬಿನ ಬತೂತಾನು (ಕ್ರಿ.ಶ. ೧೩೪೨) ಕಂಡ ಒಂದು ವಿಚಾರವನ್ನು-ಗಿಯಾಸುದ್ದೀನನು ಬಲ್ಲಾಳನನ್ನು ಕೊಂದು ಮಧುರೆಯಲಿ ತೂಗುಹಾಕಿದ್ದನ್ನು-ಬರೆದಿರಿಸಿದ್ದಾನೆ.[1]

ಬಹುಶಃ ಇಂತಹ ಘಟನೆಗಳಿಂದ ಪ್ರಭಾವಿತನಾಗಿ ಕವಿಯು ಮೇಲಿನಂತೆ ವರ್ಣಿಸಿರಬಹುದೇ ?

## ವೀರಜೀವನ-ಕೋಟೆ ಕಾಳಗದ ವರ್ಣನೆ

ನಡುಗಾಲದ ರಾಜಕೀಯ ವ್ಯವಸ್ಥೆಯಲ್ಲಿ “ಸಂರಕ್ಷಕ ಸಾಧನ”ವಾದ ಕೋಟೆಗೆ ಮಹತ್ವದ ಸ್ಥಾನವಿತ್ತು. ದುರ್ಗವು ರಾಜ್ಯದ ಸಪ್ತಾಂಗಗಳಲ್ಲಿ[2] ಒಂದಾಗಿ, ಅನಿವಾರ್ಯವಾಗಿತ್ತು. ಭದ್ರವಾದ ಕೋಟೆಯಿಲ್ಲದ ರಾಜನು ಬಿರುಗಾಳಿಯ ಮುಂದಿನ ಮೋಡದ ತುಂಡುಗಳಿಗೆ ಸಮಾನನೆಂದು ಕಾಮಂದಕನು ಹೇಳುತ್ತಾನೆ.[3] ಮಧ್ಯಕಾಲೀನ ಶಾಸನವೊಂದು ದುರ್ಗವು ಪ್ರಭುತ್ವದ ಚಕ್ರನಾಭಿ ಎಂದು ವರ್ಣಿಸುತ್ತದೆ.[4]

ಕೋಟೆಗಳು ಮುಖ್ಯವಾಗಿ, ಸ್ಥಲದುರ್ಗ, ಜಲದುರ್ಗ, ಗಿರಿದುರ್ಗ ಮತ್ತು ವನದುರ್ಗಗಳೆಂದು ನಾಲ್ಕು ವಿಧ.[5] ಕೌಟಿಲ್ಯನು ದುರ್ಗವನ್ನು ರಚಿಸುವ ವಿಧಾನವನ್ನು, ತನ್ನ “ಅರ್ಥಶಾಸ್ತ್ರ”ದಲ್ಲಿ ವಿವರಿಸಿದ್ದಾನೆ.[6]

ಕೋಟೆಯನ್ನು ಮುತ್ತಿಗೆ ಹಾಕಿ, ಲಗ್ಗೆಯೇರಿ ಅದನ್ನು ವಶಪಡಿಸಿಕೊಳ್ಳುವುದು ಯುದ್ಧ ಕ್ರಮಗಳಲ್ಲೊಂದು. ಲಗ್ಗೆಯಿಕ್ಕುವವನೂ, ಕೋಟೆಯೊಳಗಿರುವವನೂ ಮಾಡಬೇಕಾದ ಸಿದ್ಧತೆಗಳ ವಿವರಣೆಗಳು ನಮ್ಮ ಕಾವ್ಯಗಳಲ್ಲಿ ಅಲ್ಲಲ್ಲಿ ದೊರೆಯುತ್ತವೆ.[7]

ಸೇವುಣ ಸಿಂಗಣನ ಸಾಮ್ರಾಜ್ಯದಲ್ಲಿ ಸುಮಾರು ೮೪ ಕೋಟೆಗಳಿದ್ದವು.[8] ಕುಮಾರವಾಲ್ಮೀಕಿಯು ವರ್ಣಿಸಿದ ‘ಲಂಕೇಶನ ದುರ್ಗ ಸಮರ ಸಿದ್ಧತೆಯ ವರ್ಣನೆ’ಯು[9], ಕಾಳಗಕ್ಕೆ ಸನ್ನದ್ಧವಾದ ಯಾವುದೋ ಒಂದು ಕೋಟೆಯ (ಕನ್ನಡನಾಡಿನ) ಚಿತ್ರಣವಾಗಿರಬೇಕು. ಕವಿಯು ವರ್ಣಿಸಿದ ‘ಕೋಟೆ ಕಾಳಗದ ವಿಶಿಷ್ಟ ರೀತಿ”ಗೆ ವಾಲ್ಮೀಕಿ ರಾಮಾಯಣದಲ್ಲಿ ಆಧಾರವಿಲ್ಲ. ಅಲ್ಲದೆ, ಕುಮಾರ ವಾಲ್ಮೀಕಿಯು ಬಳಸಿದ ಪದಗಳೆಲ್ಲವೂ ಕನ್ನಡನಾಡಿನ ‘ಕೋಟೆ ಕಾಳಗ’ಕ್ಕೆ ಸಂಬಂಧಪಟ್ಟವೇ ಆಗಿವೆ.

---

were hung on the flagstaff of the howdah-A. V. Narasimhamurthy. The Sevunas of Devagiri. p. 159.

1. ‘His skin was stuffed with straw and hung upon the wall of Madura, where’ says Ibn Batuta, ‘I saw it in the same position, (1342)-K. A. Neelakanta Sastry-A History of south India-p. 240.

2. ರಾಜ, ಅಮಾತ್ಯ, ರಾಜ್ಯ, ದುರ್ಗ, ಕೋಶ, ಸೈನ್ಯ, ಮಿತ್ರ-ಇವು ಸಪ್ತಾಂಗಗಳು.
ವೈದಿಕ ಸಾಹಿತ್ಯ, ಬೌದ್ಧ ಜಾತಕ, ಮನುಸ್ಮೃತಿಗಳಲ್ಲೂ ಕೋಟೆಯ ಮಹತ್ವವನ್ನು ವಿವರಿಸಲಾಗಿದೆ.
ಈ ಕುರಿತು ಓದಬಹುದು: B. P. Sinha-Art of war in Ancient India-an article in Studies in the Cultural History of India.

3. ದುರ್ಗ ಹೀನೋ ನರಪತಿಃ ವಾತಾಭ್ರಾವಯವೈಸ್ಸಮಃ-ಕಾಮಂದಕೀಯ ನೀತಿಶಾಸ್ತ್ರ-ಪುಟ. ೪೦ ಮತ್ತು ದುರ್ಗಸಿಂಹನ ‘ಪಂಚತಂತ್ರ’ ಪುಟ-೨೧೫-ಎಂ. ಚಿದಾನಂದಮೂರ್ತಿ-ಕ. ಶಾ. ಸಾಂ. ಅಧ್ಯಯನ-ಪುಟ ೨೮೬.

4. ...·Durga was the nave of the wheel of Sovereignty of a King’-T. V. Mahalingam-South Indian Polity, p. 273.

5. ಈ ನಾಲ್ಕು ವಿಧಗಳಲ್ಲಿ ಪ್ರತಿಯೊಂದೂ ಎರಡು ಪ್ರಕಾರವಾಗಿರುತ್ತದೆ ಎನ್ನುತ್ತಾನೆ-ದುರ್ಗಸಿಂಹ. “ಶಿವತತ್ತ್ವರತ್ನಾಕರ”ವು ಕೋಟೆಗಳಲ್ಲಿ ೯ ವಿಧಗಳಿವೆ ಎನ್ನುತ್ತದೆ. T. V. Mahalingam. S. I. Polity. p. 273.

6. ಕೌಟಿಲ್ಯನ ‘ಅರ್ಥಶಾಸ್ತ್ರ’ ಕೆ. ಕೃಷ್ಣ ಭಟ್ಟರ ಅನುವಾದ-ಪುಟ ೭೯-೮೪.

7. ಈ ಕುರಿತು ವಿವರಗಳನ್ನು ಬೆಟಗೇರಿ ಕೃಷ್ಣಶರ್ಮರು-ಕರ್ನಾಟಕದ ಜನಜೀವನ-ಎಂಬ ಪುಸ್ತಕದ ‘ಕನ್ನಡಿಗರ ಕೋಟೆ ಕಾಳಗ’ ಎಂಬ ಲೇಖನದಲ್ಲಿ ಒದಗಿಸಿದ್ದಾರೆ.

8. A. V. Narasimhamurthy-The Sevunas of Devagiri-p. 161.

9. ಕೊ. ರಾ. ಯುದ್ಧಕಾಂಡ ೭-೪೦ರಿಂದ ೧೭.

ರವಿಮಂಡಲನನ್ನೇ ನಿಲುಕುವ ಅಟ್ಟಳೆಯ ಸಾಲುಗಳು [1]

ಕೊತ್ತಳಗಳು[2]

ನೆಲಗೋಟೆ, ಅಗಳು, ಪಡಿಗೋಟೆ[3] ಪಡಿಯಗಳು, ರಾಟಾಳ ಸೂತ್ರ.[4]

ತೆನೆಯ ತಿಂಥಿಣಿ[5], ಆಳುವೇರಿ

ಬದ್ಧರ[6]

ಡೆಂಕಣಿ,[7]

ಶತಘ್ನಿ[8]

ಉರುಳುಗಲ್ಲು, ಆರೆಗವಣೆ, ಉರಿಯರಗು, ಅರೆದ ಸಾಸುವೆ, ಹಾವಿನ ಹರವಿ, ಕಾಸಿದ ಮೇಣ, ಕವಣೆಗಲ್ಲು, ನೂಕುಗಲ್ಲು, ವಿಷರಸದ ಜೀರ್ಕೊಳವಿ, ಕೆಂಜಿಗೆ ಕೊಡ, ತೊನಸೆಗಳ ಹರವಿ, ಕಡುದುರುವಿನುಬ್ಬರ, ಕಾದೆಣ್ಣೆ, ತುರುಚೆಯ ಪುಡಿ, ಕಾಲ್ದೊಡಕುಗಳ ಹಗ್ಗಗಳ ಹರಹು, ಉರುಲುಗಳ ತೊಡಕು,–ಇವೆಲ್ಲವೂ ಕೋಟೆಯೊಳಗಿರುವವರು ಲಗ್ಗೆಯಿಕ್ಕುವವರನ್ನು ತಡೆಯಲು ಮಾಡಬೇಕಾದ 'ಸಂವರಣೆ'ಗಳು.[9]

ಈ ಸಂದರ್ಭದಲ್ಲಿ ಕೆಲವು ಬಲೆಗಳನ್ನೂ ಬಳಸಲಾಗುತ್ತದೆ:

ಗಾಣದ ಗಡಿಸು ವಲೆ,

ಸಿಡಿವಲೆ,

ಗೊಂಗಸ (ನರಿ ಹಿಡಿಯುವ ಸಾಧನ)ದ ಸಲುಕಿನ ವಡಿವಲೆ,

---

1. ಅಗ್ಗಳನ "ಚಂದ್ರಪ್ರಭ ಪುರಾಣ" (೧-೧೧೪)ದಲ್ಲಿ ಸೂರ್ಯನ ರಥಕ್ಕೆ ದಾರಿಯಿಲ್ಲದಂತೆ ಮುಗಿಲೆತ್ತರ ಬೆಳೆದ ಕೋಟೆಯ ವರ್ಣನೆ ಇದೆ.

ಅಟ್ಟಾಲಕ–ಅಟ್ಟಳೆ–ಎಂದರೆ ಮಾಳಿಗೆ, ರಣಗೃಹ– ಇದರ ವಿವರಣೆ–ಅರ್ಥಶಾಸ್ತ್ರ ಪು. ೮೧ (ಅನುವಾದ)ರಲ್ಲಿದೆ.

2. ಹರಿಹರನ ಗಿರಿಜಾ ಕಲ್ಯಾಣ–

ಪಳಿಕಿನ ಕೋಂಟೆ ಬಟ್ಟದೆನೆ ಬೇವಿನ ದಂಡೆ ನಭಕ್ಕೆ ಪಾರುವ
ಟ್ಟಳೆ ನಿಮಿರ್ದೇರಿ ಪಾರುವ ಪತಾಕೆ, ವಿರಾಜಿಪ ಗೊಂಟುಗೊಂಟನೊಳ್
ಬಳಸಿದ ಕೊತ್ತಳಂ, ಸೊಗಯಿಪಾಳ್ವರಿ, ಡೆಂಕಣಿ ಸಾರವಾಗಿಯ–
ಗ್ಗಳಿಸುವ ಗೋಪುರಂ ಪುಲಿಮೊಗಂ ಮೆರೆಗುಂ ಪುರದೊಳ್ ನಿರಂತರಂ ಆಶ್ವಾಸ ೨-೨೯.

3. ಕುಮಾರವ್ಯಾಸ–ಗದುಗಿನ ಭಾರತ–ಭೀಷ್ಮಪರ್ವ ೧-೫೨

...ಕೋಟಾ
ವಳಯ, ಅಗಳಲ್ಲಿ, ತಳಿ, ಮುಳುವೇಲಿ ಪಡಿಯಗಳು...

ಪಡಿಗೋಟೆ: ದಾಳಿಯಿಕ್ಕುವುದಕ್ಕೆ ಹೊರಟ ಸೇನೆಯ ಸಂರಕ್ಷಣೆಗಾಗಿ ರಚಿಸಿದ "ಕೃತ್ರಿಮದ ದುರ್ಗ"–ಬೆಟಗೇರಿ ಕೃಷ್ಣಶರ್ಮ–ಕ. ಜನಜೀವನ–ಪು. ೬೨.

4. ತೊ. ರಾ. VI ೭-೫.

5. ಅಗ್ಗಳನ "ಚಂದ್ರಪ್ರಭ ಪುರಾಣ" ೧-೧೧೮

ನಾಗಚಂದ್ರ "ರಾಮಚಂದ್ರ ಚರಿತ ಪುರಾಣ" ೧-೧೧೬ ಪೊಂದೆನೆಗೊನೆ

ತೆನೆ: ಆಳ್ವೇರಿಯ ಮೇಲೆ ಸಾಲಾಗಿ ನಿಂತ ರಚನೆ. (೧೬೪೪)

ಪಾತಾಳದ ಫಣಿಪತಿ ಸಗ್ಗವ ನೋಡ-ಲಾತುರದಿಂ ಮೇಲಕೇಳೆ...ವಿಜಯಖ್ಯಾತಿಯ ಪಡೆಗಳ ಸಾಲೆನೆ ಕೋಟೆಯ ನೂತನ ತೆನೆಗಳೊಪ್ಪಿದವು–ಗೋವಿಂದವೈದ್ಯ ಕಂಠೀರವ.

6. ಬದ್ದರ-ಒಂದು ಸಾಮೂಹಿಕ ಸಂರಕ್ಷಿತ ಸಾಧನ- ಬೆಟಗೇರಿ ಕೃಷ್ಣಶರ್ಮ, ಕರ್ನಾಟಕ ಜನಜೀವನ ೬೦.

7. ಡೆಂಕಣ್-ಇದು ಧ್ವಜಸ್ತಂಭವೆಂದು ಕೆಲವರ ಅಭಿಪ್ರಾಯವಿದೆ. ಬೆಟಗೇರಿಕೃಷ್ಣಶರ್ಮರ ಅಭಿಮತದಂತೆ ಒಂದು ಆಯುಧ ವಿಶೇಷ.-ಪುಟ. ೫೩.

8. ನೂರಾರು ಜನರನ್ನು ಕೊಲ್ಲುವಂತಹುದು (ಫಿರಂಗಿಯ ಮಾದರಿಯದು)

9. ಇನ್ನೂ ಇವೆ. ಕರ್ನಾಟಕ ಜನಜೀವನ ಪು. ೪೯-೪೦.

ಇವುಗಳ ಮೂಲಕ ಲಗ್ಗೆಯೇರುವವರನ್ನು ‘ ತೊಡಕಿ ’ಗೊಳಪಡಿಸುವ ಪ್ರಯತ್ನ ಮಾಡಲಾಗುತ್ತದೆ. ಇವುಗಳನ್ನೆಲ್ಲ ಎಸೆಯಲು ‘ ಅಡಗಿರ್ದೆಸೆನ ಕಂಡಿ ’ ಇರುತ್ತದೆ. ತಪ್ಪಿಸಿಕೊಳ್ಳಲು ನುಸುಳುಕಂಡಿಗಳು ಇರುತ್ತವೆ.

ತೆನೆತೆನೆಯ ಸಂದಿಯಲಿ ತೋಹಿದ ಮನೆಯ ಸಬಳಗಳನ್ನಿರಿಸಲಾಗುತ್ತದೆ.

ಹೀಗೆ ಸನ್ನದ್ಧವಾದ ಕೋಟೆಯು :

ಹತ್ತುವರಿಗಾಕಾಶ, ಮುಳಿದುರೆ
ಮುತ್ತುವರಿಗುರಿಗೋಟೆ, ಬಾಗಿಲು
ಮೃತ್ಯುವಿನ ಬಾಯಿಗಳು–ಸಂಜಿನ ಮಂಜಿನುಬ್ಬರಣೆ
ಸುತ್ತಕತ್ತರಿವಾಣಿ,ಪಡಿಯಗ
ಳುತ್ತರಿಸಲಮರಾಳಿಗರಿದೆನೆ
ಕೊತ್ತಳದ ಹುಲಿಮುಖದ ಹರಹಿನಲೆಸೆದುದಾ ದುರ್ಗ.[1]

## ಯೋಧರ ಉಡುಪು, ಆಯುಧಗಳು

ಕಾಳಗಕ್ಕೆ ಹೊರಡುವ ವೀರನು, ವಿಜಯಶ್ರೀ ಅಥವಾ ಸ್ವರ್ಗ ಶ್ರೀಯೊಂದಿಗೆ ವಿವಾಹಕ್ಕೆ ಹೊರಟ “ ಮದುಮಗನಂತೆ ” ಅಲಂಕರಿಸಿಕೊಳ್ಳುತಿದ್ದನು.

ತಿಗುರಿದನು ಕಾಯವನು ಕುಂಕುಮ
ದಗರು ಕಸ್ತುರಿ ಸಾದಿನಲಿ ಮಘ
ಮಘಿಪ ಚಂದನ ಗಂಧದಲಿ ಲೇಪಿಸಿದನವಯವವ
ಬಿಗಿದ ಕಾಸೆಯ, ತಲೆವಿಣಿಲ ಮೊನೆ
ದೆಗೆದ ಹೂವೊಗ್ಗಿಗಳ ಹೊದರಿನ
ಹೊಗರ ಹೊಸದೇಸಿಯಲಿ ಯುದ್ಧೋನ್ಮತ್ತಮನನಾದ.[2]

ಯೋಧರು ಸೊಂಟಕ್ಕೆ ಬಿಗಿದುಕೊಳ್ಳುತಿದ್ದ ‘ ಅರುಣ.ಪಟದ ’ ಉಲ್ಲೇಖವು ಅಲ್ಲಲ್ಲಿ ದೊರೆಯುತ್ತದೆ.[3]

ಖಡೆಯ, ಬಿರುದು, ಹಾಹೆಗಳಿಂದ ದೇಹವನ್ನು ಶೃಂಗರಿಸಿ,[4] ಪ್ರಭುವಿನಿಂದ ಕರ್ಪುರಮಿಶ್ರಿತ ರಣವೀಳ್ಯವನ್ನು ಪಡೆದು[5] ರಣಕಣಕ್ಕೆ ಕಾಲಿರಿಸುತಿದ್ದಂತೆ ಉತ್ಸಾಹ ಭೇರಿ, ರಣವಾದ್ಯಗಳು ಮೊಳಗುತಿದ್ದವು, ವಂಧಿಮಾಗಧರ ಹೊಗಳಿಕೆ ಮುಗಿಲು ಮುಟ್ಟುತಿತ್ತು.

ಲೋಕ ಪಾಲರ ಗೆಲಿದವನ,....ಜಗದೇಕವೀರನ, ರಣರಂಗಭೈರವನ....ಏಕಮೇವಾದ್ವಯನ,ಛಲಪದದಾಕೆವಾಳನ ತೋಟ ಬೇಡ...ಎಂದು ಕಹಳೆಗಳು ಭೋರಿಡುತಿದ್ದವು.[6]

ಗರುಡಾಕಾರ, ಮೊದಲಾದ ಆಯ, ಆಕೃತಿಗಳಲ್ಲಿ ಸೇನಾವ್ಯೂಹ ರಚನೆಯಾಗುತಿತ್ತು.[7] ನಾಯಕನು ಕೈವೀಸಿದೊಡನೆ,

---

1. ತೊ. ರಾ. VI ೭-೧೬.
2. ಇದೇ. VI ೨೯-೨೭.
3. ಇದೇ. VI ೨೫/೨೫, ೨೬/೭೬, ೫೧-೭೬.
4. ಇದೇ. VI ೨೬-೭೬.
5. ತೊ. ರಾ. VI ೧೯-೧೧.
6. ಇದೇ. VI ೨೧-೪.
7. ಇದೇ. VI ೧೪-೪೧, ೪೪-೪.

ಹರಿದು ಬಿಸುಟರು ಹಮ್ಮಿ ಸಿಲಿಸಿದ
ಧುರದ ರಣ ರಾಟಾಳ ಸೂತ್ರನ,
ತಿರುಹಿ ಸೂನಿಗೆ ತೆತ್ತಿಸಿದ ಚತ್ತರದ ಬಂಡಿಗಳ...[1]

ಆ ಮೇಲೆ 'ಬೆರೆಸ್ಸಿ ಧಾಳಾಧೂಳಿಯಲಿ ಸೀವರಿಸಿ ಭಟ ಭಟರೊಡನೆ ಬಲು ಸಂಗರ 'ದ ಆರಂಭ.

ಆಯುಧಗಳು[2] (ಅ)

ಚಾಪ, ಬಾಣ, ಎಳೆವರೆಯ ಬಾಣ,[3]
ಸಬಳ, ಕರವಾಳು, ಹೇರಿಟ್ಟೆ,[3]
ಸುರಗಿ, ಕಕ್ಕಡೆ,[4] ಧನು, ಮುದ್ಗರ, ಮುಸುಂಡಿ, ಕೃಪಾಣ,
ಪಟ್ಟಿಸ, ಪರಶು, ಗದೆ,
ಕಬ್ಬಿನ ಬಡಿಗೆ,
ಶೂಲ, ಖಂಡೆಯ,
ಕುಂತ[5]
ಸೂನಿಗೆ,
ಅಸಿ,
ಅಡ್ಡಣ,
ಕರದಂಡ, ಕಠಾರಿ, ತೋಮರ,[6]
ಹರಿಗೆ,[7]
ಕವಚ, ಸೀಸಕ,[8]

**ಗಜಸೇನೆ : ಸುಂಡಿಲಲಿ ಸೆಕ್ಕಿದ ಖಂಡೆಯ :**

"ಕರದ ನೆಗಹಿನ ಖಂಡೆಯದ, ತೆತ್ತಿಸಿದ ಸೂನಿಗೆಯ, ಚರಣದಂಡದ ಕತ್ತಿಗಳ
ಪರಿಪರಿಯ ಕೋಲೆಗಳ ಕೈದುಗಳ ನಿಬ್ಬರದ ನಿರುಪಮ ದಂತಿ "[9]

---

1. ತೊ. ರಾ. VI ೧೯-೨೭.

2. (ಅ) ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರ-ಎಂದು ೨ ಭಾಗಗಳಾಗಿ ವಿಂಗಡಿಸಿ, ಅಸ್ತ್ರಗಳನ್ನು ೧. ಯಂತ್ರಮುಕ್ತ, ೨. ಪಾಣಿಮುಕ್ತ, ೩. ಮಂತ್ರಮುಕ್ತ, ೪. ಮುಕ್ತ ಸಂಧಾರಿತ-ಆಗಿ ವಿವರಿಸುತ್ತದೆ.
ಜನ್ನನು ತನ್ನ ಅನಂತನಾಥಪುರಾಣದಲ್ಲಿ ೧. ಇಸುವ, ೨. ಇಡುವ, ೩. ಇರಿವ, ೪. ಪೊಯ್ವ-ಈರೀತಿ ಆಯುಧಗಳನ್ನು ವರ್ಗೀಕರಿಸುತ್ತಾನೆ. (ಅನಂತನಾಥ ಪುರಾಣ ೧೪-೧ ವಚನ)
ಇವುಗಳ ಸುದೀರ್ಘ, ಸಮರ್ಪಕ ವಿವರಣೆಗೆ-ಎಂ. ಚಿದಾನಂದಮೂರ್ತಿ-ಕ. ಶಾ. ಸಾಂ. ಅಧ್ಯಯನ-ಪು. ೨೭೨.

2. ತೊ. ರಾ. VI ೨೮-೪೮.

3. ಇದೇ. ೬-೩ ಅಥವಾ ೬ ಹಸ್ತಗಳಷ್ಟು ಉದ್ದವಿರುವ ಮರದ ದಂಡ-ಅರ್ಥಶಾಸ್ತ್ರ-ಪು. ೧೧೧.

4. ಕಕ್ಕಡೆ—ಕೈಯಿಂದ ಎಸೆಯುವ ಶೂಲದಂತಹ ಆಯುಧ.

5. ತೊ. ರಾ. VI ೬-೬.

6. ತೋಮರ : ೪-೫ ಹಸ್ತಗಳಷ್ಟು ಉದ್ದವಿರುವ ಬಾಣದಂತಹ ತುದಿಯುಳ್ಳ ದಂಡ. (ಅರ್ಥಶಾಸ್ತ್ರ-೧೧೧)

7. ಹರಿಗೆ : ಗುರಾಣಿ. ಯೋಧನು ಮುಂದೆ ಹಿಡಿದಾಗ ಕೊರಳಿನಿಂದ ಸೊಂಟದವರೆಗೆ ರಕ್ಷಣೆಯನ್ನು ನೀಡುತ್ತದೆ.

8. ಸೀಸಕವನ್ನು ಕೆಲವು ಶಾಸನಗಳಲ್ಲಿ ಸೀಸಹ—ಎಂದೂ ಕರೆಯಲಾಗಿದೆ.
ಗದಾಯುದ್ಧದಲ್ಲಿ ೨-೨೮. (ಶಿರಸ್ತ್ರಾಣ)

9. ತೊ. ರಾ. VI ೨೯-೩೦.

ಮುಂಚಿದವು ಸುಂಡಿಲಲಿ ಸೆಕ್ಕಿದ ಪಟ್ಟೆಯದ ನೆಗಹುಗಳಲಿಭ ನಿಕರ[1]

ಕವಿಯು ಇಂತಹ ವರ್ಣನೆಗಳ ಮೂಲಕ, ಯುದ್ಧಕ್ಕೆ ಹೊರಟ ಆನೆಗಳ ಸುಂಡಿಲುಗಳಿಗೆ ಉದ್ದವಾದ ಕತ್ತಿ (ಪಟ್ಟೆಯ) ಕತ್ತಿಗಳನ್ನು ಕಟ್ಟುವ ವಿಚಾರವನ್ನು ಸೂಚಿಸುತ್ತಾನೆ. ಕನ್ನಡ ನಾಡಿನಲ್ಲಿ ಕಾಳಗಕ್ಕೆ ಹೊರಟ ಆನೆಗಳಿಗೆ 'ಕೋಲ್ಗತ್ತಿ 'ಯನ್ನು ಕಟ್ಟುತ್ತಿದ್ದುದು–ಇತಿಹಾಸ[2] ದಿಂದಲೂ, ವಿದೇಶೀ ಪ್ರವಾಸಿಗಳ ಪ್ರವಾಸದ ವರದಿಗಳಿಂದಲೂ[3] ಗೊತ್ತಾಗುತ್ತದೆ.

ಆನೆಗೆ ಸಂಬಂಧಿಸಿ, ಹೊರಜೆ, ಹೊಮ್ಮಿಳಿ, ನಿಗಳ (ಸಂಕಲೆ),
ಅಗ್ರಣೆ, ಜೊತ್ತಗೆ, ಜಾನುವಂಕಣಿ, ತಿರಿಚೆ (ಅಂಕುಶ ?)
ಉರಘಂಟೆ, ಬದ್ಧರದ ರೆಂಚೆ, ತರತರದ ಮಣಿಖಚಿತ ಹೇಮೋ
ತ್ಕರದ ಪಕ್ಕ ಘಂಟೆ,[4] ಕರದ (ಸೊಂಡಿಲಿನ) ಹೊ (ವೊ)
ಗರಂಬ–ಇತ್ಯಾದಿ ಉಲ್ಲೇಖಗಳು ಇವೆ.[5]

### ಯೋಧಧರ್ಮ ಶರಣಾಗತ ರಕ್ಷಣೆ

ಪರಾಕ್ರಮ ಪ್ರದರ್ಶನವೇ ಮುಖ್ಯವಾದ ರಣರಂಗದಲ್ಲೂ ಕೆಲವು ನಿರ್ದಿಷ್ಟ ಶಿಷ್ಟ ಸಂಪ್ರದಾಯಗಳನ್ನು ಅ ನು ಸರಿಸಲಾಗುತ್ತಿತ್ತು.[6]

ಕಯ್ವೀಸು:[7] ಯುದ್ಧದ ಹಿಂದಿನ ಸಂಜೆ, ಆಯಾ ಶಿಬಿರಗಳಲ್ಲಿ ಕೊಳ್ಳಿಬೀಸಿ ತಾವು ಯುದ್ಧಕ್ಕೆ ಸಿದ್ಧರಾಗುತ್ತಿರುವುದನ್ನು ಸೂಚಿಸುವ ಪದ್ಧತಿ ಇತ್ತು.[8]

'ಗರಿಸನ್ನೆ' ಮಾಡುವ ಪ್ರಸ್ತಾಪವೂ ಇದೆ.[9] ಯುದ್ಧಕ್ಕೆ ಮೊದಲು 'ಕೈಬೀಸಿ' 'ರಣಾರಂಭ'ದ ಸೂಚನೆ ಕೊಡುವ ಕ್ರಮವಿತ್ತು.[10]

ಹುಲ್ಲು ಕಚ್ಚಿದವರನ್ನು, ಹುತ್ತವೇರಿದವರನ್ನು, ಬಿಲ್ಲುಬಿಸುಟವರನ್ನು, (ನಿರಾಯುಧ, ರಥಹೀನ), ಬಾಯ್ಗೆ ಬೆರಳಿಟ್ಟವರನ್ನು ಕೊಲ್ಲುತ್ತಿರಲಿಲ್ಲ.[11]

---

1. ತೊ.ರಾ. ೪೦-೧೯.
2. '...on their tusks they have knives fastened, much ground and sharpened with which they (elephants)do great harm '-K. A. Neelakanta Shastri, A History of S. India p. 317.
   'Large saythes were attached to the trunks of elephnts '-T. V. Mahalingam, S. Indian polity, p. 252.
3. 'ಆನೆಗಳ ಕೋರೆಗಳಿಗೂ, ಸೊಂಡಿಲಿಗೂ ದೊಡ್ಡ ಕೋಲ್ಗತ್ತಿಗಳನ್ನು ಸಿಕ್ಕಿಸುತ್ತಾರೆ'–
   ಅಥನೆಷಿಯಸ್ ನಿಕಿಟಿನ್-ಪ್ರವಾಸಿ ಕಂಡ ಇಂಡಿಯಾ-೨-೧೬೬.
4. ಬೇಗೂರಿನ ವೀರಗಲ್ಲಿನಲ್ಲಿರುವ ಆನೆಯ ಕೊರಳ ಸುತ್ತ ಗಂಟೆಗಳ ಮಾಲಿಕೆ ಇದೆ-
   ಎಂ. ಚಿದಾನಂದಮೂರ್ತಿ-ಕ. ಶಾ. ಸಾಂ. ಅಧ್ಯಯನ ಪು. ೨೬೪.
5. ತೊ. ರಾ. VI ೨೯-೧೯ ಮತ್ತು ೨೦.
6. There was a[code of conduct agreed up on between both parties-B. P. Sinha Warfare in Anciant India p. 161.
7. ಕಯ್ವೀಸು: ರಣಾರಂಭ ಹಸ್ತಸೂಚನಯೋಃ- ಶಬ್ದ ಮಣಿದರ್ಪಣ ಪು. ೨೨೮.
8. ಪಂಪ ಭಾರತ ೧೦-೬೫ರ ವಚನ.
9. ಇದೇ. ೧೦-೮೬.
10. ತೊ. ರಾ. VI ೧೦-೬೨.
11. ತೊ. ರಾ. I ೮-೩೭, VI ೩೩-೨೫, VI ೪೭,೩೩, ೫೧-೩೭.
    Even a person bearing a female name was not to be atacked by worthy warriors-B. P. Sinha-Warfare in India, p. 162.

ಸೋತವರಿಗೂ 'ಮೂರುಬಾರಿ ಎಚ್ಚರಿಕೆ' ನೀಡುವ ಪದ್ಧತಿಯಿದ್ದಂತಿತ್ತು.[1]

ವಿಜಯಿಗಳಾದ ರಾಜರು ನಿರಪರಾಧಿ ಪ್ರಜೆಗಳನ್ನು ಹಿಂಸಿಸದಂತೆ, ಲೂಟಿಮಾಡದಂತೆ ಎಚ್ಚರಿಕೆ ವಹಿಸುತ್ತಿದ್ದರು ಡಂಗುರದ ಮೂಲಕ ಭರವಸೆ ನೀಡುತ್ತಿದ್ದರು,[2] ವಿಜಯೋತ್ಸವದಲ್ಲಿ, ಗುಡಿಕಟ್ಟಿಸುವುದು, ಬಿದ್ದೂಟ ಏರ್ಪಡಿಸುವುದು. ಕೀರ್ತಿಸ್ತಂಭ ಸ್ಥಾಪಿಸುವುದು-ಇವೆಲ್ಲವೂ ಬಳಕೆಯಲ್ಲಿದ್ದವೆಂದು ಕವಿಯು ಸೂಚಿಸುತ್ತಾನೆ.[3]

ಹೀಗೆ, ತೊ. ರಾ. ದಲ್ಲಿ ತತ್ಕಾಲೀನ ವೀರಜೀವನದ ಬಹುಮುಖ ಚಿತ್ರಣವಿದೆ.

1. ತೊ. ರಾ. VI ೪೭-೩೪.
2. ಇದೇ. VI ೫೨-೧೨.
3. ಇದೇ. VI ೪೩-೭.

'ಲಿಂಗಮನಪ್ಪುಕೆಯ್ದು ನಿಲೆ, ನೀರನೋಡಿ
ಪುಗೆ, ಪೆಣ್ಣುಡೆಯುಟ್ಟರೆ, ಪುತ್ತನೇರೆ-ಕೊಲ್ಲದ
ತುಳಿಲಾಳ್ತನ-ಗದಾಯುದ್ಧ, ೧-೨೨.

# ಅಧ್ಯಾಯ ೫-ಕೃತಿಯ ಆಧ್ಯಾತ್ಮಿಕ ವಿವೇಚನೆ

## ತೊರವೆ ರಾಮಾಯಣದಲ್ಲಿ ‘ತತ್ತ್ವ’ ದರ್ಶನ

ಕ್ರಿ.ಶ. ೧೨ನೆಯ ಶತಮಾನದಿಂದ ೧೫ನೆಯ ಶತಮಾನದವರೆಗಿನ ಕಾಲವೆಂದರೆ–ಕರ್ನಾಟಕದಲ್ಲಿ ಅಸಾಧಾರಣ ತತ್ತ್ವ–ವೇತ್ತೃಗಳ ಉನ್ನತ ವಿಚಾರಗಳು ಉಗಮಗೊಂಡ ಕಾಲವು.[1] ಈ ಕಾಲಾವಧಿಯಲ್ಲಿ ಶ್ರೀ ಬಸವಣ್ಣನವರ ಶೀಲ ವಂತಧರ್ಮವೂ, ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವೂ, ಶ್ರೀ ಮಧ್ವಾಚಾರ್ಯರ ದ್ವೈತ (ತತ್ತ್ವವಾದ) ಸಿದ್ಧಾಂತವೂ ತಲೆಯೆತ್ತಿ, ಆಧ್ಯಾತ್ಮಿಕ ವಿವೇಚನೆಯನ್ನು ಮೇಲು ಮೆಟ್ಟಲಕ್ಕೆ ಮುಟ್ಟಿಸಿದವು. “ಅದ್ವೈತಮತವೂ ಆಗ ತಳವೂರಿ ಕೂತಿತ್ತು. ಈ ಸನ್ನಿವೇಶದಲ್ಲಿ ತಂತಮ್ಮ ಮತಗಳನ್ನು ಪ್ರಚಾರಗೊಳಿಸಲು ಎಲ್ಲರೂ ‘ಭಕ್ತಿಮಾರ್ಗ’ ವನ್ನು ಅನುಸರಿಸಿದರು.”[2] ಪರಾತತ್ತ್ವ ವಿವೇಚನೆಗೂ, ಭಕ್ತಿಮಾರ್ಗಕ್ಕೂ ಹೃದಯಂಗಮವಾಗಿ ತಳಕು ಹಾಕಿ ಉಪ ದೇಶ ಮಾಡಿದವರೆಂದರೆ ದ್ವೈತ ಸಿದ್ಧಾಂತದ ಪ್ರವರ್ತಕಾಚಾರ್ಯರು ಎಂದು ಹೇಳಬಹುದು.[3]

ಉಪನಿಷತ್ತು, ಗೀತೆ, ಬ್ರಹ್ಮಸೂತ್ರಗಳೆಂಬ ‘ಪ್ರಸ್ಥಾನ ತ್ರಯ’ವನ್ನು ವಿಶ್ಲೇಷಿಸಿ, ಅದರ ಆಧಾರದಿಂದ ತಮ್ಮ ತಾತ್ತ್ವಿಕ ಪಂಥವನ್ನು ಪ್ರತಿಪಾದನೆ, ಪ್ರಚಾರ ಮಾಡುವುದರೊಂದಿಗೆ, ಪುರಾಣ-ಕಾವ್ಯಗಳನ್ನು ತಮ್ಮ ದೃಷ್ಟಿಗನುಗುಣ ವಾಗಿ ಅರ್ಥೈಸುವ ಪ್ರವೃತ್ತಿಯೂ ಈ ಕಾಲದಲ್ಲಿ ಮುಖ್ಯವಾಗಿದ್ದಂತೆ ತೋರುತ್ತದೆ. ಸಾಹಿತ್ಯವೂ ಧಾರ್ಮಿಕ ವಿವೇಚನೆ ಮತ್ತು ತಾತ್ತ್ವಿಕ ಪ್ರತಿಪಾದನೆಗಳ ಮಾಧ್ಯಮವಾಗಿ ರೂಪುಗೊಂಡ ಕಾಲವದು.–ಈ ಪರಿಸರವನ್ನು ಗಮನದಲ್ಲಿರಿಸಿ ಕೊಂಡು, ಇತರ ಯಾವುದೇ ಪೂರ್ವಗ್ರಹದಿಂದಲೂ ಪೀಡಿತರಾಗದೆ, ಕುಮಾರ ವಾಲ್ಮೀಕಿಯ ಕೃತಿಗಳನ್ನು ಪರಿಶೀಲಿಸಿ ದಾಗ, ಅದರಲ್ಲಿ ‘ಪರಾತತ್ತ್ವ ವಿವೇಚನೆಯ ಒಂದು ವಿಶಿಷ್ಟ ಸ್ವರೂಪವನ್ನು’ ಕಾಣುವುದು ಸಾಧ್ಯವಾಗುತ್ತದೆ.

ಕವಿಯು ತನ್ನ ಕೃತಿಯ ಮೊದಲಲ್ಲಿ “ನಿರುಪಮ ತತ್ತ್ವ ವಿದ್ಯಾಶರಧಿ”[4] ಸಲಹುಗೆ ನಮ್ಮ ಮಧ್ವಾಚಾರ್ಯ ಗುರುರಾಯ್ ಎಂದು ಸ್ತುತಿಸಿದವನು, ತನ್ನ ಕಾವ್ಯದಲ್ಲಿ ಆ ಗುರುರಾಯರ “ತತ್ತ್ವ”ಗಳನ್ನು ಅಳವಡಿಸಿಕೊಂಡದ್ದು ನಮ್ಮ ಗಮನಕ್ಕೆ ಬರುತ್ತದೆ. ಹೀಗೆ ಕವಿ ಕುಮಾರ ವಾಲ್ಮೀಕಿಯು “ಮಧ್ವಾಚಾರ್ಯ”ರನ್ನು ವಂದಿಸಿದ್ದಾಗಲೀ, ತನ್ನ ಕೃತಿಯಲ್ಲಿ ಆ ಆಚಾರ್ಯರ “ಬೋಧನೆ”ಗಳನ್ನು ತುಂಬಿಕೊಂಡದ್ದಾಗಲೀ–ಬರಿಯ ಅಭಿಮಾನದ ಫಲವಲ್ಲ, ಆಚಾರ್ಯರು ಸಾರಿದ “ತತ್ತ್ವದ” ಗಾಢವಾದ ಪರಿಚಯ, ಪರಿಜ್ಞಾನ; ಅದಕ್ಕಾಗಿ ಕವಿಯು ಮಾಡಿಕೊಂಡ “ತಾತ್ತ್ವಿಕ” ಕೃತಿಗಳ ಅಧ್ಯಯನದ ಫಲ–ಎನ್ನುವುದರ “ಪರಾಮರ್ಶೆ”ಯೇ ಪ್ರಕೃತ–ಅಧ್ಯಾಯದ ಉದ್ದೇಶವಾಗಿದೆ.

---

1. ಈ ವಿಚಾರವಾಗಿ ಹೆಚ್ಚಿನ ಅಂಶಗಳನ್ನು ಇದೇ ಪ್ರಬಂಧದ ‘ಕೃತಿಸೃಷ್ಟಿಯ ಪರಿಸರ, ಕವಿಯ ಕಾಲ’-ಎಂಬ ಪ್ರಕರಣದಲ್ಲಿ ನೋಡಬಹುದು.

2. ಆರ್. ಎಸ್. ಪಂಚಮುಖಿ-‘ಹರಿದಾಸ ಸಾಹಿತ್ಯ’-ಪು. ೩೦.

3. ಇದೇ. ಪು. ೪೦.

ಭಕ್ತಿಪ್ರವಾಹದ ‘ಹರಿಯುವಿಕೆಯ’ ಬಗ್ಗೆ, ಸಾಮಾನ್ಯವಾಗಿ ಈ ಕೆಳಗಿನ ಶ್ಲೋಕವನ್ನು ಉದ್ಧರಿಸಿ, ಕರ್ನಾಟಕವು ‘ಭಕ್ತಿಪಂಥ’ಕ್ಕೆ ಹೆಸರಾದುದು-ಎನ್ನಲಾಗುತ್ತಿದೆ :–

> ಉತ್ಪನ್ನಾ ದ್ರಾವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ।
> ಕ್ವಚಿತ್ ಕ್ವಚಿತ್ ಮಹಾರಾಷ್ಟ್ರೇ ಗೂರ್ಜರೇ ಜೀರ್ಣತಾಂ ಗತಾ॥
>
> –ಪದ್ಮಪುರಾಣ, ಉತ್ತರ ಖಂಡ, ಅಧ್ಯಾಯ ೧-ಶ್ಲೋಕ ೫೮.

4. ತೊ. ರಾ. ೧-೧-೭ರಲ್ಲಿ ಮಧ್ವಾಚಾರ್ಯರನ್ನು ‘ತತ್ತ್ವ ವಿದ್ಯಾಶರಧಿ’ ಎಂದು ವಿಶೇಷಿಸಿರುವುದಕ್ಕೆ ‘ಸುಮಧ್ವ ವಿಜಯ’ (೧೫-೧೩೧)ದಲ್ಲಿ ಆಧಾರವಿದೆ.

5. ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ “ಮಾಧ್ವ ನಿಷ್ಠೆ”ಯನ್ನು ಸ್ಪಷ್ಟವಾಗಿಯೇ ವ್ಯಕ್ತಗೊಳಿಸಿರುವುದರಿಂದ ಅವನು “ಮಧ್ವಾಚಾರ್ಯರನ್ನೇ” ಸ್ತುತಿಸಿರಬೇಕು. ಇದು ನಿಸ್ಸಂದೇಹ. (ಕೆಲವು ಪ್ರತಿಕಾರರು “ಭಾರದ್ವಾಜ ಗುರುರಾಯ” ಎಂದು ಬರೆದಿರುವುದಕ್ಕೆ ಯಾವ ಪೋಷಣೆಯೂ ಇರುವುದಿಲ್ಲ)

## ಶ್ರೀ ಮಧ್ವಾಚಾರ್ಯರ 'ತತ್ತ್ವ' ಬೋಧೆ[1]

ಮಧ್ವಾಚಾರ್ಯರು ಪ್ರತಿಪಾದಿಸಿದ "ತತ್ತ್ವ"ದ ಮುಖ್ಯಾಂಶಗಳನ್ನು ಶ್ರೀಪಾದರಾಜರು[2] ಹೀಗೆ ಸಂಗ್ರಹಿಸಿರುತ್ತಾರೆ:

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣ ಮಖಿಲಾಮ್ನಾಯೈಕವೇದ್ಯೋ ಹರಿಃ

೧) ಶ್ರೀಹರಿಯು ಸರ್ವೋತ್ತಮನು. ೨) ಜಗತ್ತು ಪಾರಮಾರ್ಥಿಕ ಸತ್ಯ. ೩) ಪಂಚಭೇದವು[3] ಪಾರಮಾರ್ಥಿಕ ಸತ್ಯ. ೪) ಜೀವಗಣಗಳು ಶ್ರೀಹರಿಯ ಅನುಚರರು (ಪ್ರತಿಬಿಂಬರು) ೫) ಜೀವಗಣಗಳು ನಿತ್ಯ ತಾರತಮ್ಯವುಳ್ಳವುಗಳು. ೬) ಸ್ವರೂಪ ಸುಖಾನುಭವವೇ ಮುಕ್ತಿ. ೭) ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಸಾಧನ. ೮) ಪ್ರತ್ಯಕ್ಷ, ಅನುಮಾನ ಆಗಮಗಳು ಸಾಧಕ ಪ್ರಮಾಣಗಳು. ೯) ಶ್ರೀಹರಿಯು ಆಗಮ ಮಾತ್ರ ವೇದ್ಯನು.[4]

---

1. ಮಧ್ವಾಚಾರ್ಯರ ಸಿದ್ಧಾಂತವನ್ನು 'ತತ್ತ್ವವಾದ' ಎಂದೇ ಕರೆಯಲಾಗುತ್ತಿದೆ. ತೊ. ರಾ. ದ ೧-೧-೩, ೬-೧೮-೯, ೬-೫೧-೪೪, ೪೭, ೪೯ ಗಳಲಿ 'ತತ್ತ್ವ' ಎಂದೇ ಸೂಚಿಸಲಾಗಿದೆ.

ಮಧ್ವಾಚಾರ್ಯರ 'ತತ್ತ್ವ'ವನ್ನು 'ಪೂರ್ಣತ್ವಸಿದ್ಧಾಂತ' ಎಂದೂ (ಆಲೂರು ವೆಂಕಟರಾಯರು-ಮಧ್ವ ಸಿದ್ಧಾಂತ ಪ್ರವೇಶಿಕೆ-ಪು. ೪೦) 'ಸ್ವತಂತ್ರಾದ್ವಿತೀಯಬ್ರಹ್ಮವಾದ' (ಬಿ. ಎನ್. ಕೆ. ಶರ್ಮ-History of Dwaita Philosophy p. 96) ಎಂದಿದ್ದಾರೆ.

2. ಶ್ರೀಪಾದರಾಜರ ಕಾಲ ಸು. ೧೫೦೦-ಕ. ಕ. ಚ. ೨-೧೫೨,

3. ಪಂಚಭೇದ :-

೧. ಜೀವ-ಈಶಭೇದ.
೨. ಜೀವ-ಜೀವಭೇದ.
೩. ಜೀವ-ಜಡಭೇದ.
೪. ಜೀವ-ಜಡಭೇದ.
೫. ಜಡ-ಜಡ-ಪರಮಾತ್ಮ ಭೇದ.

4. ಈ ವಿಚಾರಗಳನ್ನು ಪ್ರತಿಪಾದಿಸುವ ಮಧ್ವಾಚಾರ್ಯರ ಕೃತಿಗಳು (ಸರ್ವಮೂಲಗ್ರಂಥಾಃ) ಒಟ್ಟು ೩೭.

(ಅ) ವೇದೋಪನಿಷದ್ಭಾಷ್ಯಗಳು—೧೧ (ಋಗ್ಭಾಷ್ಯ—ಋಗ್ವೇದದ ೪೮ ಮಂತ್ರಗಳಿಗೆ ಪ್ರತಿಯೊಂದಕ್ಕೂ ೩ ಅರ್ಥಗಳನ್ನು ವಿವೇಚಿಸಲಾಗಿದೆ.
ಈಶ, ಕೇನ, ಷಟ್‌ಪ್ರಶ್ನ, ಅಥರ್ವಣ (ಮುಂಡಕ), ಮಾಂಡೂಕ್ಯ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ ಮತ್ತು ಕಠ ೧೦ ಉಪನಿಷತ್ತುಗಳಿಗೆ ೧೦ ಭಾಷ್ಯಗಳು)

(ಆ) ಸೂತ್ರ ಪ್ರಸ್ಥಾನಗ್ರಂಥಗಳು— ೪ (ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ, ನ್ಯಾಯವಿವರಣ)
(ಇ) ಗೀತಾ ಪ್ರಸ್ಥಾನ : — ೨ (ಗೀತಾಭಾಷ್ಯ, ಗೀತಾ ತಾತ್ಪರ್ಯ ನಿರ್ಣಯ)
(ಈ) ಇತಿಹಾಸಪ್ರಸ್ಥಾನ : — ೩ (ಮಹಾಭಾರತ ತಾತ್ಪರ್ಯನಿರ್ಣಯ. ಭಾಗವತ ತಾತ್ಪರ್ಯನಿರ್ಣಯ ಮತ್ತು ಯಮಕ ಭಾರತ)
(ಉ) ಪ್ರಮಾಣಗ್ರಂಥಗಳು — ೨ (ಪ್ರಮಾಣಲಕ್ಷಣ, ಕಥಾಲಕ್ಷಣ)
(ಊ) ತತ್ತ್ವಗ್ರಂಥಗಳು — ೪ (ತತ್ತ್ವಸಂಖ್ಯಾನ, ತತ್ತ್ವವಿವೇಕ, ತತ್ತ್ವೋದ್ಯೋತ, ವಿಷ್ಣುತತ್ತ್ವನಿರ್ಣಯ)
(ಎ) ಆಚಾರಗ್ರಂಥಗಳು — ೬ (ಸದಾಚಾರಸ್ಮೃತಿ, ಕರ್ಮನಿರ್ಣಯ, ತಂತ್ರಸಾರ, ಕೃಷ್ಣಾಮೃತ, ಮಹಾರ್ಣವ, ಯತಿ ಪ್ರಣವ ಕಲ್ಪ, ಜಯಂತೀ ನಿರ್ಣಯ.)

ತತ್ತ್ವ ಚಿಂತನೆಯ ದೃಷ್ಟಿಯಿಂದ–

**ರಾಮಾಯಣವು ಒಂದು ಆಗಮ**

ಮಧ್ವಾಚಾರ್ಯರು ತಮ್ಮ 'ಶ್ರೀಮದ್ವಿಷ್ಣು ತತ್ತ್ವ ವಿನಿರ್ಣಯ'ದಲ್ಲಿ–

ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್
ಮೂಲ ರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್[1]

–ಎಂಬ ಬ್ರಹ್ಮಾಂಡಪುರಾಣದ ಹೇಳಿಕೆಯನ್ನು ಉಲ್ಲೇಖಿಸಿ, ಮೂಲ ರಾಮಾಯಣವೂ[2] ಒಂದು ಆಗಮವೆಂದು ಸಾರಿರುತ್ತಾರೆ. ಹಾಗೆಯೇ 'ನಾರದ ಪುರಾಣ'ದ,

ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಮ್
ಸರ್ವೋತ್ತಮಂ ಜ್ಞಾಪಯಂತಿ ಮಹಾ ತಾತ್ಪರ್ಯ ಮತ್ರಹಿ
ಸರ್ವೇಷಾಮಪಿ ವೇದಾನಾಂ ಇತಿಹಾಸ ಪುರಾಣಯೋಃ
ಪ್ರಮಾಣಾನಾಂ ಚ ಸರ್ವೇಶಾಂ ತದರ್ಥಂಚಾಸ್ಯದುಚ್ಯತೇ[3]

–ಶ್ಲೋಕಗಳನ್ನು ಉದಾಹರಿಸಿರುತ್ತಾರೆ. ಅಲ್ಲದೆ, ಆಚಾರ್ಯರು ತಮ್ಮ 'ಮಹಾಭಾರತ ತಾತ್ಪರ್ಯ ನಿರ್ಣಯ'[4] ಎಂಬ ಗ್ರಂಥದಲ್ಲಿ ರಾಮಾಯಣ, ಭಾರತಗಳಲ್ಲಿನ ತಾತ್ತ್ವಿಕ ಅಂಶಗಳನ್ನು ಎತ್ತಿ ತೋರಿಸಿರುತ್ತಾರೆ.

ಮಧ್ವಾಚಾರ್ಯರನ್ನು ಅನುಸರಿಸಿದ ಕುಮಾರ ವಾಲ್ಮೀಕಿಯೂ,

ರಾಮಚಂದ್ರನ ನಾಮ ನಿರುಪಮ ನಿಗಮ ವಿಶ್ರಾಮ,[5] ಇದು ಮಹಾ ತತ್ತ್ವ,[6] ಇದು ಶ್ರುತಿಮತ,[7] ಇದು ಸಿದ್ಧಾಂತ ಮತ,[8]–ಎಂದು ಸಾರಿಹೇಳಿ 'ರಾಮಾಯಣ'ದ ನಿಗಮ ಸ್ವರೂಪವನ್ನು ಪ್ರತಿಪಾದಿಸುವ ಆಶಯವಿರಿಸಿಕೊಂಡಂತೆ ಭಾಸವಾಗುತ್ತದೆ.

**ತೊರವೆ ರಾಮಾಯಣದಲ್ಲಿ–ಪರಮಾತ್ಮ ತತ್ತ್ವ**

ಬ್ರಹ್ಮೇತಿ ಪರಮಾತ್ಮೇತಿ ಯಂ ವಿದುಃ ವೈದಿಕಾಃ ಜನಾಃ[9]

ಎಂದು ಮಧ್ವಾಚಾರ್ಯರು "ಪರಮಾತ್ಮ ತತ್ತ್ವ"ವನ್ನು ವಿವರಿಸುತ್ತಾ, "ದೇವ"ನನ್ನ ಮೂರು ಹೆಸರುಗಳಿಂದ ವಿಶೇಷವಾಗಿ ಕರೆದಿರುವರು. ೧. ಬ್ರಹ್ಮ–ಇದು ವೇದ, ವೇದಾಂತದೊಳಗಿನ ಹೆಸರು
೨. ವಿಷ್ಣು–ಇದು ವೇದದಲ್ಲಿಯ ಸರ್ವೋತ್ತಮ ದೇವತೆ.
೩. ನಾರಾಯಣ–ಇದೊಂದರಲ್ಲಿ ಆತನ ಲಕ್ಷಣಗಳೆಲ್ಲವೂ ಅಡಕವಾಗಿವೆ. (ಸ್ವತಂತ್ರ, ಸಗುಣ ಇತ್ಯಾದಿ.)

---

(೮) ಸ್ತೋತ್ರಗಳು – ೨ (ದ್ವಾದಶಸ್ತೋತ್ರ, ನಖಸ್ತೋತ್ರ.)
(೯) ಖಂಡನ ಗ್ರಂಥಗಳು – ೩ (ಉಪಾಧಿ ಖಂಡನ, ಮಾಯಾವಾದ ಖಂಡನ, ಮಿಥ್ಯಾತ್ವಾನುಮಾನ ಖಂಡನ)
ಒಟ್ಟು ಗ್ರಂಥಗಳು ೩೭ ಇವೆಲ್ಲವೂ 'ಅಖಿಲ ಭಾರತ ಮಾಧ್ವ ಮಹಾಮಂಡಲ' ದಿಂದ ಪ್ರಕಟಿತ.

1. ವಿಷ್ಣು ತತ್ತ್ವ ವಿನಿರ್ಣಯ ೧-೩.
2. ಇಲ್ಲಿ "ಮೂಲರಾಮಾಯಣ" ಎಂದಿರುವುದರಿಂದ "ಪ್ರಕ್ಷಿಪ್ತ ರಹಿತ" ಎಂದು ಆಚಾರ್ಯರು ಸೂಚಿಸಿರಬಹುದೇ?
3. ಅದೇ. ೧-೫೯
4. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಒಟ್ಟು ೩೨ ಅಧ್ಯಾಯಗಳಿವೆ. ಇದರ ೪-೯ ಅಧ್ಯಾಯಗಳಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ವಿವರಣೆ ಇದೆ.
5. ತೊ. ರಾ. ೧-೨-೩.
6. ತೊ. ರಾ. ೧-೨-೭.
7. ಅದೇ. ೧-೧೨-೨೧.
8. ಅದೇ. ೬-೨-೩೬.
9. ಮಧ್ವಾಚಾರ್ಯ, ಅನುವ್ಯಾಖ್ಯಾನ I ೪-೬-೬೧.

ಕುಮಾರ ವಾಲ್ಮೀಕಿಯು ತನ್ನ ಕಾವ್ಯದಲ್ಲಿ ೧) ವೇದಪ್ರತಿಪಾದ್ಯ, ೨) ವೇದೋಕ್ತನಾದ ಸರ್ವೋತ್ತಮ ೩) ಅವನು ಸರ್ವತಂತ್ರ ಸ್ವತಂತ್ರ, ಸರ್ವಸದ್ಗುಣ ಭರಿತ, ಅವತಾರ ವಿನೋದಿ–ಎಂದು ಪರಮಾತ್ಮ ಸ್ವರೂಪವನ್ನು ಕೊಂಡಾಡಿದ್ದಾನೆ.

ಕಾವ್ಯದ ಮೊದಲಲ್ಲಿ ಕುಮಾರ ವಾಲ್ಮೀಕಿಯು "ನರಹರಿ"ಯನ್ನು ಸ್ತುತಿಸುವಲ್ಲಿ ಹರಿಯ (ನರಹರಿ) ಸರ್ವೋತ್ತಮತ್ವವನ್ನು ಧ್ವನಿಸಿದ್ದಾನೆ.

ಶ್ರೀ ಜನಕಾಜಾರಮಣ, ವಿಮಲ ಸ
ರೋಜ ಸಂಭವ ಜನಕನನುಪಮ
ರಾಜಶೇಖರವಿನುತ, ನಿಖಿಳಾಮರ ಕಿರೀಟಚಯ
ರಾಜಿತಾಮಲ ಲಲಿತ ಪದಪಂ
ಕೇಜನಾನತ ದಯಾಸುರ
ಭೂಜ ತೊರವೆಯ ರಾಯ ನರಹರಿ ಪಾಲಿಸುಗೆ ಜಗವ.[1]

ಇಲ್ಲಿ–ಶ್ರೀ ಜನಕಾಜಾ ರಮಣ ಎನ್ನುವಲ್ಲಿ—ಲಕ್ಷ್ಮೀ
ವಿಮಲಸರೋಜ ಸಂಭವ ಎನ್ನುವಲ್ಲಿ—ಬ್ರಹ್ಮ,
ಅನುಪಮ[2] ಎನ್ನುವಲ್ಲಿ ಜೀವೋತ್ತಮನಾದ—ವಾಯು,
ರಾಜಶೇಖರ ವಿನುತ ಎನ್ನುವಲ್ಲಿ—ರುದ್ರ,
ಅಮರ ಕಿರೀಟಚಯ ಎನ್ನುವಲ್ಲಿ—ಇಂದ್ರಾದಿ ದೇವತೆಗಳು—

ಇವರಿಂದೆಲ್ಲ ಸಂಸ್ತುತನಾದ ದೇವೋತ್ತಮ ವಿಷ್ಣುವಿನ ಅವತಾರಗಳಲ್ಲೊಂದಾದ "ನರಹರಿ"ಯನ್ನು[3] ಕವಿಯು ಪ್ರಾರ್ಥಿಸಿದ್ದಾನೆ. ಇದರಲ್ಲಿ ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿರುವ "ತಾರತಮ್ಯ" ವಿಚಾರವು ತುಂಬಿಕೊಂಡಿದೆ.

ಆಭಾಸಕಾ ತ್ವಥ ರಮಾಽಸ್ಯಮುರುತ್ಸ್ವರೂಪಾ
ಚ್ಛ್ರೀಽಸ್ಮಾತ್ಸ್ವಜಾತ್ ತದನು ಗೀಃ ಶಿವತೋ ವರಿಷ್ಠಾ[4]....

ಮತ್ತು–

೨. ಆಭಾಸಕೋಽಸ್ಯ ಪವನಃ ಪವನಶ್ಚ ರುದ್ರಃ ಶೇಷಾತ್ಮಕೋ ಗರುಡ ಏವಚ ಶಕ್ರ ಕಾಮೌ...ಗಳಲ್ಲಿ ಹೇಳಿದಂತೆ, ಮಂಗಲರೂಪಳಾದ ಲಕ್ಷ್ಮೀ ದೇವಿಯು ಶ್ರೀಹರಿಗೆ ಆಭಾಸಕಳು, ಪ್ರತಿಬಿಂಬಳು. ಶ್ರೀಹರಿಗೆ ಮುಖ್ಯಪ್ರಾಣನು

---

1. ತೊ. ರಾ. ೧-೧-೧.
2. 'ಅನುಪಮ' (ನಿರುಪಮ) ಎಂದರೆ 'ಉಪಮಾತೀತ, ಉತ್ತಮೋತ್ತಮ'–ಹೀಗೆ ವಾಚ್ಯಾರ್ಥವಿದ್ದರೂ ಕವಿಯು ಈ ಪದವನ್ನು 'ಜೀವರಲ್ಲಿ ಉತ್ತಮೋತ್ತಮ'ನಾದ ವಾಯು ಎಂದು ಮಾಧ್ವಸಿದ್ಧಾಂತರೀತ್ಯಾ ಬಳಸಿರಬೇಕು. ಮುಂದೆ 'ವಾಯುವಿನ ಅವತಾರ'ರೆನಿಸಿದ ಮಧ್ವಾಚಾರ್ಯರನ್ನು ಸ್ತುತಿಸುವಲ್ಲಿ 'ನಿರುಪಮ' ಎಂದು ಕವಿಯು ವಿಶೇಷಿಸಿರುವುದನ್ನು ಗಮನಿಸಬೇಕು.
3. ಮಧ್ವಾಚಾರ್ಯರು ಶ್ರೀ ಹರಿಯ ವಿವಿಧ ಅವತಾರಗಳಲ್ಲಿ ಭೇದ ವಿಲ್ಲದೆಂದು–

   ನಚಾಸ್ಯ ಭೇದವದ್ವಿಷ್ಣೋ ಭೇದಸ್ತದ್ದರ್ಶಿನಾಮಪಿ......
   .........
   ಬಹುತ್ವಂಚ ವಿಶೇಷೇಣ ನ ಭೇದೋ ನ ಕಥಂ ಚ ನ

   –ಎಂದಿದ್ದಾರೆ. ಅನುವ್ಯಾಖ್ಯಾನ-III ೪-೪-೧೪೨.
4. ಮಧ್ವಾಚಾರ್ಯ ಭಾರತ ತಾತ್ಪರ್ಯನಿರ್ಣಯ ೧-೧೫.
5. ಮಧ್ವಾಚಾರ್ಯ–ಭಾರತ ತಾತ್ಪರ್ಯ ನಿರ್ಣಯ ೧-೧೪.

ಆಭಾಸಕನಾದರೂ ಮುಖ್ಯಪ್ರಾಣನಿಗಿಂತ ಲಕ್ಷ್ಮಿಯು ಶ್ರೇಷ್ಠಳು. ಆದ್ದರಿಂದ ಅವಳಿಗೆ ಮೊದಲನೇ ಸ್ಥಾನ ಸಲ್ಲುತ್ತದೆ. ಎರಡನೆಯ ಸ್ಥಾನ ಬ್ರಹ್ಮ ಮತ್ತು ವಾಯುದೇವರಿಗೆ. ವಾಯುದೇವರಿಗೆ ಭಾವೀ ಶೇಷನಾದ ರುದ್ರನು ಆಭಾಸಕನು. ಇದರಿಂದ ರುದ್ರ (ಮತ್ತು ಗರುಡನಿಗೆ)ನಿಗೆ ನಂತರದ ಸ್ಥಾನ. ಈ ರುದ್ರ (ಗರುಡ)ನಿಗೆ ದೇವೇಂದ್ರ (ಮನ್ಮಥ)ನು ಪ್ರತಿಬಿಂಬನಾದುದರಿಂದ ಅವನಿಗೆ ಆಮೇಲಿನ ಸ್ಥಾನ. ಆಚಾರ್ಯರ ಈ "ತಾರತಮ್ಯ"[1] ವಿಚಾರವನ್ನು ಅನುಸರಿಸಿ, ಕುಮಾರ ವಾಲ್ಮೀಕಿಯು "ಹರಿಸರ್ವೋತ್ತಮತ್ತ್ವ"ವನ್ನು ಹೀಗೆ ತನ್ನ "ಪ್ರಾರ್ಥನೆ"ಯಲ್ಲಿ ವ್ಯಕ್ತಗೊಳಿಸಿದ್ದಾನೆ.

ಮಧ್ವಾಚಾರ್ಯರು ವಿಷ್ಣು ಸರ್ವೋತ್ತಮತ್ತ್ವವನ್ನು ಬಹುವಾಗಿ ಪ್ರತಿಪಾದಿಸಿದ್ದಾರೆ ಅವನ ನಿರ್ದೋಷತೆ, ಸ್ವಾತಂತ್ರ್ಯ, ಸರ್ವಗುಣಪರಿಪೂರ್ಣತೆಗಳನ್ನು ಸ್ಥಾಪಿಸಿದ್ದಾರೆ.

೧. ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್[2]

೨. ಸದಾಗಮೈಕ ವಿಜ್ಞೇಯಂ ಸಮತೀತ ಕ್ಷರಾಕ್ಷರಮ್
ನಾರಾಯಣಂ ಸದಾ ವಂದೇ ನಿರ್ದೋಷಾಶೇಷ ಸದ್ಗುಣಮ್[3]

೩. ಸ್ವಾತಂತ್ರ್ಯ ಶಕ್ತಿ ವಿಜ್ಞಾನ ಸುಖಾದ್ಯೈರಖಿಲೈರ್ಗುಣೈಃ
ನಿಸ್ಸೀಮತ್ವೇನ ತೇ ಸರ್ವೇ ತದ್ವಶಾಃ ಸರ್ವದೈವಹಿ[4]

೪. ಓಂ ಆನಂದಾದಯಃ ಪ್ರಧಾನಸ್ಯ ಓಂ[5]

೫. ಸರ್ವತ್ರಾಖಿಲ ಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ....[6]

೬. ಸ್ವತಂತ್ರಸ್ಯ ಪೂರ್ಣಗುಣತ್ತ್ವನಿಯಮಾತ್[7]

೭. ನ ಹಿ ಸ್ವತಂತ್ರೋಽಪೂರ್ಣತಾಂ ಕಾಮಯೀತ[8]

೮. ಆತ್ಮಾ ಹಿ ಪರಮ ಸ್ವತಂತ್ರಃ ಸರ್ವವಿತ್, ಸರ್ವಶಕ್ತಿಃ[9]

ಆಚಾರ್ಯರ ಈ ಮೇಲಿನ ಪ್ರತಿಪಾದನೆಗಳನ್ನು ಗಮನಿಸಿ, ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ ದೈವ (ಶ್ರೀರಾಮ)ವನ್ನು ದೇವೋತ್ತಮ, ಸ್ವತಂತ್ರ, ಗುಣಪರಿಪೂರ್ಣ, ನಿರ್ದೋಷನೆಂದು ವರ್ಣಿಸಿದ್ದಾನೆ.

## ತೊರವೆ ರಾಮಾಯಣದಲ್ಲಿ

### ಶ್ರೀರಾಮ (ವಿಷ್ಣು) ದೇವೋತ್ತಮತ್ತ್ವದ ಉಲ್ಲೇಖಗಳು

ರಾಜಶೇಖರವಿನುತ[10] ಸಕಲದೇವರ ದೇವ,[11] ನಿಖಿಳ ದೇವೋತ್ತಮ,[12] ಸರ್ವೇಶ್ವರ,[13] ಬೊಮ್ಮ ಕೋಟಿಕಿರೀಟ

---

ಕೆಳಗಿನ ಕೃತಿಗಳೆಲ್ಲವೂ ಮಧ್ವಾಚಾರ್ಯ ರಚಿತ.

1. ಭಕ್ತಿಗೆ ಆಧಿಕ್ಯನ್ಯೂನತಾರೂಪವಾದ 'ತಾರತಮ್ಯ'ವೂ ಇದೆ ಅನುವ್ಯಾಖ್ಯಾನ III ೨-೨೪-೧೨೦ ಮತ್ತು III ೩-೧-೮೮.
2. ವಿ. ತ. ನಿರ್ಣಯ I ೬೪ ಮತ್ತು ೯೮.
3. ಇದೇ. ೧-೧.
4. ಇದೇ. ೨-೪೩೯.
5. ಬ್ರಹ್ಮಭಾಷ್ಯ III ೩-೬-೧೨.
6. ತತ್ತ್ವೋದ್ಯೋತ–ಪು. ೬೬
7. ನ್ಯಾಯ ವಿವರಣ ಪು. ೪.
8. ಇದೇ. ಪು. ೪.
9. ವಿಷ್ಣುತತ್ತ್ವವಿನಿರ್ಣಯ ೧-೨೭೫.

| | ತೊ. ರಾ. ಕಾಂ | ಸಂ. | ಪ. |
|---|---|---|---|
| 10. | ೧ | ೧ | ೧ |
| 11. | ೧ | ೮ | ೫೨ |
| | ೧ | ೯ | ೩೫ |
| | ೬ | ೩೪ | ೧೬ |

| | ತೊ. ರಾ. ಕಾಂ. | ಸಂ. | ಪ. |
|---|---|---|---|
| 12. | ೧ | ೧೦ | ೨೦ |
| 13. | ೧ | ೧೨ | ೨೦ |

ಮಂಡಿತ ನಿರ್ಮಳಾಂಘ್ರಿ ನಖಪ್ರಭಾಕರ,[1] ಕೋಟಿ ವೃಷಭಧ್ವಜ ಪರಾಕ್ರಮ[2] ದೇವರೊಳಗಗ್ಗಳನಲಾ ರಾಜೀವ ನೇತ್ರನು,[3]

ತರಣಿಶತ ಸಂಕಾಶ, ಶಂಕರ ಸಹಸ್ರ ಬಲಾಢ್ಯ, ಸರಸಿರುಹ ಸಂಭವಕೋಟಿ ಗುಣ ಸಮಗ್ರ,[4]

ಕಮಲಭವ, ಭವರುರುವ ದೈವ,[5] ದೇವ ದೇವೋತ್ತಮ,[6]

ಕಮಲಜಭವಾದಿಗಳ ದೇವನಲ್ಲಾ,[7] ದೇವರ ದೇವನಲ್ಲಾ, ದೇವ ನಿಮ್ಮ ಮೈಸಿರಿಯ ಸೊಬಗು ಆವ ದೇವರಿಗುಂಟು ?[8] ಉಳಿದ ದೇವರಿಗುಂಟೆ ನಿನ್ನ ಮಹಾಶಕುತಿ ?[9] ಅರಿಕೆಯೇ ಹರಿ ಪ್ರಾಧಾನ್ಯ,[10]—

ಹೀಗೆ ಕುಮಾರ ವಾಲ್ಮೀಕಿಯು "ರಾಮ (ವಿಷ್ಣು) ದೇವೋತ್ತಮತ್ತ್ವವನ್ನು" ಕೊಂಡಾಡಿದ್ದಾನೆ. "ಮಾಧ್ವ ನಿಷ್ಠೆ"ಯನ್ನು ವ್ಯಕ್ತಪಡಿಸಿದ್ದಾನೆ.[11]

## ಸ್ವತಂತ್ರ, ವೇದ ಪ್ರತಿಪಾದ್ಯ, ಸಕಲ ಗುಣಪೂರ್ಣ–ದೈವ ತತ್ತ್ವ

ಪರಮಾತ್ಮನನ್ನು "ಘನ ಸ್ವತಂತ್ರ ಮಹಾವಿಭು"[12] ಎಂದೂ, "ಸ್ವಾತಂತ್ರ್ಯ ದೈವ"–[13] ಎಂದು ವರ್ಣಿಸಿರುವಲ್ಲಿ ಆಚಾರ್ಯರ 'ಪರಮ ಸ್ವತಂತ್ರಃ' ಎಂಬ ಪರಮಾತ್ಮತತ್ತ್ವವನ್ನು ಕವಿಯು ಸೂಚಿಸಿದ್ದಾನೆ.

ದೇವನು 'ಆಗಮ ವೇದ್ಯ'ನೆನ್ನುವುದು ಮಧ್ವಾಚಾರ್ಯರ ಇನ್ನೊಂದು ಮಹತ್ತ್ವದ ಸೂತ್ರ. ನಿರುಪಮ ನಿಗಮ ವಿಶ್ರಾಮ,[14] ಶ್ರುತಿಮತ ಸಿದ್ಧ,[15] ನಿಗಮಾರ್ಥವಿದು,[16] ಸಿದ್ಧಾಂತ ಮತ,[17] ಶ್ರುತಿ-ಶಿರೋಮಣಿ,[18] ಹೊಗಳುತಿದ್ದವು ವೇದಕೋಟಿಗಳು[19]....ವೇದವಚನವಿದು,[20] ನಿಗಮ ರಹಸ್ಯ–ಪುರಾಣ ಸಿದ್ಧ[21]–ಇಂತಹ ಉಲ್ಲೇಖಗಳು ಕುಮಾರ ವಾಲ್ಮೀಕಿಯ 'ದೈವ ಕಲ್ಪನೆ'ಯ ಹೆಗ್ಗುರುತುಗಳಂತಿವೆ.

---

| | ತೊ. ರಾ. ಕಾಂ. | ಸಂ. | ಪ. |
|---|---|---|---|
| 1. | ೨ | ೧೨ | ೧೭ |
| 2. | ೨ | ೬ | ೩೨ |
| 3. | ೨ | ೭ | ೧೨ |
| 4. | ೬ | ೩೪ | ೧೩ |
| 5. | ೩ | ೧೨ | ೧೯ |
| 6. | ೪ | ೪ | ೫೬ |
| 7. | ೬ | ೮ | ೪೮ |
| 8. | ೬ | ೩ | ೨೦ |
| 9. | ೬ | ೨ | ೪೧ |
| 10. | ೬ | ೨ | ೨೯ |

11. ವಿಷ್ಣು ಸರ್ವೋತ್ತಮತ್ತ್ವವನ್ನು ಸಾರುವ ದೃಷ್ಟಿಯಿಂದ, ಕುಮಾರ ವಾಲ್ಮೀಕಿಯು ತನ್ನ ಕೃತಿಯಲ್ಲಿ ಆದಿಕಾವ್ಯದಲ್ಲಿಲ್ಲದ ಈ ಕೆಳಗಿನ ಕೆಲವು ಕಥಾವೈಶಿಷ್ಟ್ಯಗಳನ್ನು ಹೊಂದಿಸಿಕೊಂಡದ್ದನ್ನೂ ಇಲ್ಲಿ ಸ್ಮರಿಸಬಹುದು :

೧. ಶಿವಸುತನಾದ ರಾಮ, ಶಿವನ ನೆಚ್ಚಿನ ನಾಮ, ವಾಸುದೇವ ಸ್ತುತಿ ಪರಾಯಣೆಯಾದ ಗಿರಿಜೆ–ಇತ್ಯಾದಿ ಹೇಳಿಕೆಗಳು.

೨. ವಿಶ್ವಾಮಿತ್ರಾಗಮನ, ಕಾಕಾಸುರ ವೃತ್ತಾಂತ, ಅತಿಕಾಯ ಪಾತ್ರಕಲ್ಪನೆಗಳ ಹಿನ್ನೆಲೆಯಲ್ಲೂ ಕವಿಯ 'ವಿಷ್ಣುಭಕ್ತಿ'ಯ ಅಂಶವೇ ಪ್ರಧಾನ.

| | ತೊ. ರಾ. ಕಾಂ. | ಸಂ. | ಪ. |
|---|---|---|---|
| 12. | ೨ | ೭ | ೧೫ |
| 13. | ೬ | ೫೧ | ೪೯ |
| 14. | ೧ | ೨ | ೯ |
| 15. | ೧ | ೧೨ | ೨೧ |
| 16. | ೫ | ೯ | ೩೧ |
| 17. | ೬ | ೨ | ೩೬ |
| 18. | ೬ | ೩ | ೭ |
| 19. | ೬ | ೫೩ | ೧೦೩ |
| 20. | ೬ | ೫೩ | ೧೨೧ |
| 21. | ೬ | ೫೫ | ೭೧ |

**ಸಕಲ ಗುಣ ನಿಳಯಂ- ಪರಮಾತ್ಮ**

ಪೂರ್ಣೋಽಶೇಷನಿಯಂತಾ ಚ
ಸುಖಾದುತ್ತಮ ಏಕಲಃ
ಗುಣಸಮುದಾಯೋಽಯಂ ವಾಸುದೇವಃ ಸುನಿಷ್ಕಲಃ[1]

"ವಾಸುದೇವ (ನಾರಾಯಣ)ನು ಗುಣ ಸಮುದಾಯನು" ಅವನೊಬ್ಬನೇ ಗುಣಪೂರ್ಣನು. "ಮಿಕ್ಕೆಲ್ಲಾ ದೇವತೆಗಳೂ, ಪರಮಾತ್ಮನವೇ ಗುಣಗಳಲ್ಲಿ ಕೆಲವನ್ನು ಆತನಿಂದ ತಕ್ಕೊಂಡು ಅವು ತಮ್ಮವೇ ಎಂದು ಅಭಿಮಾನ ಪಟ್ಟುಕೊಳ್ಳುತ್ತಾರೆ."[2] ಮಧ್ವಾಚಾರ್ಯರು ಆಯಾ ಜೀವರುಗಳ ಯೋಗ್ಯತೆಯ ಮೇರೆಗೆ ವರ್ಗಗಳನ್ನು ಕಲ್ಪಿಸಿ "ಗುಣಗಳ ಆಧಿಕ್ಯ, ನ್ಯೂನತೆ"ಗಳನ್ನು ಹೇಳಿರುವುದು ಅವರ ತತ್ತ್ವದ ವಿಶಿಷ್ಟಾಂಶಗಳಲ್ಲಿ ಒಂದು.

ಕುಮಾರ ವಾಲ್ಮೀಕಿಯು ಮೇಲಿನ ಅಂಶವನ್ನು ಗಮನಿಸಿದಂತೆ ತೋರುತ್ತದೆ. ಆದುದರಿಂದಲೇ ಅವನ ಕಾವ್ಯದಲ್ಲಿ ಈ ಕೆಳಗಿನ ಉಲ್ಲೇಖಗಳು "ತಾತ್ತ್ವಿಕ"ವಾದ ಹಿನ್ನೆಲೆಯುಳ್ಳವಾಗಿವೆ.

ಸಕಲ ಗುಣ ನಿಳಯ,[3]
ಪರಮ ಗುಣನಿಧಿ[4]
ಅಖಿಳ ಗುಣಯುತ[5]
ಸಕಲ ಸುಗುಣ ಸ್ತೋಮ[6]
ಗುಣಭರಿತ ಮಹಾವಿಭು[7]
ಸನಾತನ ಸಕಲ ಗುಣನಿಳಯ.[8]
ಸಕಲಗುಣಧಾಮ[9]
ಗುಣಭರಿತ ರಘುನಾಥ[10]

**ಅವತಾರ ತತ್ತ್ವ**

"ನಿರ್ದೋಷಶ್ಚೇತ್ಕಥಂ ವಿಷ್ಣುರ್ಮಾನುಷೇಷೂದಪದ್ಯತ........"[11]

ವಿಷ್ಣುವು ಎಲ್ಲ ದೋಷ, ಅಪರಿಪೂರ್ಣತೆಗಳಿಂದ ದೂರನಾಗಿದ್ದರೆ ಅವತಾರಗಳಲ್ಲಿ ಚಿಂತೆ, ಕಳವಳ, ಗಾಯ, ಅಜ್ಞಾನ, ದುಃಖಗಳನ್ನು ಅವನು ಅನುಭವಿಸುವುದು ಹೇಗೆ ?-ಎಂದು ನಾರದನು ಬ್ರಹ್ಮನೊಡನೆ ಪ್ರಶ್ನಿಸುತ್ತಾನೆ.

ಕುಮಾರ ವಾಲ್ಮೀಕಿಯ ಕೃತಿಯಲ್ಲಿ, ಇದೇ ಪ್ರಶ್ನೆಯನ್ನು ಲವಕುಶರು ವಾಲ್ಮೀಕಿಯೊಡನೆ ಕೇಳುತ್ತಾರೆ :

ಏಸೆ ಮತ್ತೀನೆಲೆ ತಪೋ ಲ
ಕ್ಕ್ಲೇಶ ಕೇಳೀ ರಾಮನಾ ಸ
ರ್ವೇಶನೆಂದೇ ನೇಮಿಸಿದೆ, ನಮಗಾ ಮಹಾತ್ಮಂಗೆ

---

1. ಮಧ್ವಾಚಾರ್ಯ- ವಾಸುದೇವ ಶ್ರುತಿ-ಅನುವ್ಯಾಖ್ಯಾನ III ೨ ೧೬-೨೧೧.
2. ಈ ಕುರಿತು ಸರಳ, ಸುಂದರ ವಿವರಣೆಗೆ-ಆಲೂರ ವೆಂಕಟರಾಯರ 'ಮಧ್ವ ಸಿದ್ಧಾಂತ ಪ್ರವೇಶಿಕೆ' ಪು. ೨೦೪-೨೦೫ ನೋಡಬಹುದು.

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 3. | ೧ | ೮ | ೫೬ |
| 4. | ೧ | ೧೨ | ೨೦ |
| 5. | ೨ | ೬ | ೧೨ |
| 6. | ೩ | ೧ | ೧೬ |

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 7. | ೪ | ೨ | ೫೦ |
| 8. | ೪ | ೭ | ೨ |
| 9. | ೬ | ೫೪ | ೪೦ |
| 10. | ೬ | ೫೫ | ೫೧ |

11. ವಿಷ್ಣು ತತ್ತ್ವ ವಿನಿರ್ಣಯ ೩-೪೫೬ರ ವಿವರಣೆಯಲ್ಲಿ ಮಧ್ವಾಚಾರ್ಯರು 'ಬ್ರಹ್ಮಾಂಡಪುರಾಣ'ದ ಈ ಮಾತನ್ನು ಉಲ್ಲೇಖಿಸಿದ್ದಾರೆ. ಮುಂದೆ ೪-೫೪ರಲ್ಲೂ ಇದೇ ವಿಚಾರ ಇನ್ನೊಮ್ಮೆ ಬಂದಿದೆ.

ಈಸು ನಿರ್ಬಂಧದಲಿ ಗರ್ಭಾ–
ವಾಸದೊಳಿದ್ದು ದಿಸಲೇಕೀ–
ಯಾಸರಿನ ಭಸವೇಕೆನುತ ನುಡಿದರು ಕುಮಾರಕರು.[1]

ಅದಕ್ಕುತ್ತರವಾಗಿ ವಾಲ್ಮೀಕಿಯು ಆ ಮಕ್ಕಳಿಗೆ 'ಈ ವಿಶೇಷ ವ್ಯವಹರಣೆ ಲೋಕಾವಳಿಯ ಸುಜನರನು ಸಲೆ ಸಲಹಲಿಕಾಯ್ತು' ಎಂದು ಉತ್ತರಿಸಿ ಸಮಾಧಾನಗೊಳಿಸುತ್ತಾನೆ.[2] ಮುಂದೆ ೩ ಸಂದರ್ಭಗಳಲ್ಲಿ ಇದೇ ವಿಚಾರ ವಿವರಣೆ ಕೃತಿಯಲ್ಲಿ ದೊರೆಯುತ್ತದೆ.[3] ಕುಮಾರ ವಾಲ್ಮೀಕಿಯು ನೀಡುವ ಈ ಸಮಾಧಾನದ ನುಡಿಗಳು ಮಧ್ವಾಚಾರ್ಯರು ಸಾರಿದ 'ಅವತಾರತತ್ತ್ವ'ಕ್ಕನುಗುಣವಾಗಿದೆ.

## ವಿಶ್ವರೂಪದ ವ್ಯಾಖ್ಯೆ

ಉಳಿವುದೊಂದೇ ವಸ್ತು ಕಲ್ಪಂ
ಗಳಲಿ ಕಮಲಭವಾಮರೇಂದ್ರಾ
ವಳಿಗಳಡಗುವುದಾ ಮಹಾತ್ಮನ ಮನದ ನೆನಹಿನಲಿ
ತೊಲಗಿದುದಕದ ಮೇಲೆ ಮೆಲ್ಲನೆ
ಸುಳಿವರಾ ಬ್ರಹ್ಮಾದಿದೇವರು
ನಳಿನನಾಭನ ಮಹಿಮೆಗಾವುದು ಸೀಮೆ ಕೇಳೆಂದ[4]

ಕುಮಾರ ವಾಲ್ಮೀಕಿಯ ಮೇಲಿನ ವರ್ಣನೆಗೆ, ಮಧ್ವಾಚಾರ್ಯರು ಹೇಳಿರುವ ಈ ಮುಂದಿನ ವಿಚಾರಗಳೇ ಆಧಾರ.

ಏಕೋ ನಾರಾಯಣ ಆಸೀನ್ನಬ್ರಹ್ಮಾನೇಶಾನೋಗ್ನಿಷ್ಟೋಮೌನೇಮೇ ದ್ಯಾವಾ–ಪೃಥಿವೀ। ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ। ಸಮುನಿರ್ಭೂತ್ವಾ ಸಮ ಚಿಂತಯತ್ತತ ಏತೇ ವ್ಯಜಾಯಂತ। ವಿಶ್ವೋ ಹಿರಣ್ಯಗರ್ಭೋಗ್ನಿರ್ಯಮೋ ವರುಣ ರುದ್ರೇಂದ್ರಾದಿ–ಇತಿ.[5]

'ನಾರಾಯಣನೊಬ್ಬನೇ ಅಲ್ಲಿದ್ದನು. ಬ್ರಹ್ಮನಾಗಲೀ, ಈಶ್ವರನಾಗಲೀ, ಅಗ್ನಿ, ಸೋಮ್ಯರಾಗಲೀ, ಸ್ವರ್ಗ, ಮರ್ತ್ಯಗಳಾಗಲೀ ಇರಲಿಲ್ಲ, "ನಾರಾಯಣನೊಬ್ಬನೇ ಇದ್ದನು"........ನಾರಾಯಣನು ಆಲೋಚನಾಪರನಾದನು. ಅವನ 'ನೆನಹಿ'ನ ಮೂಲಕ ವಾಯು, ಹಿರಣ್ಯಗರ್ಭ, ಅಗ್ನಿ,.... ಎಲ್ಲ ಜನಿಸಿದರು'

## ಸರ್ವಶಕ್ತನ ಬಹುರೂಪಗಳು:

ಅಜನ ರೂಪಿಂದಖಿಳ ಲೋಕವ
ಸೃಜಿಸುವನು, ಸಲಹುವನು ಗರುಡ
ಧ್ವಜನ ರೂಪಿಂದಳಿವನಗ್ಗದ ರುದ್ರರೂಪಿನಲಿ,...........[6]

ಮತ್ತು,

ಹರವಿರಿಂಚಾತ್ಮಕ ಪರಾಪರ ಗುಣನಿಧಿ.................[7]

1. ತೊ. ರಾ. ೧-೮-೧೨.
2. ಇದೇ. ೧–೮–೧೩.
3. ಇದೇ. ೧–೮–೭೨, ೧–೯–೩೭, ೬-೫೩-೧೦೪.
4. ತೊ. ರಾ. 1 ೮–೫೦.
5. ಮಧ್ವಾಚಾರ್ಯ–ವಿಷ್ಣು ತತ್ತ್ವ ವಿನಿರ್ಣಯ–೨–೪೪೫.
6. ತೊ. ರಾ. I ೯-೩೬.
7. ತೊ. ರಾ. I ೧೨-೨೦.

ಮತ್ತು,

ಜಗದ ಜನನ ಸ್ಥಿತಿ ಲಯದ ವ್ಯೆಸೊಗಸುಕಾರ........[1]

ತೊರವೆ ರಾಮಾಯಣದ ಈ ಹೇಳಿಕೆಗಳಿಗೆ, ಮಧ್ವಾಚಾರ್ಯರ ಈ ಸೂಕ್ತಿಯು ಹಿನ್ನೆಲೆಯಾಗಿದೆ :

" ಉತ್ಪತ್ತಿ ಸ್ಥಿತಿ ಸಂಹಾರಾನಿಯತಿಜ್ಞಾನಮಾವೃತಿ "[2]

ಪರಮಾತ್ಮನ ' ವಿಶ್ವರೂಪದ ಅಗಾಧತೆ 'ಯನ್ನು ವರ್ಣಿಸುತ್ತಾ–

ಆದಡಾತನ ಮುಖದಲಸುರೇಂ
ದ್ರಾದಿ ದೇವರು, ನಯನದಲಿ ರವಿ,
ಪಾದದಲಿ ಭೂದೇವಿ, ಮನಸಿನಲಿಂದು, ಕಿವಿಗಳಲಿ
ಈ ದಿಶಾವಳಿ, ನಾಭಿಯಲಿ ನಭ
ವಾದುದು ಶ್ವಾಸದಲಿ ಮಾರುತ
ನಾದನವತರಿಸಿದವು ಶಿರದಲಿ ಸುರರ ಜಗವೆಂದ.[3]

ಮತ್ತು,

ಭುವನವೀತನ ದೇಹವೀ ದಿಗು
ನಿವಹವೀತನ ಕಿವಿಗಳೀ ಶಶಿ
ರವಿಗಳೀತನ ಕಂಗಳೀ ಪವಮಾನನುಸುರು ಕಣ....[4]

ಎಂದಿರುವುದಕ್ಕೆ ವಿಷ್ಣು ತತ್ತ್ವ ವಿನಿರ್ಣಯ[5] ಮತ್ತು ಬ್ರಹ್ಮಸೂತ್ರ[6]ಗಳೇ ಆಧಾರಗಳಾಗಿವೆ. ' ಕೋಟಿಸಂಖ್ಯೆಯಲಿ ವಿಸರುಹಾಸನರಿದ್ದುದು–ಆದಿನಾರಾಯಣನ ಬಳಸಿನಲಿ '[7], ' ಕಮಲಭವ ಕೋಟಿಗಳು ಗಿರಿಜಾರಮಣ ಕೋಟಿಗಳು....ದೇವೋತ್ತಮನ ಸಿರಿಯಂಗದಲಿ '[8]–ಹೀಗೆ ತೊ. ರಾ.ದಲ್ಲಿರುವ ಹೇಳಿಕೆಗಳು ಅಸಂಖ್ಯ ಬ್ರಹ್ಮರ ವಿಚಾರವನ್ನು ಸೂಚಿಸುವ ವಿ. ತ. ವಿನಿರ್ಣಯದಿಂದಲೇ[9] ಪ್ರೇರಿತವಾಗಿರಬೇಕು.

---

1. ತೊ. ರಾ. VI ೩೪–೧೪

2. ಮಧ್ವಾಚಾರ್ಯ-ವಿಷ್ಣು ತತ್ತ್ವ ವಿನಿರ್ಣಯ ೧-೧೯ರಲ್ಲಿ ಉದಾಹರಿಸಿದ ಸ್ಕಾಂದಪುರಾಣದ ಶ್ಲೋಕ. ಭಾರತ ತಾತ್ಪರ್ಯ ನಿರ್ಣಯದ ೩-೨೦, ೨೧ರಲ್ಲೂ ಈ ವಿವರಣೆ ದೊರೆಯುತ್ತದೆ.

3. ತೊ. ರಾ. VI ೨-೩೮.

4. ಇದೇ. VI ೩೪-೯.

5. ಚಂದ್ರಮಾ ಮನಸೋಃಜಾತಶ್ಚಕ್ಷೋಃ ಸೂರ್ಯೋಃ ಅಜಾಯತ
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ—
ವಿಷ್ಣು ತತ್ತ್ವ ವಿನಿರ್ಣಯ ೨-೪೪ರಲ್ಲಿ ಉದ್ಧೃತ. (ಪುರುಷಸೂಕ್ತ–ಋಗ್ವೇದ)

6. ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ–
ಬ್ರಹ್ಮಸೂತ್ರ ಭಾಷ್ಯಮ್ ೪-೧-೨-೬.

7. ತೊ. ರಾ. I ೮-೨೮.

8. ಇದೇ. VI ೫೧-೪೫.

9. ವೇದ ಹಾಡುವ, ಪರಮಪುರುಷನ ವ್ಯಾಖ್ಯಾನ ಮಾಡುವ, ವಿಷ್ಣುವಿನ ಕೆಲವಂಶಗಳನ್ನು ಧ್ಯಾನ ಮಾಡುವ–ಹೀಗೆ ಹಲವು ಬ್ರಹ್ಮರ ಉಲ್ಲೇಖ-ವಿಷ್ಣು ತತ್ತ್ವ ವಿನಿರ್ಣಯ-೧-೨೭೮ರಲ್ಲಿದೆ.
ಹಾಗೆಯೇ–
ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ ।
ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ ॥
ಎಲ್ಲ ಜೀವರೂ ಬ್ರಹ್ಮರೇ-(ಅಚ್ಯುತನು ಒಬ್ಬನೇ ಪರಮವಾದ ಬ್ರಹ್ಮ)-ವಿಷ್ಣು ತತ್ತ್ವ ವಿನಿರ್ಣಯ ೧-೩೦೪.

## ಭಕ್ತಿ–ಪ್ರತಿಪಾದನೆ

'ಭಕ್ತಿಯಿಂದಲೇ ಮುಕ್ತಿ'–ಎನ್ನುವುದು ಶ್ರೀ ಮಧ್ವಾಚಾರ್ಯರ ಸಂದೇಶ.[1] ಮಾನಸಿಕ ಸ್ನೇಹಸಹಿತವಾದ ಪರಮಾತ್ಮನ ಮಾಹಾತ್ಮ್ಯಜ್ಞಾನವೇ ಭಕ್ತಿ.[2] ಹೀಗಾಗಿ, ಹರಿಯ ಮಾಹಾತ್ಮ್ಯ ಜ್ಞಾನವೇ ಭಕ್ತಿಗೆ ಪ್ರೇರಕ. ಜ್ಞಾನಕ್ಕೆ ಮೋಕ್ಷಸಾಧನತ್ವವು ಹೇಳಲ್ಪಡುವಲ್ಲೆಲ್ಲಾ 'ಜ್ಞಾನಂ' ಎಂಬ ಪದವು 'ಭಕ್ತಿ' ಎನ್ನುವುದನ್ನೇ ಧ್ವನಿಸುತ್ತದೆ.[3]

ಮಾಧ್ವ ತತ್ತ್ವದಲ್ಲಿ 'ಭಕ್ತಿ'ಗೆ ಮಹತ್ತ್ವದ ಸ್ಥಾನವಿರುವುದನ್ನು ಕುಮಾರವಾಲ್ಮೀಕಿಯು ಸಂಪೂರ್ಣವಾಗಿ ಮನಗಂಡವನು. ಅವನದು 'ಭಕ್ತಮನೋಧರ್ಮ' ಎನ್ನುವ ಅಂಶ ಅವನ ಕಾವ್ಯಾಭ್ಯಾಸದಿಂದ ಖಚಿತವಾಗುತ್ತದೆ. ತನ್ನ ಕಾವ್ಯದ ಮೂಲಕ 'ವಿಷ್ಣು ಭಕ್ತಿ'ಯ ಪ್ರಚಾರಮಾಡುವುದೂ ಅವನ ಸದಾಶಯಗಳಲ್ಲಿ ಮುಖ್ಯದ್ದಾಗಿತ್ತು.

## ವಿಷ್ಣು ಸ್ಮರಣೆಯ ಹಿರಿಮೆ:

ವರ ವೈಷ್ಣವದ ವಿಮಲ ಪ್ರಭೆಗೆ ಭುವನದೊಳವಧಿಯಾವುದು ?[5]–ಎಂದು ಎದೆ ತಟ್ಟಿ ಹೇಳುವ, ಕೇಳುವ ದೃಢ ಭಕ್ತಿಯ ಮನೋಭಾವ ಅವನದು.

## ಹರಿಭಕ್ತಿರಸಾಯನ

ಹರಿಯೊಡನೆ ದ್ವೇಷ ಸಲ್ಲದು. ದ್ವೇಷ ಹಿಂಗಿ ಆ ಸ್ಥಾನದಲ್ಲಿ 'ಪರಮಾತ್ಮನ' ಮಾಹಾತ್ಮ್ಯ ಜ್ಞಾನ ಪೂರ್ವಕವಾದ ಆಂತರಂಗಿಕವಾದ ಸ್ನೇಹ (ಭಕ್ತಿ) ಮೂಡಿದಾಗ 'ರಾವಣನಂತಹ ರಕ್ಕಸನಿಗೂ' ದಿವ್ಯಾನುಗ್ರಹದ ಯೋಗ್ಯತೆಯು ಲಭ್ಯವಾಗುತ್ತದೆ–ಎನ್ನುವುದು ಕುಮಾರ ವಾಲ್ಮೀಕಿಯ 'ರಾವಣ ಪಾತ್ರ ಕಲ್ಪನೆ'ಯ ತಾತ್ವಿಕವಾದ ತಳಹದಿ. ಶ್ರೀಮದಾಚಾರ್ಯರು ಹೇಳಿದ 'ಜೀವದ್ವಯ ಸಮಾವೇಶ'ದ ಒಂದು ಸ್ವರೂಪ ರಾವಣನಲ್ಲಿದೆ. ಅವನಲ್ಲಿದ್ದ 'ಅಸುರಾ (ಜಯಾವೇಶ)ವೇಶವು' ಹಿಂಗಿದಾಗ ಅವನೂ ಭಕ್ತನಾಗುತ್ತಾನೆ. ಭಕ್ತಿಯ ಫಲವಾದ 'ಸ್ವರೂಪ ಜ್ಞಾನವನ್ನು' ಅವನೂ ಹೊಂದುತ್ತಾನೆ.[6]

ಹರಿಭಕ್ತಿಯ ವಿಚಾರವಾಗಿ ಎಷ್ಟು ಹೇಳಿದರೂ ಕವಿಗೆ ತೃಪ್ತಿಯಿಲ್ಲ. ಉದಾ :

---

1. ಭಕ್ತ್ಯಾ ಪ್ರಸನ್ನತೋ ದೇವಾನ್ ಮುಕ್ತಿರಿತ್ಯೇವ ತದ್ಗುಣಾನ್
   (ಅ) ವದಂತಿ ಶ್ರುತಯಃ ಸರ್ವಾಃ ಪುರಾಣಾನ್ಯಾಗಮಾ ಅಪಿ–ಮಧ್ವಾಚಾರ್ಯ–ಬ್ರಹ್ಮಸೂತ್ರಭಾಷ್ಯ III ೪-೬-೨೨೪
   (ಆ) ಯತತೋಪಿ ಹರೇಃ ಪದ ಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ–ಮಧ್ವಾಚಾರ್ಯ–ದ್ವಾದಶ ಸ್ತೋತ್ರ ೩-೩.
   (ಇ) ಅಮಲಾ ಭಕ್ತಿಶ್ಚ ತತ್ಸಾಧನಂ–ಶ್ರೀ ಪಾದರಾಜರ ಸೂತ್ರವಾಕ್ಯ (ಇದೇ ಪ್ರಬಂಧದಲ್ಲಿ ಮೊದಲೇ ಉದ್ಧೃತ)
2. ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ ।
   ಸ್ನೇಹೋ ಭಕ್ತಿರಿತಿ ಪ್ರೋಕ್ತಾಸ್ತಥಾ ಮುಕ್ತಿರ್ನಚಾನ್ಯಥಾ॥–ಮಧ್ವಾಚಾರ್ಯ–ಭಾರತ ತಾತ್ಪರ್ಯ ನಿರ್ಣಯ_೧-೮೫.
   ಬ್ರ. ಸೂ. ಭಾಷ್ಯ-III ೨-೩-೧೧ದಲ್ಲೂ ಈ ವಿವರಣೆ ಇದೆ.
3. ಜ್ಞಾನಸ್ಯೈವ ವಿಶೇಷೋಯದ್ಭಕ್ತಿ ರಿತ್ಯಭಿಧೀಯತೇ–ಬ್ರ. ಸೂ. ಭಾ. III ೪-೬-೨೧೫.
4. ಶ್ರವಣಂ, ಮನನಂ……ಭಕ್ತಿಯ ಬಗೆಗಳು (ಯುಕ್ತಿಮಲ್ಲಿಕಾ–ಫಲಸೌರಭ-೬)
5. ತೊ. ರಾ. VI೩-೫.
6. ಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯ ೩-೪-೪ ಮತ್ತು ೩-೪-೬ರಲ್ಲಿ ಈ ವಿಚಾರವಿದೆ.

೧. ನಳಿನನಾಭನ ಕೂಡೆ ವೈರವ ಬೆಳೆಸಿ ನೀ ಕೆಟ್ಟೆ (ವಿಭೀಷಣನ ನೀತಿ)[1]
೨. ಸಿರಿಹರಿ ಪರಾಯಣರೆನಸು ಧನ್ಯರೋ ಜಗದಿ[2]
೩. ವಾರಿಜಾಕ್ಷನ ಭೃತ್ಯರಿಗೆ ಭಯ ಸಾರುವುದೆ ?[3]
೪. ದುರಿತದುಬ್ಬರದುಸ್ಸಹದ ಪ್ಸೆ
ಸಿರಿಗೆ ಸೋಲುಡಿ ಬೀಳ್ವ ವಿಷ್ಣು
ಸ್ಮರಣೆಯಂತಿವಿರಾದನಸುರೇಂದ್ರಂಗೆ ಸೌಮಿತ್ರಿ[4]
೫. ವೈಕುಂಠ ವಾಸಿಯು ಗೃಹದ ಭಕ್ತರ ಖೇಳ ಮೇಳ[5]
೬. ಈ ವಿಶೇಷವ ಕಾಣೆನಿದು—ಕರ್ಮದಲಿ ಕುರಿಗಳಾಗಲು ಬೇಡ—ಹರಿಸಿರಿ ಪಾದಭಜಕರು ಬನ್ನಿ.[6] ಚತುರ್ವಿಧ ಫಲವ ಬಯಸುವಡೆ ಬನ್ನಿ.
೭. ಭ್ರೂಣ ಹತ್ಯಾದ್ಯಖಿಳಪಾಪಶ್ರೇಣಿ ಹರಿಪದಭಕ್ತಿಯುಕ್ತರ ಕಾಣುತಡಗುವವೊಲು....[7]
೮. ಸರಸಿಜಭವ, ಭವ, ಇಂದ್ರಾದಿ ಅಖಿಳ ಪದವಿಯುನೀವ ನಾಮ.[8]

## ಲಕ್ಷ್ಮೀ ತತ್ತ್ವ ಮತ್ತು 'ಮಾಯೆ'ಯ ವ್ಯಾಖ್ಯೆ

ಮಾಧ್ವದರ್ಶನದಂತೆ 'ಮಾಯೆ' ಎನ್ನುವುದೂ ಹರಿಯ ಇಚ್ಛೆಯೇ.

ಮಾಯಾಂ ತು ಪ್ರಕೃತಿಂ ವಿದ್ಯಾತ್
ಮಾಯಿನಂ ತು ಮಹೇಶ್ವರಂ....[9]
ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ
ಪ್ರಕೃತಿರ್ವಾಸನೇತ್ಯೇನಂ ತವೇಚ್ಛಾನಂತ ಕಥ್ಯತೇ...[10]
ಪ್ರಜ್ಞಾ ವಿನಿರ್ಮಿತಂ ಯಸ್ಮಾದತೋ ಮಾಯಾಮಯಂ ಜಗತ್[11]
ಮಾಯೇತಿ ಭಗವತ್ಪ್ರಜ್ಞಾ ನೈವ ಮಾನ ತ್ರಾಣ ಕರ್ತ್ರೀಯಸ್ಯ ತನ್ಮಾಯಾ
ಮಾತ್ರಮ್....[12]

ಜಗತ್ತು ಪ್ರಜ್ಞಾನಿರ್ಮಿತವಾದ್ದರಿಂದಲೇ 'ಮಾಯಾಮಯ' ಭಗವಂತನ ಪ್ರಜ್ಞೆಯೇ ಮಾಯೆ. ವಿಶ್ವ ಪ್ರಸೂತಿಗೆ—ಎಂದರೆ ಮೂಲ ಪ್ರಕೃತಿಗೆ ಕೂಡ ಹರಿಯೇ ಕಾರಣನು.[13] ಪರಮಾತ್ಮನು ಆ ಮೂಲ ಪ್ರಕೃತಿಯಲ್ಲಿ ತಾನೇ ಪ್ರವೇಶ ಮಾಡಿ, ತನ್ನನ್ನು ಬಹುವಿಧ, ಬಹುರೂಪಗೊಳಿಸಿಕೊಳ್ಳುತ್ತಾನೆ, ಅಷ್ಟೆ. ಹೀಗೆ, ಮಾಯಾ, ಪ್ರಕೃತಿ, ಮಹಾ ಮಾಯಾ, ಅವಿದ್ಯಾ, ವಾಸನಾ—ಎಲ್ಲವೂ ಪರಮಾತ್ಮನ ಇಚ್ಛೆಗಳೇ—ಎನ್ನುವುದು ಮಧ್ವಾಚಾರ್ಯರ ವಿಶಿಷ್ಟವಾದ ಸಿದ್ಧಾಂತ.[14]

---

| | ತೊ. ರಾ. ಕಾಂ. | ಸಂ. | ಪ. |
|---|---|---|---|
| 1. | ೬ | ೨ | ೩೬ |
| 2. | ೬ | ೩ | ೮ |
| 3. | ೬ | ೨೨ | ೬ |
| 4. | ೬ | ೨೪ | ೨ |
| 5. | ೬ | ೩೪ | ೨೬ |
| 6. | ೬ | ೩೪ | ೩೧-೩೩ |
| 7. | ೬ | ೩೯ | ೫ |
| 8. | ೬ | ೫೫ | ೭೦. |

9. ಮಧ್ವಾಚಾರ್ಯ—ಬ್ರಹ್ಮಸೂತ್ರ ಭಾಷ್ಯ I ೪-೬-೨೫.
10. ಶ್ವೇ. ಉಪನಿಷತ್ತು. ೪-೧೦.
11. ಮಧ್ವಾಚಾರ್ಯ-ವಿಷ್ಣು ತತ್ತ್ವ ವಿನಿರ್ಣಯ-೧–೨೬೩.
12. ಇದೇ. ೧-೨೬೬.
13. ಇವರೇ-ಅನುವ್ಯಾಖ್ಯಾನ–೧.೧–೨–೮೯.
14. ಇವರೇ—ಬ್ರಹ್ಮಸೂತ್ರ ಭಾಷ್ಯ-೧-೪-೬ (ಭಾಲ್ಲವೇಯ ಶ್ರುತಿ)

## ಮಾಯಾ ಚರಿತ–ಆದಿಮಾಯಾಮಾನಿನಿ

" ಯತ್ರ ವಸಂತಿ ಮಾಯಾಂ...." ಎನ್ನುವುದರಿಂದ, " ಲಕ್ಷ್ಮೀ ರೂಪಳಾದ ಮಾಯೆಯನ್ನು ಆಲಂಗಿಸಿಕೊಂಡಿರುವುದರಿಂದಲೇ ಶ್ರೀಹರಿಗೆ " ಮಾಯಾ " ಎಂಬ ಹೆಸರು.[1]

ಈ ಅಂಶಗಳನ್ನೆಲ್ಲ ಕುಮಾರ ವಾಲ್ಮೀಕಿಯು ಮನನ ಮಾಡಿಕೊಂಡಂತೆ ತೋರುತ್ತದೆ. ಇದರಿಂದಲೇ ಶ್ರೀರಾಮನನ್ನು–

ಮಾಯಾಚರಿತ[2], ಮಾಯಾನರ[3]-ಎಂದು ಅವನು " ಮಾಯಾ " ಎಂದು ಸೂಚಿಸಿದ್ದಾನೆ. ಸೀತೆಯನ್ನು–

ಆದಿಮಾಯಾ ಮಹಿಮೆ[4] ಎಂದೂ ಕ್ಷೀರೋದಧಿಯನಂದನೆ[5] ಎಂದೂ ಕರೆದಿದ್ದಾನೆ. ಮಾಯಾ ಮಾನಿನಿ[6], ಎಂದೂ ವಿಶೇಷಿಸಿದ್ದಾನೆ. ಮಧ್ವಾಚಾರ್ಯರ ಮಾಯೆಯ ವ್ಯಾಖ್ಯೆಯನ್ನು ಗಮನದಲ್ಲಿರಿಸಿಕೊಂಡಾಗಲೇ–

೧. ಈ ಸತಿಯು (ಸೀತೆಯು) ಮಾಯೆ (ಭಗವದಿಚ್ಛೆ)ಯಲಿ ಉದಿಸಿ ರಕ್ಕಸರ ಕೆಡಿಸಿದಳು.[7]

೨. ನಾಡಾಡಿ ಕೋಡಗಕೆ ಈ ಅತಿಶಯಗುಣಗಳುಂಟೇ ?-ಇದು ಸಿರಿನಾರಾಯಣನ ಮಾಯೆಯಾಯಿತು ತಾನೆಂದೆ[8].

ಎನ್ನುವ ಕೊರವೆ ರಾಮಾಯಣದ ಉಲ್ಲೇಖಗಳು ಸಾರ್ಥಕವೆನಿಸುತ್ತವೆ.

೩. ಮಾಯಾ ಪ್ರಕೃತಿ ಪುರುಷನಲಿ ಮಾನ್ಯವಾಗುವ ಘಟಿಸುವುದೇ ?[9] (ಅತಿಶಾಯಿಸುವುದು) ಎಂಬಲ್ಲಿ ಮಧ್ವಾಚಾರ್ಯರು " ಪ್ರಕೃತಿ-ಪುರುಷ "ರ ಕುರಿತು ಮಾಡಿದ " ವ್ಯಾಖ್ಯಾನ "ದ ನೆನಪಾಗದಿರದು.

ಸ್ವವಧಾನೇನ ಸೂತಿಸ್ತು ಪ್ರೋಸ್ತ್ಯಲ ವಿದ್ವದ್ಭಿರುಚ್ಯತೇ
ಸೂತಿರಸ್ಯವಧಾನೇನ ಪ್ರಕೃತಿಸ್ತಮತಿ ಸ್ಥಿತಿಃ–

ಎಂದರೆ ಮೂಲ (ಮಾಯಾ) ಪ್ರಕೃತಿಗೆ ಕಾರಣನು ಶ್ರೀಹರಿಯು.

ಲಕ್ಷ್ಮೀಯ ಹಿರಿಮೆಯನ್ನು ಸ್ಪಷ್ಟಪಡಿಸುವುದಕ್ಕಾಗಿ ಕುಮಾರ ವಾಲ್ಮೀಕಿಯು ಸೀತೆಯ ವರ್ಣನೆಯಲ್ಲಿ ವಿಶೇಷಾಂಶಗಳನ್ನು ತುಂಬಿದ್ದಾನೆ. ಸೀತಾ ವಿವಾಹ ಸಭೆಯಲ್ಲಿ–

ವರ ಸರಸ್ವತಿ ಶಕ್ತಿ ಮಾಹೇ
ಶ್ವರಿ ಮಹಾಗಾಯತ್ರಿ ವಿಷ್ಣು
ಭರಿ ಕುಮಾರಿ ವರಾಹಿ ವೈಷ್ಣವಿ ದುರ್ಗೆ ಚಾಮುಂಡಿ
ಪರಮ ಸತಿ ಸಾವಿತ್ರಿ ಸಂಧ್ಯಾ
ತರುಣಿ ಮೊದಲಾದಖಿಳ ದೇವಿಯ
ರಿವರು ಶೋಭಿಸಿತಾದಿಲಕ್ಷ್ಮಿಯ ಸುತ್ತು ಮಿಳಯದಲಿ[10]

ಸೀತಾನ್ವೇಷಣೆ ಮಾಡಿ ಮರಳಿದ ಹನುಮಂತನಿಗೆ ಶ್ರೀರಾಮನು ಬ್ರಹ್ಮ ಪದವಿಯನ್ನು ಕರುಣಿಸಿದಾಗ ಕವಿಯ ಉದ್ಗಾರ ಹೀಗಿದೆ :

ತೀರದೇ ತಾ ಜೀಡ ತನ್ನಯ
ನಾರಿಯಾಮರ ಕಟಾಕ್ಷದಗ್ರದ
ಧಾರೆ ಸೋಂಕಿದಡಹುದಲೇ ಬ್ರಹ್ಮೇಂದ್ರ ಪದವಿಗಳು....

---

1. ಮಧ್ವಾಚಾರ್ಯ-ಭಾರತತಾತ್ಪರ್ಯನಿರ್ಣಯ–ಅತ್ಥಂ ವಿಚಿಂತ್ಯ ಪರಮ...೧-೬.
2. ಕು. ರಾ. I ೮-೭೭. 3. ಕು. ರಾ. I ೯-೩೫. 4-5. ಕು. ರಾ. I ೧೪-೧೯.
6. ಅದೇ. I ೧೪-೨೯.
7. ಅದೇ. III ೮-೨೨—ತಚ್ಚಾಸುರಾಣಾಂ ಮೋಹಾಯ...ಭಾರತ ತಾತ್ಪರ್ಯ ನಿರ್ಣಯ
8. ಅದೇ. VI ೮-೩೮. 9. ಕು. ರಾ. VI ೩೪-೧೫.
10. ಬ್ರ. ಸೂ. ಭಾಷ್ಯ ೧-೪-೬, ೧-೩೭.
11. ಕು. ರಾ. I ೮-೪೯.

ಸಾರತರ ನಿಗಮಾರ್ಥವಿದು ಬೆರ
ಗಾರಿಗಾ ಲಕ್ಷ್ಮೀಶನೊಲಿದರೆ ?–
ವೀರ ಕೇಳು ವಿಚಿತ್ರವಲ್ಲೆನುತೆಂದನಾ ಮುನಿಪ.[1]

"ಲಕ್ಷ್ಮಿಯ ಕಟಾಕ್ಷದ ಧಾರೆ ಸೋಂಕಿದರೆ ಸಾಕು-ಬ್ರಹ್ಮೇಂದ್ರ ಪದವಿಗಳು ದೊರೆಯುತ್ತವೆ ಎಂದಿದ್ದ ಮೇಲೆ, ಅಂತಹ ಲಕ್ಷ್ಮಿಯ ಈಶನೇ (ಶ್ರೀರಾಮನೇ) ಒಲಿದರೆ ಇನ್ನು ಕೇಳುವುದೇನು ?"

ಯಂ ಕಾಮಯೇ ತಂ ತಮುಗ್ರಂ ಕೃಣೋಮಿ....[2]

ಬ್ರಹ್ಮೇಶ ಶಕ್ರ ರವಿ ಧರ್ಮ ಶಶಾಂಕ ಪೂರ್ವಗೀರ್ವಾಣ ಸಂತತಿರಿಯಂ ಯದಪಾಂಗಲೇಶಮ್[3].......ಆಚಾರ್ಯರ ಈ ನುಡಿಗಳನ್ನು ಕುಮಾರ ವಾಲ್ಮೀಕಿಯು ಅಕ್ಷರಶಃ ಅನುಸರಿಸಿದ್ದಾನೆ.

ಇಷ್ಟು ಹೇಳಿಯೂ ತಣಿಯದ ಕವಿಯು, ಮಾಯೆಗೆ ಸಂಬಂಧಿಸಿ 'ಅಲ್ಪವಾದಿತ್ವ'ದ ಮಾಯೆ ಎಂಬ ಅರ್ಥವಿರುವುದನ್ನೂ, ಆದರೆ ಆ ಅರ್ಥಕಲ್ಪನೆಯು ಶ್ರೀಹರಿಯ ಇಚ್ಛಾರೂಪಿಯಾದ 'ಮಾಯಾ ಮಾನಿನಿ' (ಸೀತೆ)ಯ ವಿಷಯದಲ್ಲಿ ಸಲ್ಲದೆಂದೂ ಸೂಚಿಸಿದಂತೆಯೂ ತೋರುತ್ತದೆ.

ಮಾರೀಚನು ತಾನು ಮಾಯಾಮೃಗವಾಗಿ ಆ ಮಾಯಾ ಮಾನಿನಿಯ (ಸೀತೆಯ) ಮುಂದೆ ಸುಳಿಯುತಿದ್ದಂತೆ ಅವನು ತನ್ನೊಳಗೇ–

ಈ ಸತಿಯು ನಮ್ಮ ಅಲ್ಪವಾದಿಯ ಮಾಯೆಯು ಮಾಯೆಯಾಗದೆ ಮಾಣಳ್–ಈ ಸತಿಯು 'ಮಾಯೆಯಲಿ ಉದಿಸಿ, ರಕ್ಕಸರ ಮತಿಗೆಡಿಸಿ. ಕೆಡಿಸಿದಳು, ಇನ್ನು ಅಸುರಕುಲ ಮಾಯವಾಗದೆ ಉಳಿಯದು'[4]–ಎಂದು ಚಿಂತಿಸುತ್ತಾನೆ.

ಈ ಚಿಂತನೆಯಲ್ಲಿ ಅಸುರದ (ಅಲ್ಪವಾದಿತ್ವದ) ಮಾಯೆಯೇ ಬೇರೆ, ನಾಶವೇ ಅದರ ಫಲ; ಅಸುರ 'ಮಾಯೆ'ಯ ನಾಶಕ್ಕಾಗಿ ಭಗವದಿಚ್ಛೆಯಿಂದ ಉದಿಸಿದ 'ಮಾಯೆ (ಸೀತೆ)'ಯ ಹಿರಿಮೆಯೇ ಬೇರೆ ; ಅಸುರಕುಲ ಧ್ವಂಸವೇ ಇದರ ಉದ್ದೇಶ–ಎಂಬ ವಿಚಾರಗಳು ಧ್ವನಿಸುತ್ತವೆ.

ಹೀಗೆ, ಮಾಯೆಗೆ (ಲಕ್ಷ್ಮಿಗೆ) ಮಾಧ್ವತತ್ತ್ವ ರೀತ್ಯಾ ಅರ್ಥಕಲ್ಪಿಸಿ, ಮಾಯಾ ಮಾನಿನಿಯ (ಸೀತೆಯ) ಹಿರಿಮೆಯನ್ನು[5] ತನ್ನ ಕೃತಿಯಲ್ಲಿ ಕೊಂಡಾಡಿದ್ದು-ಕುಮಾರ ವಾಲ್ಮೀಕಿಯ 'ತತ್ತ್ವನಿಷ್ಠೆ'ಗೆ ಕನ್ನಡಿಹಿಡಿದಂತಿದೆ.

**ಚತುರ್ಮುಖರೂಪ–ಬ್ರಹ್ಮವೈಭವ–ಮುಖ್ಯಪ್ರಾಣತತ್ತ್ವ**

'ಭುವನ ಪ್ರಾಣಜ'ನಾದ' ಮುಖ್ಯ ಪ್ರಾಣನನ್ನು ಕುಮಾರವಾಲ್ಮೀಕಿಯು ಕೊಂಡಾಡಿದ ವೈಖರಿ ಅನನ್ಯವಾದದ್ದು.

ಪಿನಾಕಧರನಿಕ್ರಾಂತನೈಂದ್ರ ವ್ಯಾಕರಣಕೋವಿದ,
ಸಕಲಸ್ಮೃತಿಕಲಾವಿದ, ಲೋಕಲೋಚನ ಭೀಕರ, ಜಗದೇಕವೀರ, ನಿರ್ಜಿತೇಂದ್ರಿಯ.
ಪರೇಂಗಿತಜ್ಞ, ಯತಿಕುಲೋತ್ತಮ, ಉದಾರಗುಣ ರತ್ನಾಕರ....[7]

---

1. ತೊ. ರಾ. V ೯-೨೧.
2. ಮಧ್ವಾಚಾರ್ಯ–ವಿಷ್ಣುತತ್ತ್ವನಿರ್ಣಯ ೨-೪೪೧.
3. ಅದೇ. ದ್ವಾದಶಸ್ತೋತ್ರ ೬-೨.
4. ತೊ. ರಾ. ಅರಣ್ಯಕಾಂಡ ೮-೨೨.
5. ಲಕ್ಷ್ಮಿಯ ಅನುಗ್ರಹ ಶಕ್ತಿಯನ್ನು ಕೊಂಡಾಡುತ್ತಾ (ತೊ. ರಾ. V ೯–೩೧), ಅವಳ "ಹಿರಿಮೆ"ಯನ್ನು ಉಲ್ಲೇಖಿಸುವ ಭರದಲ್ಲಿ, "ಲಕ್ಷ್ಮಿಯು ಎಷ್ಟೇ ಶಕ್ತಳಾದರೂ, ಅವಳು ಪರಮಾತ್ಮನ ಅಧೀನಳು" ಎನ್ನುವ ಆಚಾರ್ಯರ (ಬ್ರ. ಸೂ. ಭಾಷ್ಯ ೧-೪-೬-೨೫) ವಿಚಾರವನ್ನು ಕವಿಯು ಮರೆಯುವುದಿಲ್ಲ. ತೊ. ರಾ. V ೯-೩೧ರ ಉತ್ತರಾರ್ಧದಲ್ಲಿ "ಲಕ್ಷ್ಮೀಶನೊಲಿದರೆ ಬೆರಗಾರಿಗೆ ?" ಎನ್ನುವಲ್ಲಿ ಅದನ್ನು ಸ್ಪಷ್ಟಪಡಿಸಿದ್ದಾನೆ.
6. ತೊ. ರಾ. ಕಾಂ. ಸಂ. ಪ. ೧ ೧ ೧
7. ತೊ. ರಾ. ಕಾಂ. ಸಂ. ಪ. ೪ ೧ ೬ ರಿಂದ ೮

ರಘುರಾಜೇಂದ್ರಚಂದ್ರಮನ ಕರುಣಕಲಿತ ಪ್ರಾಣಪೂರಿತ, ಪರಮ ಮಾರುತ,[1]
ಆ ರಮಾಧೀಶನ ಸಮಾನಕೆ ಸೇರಿಸಲು ಬಹುದನಿಲಜನ.[2]
ಈ ಸಮೀರಜನೀಗ ಹೃದಯ ನಿ
ವಾಸ ಮಾರುತ. ಅಜ, ಹರೀಶ್ವರ
ರೋಸರದ ಬರಿಮಾತದಲ್ಲಿದು ವೇದ ಮತವೆಂದ.[3]

ಪರಮಾತ್ಮನ ವಿಶ್ವರೂಪದಲ್ಲಿ-"ಪವಮಾನನುಸಿರು ಕಣಾ"[4]

ಹನುಮನು ಪರಮ ಪುರುಷನ ಜೀವ ಮಾರುತ,[5]
ಈತನನು ಪೊಗಳುವರೆ ಜಿಂಹಗ
ಳೇತರವು ನಮ್ಮವು? ಚರಾಚರ
ಚೇತನನ ಚೈತನ್ಯ ವಾಯುಕಣಾ ನಿದಾನಿಸಲು
ಈತನಿಂದಧಿಕರು ನಿದಾನಿಸೆ
ಭೂತನಿಕರದೊಳಿಲ್ಲವಿದು ಸಾ
ಕ್ಷಾತ ಪೌರಾಣ ಪ್ರಸಿದ್ಧ ರಹಸ್ಯ ಕೇಳೆಂದ....[6]

ಶ್ರೀರಾಮನೇ ಹನುಮಂತನ ಕುರಿತಾಗಿ "ಜೀವಾಂಶುಗನಲಾ, ನಮ್ಮಂತರಂಗದಲಗಲದಿಹ"[7] ಎನ್ನುತ್ತಾನೆ. ಮಾರುತಿಗೆ ಇಂತಹ ಅಸಮಾನ ಪ್ರಶಸ್ತಿಯನ್ನು ಕವಿಯು ನೀಡಿರುವುದಕ್ಕೆ, ಅವನು ಹೃದ್ಗತಮಾಡಿಕೊಂಡ 'ಮಾಧ್ವದರ್ಶನ'ವೇ ಹಿನ್ನೆಲೆ.

೧. ತಸ್ಯಾಂಗಂ ಪ್ರಥಮೋ ವಾಯುಃ[8]
೨. ಭೂಭಾರಹಾರಿಣೋ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ[9]

ಎಂದು ಶ್ರೀಹರಿಗೆ ವಾಯುದೇವರು ಒಂದನೇ ಅಂಗಭೂತರು.

ಯಥಾವಾ ಅರಾಃ ಸಮರ್ಪಿತಾ
ಏವ ಮಸ್ಮಿನ್ ಪ್ರಾಣೇ ಸರ್ವಂಸಮರ್ಪಿತಂ[10]
ಪ್ರಾಣಃ ಪ್ರಥಮಃ[11]
ಓಂ ತತ ಏಷಪ್ರಾಣೋsಜಾಯತ[12]

ಮೊದಲಾದ ಹೇಳಿಕೆಗಳೂ ವಾಯುವಿನ 'ಉತ್ತಮತ್ವವನ್ನು' ಪ್ರತಿಪಾದಿಸುತ್ತವೆ.

---

ತೊ. ರಾ. ಕಾಂ. ಸಂ. ಪ.
1. ೪ ೧೧ ೧೧
2. ೫ ೬ ೧೧
3. ೪ ೧೨ ೧೩
4. ತೊ. ರಾ. VI ೩೪-೯.
5. ಇದೇ. ೩೬-೯.
6. ಇದೇ. ೩೬-೬೩.
7. ಇದೇ. VI ೫೫-೫೪.
8. ಮಧ್ವಾಚಾರ್ಯ-ಭಾರತತಾತ್ಪರ್ಯ ನಿರ್ಣಯ ೨-೧೫.
9. ಇದೇ. ೨-೧೨೮.
10. ಛಾಂದೋಗ್ಯ ಉಪನಿಷತ್ತು ೭-೧೫-೧.
11. ಕೇನ ಉಪನಿಷತ್ತು-(ಅಲೂರ ವೆಂಕಟರಾಯರ ಮಧ್ವಸಿದ್ಧಾಂತ ಪ್ರವೇಶಿಕೆ ಪು. ೩೪ರಲ್ಲಿ ಉದ್ಧೃತ)
12. ಬ್ರಹ್ಮಸೂತ್ರ ೩-೨-೪೬.

ಛಾಂದೋಗ್ಯ ಉಪನಿಷತ್ತಿನಲ್ಲಿ-ಒಂದು ಗಾಲಿಯ ನಡುವೆ ಕಡ್ಡಿಯಿರುವಂತೆ ಮುಖ್ಯಪ್ರಾಣವಿದೆ ಎಂದು ಹೇಳಲಾಗಿದೆ.[1] "ಈ ಮುಖ್ಯಪ್ರಾಣನನ್ನು ವಿಶ್ವದ ಇಂಜಿನಿಯರ ಎಂದು ಹೇಳಬಹುದು"[2] ವಿಷ್ಣು ಸರ್ವೋತ್ತಮತ್ವ ಮತ್ತು ವಾಯು ಜೀವೋತ್ತಮತ್ವಗಳು ಮಧ್ವಾಚಾರ್ಯರ ತತ್ತ್ವದ ಮುಖ್ಯಾಂಶಗಳು.[3] ಈ ವಿಚಾರವನ್ನು ಮಧ್ವಶಿಷ್ಯನಾದ ಕುಮಾರ ವಾಲ್ಮೀಕಿಯು ಮನಸಾ ಸ್ವೀಕರಿಸಿದ್ದು ಸ್ಪಷ್ಟ.

ಓಂ ಇಯದಾಮನನಾತ್ ಓಂ[4]

—ಪ್ರಾಣನಿಗಿಂತ ಅಧಿಕನು ಇಲ್ಲ. ವಿಷ್ಣು, ಲಕ್ಷ್ಮಿಯರನ್ನು ಬಿಟ್ಟರೆ ವಾಯುವಿಗೇ ಉತ್ತಮತ್ವವು-ಈ ಅಂಶದ ಸಮರ್ಥನೆ ಮಾಧ್ವ ದರ್ಶನ ಕೃತಿಗಳಲ್ಲಿ ಸಾಕಷ್ಟು ದೊರೆಯುತ್ತದೆ.[5] ಇದನ್ನು ಗಮನಿಸಿದಾಗ 'ಆ ರಮಾಧೀಶನ ಸಮಾನಕೆ (ಉಳಿದ ಜೀವರಿಗಿಂತ ಸಮೀಪವರ್ತಿಯಾಗಿ) ಸೇರಿಸಲು ಬಹುದನಿಲಜನ'[6] ಎಂದಿರುವುದರಲ್ಲಿ ತಾತ್ತ್ವಿಕ ದೃಷ್ಟಿಯಿದೆ. ಹಾಗೆಯೇ ವಾಯುವಿನ ಜೀವೋತ್ತಮತ್ವವನ್ನು ಧ್ವನಿಸುವ ತೊರವೆ ರಾಮಾಯಣದ ಉಲ್ಲೇಖಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು.

ಹನುಮನೆಂಬಭಿಧನವಗನ
ನೆನೆವರಕೆ ಶಿವನಂಜುವನು ಮಿ
ಕ್ಕಿನ ಸರೋಜಭವಾಮರಾಸುರ ನರ ಭುಜಂಗಮರ
ಮನದೊಳಾರನು ಹುಲ್ಲಕಡ್ಡಿಯ
ಕೊನೆಗೆ ಲೆಕ್ಕಿಸದಾತನಾತನು....[7]

ರಘು ಭೂಪಾಲಕನ ಮನದಚ್ಚುಮೆಚ್ಚಿನ ನಿಜಭೃತ್ಯ...[8]
ಭೃತ್ಯರೊಳಗೀ ಮರುತ್ಸುತನಿಂದತ್ಯಧಿಕರಾರುಂಟು?[9]

ರಾಮನೆಂಬುದು ವಿಮಲ ಲಕ್ಷ್ಮೀ
ಧಾಮನಿದು ತಾಸಿದ್ಧ ನಾತಂ
ಗೀ ಮರುತ್ಸುತನೇನು ವೆಗ್ಗಳನೋ ಗುಣಂಗಳಲಿ.[10]

---

1. ಛಾಂದೋಗ್ಯ ೧-೧೫-೧.
2. ಆಲೂರ ವೆಂಕಟರಾಯರು—ಮಧ್ವಸಿದ್ಧಾಂತ ಪ್ರವೇಶಿಕೆ ಪು. ೧೪೫.
3. ಕಾಪು ಹಯಗ್ರೀವಾಚಾರ್ಯ—ವಿಷ್ಣು ಸರ್ವೋತ್ತಮತ್ವ ಮತ್ತು ವಾಯು ಜೀವೋತ್ತಮತ್ವ—ಪುಸ್ತಕ ನೋಡಬಹುದು.

An interesting feature of Madhwa's theology is the important part played by the Wind god Vayu, the son of Vishnu, who is his agent in the world, and has some of features of the Holy Ghost of Christian theolgy–A. L. Basham–The Wonder That was India p.336.

4. ಬ್ರಹ್ಮ ಸೂತ್ರ III ೩-೩-೨೧-೪೫.
5. ಇದೇ. ೩-೩-೨೧-೪೬-೪೭. ಬೃಹದಾರಣ್ಯಕ ಉ. ೮-೧.

ಮುಕ್ತಿದೊರೆಯುವುದು ಮುಖ್ಯಪ್ರಾಣನ ಅನುಗ್ರಹದಿಂದ-ವಿಷ್ಣೋರ್ದಾತಾ ಮೋಕ್ಷಸ್ಯವಾಯುಶ್ಚ ತದನುಜ್ಞಯಾ— ಭಾ. ತಾ. ನಿ. ೧-೭೮.

| | ತೊ. ರಾ. | | | | ತೊ. ರಾ. | |
|---|---|---|---|---|---|---|
| | ಕಾಂ. | ಸಂ. | ಪ. | | ಕಾಂ. | ಸಂ. | ಪ. |
| 6. | ೫ | ೬ | ೧೪ | 8. | ೬ | ೨೪ | ೧ |
| 7. | ೬ | ೮ | ೨೬ | 9. | ೬ | ೨೫ | ೬ |
| 10. | ೬ | ೩೬ | ೨೪—ಇಲ್ಲಿ ಸೂಚಿತವಾದ 'ಗುಣ' ಗಳು 'ಮಾಧ್ವ ದೃಷ್ಟಿ'ಯಿಂದ ವಿಶಿಷ್ಟವಾಗಿವೆ. | | | | |

(ರಾಮನ ನುಡಿ) : ಎನ್ನ ಹೃದ್ಗತ ಮರುತ ನೀನು, ಜಗದೊಳಗೆ ನಿನ್ನಿಂದ ಪೂಜ್ಯರು ಬಗೆಯಲುಂಟೇ ?[1].

## ಹನುಮಂತನಿಗೆ ಭಾವೀ ಬ್ರಹ್ಮತ್ವ

ಸೀತಾನ್ವೇಷಣೆ ಮಾಡಿ, ಚೂಡಾಮಣಿಯನ್ನು ತನಗೆ ತಂದಿತ್ತ ಹನುಮಂತನಿಗೆ ಶ್ರೀರಾಮನು-
"ಬೊಮ್ಮನ ಪರಮ ಪದವಿಯನಿತ್ತು ಮನದಣಿಯೆ ಮನ್ನಿಸಿದ"[2]–
ಅಲ್ಲದೆ ಶ್ರೀರಾಮ ಪಟ್ಟಾಭಿಷೇಕ ಸಂದರ್ಭದಲ್ಲಿ ಪುನಃ ರಾಮನು ಹನುಮಂತನನ್ನು ಕರೆದು–

"ಆ ವಿರಿಂಚಿಯ ವೈಭವವು ಕ-
ಲ್ಪಾವಸಾನಕೆ ಸಲಲಿ ಭುವನ ಜ
ನಾವಳಿಗಳರೆ ವಂದಿಸಲಿ ಗುರುವಾಗು ಜಗಕೆಂದ"[3]

ಇತರ ಯಾವ ರಾಮಾಯಣಗಳಲ್ಲೂ ಹೇಳದ ಈ ವಿಶಿಷ್ಟವಾದ ಅಂಶವನ್ನು ಕುಮಾರವಾಲ್ಮೀಕಿಯು ಪ್ರಸ್ತಾವಿಸಿರುವುದು–ಅವನ "ಮಾಧ್ವನಿಷ್ಠೆ"ಗೆ ಒಂದು ಉಜ್ವಲ ಸಾಕ್ಷಿಯಾಗಿದೆ.

ಶ್ರೀ ಮಧ್ವಾಚಾರ್ಯರು ತಮ್ಮ ಕೃತಿಗಳಲ್ಲಿ "ವಾಯುದೇವರಭಾವೀ ಬ್ರಹ್ಮತ್ವ"ವನ್ನು ಪ್ರತಿಪಾದಿಸಿರುತ್ತಾರೆ.

ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ–ಎನ್ನುವ ಶ್ರುತಿವಾಣಿಯಲ್ಲಿ ವಾಯುವಿನ "ಭವಿಷ್ಯದ್ಬ್ರಹ್ಮತ್ವವು ಉಕ್ತವಾಗಿದೆ ಎಂದು ಆಚಾರ್ಯರು ವಿವರಿಸುತ್ತಾರೆ.[4]

ತೇಜೋಽಭಿಧಾಂ ಶ್ರಿಯಮಾಪ್ಯ ವಿಷ್ಣು
ಮಪ್ಯೇತಿ ತತಃ ಪುತ್ರತಯೈವ ವಾಯುಃ
ಅಪ್ಯತ್ರಸೂತ ಪುನರೇವ ವಿಷ್ಣುಂ
ಪ್ರವಿಶ್ಯ ಮುಕ್ತೈಃ ಪ್ರಲಯೇಽತ್ರ ತಿಷ್ಠತಿ[5]

"ವಾಯುದೇವರು ಪ್ರಲಯಕಾಲದಲ್ಲಿ ತೇಜಶ್ಶಬ್ದವಾಚ್ಯಳಾದ ಲಕ್ಷ್ಮೀದೇವಿಯನ್ನು ಹೊಂದಿ, ಶ್ರೀಹರಿಯನ್ನು ಸೇರುವರು." ಸೃಷ್ಟಿಕಾರ್ಯವು ಉಂಟಾಗುತ್ತಿರುವಲ್ಲಿ ವಿಷ್ಣುವಿಗೆ ಪುತ್ರತ್ವದಿಂದ–ಎಂದರೆ ಹಿರಣ್ಯಗರ್ಭತ್ವದಿಂದ–ಹುಟ್ಟುವರು"

ಸ್ಥಿತ ಪ್ರಜ್ಞೋಽಪಿ ಯಸ್ಮಾದೂರ್ಧ್ವಂ ಪ್ರಾಪ್ಯ ರೌದ್ರಂ ಪದಂ ತತಃ
ಸಾಂಕರ್ಷಣಂ ತತೋ ಮುಕ್ತಿಮಗಾದ್ವಿಷ್ಣು ಪ್ರಸಾದತಃ[6]

"ಬಲಿಚಕ್ರವರ್ತಿಗೆ ಭವಿಷ್ಯದಿಂದ್ರತ್ವವು ಇದ್ದಂತೆಯೇ ಮುಖ್ಯ ವಾಯ್ವವತಾರನಾದ ಹನುಮಂತನಿಗೆ ಭವಿಷ್ಯದ್ಬ್ರಹ್ಮತ್ವವು ಪ್ರಸಿದ್ಧವಾಗಿದೆ.

ಈ ವಿಚಾರವನ್ನು ಆಚಾರ್ಯರು ಭಾರತತಾತ್ಪರ್ಯನಿರ್ಣಯದಲ್ಲೂ ಪ್ರಸ್ತುತಪಡಿಸಿದ್ದಾರೆ.

---

1. ಕು. ರಾ. [illegible] ಮಾತರಿಶ್ವನು ದೇಹದೊಳು
ಸೂತನಾಗಿಹ ಸರ್ವಕಾಲದಿ
ಶ್ರೀಕರನ ವಲ್ಲಭ ರಥಿಕನೆಂದರಿಯ. (ಜಗನ್ನಾಥದಾಸ ಹರಿಕಥಾಮೃತಸಾರ [illegible])
2. ಕು. ರಾ. V [illegible].
3. ಅದೇ. VI [illegible] (ಇಲ್ಲಿನ ಗುರುವಾಗು–ಎಂಬ [illegible] ವಾಯುದೇವರ ಅವತಾರ [illegible] ಮಧ್ವಾಚಾರ್ಯರು [illegible] ?)
4. ಬ್ರ. ಸೂ. IV [illegible].
5. ಅದೇ. [illegible].
6. ಬ್ರ. ಸೂ. IV [illegible].

ಅತೋ ಹನೂಮಾನ್ ಪದಮೇತು ಧಾತುರ್ಮದಾಜ್ಞಯಾ ಸೃಷ್ಟ್ಯನಾದಿ ಕರ್ಮ
ಮೋಕ್ಷಂ ಚ ಲೋಕಸ್ಯ ಸದೈವ ಕುರ್ವನ್ ಮುಕ್ತಶ್ಚಮುಕ್ತಾನ್ ಸುಖಯನ್ ಪ್ರವರ್ತತಾಮ್[1]

" ಹನುಮಂತನು ಬ್ರಹ್ಮನ ಸ್ಥಾನವಾದ ಸತ್ಯಲೋಕಾಧಿಪತ್ಯವನ್ನು ಹೊಂದಲಿ "[2]

**ಸಹಭೋಗ ಭಾಗ್ಯ**

ಭೋಗಾಶ್ಚಯೇ ಯಾನಿ ಚ ಕರ್ಮಜಾತಾನ್ಯನಾದ್ಯನಂತಾನಿ ಮಮೇಹ ಸಂತಿ
ಮದಾಜ್ಞಯಾ ತಾನ್ಯಖಿಲಾನಿ ಸಂತಿ ಧಾತುಃ ಪದೇ ತತ್ ಸಹಭೋಗನಾಮ[3]

" ಹನುಮ, ನಿನಗೆ ಸತ್ಯಲೋಕಾಧಿಪತ್ಯಾತ್ಮಕವಾದ ನನ್ನ ಸಹಭೋಗವೂ ನಿನಗೆ ದೊರಕಲಿ"–ಎಂದು ರಾಮನು ಮಾರುತಿಗೆ ಅನುಗ್ರಹಿಸಿದ್ದನ್ನು ಕುಮಾರ ವಾಲ್ಮೀಕಿಯೂ ತನ್ನದೇ ರೀತಿಯಲ್ಲಿ ಅನುಸರಿಸಿ ' ಶ್ರೀರಾಮ ಪಟ್ಟಾಭಿಷೇಕಾ ವಸರದಲ್ಲಿ ಹನುಮನಿಗೆ ' ಸಹಭೋಜನ ' ಭಾಗ್ಯವನ್ನು ಕರುಣಿಸಿದ್ದಾನೆ.[4]

ಕಥಾವಿನ್ಯಾಸದಲ್ಲಿಯೂ, ಹನುಮಂತನ ಹಿರಿಮೆ ಮತ್ತು ಭವಿಷ್ಯದ್ಬ್ರಹ್ಮತ್ವಗಳು ಪ್ರಕಟವಾಗುವಂತೆ ಕುಮಾರ ವಾಲ್ಮೀಕಿಯು ಕಥಾಸನ್ನಿವೇಶಗಳನ್ನು ಸದುಪಯೋಗಿಸಿಕೊಂಡಿದ್ದಾನೆ.

ಸುಂದರ ಕಾಂಡದಲ್ಲಿ, ಇಂದ್ರಜಿತುವು ಹನುಮಂತನ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಿಸಿದಾಗ, ಬ್ರಹ್ಮನು ಮಾರುತಿ ಯೊಡನೆ " ನನ್ನ ಅಸ್ತ್ರದ ಗೌರವನ್ನು ಉಳಿಸಬೇಕೆಂದು " ಪ್ರಾರ್ಥಿಸುತ್ತಾನೆ.[5]

ಸೇತುಬಂಧನಕಾಲದಲ್ಲಿ ಹನುಮಂತನು ಅಮರಾದ್ರಿಯನ್ನು ಕೀಳಹೊರಟಾಗ, ಬ್ರಹ್ಮನೇ ಪ್ರತ್ಯಕ್ಷನಾಗಿ,

ಹನುಮ ಕೇಳೀಕಲ್ಪದಭಿರಂ
ಜನೆಗೆ ಕರ್ತೃಗಳಾವು ಮುಂದಣ
ನೆನಹು ನಿನ್ನದು...........

ಎಂದು ವಿನಂತಿಸುವಂತೆ ಮಾಡಿ ಹನುಮಂತನ ಭಾವಿಬ್ರಹ್ಮತ್ವವನ್ನು ಪ್ರಕಟಪಡಿಸುತ್ತಾನೆ.[6]

ಅಲ್ಲದೆ, ಅಲ್ಲಲ್ಲಿ ' ಚತುರ್ಮುಖ ರೂಪ'[7], ಅಪರಬ್ರಹ್ಮ[8], ಬ್ರಹ್ಮವೈಭವ[9], ಮುಂದಕ್ಕೆ ಕಮಲಜನಹ '[10] ಎಂದು ಹನುಮಂತನನ್ನು ವಿಶೇಷಿಸಿದ್ದಾನೆ.

---

1. ಮಧ್ವಾಚಾರ್ಯ-ಭಾರತತಾತ್ಪರ್ಯ ನಿರ್ಣಯ ೮-೨೪೧.
2. ಅದೇ. ೮-೨೪೧.

' ಸಹಭೋಗ 'ದ ವಿವರಣೆ ಇದೇ ೮–೨೪೩ರಲ್ಲಿದೆ. (ಅಲ್ಲದೆ ಭಾ. ತಾ. ನಿ. ದ ೭–೩೨ರಲ್ಲೂ

ಮಯಾ ವರಾ ವಿಲಂಘಿತಾಹ್ಯನೇಕಶಃ ಸ್ವಯಂಭುವಃ
ಸ ಮಾನನೀಯ ಏವ ಮೇ ತತೋಽತ್ರ ಮಾನಯಾಮ್ಯಹಮ್–
ಎಂದು ಹನುಮಂತ ಬ್ರಹ್ಮ ಸಂಬಂಧದ ಸೂಚನೆಯಿದೆ.)

3. ಭಾ. ತಾ. ನಿ. ೮-೨೪೧.
4. ತೊ. ರಾ. VI ೫೫-೪೭.

| | ತೊ. ರಾ. | | |
|---|---|---|---|
| | ಕಾಂ. | ಸಂ. | ಪ. |
| 5. | ೫ | ೬ | ೩೩ (ಭಾರತತಾತ್ಪರ್ಯ ನಿರ್ಣಯ.೭–೩೩ ದಲ್ಲಿಯೂ ಈ ಸೂಚನೆಯಿದೆ.) |
| 6. | ೬ | ೫ | ೫೯ |
| 7. | ೪ | ೨ | ೨೧ |
| 8. | ೬ | ೩೧ | ೨೭ |
| 9. | ೬ | ೩೬ | ೬೧ |
| 10. | ೬ | ೪೭ | ೫೩ |

## ಬಿಂಬ ಪ್ರತಿಬಿಂಬ ಕಲ್ಪನೆ

ಜೀವನಿಗೆ ಪರಮಾತ್ಮ (ಬ್ರಹ್ಮ)ನ ಪ್ರತಿಬಿಂಬತ್ವ (ಆಭಾಸತ್ವ)ವನ್ನು ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿದ್ದಾರೆ[1] ನೆರಳು ಪುರುಷನ ಅಧೀನವಾಗಿರುವಂತೆಯೇ ಜೀವರ ಸಮುದಾಯವು ಪರಮಾತ್ಮನ ಅಧೀನವಾಗಿರುತ್ತದೆ—ಎಂದಿದ್ದಾರೆ ಆಚಾರ್ಯರು.

ಈ ವಿಚಾರದ ಛಾಯೆಯನ್ನು ತೊರವೆ ರಾಮಾಯಣದಲ್ಲಿ ಗುರುತಿಸಬಹುದು ವಾಲಿಯು ತನ್ನ ಅವಸಾನಕಾಲದಲ್ಲಿ-

ರಾಮ ಲಕ್ಷ್ಮಣರ–ಅಂಬುಜಾಕ್ಷಫಣೀಂದ್ರರ ಪ್ರತಿಬಿಂಬವಾಗಿರೆ—ಕಂಡು 'ಮುಕ್ತಿನಿತಂಬಿನಿಯಾಲಿಂಗನಕೆ' ಮನಮಾಡುತ್ತಾನೆ.[2] ಅವತಾರ ರೂಪಗಳಲ್ಲಿ ಭೇದ ಸಲ್ಲದು[3] ಎನ್ನುವ ಆಚಾರ್ಯರ ಹೇಳಿಕೆಗನುಗುಣವಾಗಿ, ಈ ಸಂದರ್ಭದಲ್ಲಿ 'ಪ್ರತಿಬಿಂಬ' ಎಂದರೆ ಪ್ರತಿ-ಅದೇ ಆದಾದ ಬಿಂಬ (ರೂಪ) ಎಂದು ಅರ್ಥೈಸಬೇಕಾಗುತ್ತದೆ.

ಆದರೆ, ಇನ್ನೊಂದೆಡೆ, ಕವಿಯು ಸಂದೇಹಕ್ಕೆ ಅವಕಾಶವಿಲ್ಲದಂತೆ 'ಜಲರುಹಾಕ್ಷನ ಬಿಂಬ ನೀವ್ ಎಂಬುದ ನಾವ್ ಬಲ್ಲೆವು' ಎಂದು ಅತಿಕಾಯನಿಂದ ಹೇಳಿಸಿದ್ದಾನೆ.[4]

ಹಾಗೆಯೇ ಲಕ್ಷ್ಮಣನನ್ನು—ಮಾಧ್ವತತ್ತ್ವ ಸಂಬಂಧಿಯಾಗಿ 'ಸಿರಿ ನಾರಾಯಣನ ಅಂಶೀಭೂತ' ಎಂದೇ ವರ್ಣಿಸಲಾಗಿದೆ.[5]

## ಶೂನ್ಯವಾದದ ಖಂಡನೆ

೧. ಕೆಣಕುವನ್ನಬರಿವರು ಬಲು ಸೈ
ರಣೆಯಲಿರ್ದುದು—ಶೂನ್ಯವಾದದ
ಕುಣಿಕೆಗೌಕುವ ತತ್ತ್ವಮಯ ಸಿದ್ಧಾಂತದೊಡ್ಡವದ
ಭಣಿತೆಯಲಿ[6]......

೨. ಮಾಯಾ ವಿಲಾಸದ ಬಲೆಗೆ ಬೀಳದೆ ಬಹುದು (ಅತಿಕಾಯನ ಕರೆ)[7]

೩. ಮಾಯೆ ಹೊಗದ ನಿಜೈಕ ಶರಣ[8]

---

ಮಾಧ್ವಶ್ರದ್ಧೆಯವರು-ಹನುಮ, ಭೀಮ, ಮಧ್ವ—ಇವರು ಮೂವರೂ ಅನುಕ್ರಮವಾಗಿ ವಾಯುವಿನ ಅವತಾರ ರೂಪಗಳೆಂದು ನಂಬುತ್ತಾರೆ. (ಪ್ರಥಮೋ ಹನುಮನ್ನಾಮ್ನ ದ್ವಿತೀಯೋಭೀಮ ಏವ ಚ
ಪೂರ್ಣಪ್ರಜ್ಞ ತೃತೀಯಸ್ತು ಭಗವತ್ಕಾರ್ಯ ಸಾಧಕಃ)

ಕುಮಾರ ವಾಲ್ಮೀಕಿಯು ಈ ಭಾವನೆಗೆ ಪೋಷಕವಾಗುವಂತೆ ತನ್ನ ಕೃತಿಯಲ್ಲಿ (೧-೧-೪) ಮುಖ್ಯಪ್ರಾಣ ಸ್ತುತಿಮಾಡಿದಂತಿದೆ.

ಉದಧಿ ಲಂಘನನವನಿಜಾಸಮ್ಮುದವಿವರ್ಧನ ವೈರಿಭಟಗಜ.
ವಿದಳನೋದ್ಧತ ಸಿಂಹ ಲಂಕಾನಗರ ನಿರ್ದಹನ—
ಕದನ ಕರ್ಕಶ ಭೀಮ ರಿಪುದಶವದನ ದರ್ಪವಿರಾಮರಾಘವ
ಪದ ಸರೋಜಭ್ರಮರ ಭುವನ ಪ್ರಾಣಜಂ ವಂದೇ...

ಇದರಲ್ಲಿ ಹನುಮಂತ, ಭೀಮ, ಮಧ್ವರ ವಿಚಾರ ಅನುಕ್ರಮವಾಗಿ ಸೂಚಿತವಾಗಿದೆ ಎನಿಸುವುದಲ್ಲವೇ ?.

(ರಾಘವ ಪದಸರೋಜ ಭ್ರಮರ-ರಾಮಚಂದ್ರಮೂರ್ತಿಯನ್ನು ಮಧ್ವಾಚಾರ್ಯರು ಆರಾಧಿಸಿದ ವಿಚಾರ ಮಧ್ವವಿಜಯ-೧೫-೧೨೯ ಮತ್ತು ೧೫ ೧೩೮ ಗಳಲ್ಲಿದೆ. ಭ್ರಮರ ಮತ್ತು ಮಾಧ್ವ ಪದಗಳು ಸಾಮ್ಯ ಸೂಚಿಸುತ್ತವೆ. ಅಲ್ಲದೆ ಮಧ್ವಾಚಾರ್ಯರನ್ನು ಮುಂದೆ ಸ್ತುತಿಸುವಲ್ಲಿ (I ೧-೭) ವಿಶ್ವಂಭರ ಪದಾಂಬುಜ ಭೃಂಗ ಎಂದೇ ವಿಶೇಷಿಸಲಾಗಿದೆ.)

1. ಬ್ರಹ್ಮಸೂತ್ರಾನುಭಾಷ್ಯ-೩-೨-೧೦೧–೧೨೦, ೧೨೧, ೧೨೪, ೧೨೭.
   ಭಾರತ ತಾತ್ಪರ್ಯ ನಿರ್ಣಯ-೧-೧೪. ೧-೧೫.
2. ತೊ. ರಾ. IV ೪-೫೩.
3. 'ನ ಭೇದೇನ ಕಥಂಚನ...ಬ್ರಹ್ಮಸೂತ್ರಾನು ವ್ಯಾಖ್ಯಾನ–III ೪-೪-೧೪೨
4. ತೊ. ರಾ. VI ೩೪–೭೫.
5. ತೊ. ರಾ. VI ೩೪–೫೬.
6. ತೊ. ರಾ. VI ೧೮-೯.
7. ತೊ. ರಾ. VI ೩೪-೩೨.
8. ತೊ. ರಾ. VI ೩೮-೧೭.

ಈ ಮೇಲಿನ ಹೇಳಿಕೆಗಳಲ್ಲಿ ಕುಮಾರ ವಾಲ್ಮೀಕಿಯು 'ಶೂನ್ಯವಾದ' ಮತ್ತು 'ಮಾಯಾವಾದ'ಗಳನ್ನು ವಿಡಂಬನೆಗೆ ಗುರಿಪಡಿಸಿದಂತೆ ತೋರುತ್ತದೆ[1]

ಮಾರೀಚನ ನುಡಿಗಳಲ್ಲಿ 'ಅಲ್ಪವಾದಿಯ ಮಾಯೆ'–ಎಂಬ ಉಲ್ಲೇಖವಿದೆ.[2]

ಇನ್ನೊಂದೆಡೆ,

> ಕಂಡೆನ್ನೆ ಕಲ್ಯಾಣನಿಲಯನ...
> ಕಂಡೆನ್ನೆ ಕಂಡವರ ಮಾಯಾ ಖಂಡನವ ಮಾಡುವ ಮಹಾತ್ಮನ....[3]

ಎಂಬ ಪ್ರಾರ್ಥನೆಯಿದೆ.

ಕುಮಾರ ವಾಲ್ಮೀಕಿಯು 'ಮಾಯೆ' ಎನ್ನುವ ಪದವನ್ನು ಮಧ್ವಾಚಾರ್ಯರ ರೀತಿಯಿಂದ ಭಗವದಿಚ್ಛೆ (ಲಕ್ಷ್ಮಿ) ಎಂಬ ಅರ್ಥದಲ್ಲಿ ಬಳಸಿದ್ದನ್ನು ಈ ಮೊದಲೇ ವಿವೇಚಿಸಲಾಗಿದೆ' ತತ್ತ್ವ ಪ್ರಚಾರದ ಭರದಲ್ಲಿ–ಕುಮಾರ ವಾಲ್ಮೀಕಿಯು ತಾನು ಒಲ್ಲದ ಇತರ 'ವಾದ'ಗಳನ್ನು ಟೀಕಿಸಲು ತನ್ನ ಕೃತಿಯನ್ನು ಸ್ವಲ್ಪಮಟ್ಟಿಗೆ ಬಳಸಿಕೊಂಡಂತೆ ತೋರುತ್ತದೆ. ಸಾಮಾನ್ಯವಾಗಿ ಎಲ್ಲ 'ಪ್ರಚಾರಕರೂ' ಒಳಗಾದ ದೌರ್ಬಲ್ಯಕ್ಕೆ ಈ ಕವಿಯೂ ಹೊರತಲ್ಲ ಎಂದು ಮಾತ್ರ ಹೇಳಬಹುದು.

---

1. ಶ್ರೀಮಧ್ವಾಚಾರ್ಯರು 'ಉಪಾಧಿ ಖಂಡನ,' 'ಮಾಯಾ ವಾದ ಖಂಡನ,' ಮಿಥ್ಯಾತ್ವಾನುಮಾನ ಖಂಡನ ಎಂಬ ಕೃತಿಗಳನ್ನು ಬರೆದುದನ್ನು ಇಲ್ಲಿ ಸ್ಮರಿಸಬಹುದು.

   ಬ್ರ. ಸೂ. ೪–೨–೪೩, ೪–೨–೩೯ ಮತ್ತು ವಿಷ್ಣುತತ್ತ್ವ ವಿನಿರ್ಣಯದ ೧–೪೨೯, ೧–೪೩೩, ೧-೪೩೪ರಲ್ಲಿ ಶೂನ್ಯ ಮಾಯಾವಾದಗಳ ಖಂಡನೆಯಿದೆ. (ನ ಚ ಶೂನ್ಯ ಪರಿಜ್ಞಾನಾಚ್ಛೂನ್ಯ ಭಾವನಯಾಪಿ ಚ...ಬ್ರ. ಸೂ. ೩–೩–೨೯-೧೫೫)
2. ಇದೇ ಅಧ್ಯಾಯದ 'ಲಕ್ಷ್ಮೀ ತತ್ತ್ವ–ಮಾಯೆಯ ವ್ಯಾಖ್ಯೆ' ಪ್ರಕರಣ ನೋಡಬಹುದು.
3. ತೊ. ರಾ. I ೧೦–೪ ನನಗೆ ದೊರೆತ ೨ ತಾಳೆಗರಿ ಪ್ರತಿಗಳಲ್ಲಿ ಮಾತ್ರ ಈ ಪದ್ಯ ದೊರೆಯುತ್ತದೆ.

# ಅಧ್ಯಾಯ ೬-ಅಧ್ಯಯನದ ಫಲಶ್ರುತಿ

## ಸಮಾರೋಪ : ಕನ್ನಡ ಸಾಹಿತ್ಯದಲ್ಲಿ ತೊರವೆ ರಾಮಾಯಣದ ಸ್ಥಾನ

ಕುಮಾರ ವಾಲ್ಮೀಕಿಯ ' ತೊರವೆ ರಾಮಾಯಣ 'ದ ಅಧ್ಯಯನದಿಂದ ಬೆಳಕಿಗೆ ಬಂದ ಮುಖ್ಯಾಂಶಗಳು :

೧. ವಾಲ್ಮೀಕಿ ರಾಮಾಯಣವು ಕನ್ನಡಿಗರಿಗೆ ತಮ್ಮ ಭಾಷೆಯಲ್ಲಿ ಮೊತ್ತಮೊದಲಿಗೆ ಸಿಗುವಂತಾದುದು-ತೊರವೆ ರಾಮಾಯಣದಿಂದಲೇ. ಇದರ ರಚನಾಕಾಲ. ಸು. ಕ್ರಿ.ಶ. ೧೫ನೇ ಶತಕದ ಮಧ್ಯಭಾಗ

೨. ವಾಲ್ಮೀಕಿ ರಾಮಾಯಣದೊಂದಿಗೆ ಕವಿಯು ತನ್ನ ಕೃತಿಯಲ್ಲಿ ಪ್ರಚಲಿತ ಸಂಸ್ಕೃತ ರಾಮಾಯಣಗಳ ಸತ್ತ್ವವನ್ನೂ ತುಂಬಿದ್ದಾನೆ. ಈ ಕೃತಿಯಲ್ಲಿನ-ಆದಿಕಾವ್ಯಕ್ಕೆ ಹೊರತಾದ ಕಥಾವೈಶಿಷ್ಟ್ಯಗಳಿಗೆ ಕುಮಾರ ವಾಲ್ಮೀಕಿಯ ' ಭಕ್ತ ಮನೋಧರ್ಮ 'ವೇ ಕಾರಣ.

೩. ಕವಿಯು ತಾನು ಬಾಳಿದ ಕಾಲದ ಮುಖ್ಯ ಜೀವನ ಮೌಲ್ಯಗಳೆನಿಸಿದ್ದ ' ನನ್ನಿ ' ಮತ್ತು ' ಬೀರ 'ಗಳನ್ನು ತನ್ನ ಕೃತಿಯ ಸಾಮಾಜಿಕ ಚಿತ್ರಣದ ಚೌಕಟ್ಟಿನಲ್ಲಿ ಪ್ರತಿಬಿಂಬಿಸಿದ್ದಾನೆ.

೪. ಕುಮಾರ ವಾಲ್ಮೀಕಿಗೆ ಕುಮಾರವ್ಯಾಸನು ಮಾರ್ಗದರ್ಶಕ, ಮಧ್ವಾಚಾರ್ಯರು ತತ್ತ್ವ ದರ್ಶಕರು.

೫. " ತೊರವೆ ರಾಮಾಯಣ "ದ ನಂತರ ಕನ್ನಡದಲ್ಲಿ ರಚಿತವಾದ-ಬಹುಮಟ್ಟಿಗೆ ಎಲ್ಲಾ " ರಾಮ ಕಥಾ ಸಾಹಿತ್ಯ "ದಲ್ಲಿ ಈ ಕೃತಿಯ ಪ್ರಭಾವವು ವ್ಯಕ್ತವಾಗುತ್ತದೆ. ಕನ್ನಡ ನಾಡಿನ ವಿಶಿಷ್ಟ ಕಲೆಯೆನಿಸಿರುವ " ಯಕ್ಷಗಾನ-ಬಯಲಾಟ "ಗಳಿಗೆ ಸಂಬಂಧಿಸಿದಂತೆ, ರಾಮಾಯಣ ಕಥಾನಕಗಳುಳ್ಳ ಎಲ್ಲ " ಪ್ರಸಂಗ "ಗಳಲ್ಲಿಯೂ ತೊರವೆ ರಾಮಾಯಣದ " ಅನುಸರಣೆ " ಸ್ಪಷ್ಟವಾಗಿದೆ. ಯಕ್ಷಗಾನ ಕವಿಗಳ ಪಾಲಿಗೆ ಕುಮಾರ ವಾಲ್ಮೀಕಿಯೇ " ಆದಿಕವಿ." ಹೀಗೆ ಒಟ್ಟು ೨೧ ಕೃತಿಗಳ ಸೃಷ್ಟಿಯಲ್ಲಿ ಕುಮಾರ ವಾಲ್ಮೀಕಿಯ ರಾಮಾಯಣವು ಪ್ರೇರಕ ಶಕ್ತಿಯಾಗಿ ನಿಂತಿದೆ.

೬. " ವೈಷ್ಣವ-ಅತಿಕಾಯ " ಪಾತ್ರ ಕಲ್ಪನೆಯು ಕುಮಾರ ವಾಲ್ಮೀಕಿಯ ವಿಶಿಷ್ಟವಾದ " ಕಾಣ್ಕೆ ".

೭. ಪ್ರಾಚೀನ ಕ್ಷೇತ್ರವಾದ " ತೊರವೆ "ಯ ಗತವೈಭವದ ನೆನಪು ಮತ್ತು " ನರಹರಿ "ಯ ದಿವ್ಯಸ್ಮರಣೆಗಳು ಕುಮಾರ ವಾಲ್ಮೀಕಿಯ ತೊರವೆ ರಾಮಾಯಣ ದಿಂದ ನಿತ್ಯನೂತನತೆಯನ್ನು ಪಡೆದಿವೆ.

೮. ತೊರವೆ ರಾಮಾಯಣವು " ಮಹಾಕಾವ್ಯ "ವಾಗಿ ಸಾಹಿತ್ಯಜ್ಞರ ದೃಷ್ಟಿಯನ್ನು ತನ್ನೆಡೆಗೆ ಸೆಳೆಯದಿದ್ದರೂ, " ಕವಿಯೇ ಆಶಿಸಿದಂತೆ " ಅಜ್ಞರಿಗೆ ಹರುಷೋದಯಂ ಹೆಂಪು "-ಆಗಿ (ತೊರವೆ ರಾಮಾಯಣವು) ಸಾಮಾನ್ಯ ಜನತೆಯ ಹೃದಯ ಪೀಠದಲ್ಲಿ ಮನೆಮಾಡಿಕೊಂಡಿದೆ. " ಹೀಗೆ ಜನಸಾಮಾನ್ಯ ಕೃತಿಯಾಗಿ-ಜೀವಂತ ಕೃತಿಯಾಗಿ-ಉಳಿಯುವುದೇನೂ ಕವಿಗೆ ಸಣ್ಣ ಪ್ರಶಸ್ತಿಯಲ್ಲ. ಕುಮಾರ ವಾಲ್ಮೀಕಿಯ ಕೃತಿಯ ಯಶಸ್ಸು " ಗೌರೀಶಂಕರ "ದಂತೆ ಗಗನಚುಂಬಿಯಂತೆ ; ಅದರ ಯಶಸ್ಸು-" ಸರಸ್ವತಿಯಂತೆ ಗುಪ್ತಗಾಮಿನಿ ".

೯. ವಾಚ್ಯಾರ್ಥ ಪ್ರಧಾನವಾದ " ತೊರವೆ ರಾಮಾಯಣ "ದ ಪರಿಚಯದಿಂದ, ವ್ಯಂಗ್ಯಾರ್ಥ- (ಧ್ವನಿ) ಪ್ರಧಾನವಾದ ಮಹಾಕೃತಿಗಳ ಅಭ್ಯಾಸ, ಮನನಗಳು ಹೆಚ್ಚು ಸುಗಮವಾಗುತ್ತವೆ ಎನ್ನುವುದು ಗಮನಾರ್ಹವಾಗಿದೆ.

೧೦. ಕನ್ನಡದ ಜನಕ್ಕೆ " ರಾಮಕಥೆ "ಯನ್ನೂ " ರಾಮನಾಮ ಸುಧೆ "ಯನ್ನೂ ನೀಡುವ ಸೀಮಿತ ಉದ್ದೇಶ ಕುಮಾರ ವಾಲ್ಮೀಕಿಯದು. ಆ ಉದ್ದೇಶದಲ್ಲಿ ಸಾರ್ಥಕನಾದ ಧನ್ಯತೆ ಅವನ ಪಾಲಿಗಿದೆ.

೧೧. ಗಮಕ, ಕಾವ್ಯ, ವಾಚನ, ರಾಮಾಯಣ ಪ್ರವಚನ, ಬಯಲಾಟ, ತಾಳ ಮದ್ದಳೆಗಳಲ್ಲಿ ಕುಮಾರ ವಾಲ್ಮೀಕಿಯ ನೆನಪು ಮತ್ತೆ, ಮತ್ತೆ ಚಿಗುರಿಕೊಳ್ಳುತ್ತಿದೆ.

೧೨. ಒಟ್ಟಿನಲ್ಲಿ, ಕನ್ನಡದಲ್ಲಿ " ರಾಮಕಥಾ ಸಾಹಿತ್ಯ " (ವಾಲ್ಮೀಕೀಯ)ಕ್ಕೆ "ನಾಂದಿ ಹಾಡಿದ" ಕವಿ ಕುಮಾರ ವಾಲ್ಮೀಕಿಗೆ (ಈ ತನಕ ವ್ಯಕ್ತವಾಗದೆ ಇರುವ) ಪ್ರತ್ಯೇಕವಾದ ಸ್ಥಾನ, ಗೌರವ ಸಲ್ಲಬೇಕು.

ಇದು ಈ ಅಧ್ಯಯನದ ಫಲಶ್ರುತಿ.

## ತೊರವೆ ರಾಮಾಯಣದ ಹಿನ್ನೆಲೆ ಮತ್ತು ಮುನ್ನೆಲೆ.

(ಕೃತಿಯಲ್ಲಿ ಪರಂಪರೆಯ ಸತ್ತ್ವ– ಮತ್ತು ಕೃತಿಯ ಪ್ರಭಾಮಂಡಲ.)

ಆದಿಕಾವ್ಯ ವಾಲ್ಮೀಕಿ ರಾಮಾಯಣ.




ರಾಮಾಯಣ ಕಥಾನಕವುಳ್ಳ ಯಕ್ಷಗಾನ ಪ್ರಸಂಗಗಳು.

1. ಪುತ್ರಕಾಮೇಷ್ಟಿ ಮತ್ತು ಸೀತಾ ಕಲ್ಯಾಣ.
2. ಪಾದುಕಾಪಟ್ಟಾಭಿಷೇಕ.
3. ಪಂಚವಟಿ– ಖರದೂಷಣ ಕಾಳಗ
4. ವಾಲಿಸುಗ್ರೀವರ ಕಾಳಗ.
5. ಚೂಡಾಮಣಿ–ಲಂಕಾದಹನ.
6. ಸೇತುಬಂಧನ.
7. ಅಂಗದಸಂಧಾನ.
8. ನಾಗಾಸ್ತ್ರಕುಂಭಕರ್ಣ ಕಾಳಗ.
9. ಕುಂಭಕರ್ಣ ಕಾಳಗ.
10. ಅತಿಕಾಯ ಕಾಳಗ.
11. ಇಂದ್ರಜಿತು ಕಾಳಗ.
12. ಕಾಲನೇಮಿ ಕಾಳಗ.
13. ರಾವಣ ವಧೆ
14. ಶ್ರೀರಾಮ ಪಟ್ಟಾಭಿಷೇಕ.

ಅನುಬಂಧ-೧


ಇಂದಿನ ತೊರವಿಯ (ಗುಹಾಂತರ್ಗತ) ನರಹರಿ ದೇವಾಲಯದ ರೇಖಾ ಚಿತ್ರ.
ಪ್ರಮಾಣ: 1" = ೮ ಅಡಿಗಳು.
N
ನವರಸಪುರ
ತೊರವಿ ಗ್ರಾಮ
20'
10'
40'
1
2
3
4
5
6
7
8
9
ನೆಲಮಟ್ಟಕ್ಕಿಂತ ಕೆಳ ಸು. ೮ ಅಡಿ ಆಳದ ಭಾಗ.
1. ದೇವಾಲಯದ (ಇಂದಿನ) ಹೆಬ್ಬಾಗಿಲು - ಅರ್ವಾಚೀನ ರಚನೆ.
2. ಗುಹೆ (ಸುರಂಗದ) ಯ ಮೆಟ್ಟಿಲು.
3. ಸು. ೮ ಅಡಿ ಆಳದ ೨೩ ಅಡಿ ಉದ್ದ, 1·5 ಅಡಿ ಅಗಲದ ಸುರಂಗ.
4. ಭಕ್ತರು ನಿಲ್ಲುವ ಜಾಗ.
5. ಲಿಂಗ - ದೂರ್ವಾಸ (ಅಶ್ವತ್ಥ) ನೆಂಬ ಪ್ರತೀತಿ.
6. ನರಹರಿ ಮೂರ್ತಿ - ಉತ್ತರಾಭಿಮುಖವಾಗಿ.
7. ನರಸಿಂಹ ತೀರ್ಥಕ್ಕೆ ಸುರಂಗ ಮಾರ್ಗ (ಇರಬಹುದೆಂಬ ನಂಬಿಕೆ)
8. ವೃಂದಾವನ - ವೃಂದಾವನದ ದಕ್ಷಿಣ ಮಗ್ಗುಲಲ್ಲಿ (ನರಹರಿಗೆ ಅಭಿಮುಖವಾಗಿರುವಂತೆ) ಹನುಮಂತನ ಮೂರ್ತಿ ಕೊರೆಯಲಾಗಿದೆ.
9. ನರಸಿಂಹದೇವರ ಗುಡಿಯ ಬಾವಿ - ಇತ್ತೀಚಿನ ರಚನೆ.

## ಅನುಬಂಧ-೨

### ತೊರವೆ ರಾಮಾಯಣದ ತಾಳೆಗರಿ ಪ್ರತಿಗಳು, ಅವುಗಳ ವಿಚಾರ, ಪಾಠಾಂತರಗಳು.

ನಾನು ಪ್ರತ್ಯೇಕವಾಗಿ ಪರಿಶೀಲಿಸಿದ ತಾಳೆ ಓಲೆ ಪ್ರತಿಗಳ ಸಂಕ್ಷಿಪ್ತ ಪರಿಚಯವನ್ನು ಇಲ್ಲಿ ಕೊಡಲಾಗಿದೆ. ಅಭ್ಯಾಸಕ್ಕಾಗಿ ಅವುಗಳನ್ನು ಒದಗಿಸಿದ ಮಹನೀಯರಿಗೆ ನಾನು ಕೃತಜ್ಞನಾಗಿದ್ದೇನೆ.

| ಸಂ. | ತಾಳೆಗರಿಪ್ರತಿಯ ಪರಿಚಯ | ಗಾತ್ರ ಮತ್ತು ವೈಶಿಷ್ಟ್ಯಗಳು. |
|---|---|---|
| ೧. | ಶ್ರೀ ಕೆ. ವೆಂಕಟರಾಯಚಾರ್ಯ, ಸುರತ್ಕಲ್ ಒದಗಿಸಿದ್ದು. ತೊ. ರಾ.ದ ಮುದ್ರಿತ ಪ್ರತಿಯ ೬.೫೫-೭೭ರ ಷಟ್ಪದಿಯಲ್ಲಿ ವರ್ಣಕ ಎನ್ನುವ ಪದ ೨ಸಾರಿಬಂದು ಅರ್ಥಕಲ್ಪನೆಗೆ ತೊಡಕಾಗುತ್ತದೆ. ಇದರಲ್ಲಿ ಎರಡನೆಯ ಸಂದರ್ಭದಲ್ಲಿ "ಮಗುಳೆಣಿಸುವರೆ ವಸ್ತುಕಕೆ" ಎಂಬ ಸರಿಯಾದ ಪಾಠ ಇದರಲ್ಲಿ ಮಾತ್ರ ದೊರೆಯುತ್ತದೆ. | ೨೭" .೧೮"–೧೬೭ ಹಾಳೆಗಳು. ಮುದ್ರಿತ ಪ್ರತಿಯ ೪೭ ಮತ್ತು ೪೮ (ಯುದ್ಧಕಾಂಡ) ಸಂಧಿಗಳ ನಡುವೆ ಮೈರಾವಣ ಕಾಳಗ ಬರೆಯಲ್ಪಟ್ಟಿದೆ. ಕಾಲ ಸೂಚನೆ, ಬರೆದವನ (ಪ್ರತಿಕಾರನ) ಹೆಸರು ಇಲ್ಲ. ಕೊನೆಯಹಾಳೆ ಜೀರ್ಣಗೊಂಡಿದೆ.<br>ಸಂಕೇತಾಕ್ಷರ ಕ |
| ೨. | ಹಾಲಿ ಕುಳಾಯಿಯಲ್ಲಿರುವ ಶ್ರೀ ಎಂ. ಸದಾಶಿವರಾಯರಲ್ಲಿಂದ ಪಡೆದುದು.<br>ಮುದ್ರಿತ ಯುದ್ಧಕಾಂಡದ ೪೭ನೇ ಸಂಧಿಯ ನಂತರ–ಇದರಲ್ಲಿ "ಮೈರಾವಣ ಕಾಳಗ" (೧೨೫ ಪದ್ಯಗಳಲ್ಲಿ)ವನ್ನು ಬರೆಯಲಾಗಿದ್ದು ೧೨೪ನೇ ಪದ್ಯದ ಕೊನೆಯಲ್ಲಿ "ತೊರವೆಯ ರಾಯ ನರಹರಿ"–ಎಂಬ ಅಂಕಿತವನ್ನೂ ಅಳವಡಿಸಿಕೊಳ್ಳಲಾಗಿದೆ. | ೨೦" .೨" ಮೊದಲ ಹಾಳೆಯ ಒಂದನೆ ಸಾಲಿನಂಶ ಹರಿದಿದೆ. ಸ್ಥಳೀಯ ದೇವತೆಗಳಾದ ಸುರತಕಲ್ಲು ವಿನಾಯಕ, ಇಡ್ಯ ಮಹಾಲಿಂಗೇಶ್ವರರ ಸ್ಮರಣೆ ಇದೆ. ವಿಕೃತಿ ಸಂವತ್ಸರದ ಶಾ. ಶಕ. ೧೭೫೩ ಶ್ರಾವಣ ಶುದ್ಧ ೨, ಬೃಹಸ್ಪತಿವಾರದಂದು ಮುಗಿಸಿದುದಾಗಿ ಇದೆ.<br>ಸಂಕೇತಾಕ್ಷರ ಖ |
| ೩. | ಸುರತ್ಕಲ್ ಪುಂಡರೀಕ ಕಾಮತರಲ್ಲಿಂದ ಪಡೆದುದು. ಚಿತ್ರಾಪುರ ಶ್ರೀ ದುರ್ಗಾಪರಮೇಶ್ವರಿ, ಅಮ್ಮನವರು, ಇಡ್ಯ ಮಹಾಲಿಂಗೇಶ್ವರ, ಸುರತ್ಕಲ್ಲು ವಿನಾಯಕ ಇವರ ಸ್ಮರಣೆ ಇದೆ.<br>ಪ್ರತಿಮಾಡಲು ಸುಮಾರು ೮ ವರ್ಷಗಳ ಅವಧಿ ಬೇಕಾದಂತೆ ತಿಳಿಯುತ್ತದೆ. | ೨೧" .೨" ರಕ್ತಾಕ್ಷಿ ಸಂವತ್ಸರದ ಮಾಘ ಶುದ್ಧ ೭ ಗುರುವಾರ ವಾಲ್ಮೀಕಿ ರಾಮಾಯಣ ಬರೆಯುವುದಕ್ಕೆ ಪ್ರಾರಂಭ–ಲಂಕೆ ನರಸಿಂಹ ದೇವರ ಪಾದವೇ ಗತಿ–ಕೊನೆಯಲ್ಲಿ ಅಂಗೀರಸ ಸಂವತ್ಸರದ ಶ್ರಾವಣ ಶುದ್ಧ ೩ ಸೌಮ್ಯ ವಾಸರದಲ್ಲು ರಾಮಯ್ಯ ಕಮ್ತಿಮಗ ಪಾಂಡು ರಂಗನು ಬರೆದ ಪುಸ್ತಕ-ಎಂದಿದೆ.<br>ಸಂಕೇತಾಕ್ಷರ ಗ |
| ೪. | ಬಪನಡೆ ಶ್ರೀ ಬಿ. ಬಾಲಕೃಷ್ಣರಿಂದ ಪಡೆದುದು. ಸಂಧಿ ೧೧೦–ಪದ್ಯಗಳು ೫೦೯೦. | ೧೮.೫" .೧.೭"–೨೫೪ ಹಾಳೆಗಳು. ನಳಸಂವತ್ಸರದ ಮಾಘ ಶು. ೮–ಪರಮೇಶ್ವರ ಕಾರಂತರಮಗ ನಾರಾಯಣನು ಕೊಡೆಯಾಲದ ಜಂನ ಪೈಗೆ ಬರೆದು ಕೊಟ್ಟದು.<br>ಸಂಕೇತಾಕ್ಷರ ಘ |
| ೫. | ಮಂಗಳೂರು ಕೆನರಾ ಹೈಸ್ಕೂಲು "ಸಂಗ್ರಹಾಲಯ"ದ ಸಂಖ್ಯೆ ೩೦ರ ಪ್ರತಿ. | ೨೦" .೨"–೨೪೦ ಹಾಳೆಗಳಲ್ಲಿ ರಾಮಾಯಣ ಮತ್ತು ೭ ಹಾಳೆಗಳಲ್ಲಿ ಮೈ(ಐ)ರಾವಣ ಕಾಳಗವಿದೆ. ಕೊನೆಯಲ್ಲಿ |

ರಾಮಾಯಣ ಬರೆದ ನಂತರ ಪ್ರತ್ಯೇಕವಾದ ೭ ಹಾಳೆಗಳಲ್ಲಿ "ಮೈರಾವಣ ಕಾಳಗ"ವನ್ನು ಬರೆಯಲಾಗಿದೆ. ಕೊಲ್ಲೂರು ಮೂಕಾಂಬಿಕೆಯ ಸ್ತುತಿ ಪ್ರಾರಂಭದಲ್ಲಿದೆ.

೬. ಶ್ರೀ ಕೆ. ವೆಂಕಟರಾಯಾಚಾರ್ಯರು ಒದಗಿಸಿದ ಇನ್ನೊಂದು ಪ್ರತಿ–ಪ್ರಾರಂಭದಲ್ಲಿ ಸಾಲಿಗ್ರಾಮ ನರಸಿಂಹದೇವರ ಸ್ಮರಣೆ ಇದೆ.
ಮುದ್ರಿತ ಪ್ರತಿಯ ೧.೮–೮೩ರಪಾಠದ ಬದಲಾಗಿ "ವರುಷ ಹದಿನಾಲ್ಕರಲಿ" ಎಂದಿದೆ.

೬.೫೫_೬೭ ಹೀಗಿದೆ :

ಸುರಸುವರ್ಣಕಕವಿಗಳೊಳು ಭಾ
ಸುರ ಕುಮಾರವ್ಯಾಸನೊಬ್ಬನು....

ಬರವಣಿಗೆಯ ಸ್ಖಾಲಿತ್ಯ ಬಹಳವಿದೆ.

೭. ಮಂಗಳೂರು ಕೆನರಾ ಹೈಸ್ಕೂಲು "ಸಂಗ್ರಹಾಲಯ"ದ ಪ್ರತಿ. ಒಂದೇ ಕಟ್ಟಿನಲ್ಲಿ
ತೊರವೆ ರಾಮಾಯಣ,
ಐರಾವಣ ಕಾಳಗ,
ಉತ್ತರ ರಾಮಚರಿತ (ತಿರುಮಲೆವೈದ್ಯ)
ಇವು ಮೂರೂ ಪ್ರತ್ಯೇಕವಾಗಿ ಇವೆ.
ಮುದ್ರಿತ ಪ್ರತಿಯ, ೩.೫_೬ರನಂತರ ಶೂರ್ಪನಖಿಯ ಯಾವ ಮಾತೂ ಇಲ್ಲದಿರುವುದು ಅಸಮರ್ಪಕವೆನಿಸುತ್ತದೆ. ಇದೇ ಸಂದರ್ಭದಲ್ಲಿ, ಈ ಪ್ರತಿಯಲ್ಲಿ ಎರಡು ಷಟ್ಪದಿಗಳಿವೆ.
ಯುದ್ಧಕಾಂಡ ೪೪–೧೧ರ ಎರಡನೆ ಪಾದದಲ್ಲಿ ಕೆಡಹಿದುತ್ಸವ ದರ್ಪಗಿರಿಗಿದೆ
ಸಿಡಿಲು—ಈ ಸರಿಯಾದ ಪಾಠ ಇದರಲ್ಲಿದೆ.

"ವಾಲ್ಮೀಕಿ ರಾಮಾಯಣ ಪ್ರಸಂಗ ಖಂಡ ೩.೯(?) ಸಂಧಿ ೧೧೫ಕ್ಕಂ ಪದ ೬೦೦ಕ್ಕಂ ಮಂಗಳಂ–ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರ್ಷೆಯ....... ಇಷ್ಟಕ್ಕೇ ನಿಲ್ಲಿಸಲಾಗಿದೆ.

ಸಂಕೇತಾಕ್ಷರ ಚ

೨೦".೧.೮"–೨೩೧ ಹಾಳೆಗಳು.
ಕೊನೆಯಲ್ಲಿ ಸಂಧಿ ೧೧೫ಕ್ಕಂ ಪದ ೫೫೬೩ಕ್ಕಂ ಮಂಗಳಂ–ಬರವಣಿಗೆಯ ದೋಷಗಳ ವಿನಾ ವಿಶೇಷ ಪಾಠಾಂತರಗಳಿಲ್ಲ.

ಸಂಕೇತಾಕ್ಷರ ಛ

೨೦".೨" ಶಾಲಿವಾಹನ ಶಕವರ್ಷ ೧೭೧೯–ಬಹುಧಾನ್ಯ ಮಾಘಶುದ್ಧ ೭ರಲ್ಲು ಮಂಜೇಶ್ವರದಲ್ಲಿರುವ ಜೆಳ್ಳಿರೆಪಳಿಪ್ರಭು ಮಗ ದೇವಪ್ಪನು ಬರೆದ ರಾಮಾಯಣ.
ಕೆಲವು ಸಮರ್ಪಕವಾದ ಪಾಠಗಳು ಹೀಗಿವೆ :
೧೯–೧೫ರ ಕೊನೆಯ ಪಾದದಲ್ಲಿ ಪಾವನ 'ಪವನ' ಮುನಿಯಪ್ಪಿದನು.
ಈ ಪ್ರತಿಯಲ್ಲಿ ಶೂರ್ಪನಖಿಯು ಖರನಿಗೆ ಹೇಳುವ **ಮಾತು :**

ರಾಮನೆಂಬಭಿದಾನಗಡವಾ
ಭೂಮಿಪತಿಗವನನುಜ ಲಕ್ಷ್ಮಣ
ನಾಮ ಗಡ ನೃಪನರಸಿ ಸೀತಾದೇವಿಗಡ....

ಸಂಕೇತಾಕ್ಷರ ಜ

ಹಾಗೆಯೇ ಯುದ್ಧಕಾಂಡದ ೫೩–೪೬ರನಂತರ ಅಷ್ಟದಿಕ್ಪಾಲಕರಲ್ಲಿ ಬಿಟ್ಟುಹೋದಂತಿರುವ "ಈಶ"ನ ವರ್ಣನೆ. ಈ ಪ್ರತಿಯಲ್ಲಿ ದೊರೆಯುವ ಈ ಪದ್ಯ ಮೂಲ ಕವಿರಚಿತವಿರಬಹುದೇ ?

೮. ಕೆನರಾ ಹೈಸ್ಕೂಲು 'ಸಂಗ್ರಹಾಲಯ'ದ ಪ್ರತಿ: ಮರವೂರ ಮಹಾಗಣಪತಿ, ಅಡೂರ ಮಹಾಲಿಂಗ, ಕಣಿಪುರದ ಗೋಪಾಲಕೃಷ್ಣ, ಕುಮಾರಮಂಗಲ ಸುಬ್ಬರಾಯ, ಚಂದ್ರಗಿರಿ ಸಾಸ್ತಾವು–ಇವರೆಲ್ಲರ ಸ್ಮರಣೆಇದೆ.

೨೦" ೨.೨"-೧೭೬ ಹಾಳೆಗಳು. ಅಂತೂ ಸಂಧಿ ೧೧೩ಕ್ಕಂ ಪದ ೫೦೭೭ಕ್ಕಂ ಮಂಗಳಂ-ಜಯ ಸಂವತ್ಸರದ ಚೈತ್ರ ಬಹುಳ ೧೦ ಬುಧವಾರ ಈ ಗ್ರಂಥ ಬರೆದು ಮುಗಿಸಿದ್ದು–

ಸಂಕೇತಾಕ್ಷರ ಟ

೯. ಡಾ. ಎಸ್. ಕೆ. ಹಾವನೂರರು ಒದಗಿಸಿದ ತೀರ್ಥಮುತ್ತೂರಿನ ಪ್ರತಿ. ಮುದ್ರಿತ ಪ್ರತಿಯ

೨೧.೫" ೨"-೨೨೨ ಹಾಳೆಗಳು. ಮುದ್ರಿತ ಪ್ರತಿಯ ೬.೫೫-೬೫ಕ್ಕೇ ಇಲ್ಲಿ ಮುಕ್ತಾಯ. ಸಂಧಿ ೧೧೩ ಪದ್ಯ

೬.೪೭-೪೮ರ ನಂತ ಪುಟ (ಪರಿಶಿಷ್ಟ) ೭೩೦ರ ೪೮ನೇ ಸಂಧಿ ಇಲ್ಲಿ ಇದರಲ್ಲಿದೆ.

೫೫೮೫. ಶುಭಕೃತು ಸಂವತ್ಸರ ಫಾಲ್ಗುಣ ಬಹುಳ ೧೪ರಲ್ಲು ಕೋಟಿ ಗುಂಡುಮೆ ವೆಂಕಪ್ಪಯ್ಯ ಬರೆದುದು.

ಸಂಕೇತಾಕ್ಷರ ತ

10. ಕೆನರಾ ಹೈಸ್ಕೂಲು ‘ಸಂಗ್ರಹಾಲಯ’ದ ಪ್ರತಿ. ಇದರಲ್ಲಿ ಸುಮಾರು ೧೨೦ರಷ್ಟು ಪದ್ಯಗಳು ಪ್ರಕ್ಷಿಪ್ತವೆಂದು ಸ್ಪಷ್ಟವಾಗುತ್ತದೆ. ‘ಚೆನ್ನ ರಘುನಂದನ’ ಎಂಬ ಅಂಕಿತದಲ್ಲಿ ಬಾಲ ಕಾಂಡದ ರಾಮಜನನ, ಬಾಲ್ಯ, ಸೀತಾ ವಿವಾಹ, ರಾಮನ ವನಗಮನ ಇತ್ಯಾದಿಗಳನ್ನು ವಿಸ್ತರಿಸಿ, ಕಾಳಿದಾಸನ ‘ರಘುವಂಶ’ದ ಕೆಲವು ಭಾಗಗಳನ್ನೇ ಅನುವಾದಮಾಡಿ ಬರೆಯಲಾಗಿದೆ.

೩೦” ೧.೮” ಇದರಲ್ಲಿ ಯುದ್ಧಕಾಂಡದ ನಡುವೆಯೇ-ಸಂಧಿ ೪೭ರ ನಂತರ ಪ್ರ (ಐ)ರಾವಣಕಾಳಗ ಇದೆ. ರಾಕ್ಷಸ ಸಂವತ್ಸರದ ದಕ್ಷಿಣಾಯನ ಶರದೃತುವಿನ ಆಶ್ವೀಜ ಶು. ೧೦ ಸ್ಥಿರವಾರ ರಾಮಾಯಣ ಪ್ರಬಂಧವನ್ನು ಬರೆದಾತ ಹಾಲಾಡಿತಂಮಣ್ಣ ಭಟ್ಟನ ಮಗ ಅನಂತಯ್ಯ ಬರೆದುದು.

ಸಂಕೇತಾಕ್ಷರ ಡ

ರಘುವಂಶದ ೧೦-೩೩, ೧೦-೬೬, ೧೧-೬, ೮, ೯, ೧೧, ೧೫, ೩೧, ೩೩, ೫೫, ೫೬, ೫೭, ೪೪, ೭೧, ೭೩ ಇವುಗಳ ಅನುವಾದ ಇದೆ. ಉದಾ :

ಲೋಲ ವೀಚಿಗಳೆನಿಸಿ ಬಲುನುಳಿಗಾಲದಲಿ....
ವೀಚಿಲೋಲಭುಜಯೋಸ್ತಯೋರ್ಗತಂ........ ರಘುವಂಶ ೧೧-೮

ಹೀಗೆಯೇ ‘ಮಾಧ್ವ ತತ್ತ್ವ’ವನ್ನು ಹೇಳುವ ೩೪ ಪದ್ಯಗಳು ಪ್ರಕ್ಷಿಪ್ತಗಳಾಗಿವೆ.

೧೧. ಗೋವಿಂದ ದಾಸ ಕಾಲೇಜಿನ ಗ್ರಂಥಶಾಲ ಶ್ರೀ ಪಿ. ಸೋಮಶೇಖರ ರಾವ್-ಪ್ಪೆಂದೂರಿನಿಂದ ಒದಗಿಸಿದ ಪ್ರತಿ.

೩೦” ೧.೮”-೫೧೧ ಹಾಳೆಗಳು ಶಾ. ಶ. ೧೭೭೯ನೆ ಪಿಂಗಲಿ ಸಂವತ್ಸರದ ಕಾರ್ತಿಕ ಶುದ್ಧ ೧೫ಯು ಸ್ಥಿರವಾರ ಬರೆದಾತ ಹಾಲಾಡಿ ಗ್ರಾಮದ ಶಾನು ಹಂಜಾರನ ಮಗ ಶಂಕರನಾರಾಯಣ-ಸಂಧಿ ೧೧೬ಕ್ಕಂ ೫೭೬೩ ಪದ್ಯಕ್ಕಂ ಮಂಗಲಂ.

ಸಂಕೇತಾಕ್ಷರ ಥ

ಈ ತಾಳೆಗರಿ ಪ್ರತಿಗಳನ್ನು ಅವು ಪ್ರತಿಗೊಂಡ (ದೊರಕಿದ) ಸ್ಥಳಗಳು ಮತ್ತು ಆ ಪ್ರತಿಗಳಲ್ಲಿ ಸ್ಮರಿಸಲಾದ ಪ್ರಾದೇಶಿಕ ದೇವತೆಗಳ ದೃಷ್ಟಿಯಿಂದ ಮೂರು ಗುಂಪುಗಳನ್ನಾಗಿ ಮಾಡಬಹುದು.

೧. “ಕೊಲ್ಲೂರು” ಮೂಕಾಂಬಿಕೆ (ಕುಂದಾಪುರ ತಾಲ್ಲೂಕು)ಯನ್ನು ಸ್ತುತಿಸಿದ ಆ ಭಾಗದ ಪ್ರತಿಗಳು-ಉದಾ : ಚ, ಛ, ಡ, ಥ-ಪ್ರತಿಗಳು.

೨. “ಚಿತ್ರಾಪುರ” ಅಮ್ಮನವರು ಮತ್ತು ಸುರತ್ಕಲ್ ಗಣಪತಿಯರನ್ನು ಸ್ತುತಿಸಿದ ಈ ಪ್ರದೇಶದ, (ಮಂಗಳೂರು ತಾಲ್ಲೂಕು-ಸುರತ್ಕಲ್-ಪಣಂಬೂರುಗಳ) ಪ್ರತಿಗಳು.

ಉದಾ : ಕ, ಖ, ಗ, ಘ, ಪ್ರತಿಗಳು.

೩. ಹಾಲಿ ಕೇರಳ ರಾಜ್ಯದಲ್ಲಿರುವ ಕಾಸರಗೋಡು ತಾಲ್ಲೂಕು ಮದವೂರು, ಮಂಜೇಶ್ವರಗಳ ವಲಯದ (ಆ ಭಾಗದ ದೇವತೆಗಳನ್ನು ಸ್ತುತಿಸಿದ) ಪ್ರತಿಗಳು. ಉದಾ : ಜ, ಟ, ಪ್ರತಿಗಳು. ತ ಪ್ರತಿಯನ್ನು ಒಂದನೆಯ ಗುಂಪಿಗೆ ಸೇರಿಸಬಹುದು.

### ವಸ್ತುವಿನ ದೃಷ್ಟಿಯಿಂದ

ತೊರವೆ ರಾಮಾಯಣವನ್ನು ಮಾತ್ರ ಹೇಳುವ ಪ್ರತಿಗಳು : ಗ, ಘ, ಛ, ಟ, ಠ ಪ್ರತಿಗಳು.

ತೊ. ರಾ. ದೊಂದಿಗೆ ಮೈರಾವಣಕಾಳಗವನ್ನು ಪ್ರತ್ಯೇಕವಾಗಿ ಒಳಗೊಂಡ ಪ್ರತಿಗಳು : ಚ, ಜ ಪ್ರತಿಗಳು.

ತೊರವೆ ರಾಮಾಯಣದ ಒಳಗೇ ಕಥಾಮಧ್ಯದಲ್ಲಿ ಮೈರಾವಣಕಾಳಗವನ್ನು ಅಳವಡಿಸಿಕೊಂಡವುಗಳು : ಕ, ಖ, ಡ, ಢ ಪ್ರತಿಗಳು.

ಈ ಎಲ್ಲ ಪ್ರತಿಗಳ ಪರಸ್ಪರ ಸಂಬಂಧವನ್ನು ಹೀಗೆ ಹೇಳಬಹುದು :




### ಅನುಬಂಧ-೩

## ರಾಮಾಯಣದಲ್ಲಿ ಮುಖ್ಯ ಸಂದರ್ಭಗಳ ಕಾಲ ಸೂಚಿ-ತುಲನಾತ್ಮಕ

ವಾಲ್ಮೀಕಿರಾಮಾಯಣದ ಕೆಲವು ಮುಖ್ಯ ವ್ಯಾಖ್ಯಾನಗಳನ್ನು ಪರಿಶೀಲಿಸಿ, ನಾರಾಯಣಾಧ್ವರಿ ಎಂಬುವರು "ಶ್ರೀರಾಮೋತ್ಸವ ರತ್ನಾಕರ" ಎಂಬ ಗ್ರಂಥವನ್ನು ರಚಿಸಿದ್ದಾರೆ. ಅದರಲ್ಲಿ ಸೂಚಿತವಾದ ರಾಮಾಯಣ ಕಥಾ ಸಂದರ್ಭಗಳ ಕಾಲ ಸೂಚಿಯನ್ನು ಈ ಕೆಳಗಿನಂತೆ ಸಂಗ್ರಹಿಸಿ ಹೇಳಬಹುದು. (ವಿದ್ವಾನ್. ಎನ್. ರಂಗನಾಥ ಶರ್ಮರು "ಬಾಲಕಾಂಡ"ಕ್ಕೆ ಅನುಬಂಧವಾಗಿ ಕೊಟ್ಟ ಅಂಶಗಳನ್ನು ಆಧರಿಸಲಾಗಿದೆ).

ಇದರಂತೆಯೇ ಕುಮಾರ ವಾಲ್ಮೀಕಿಯು ಕೆಲವೇ ಸಂದರ್ಭಗಳ ಕಾಲ (ಮುಹೂರ್ತ) ಸೂಚನೆ ಮಾಡಿದ್ದಾನೆ.

| ವಾಲ್ಮೀಕಿ ರಾಮಾಯಣಾನುಸಾರ | ತೊ. ರಾ. ದ ಉಲ್ಲೇಖಗಳು |
|---|---|
| ಚೈತ್ರ ಶುಕ್ಲ ನವಮಿಯ ದಿನ ರಾಮಜನನ. | ಚೈತ್ರ ಸಿತ ಪಂಚಮಿಯಂದು ದಶರಥನಿಂದ ಪುತ್ರಕಾಮೇಷ್ಟಿ ಪ್ರಾರಂಭ. ೧-೭-೪೧. |
| ಇದಕ್ಕೆ ೬ ವರ್ಷಗಳ ನಂತರ ಚೈತ್ರ ಶುಕ್ಲ ಅಷ್ಟಮಿಯ ದಿನ ಜನಕನಿಗೆ ಸೀತೆಯು ದೊರಕಿದಳು. | ಚೈತ್ರಶುದ್ಧ ನವಮಿ ಪುನರ್ವಸುತಾರೆಯಲಿ ರಾಮಜನನ- ೧-೮-೬. |
| ರಾಮನಿಗೆ ಎಂಟನೆಯ ವರ್ಷ ಉಪನಯನವಾಯಿತು. | ರಾಮನಿಗೆ ಹನ್ನೆರಡನೆಯ ವಯಸ್ಸಿನಲ್ಲಿ ಶಸ್ತ್ರಾಭ್ಯಾಸ ೧-೮-೮೩. |

ರಾಮನು ವಿಶ್ವಾಮಿತ್ರನೊಂದಿಗೆ ಯಜ್ಞರಕ್ಷಣೆಗೆ ಹೋದಾಗ ಅವನಿಗೆ ಹನ್ನೆರಡು ವರ್ಷ-ಹನ್ನೆರಡನೆಯ ವಯಸ್ಸಿನಲ್ಲಿ ರಾಮನಿಗೆ ಫಾಲ್ಗುಣ ಶುದ್ಧ ಪೂರ್ಣಿಮಾ ಉತ್ತರಾ ಫಲ್ಗುನೀ ನಕ್ಷತ್ರದಲ್ಲಿ ಸೀತಾ–ವಿವಾಹ.

ವಿವಾಹದ ಮೇಲೆ ೧೨ ವರ್ಷ ಅಯೋಧ್ಯೆಯಲ್ಲಿ ವಾಸ.

ಇಪ್ಪತ್ತೈದನೆಯ ವಯಸ್ಸಿನಲ್ಲಿ ಚೈತ್ರ ಶುಕ್ಲ ಪಂಚಮಿಯ ದಿನ ರಾಮನ ವನಗಮನ.

ಚೈತ್ರಶುಕ್ಲ ದಶಮಿಯ ಅರ್ಧರಾತ್ರಿವೇಳೆಯಲ್ಲಿ ದಶರಥನ ಮರಣ.

ಚೈತ್ರಬಹುಳ ನವಮಿಯಂದು ಭರತನು ಅಯೋಧ್ಯೆಯನ್ನು ಸೇರಿ, ಅಂದೇ ದಶರಥನ ಸಂಸ್ಕಾರ.

ವೈಶಾಖ ಶುದ್ಧ ತ್ರಯೋದಶಿಯಂದು ಭರತನು ಶ್ರೀರಾಮನನ್ನು ಸಂದರ್ಶಿಸಿದ್ದು. ವೈಶಾಖ ಬಹುಳ ಬಿದಿಗೆಯಂದು ಪಾದುಕೆ ಸಹಿತ ಮರುಪ್ರಯಾಣ. ಚತುರ್ಥಿಯಂದು ನಂದಿಗ್ರಾಮಕ್ಕೆ ಬಂದುದು.

ಚಿತ್ರಕೂಟದಲ್ಲಿ ೨ ತಿಂಗಳು, ದಂಡಕಾರಣ್ಯದಲ್ಲಿ ೧೦ ವರ್ಷ ೧೦ ತಿಂಗಳವಾಸ. ರಾಮಲಕ್ಷ್ಮಣಸೀತೆಯರು ಜತೆಯಾಗಿ, ಪಂಚವಟಿಯಲ್ಲಿ ೨ ವರ್ಷ.

೧೪ನೇ ವರ್ಷ, ಚೈತ್ರ ಬಹುಳ ಅಷ್ಟಮಿ ಮಧ್ಯಾಹ್ನ "ಸೀತಾಪಹಾರ". ಜ್ಯೇಷ್ಠ ಶುಕ್ಲ ಪೂರ್ಣಿಮೆದಿನ ವಾಲಿ ಸಂಹಾರ.

ಮಾಲ್ಯವತ್ಪರ್ವತದಲ್ಲಿ ೪ ತಿಂಗಳು ವಾಸ, ಫಾಲ್ಗುಣ ಶುಕ್ಲ ತ್ರಯೋದಶಿ ಹನುಮಂತನಿಂದ ಸಮುದ್ರೋಲ್ಲಂಘನ.

ಫಾಲ್ಗುಣ ಬಹುಳ ಚತುರ್ಥಿಯಿಂದ ಅಷ್ಟಮಿಯ ವರೆಗೆ ಸೇತುಬಂಧನ. ನವಮಿಯಿಂದ ಯುದ್ಧಾರಂಭ ೭ ದಿನಗಳ ವರೆಗೆ ಯುದ್ಧ ಫಾಲ್ಗುಣ ಅಮಾವಾಸ್ಯೆಯಂದು ರಾವಣ ಸಂಹಾರ.

ಚೈತ್ರ ಶುಕ್ಲ ಸಪ್ತಮಿಯಾ ಪುಷ್ಯ ನಕ್ಷತ್ರದಲ್ಲಿ ಶ್ರೀರಾಮ ಪಟ್ಟಾಭಿಷೇಕ.

ವೈಶಾಖ ಸಿತ ಸಪ್ತಮಿಯಂದು ರಾಮನಿಗೆ ಪಟ್ಟಾಭಿಷೇಕ. ತೊ. ರಾ. ೬–೫೫–೧೭

ವಿಶ್ವಾಮಿತ್ರನೊಂದಿಗೆ "ತಿಂಗಳು" ಕಾಲ ಶಿಷ್ಯತ್ವ. ೧-೧೨-೧

ಸೀತಾವಿವಾಹದನಂತರ ೧೨ ವರ್ಷ ಅಯೋಧ್ಯೆಯಲ್ಲಿ ವಾಸ–

ವೈಶಾಖಧವಳಪಕ್ಷದ ಪಂಚಮಿಯ ಅಭಿಜಿತ್ ಲಗ್ನದಲ್ಲಿ ರಾಮನಿಗೆ 'ಅಭಿಷೇಕ' ಎಂದು ದಶರಥನ ಸಂಕಲ್ಪ ೨-೧-೧೪

ವೈಶಾಖ ಸಿತ ಪಂಚಮಿಯ ಘಳಿಗೆ ೧೬ರಲಿ ಪುಷ್ಯದ ಸುಳಿವಿನಲ್ಲಿ ರಾಮನ ವನಗಮನ ೨-೩-೪೯

ಶಂಬುಕ ವಧೆ ನಡೆದಾಗ ವನವಾಸದ ಅವಧಿಯಲ್ಲಿ ೧೨ ವರ್ಷಗಳು ಮುಗಿದುದು. ೩-೩-೨೬

ಸಂಜೆಯಲ್ಲಿ 'ಸೀತಾಪಹಾರ' ೩–೯–೧೮

ಪ್ರಸ್ರವಣಪರ್ವತದಲ್ಲಿ 'ಅಂಬುದಾಗನು'ವ ಕಳೆದರು ೪–೬–೮

ಅವಧಿಗೆ ೧೨ ದಿನ ಮೀರಿತೆಂದು ಸುಗ್ರೀವನಿಂದ ತಪ್ಪೊಪ್ಪಿಗೆ ೪–೬–೨೯

ತಿಂಗಳಿಗೆ ರಾಮನನ್ನು ಲಂಕೆಗೆ ಕರೆತರುವುದಾಗಿ ಸೀತಾಮಾತೆಗೆ ಹನುಮಂತನ ಅಭಯ ೫–೩–೧೦೧

ಗುರುವಿನಭಿಮತಲಗ್ನದಲಿ ನೀಲನಿಗೆ ಕಪಿಸೇನಾಧಿಪತಿ ಪಟ್ಟ. ೬-೧-೫

ಮಾರ್ಗಶಿರ ಶುದ್ಧ ಅಷ್ಟಮಿ ಮಧ್ಯಾಹ್ನ 'ವಿಜಯಾಭಿಯೋಗ'ದಲಿ ವಾನರ ಸೇನಾ ಸಹಿತ ರಾಮನು ಹೊರಟದ್ದು. ೬-೧-೭

ಪುಷ್ಯಶುದ್ಧದ ದಶಮಿಯ ದಿನ ಮುಖದಲಿ ಸೇತು ಪ್ರಾರಂಭ ದಿನ ನಾಲ್ಕರಲಿ ಸಂಪೂರ್ಣ. ೫-೬-೧

ಅನುಬಂಧ–೪

## ಶ್ರೀ ರಾಮ ಜನನ ಕುಂಡಲಿಗಳು

(ಈ ಕುರಿತಾದ ವಿವೇಚನೆ ಇದೇ ಪ್ರಬಂಧದ ಪುಟಗಳಲ್ಲಿದೆ. ಅದಕ್ಕೆ ಅನುಬಂಧವಾಗಿ ಇದು.)

೧. ವಾಲ್ಮೀಕಿ ರಾಮಾಯಣ ರೀತಿಯಿಂದ (ವಾ. ರಾ. ಬಾಲಕಾಂಡ. ಸರ್ಗ ೧೮–೮, ೯, ೧೦.)

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|
| ನಕ್ಷತ್ರ | ಅಶ್ವಿನಿ | ಪು. | ಶ್ರ | ಉ.ಭಾ. | ಪುಷ್ಯ | ರೇ. | ಸ್ವಾ | ಪುಬ್ಬ | ಪೂ.ಭಾ. |
| ಪಾದ | ೩ | ೪ | ೩ | ೩ | ೧ | ೪ | ೪ | ೪ | ೨ |

| | | | |
|---|---|---|---|
| ಬುಧ ಶುಕ್ರ | ರವಿ | | |
| ಕೇತು | ಲಗ್ನ ಕುಂಡಲಿ | | ಲಗ್ನ, ಚಂ, ಗುರು |
| ಕುಜ | | | ರಾಹು |
| | | ಶನಿ | |

| | | | |
|---|---|---|---|
| ಶುಕ್ರ ಶನಿ | | ಕೇತು | ರವಿ ಕುಜ |
| | ಅಂಶ ಕುಂಡಲಿ. | | ಚಂದ್ರ |
| | | | ಗುರು |
| | ರಾಹು | ಬುಧ | |

೨. ಆನಂದ ರಾಮಾಯಣ–ಮನೋಹರ ಕಾಂಡ ೯೭ನೇ ಸರ್ಗ ೯೬. ೯೭. ೯೮. ಶ್ಲೋಕಗಳನ್ನಾಧರಿಸಿ.

| | | | |
|---|---|---|---|
| ಶುಕ್ರ | ರ. ಬು. | | ಕೇ |
| | ಶ್ರೀರಾಮ ಜನನ ಪತ್ರಿಕಾ. | | ಲ. ಗು. ಚ |
| ಕು | | | |
| ರಾ | | ಶ. | |

೩. "ರಾಮ ಚರಿತ ಮಾನಸ"ದ ಬಾಲಕಾಂಡದ ೧೯೬ನೇ ದೋಹೆಯ ಕೆಳಭಾಗ ಚೌಪಾಯಿಯಂತೆ:

| | | | |
|---|---|---|---|
| ಶುಕ್ರ | ರವಿ | ಬುಧ | ರಾಹು |
| | ಶ್ರೀರಾಮ ಜನನ | | ಲ.ಗು.ಚಂ. |
| ಕುಜ | ಪತ್ರಿಕಾ. | | |
| ಕೇತು | | ಶನಿ | |

೪. ಕುಮಾರ ವಾಲ್ಮೀಕಿಯ ತೊರವೆ ರಾಮಾಯಣವನ್ನನುಸರಿಸಿ (ಬಾಲಕಾಂಡ ೮-೬) ಅಪೂರ್ಣಜಾತಕ.

| | | | |
|---|---|---|---|
| | | ರವಿ | |
| | ಶ್ರೀರಾಮ ಜನನ ಪತ್ರಿಕಾ | | ಲ.ಗು.ಬು. |
| ಶುಕ್ರ,ಚಂದ್ರ | ಅಸಮಗ್ರ | | |
| | | | |

ಲಗ್ನ ಹೇಳಿಲ್ಲ, ಕುಜನ ಸ್ಥಾನವನ್ನು ಹೇಳಿಲ್ಲ. ಇದರಂತೆ ಗುರು ಮಾತ್ರ ಉಚ್ಚ, ರಾಜ ಲಕ್ಷಣ ಸೂಚಕವಾದ ಯಾವ ಯೋಗಗಳೂ ಇಲ್ಲಿ ಸೂಚಿತವಾಗುವುದಿಲ್ಲ. ಆದುದರಿಂದ ಅಸಮರ್ಪಕ (?) ಶುದ್ಧ ಪಾಠ ಸಿಕ್ಕಿದರೆ ಸರಿಗೊಳಿಸಬಹುದು.

**ಅನುಬಂಧ–೫**

## ವಾಲ್ಮೀಕಿ ರಾಮಾಯಣದಲ್ಲಿ ಉಲ್ಲೇಖಿತವಾದ ಆಯುಧಗಳು.

| ಆಯುಧಗಳು | ಕಾಂಡ | ಸರ್ಗ | ಶ್ಲೋಕ | ಆಯುಧಗಳು | ಕಾಂಡ | ಸರ್ಗ | ಶ್ಲೋಕ |
|---|---|---|---|---|---|---|---|
| ಅರ್ಧನಾಲಿಕಾ | ೬ | ೨೧ | ೨೬ | ರಿಷ್ಟಿ | ೫ | ೭೦ | ೩೧ |
| ಅಶನಿ | ೬ | ೭೯ | ೪ | ಕಂಕವಾಸ | ೬ | ೨೦ | ೨೫ |
| ಅಸಿ | ೫ | ೪೩ | ೧೮ | ಕರ್ಣಿ | ೫ | ೪೦ | ೭. |
| ಇಷು | ೨ | ೭೦ | ೫೨ | ಕಾರ್ಮುಕ | ೫ | ೪೩ | ೧೬ |
| ಇಷುಧಿ | ೩ | ೭೨ | ೨ | ಕುಠಾರ | ೬ | ೫೨ | ೧೧೧ |

| ಆಯುಧಗಳು | ಕಾಂಡ | ಸರ್ಗ | ಶ್ಲೋಕ | ಆಯುಧಗಳು | ಕಾಂಡ | ಸರ್ಗ | ಶ್ಲೋಕ |
|---|---|---|---|---|---|---|---|
| ಕುಂತ | ೬ | ೭೯ | ೪ | ಮಾರ್ಗಣ | ೬ | ೭೭ | ೧ |
| ಕೂಟ ಮುದ್ಗರ | ೬ | ೭ | ೧೮ | ಮುದ್ಗರ | ೫ | ೪೨ | ೩೧ |
| ಕೂಟ ಯಂತ್ರ | ೬ | ೭೯ | ೪ | ಮುಸಲ | ೬ | ೭ | ೧೯ |
| ಕ್ಷುರಪ್ರ | ೫ | ೪೨ | ೩೬ | ಲಾಂಗಲ | ೬ | ೭೬ | ೫೧ |
| ಕ್ಷೇಪಣಿ | ೫ | ೪೧ | ೨೧ | ವಜ್ರ | ೫ | ೪೮ | ೧೧ |
| ಖಡ್ಗ | ೫ | ೪೩ | ೩೩ | ವತ್ಸದಂತ | ೬ | ೨೧ | ೨೬ |
| ಗದಾ | ೫ | ೩೯ | ೩೧ | ವಿಶಿಖ | ೬ | ೭೫ | ೪ |
| ಚಕ್ರ | ೬ | ೧೮ | ೬೭ | ವೈತಸ್ತಿಕ | ೬ | ೭೫ | ೪ |
| ಚಂದ್ರ | ೬ | ೨೦ | ೧೨ | ಶಕ್ತಿ | ೫ | ೭೦ | ೩೧ |
| ಚಾಪ | ೫ | ೪೪ | ೨೦ | ಶತಘ್ನಿ | ೬ | ೪೪ | ೩೭ |
| ಜ್ಯಾ | ೩ | ೨೯ | ೧೬ | ಶರ | ೬ | ೫೨ | ೫೧ |
| ತೂಣ | ೩ | ೯ | ೧೮ | ಶಿತ–ದಂಷ್ಟ್ರ | ೬ | ೨೧ | ೨೬ |
| ತೂಣೀರ | ೩ | ೨ | ೨೭ | ಶಿಲೀಮುಖ | ೫ | ೪೨ | ೨೩ |
| ತೋಮರ | ೬ | ೭ | ೧೯ | ಶೂಲ | ೫ | ೪೨ | ೩೫ |
| ತ್ರಿಶೂಲ | ೬ | ೩೦ | ೫ | ಸಾಯಕ | ೩ | ೩೨ | ೧೯ |
| ದಂಡ | ೬ | ೨೯ | ೨೩ | ಹೂಲ | ೬ | ೫೨ | ೧೫೧ |
| ಧನು | ೫ | ೪೦ | ೩ | | | | |
| ನಾಲಿಕಾ | ೬ | ೨೧ | ೨೬ | | | | |
| ನಾರಾಚ | ೫ | ೬೦ | ೭ | | | | |
| ನಿಸ್ತ್ರಿಂಶ | ೬ | ೫೩ | ೧೦ | | | | |
| ಪಟ್ಟಿಶ | ೫ | ೬೨ | ೩೬ | | | | |
| ಪತತ್ರಿ | ೫ | ೪೩ | ೧೪ | | | | |
| ಪರಶು | ೧ | ೭೦ | ೨೦ | | | | |
| ಪರಶ್ವಧ | ೬ | ೨೯ | ೨೩ | | | | |
| ಪರಿಘ | ೬ | ೨೯ | ೨೩ | | | | |
| ಪ್ರಾಸ | ೬ | ೩೦ | ೧೯ | | | | |
| ಬಾಣ | ೫ | ೩೯ | ೩೧ | | | | |
| ಬಾಣಾಸನ | ೫ | ೪೩ | ೨೪ | | | | |
| ಭಲ್ಲ | ೬ | ೩೭ | ೯೩ | | | | |
| ಭಿಂಡಿಪಾಲ | ೬ | ೧೩ | ೧೦ | | | | |
| ಭುಶುಂಡಿ | ೬ | ೧೭ | ೨೮ | | | | |

ಇನ್ನೂ ೬೬ ಮಂತ್ರಾಸ್ತ್ರಗಳ ಉಲ್ಲೇಖಗಳಿವೆ.

### ದೇಹ ರಕ್ಷಕ ಸಾಧನಗಳು

| | | | |
|---|---|---|---|
| ಅಂಗುಲಿ–ತ್ರಾಣ | ೧ | ೨೦ | ೯ |
| ಆಪೀಡ | ೬ | ೧೮ | ೨ |
| ಉರಚ್ಛದ | ೬ | ೬೮ | ೧೫ |
| ಕವಚ | ೬ | ೧೮ | ೨ |
| ಗೋಧಾ | ೧ | ೨೦ | ೯ |
| ಚರ್ಮ | ೬ | ೯ | ೨೪ |
| ತನುತ್ರಾಣ | ೬ | ೫೯ | ೪೩ |
| ವರ್ಮ | ೬ | ೯ | ೨೪ |
| ಶಿರಸ್ತ್ರಾಣ | ೬ | ೫೨ | ೧೦೩ |
| ಸನ್ನಾಹ | ೬ | ೧೯ | ೫ |
| ಹಸ್ತವಾಪ | ೬ | ೮೯ | ೧೬ |

ಈ ನಿಬಂಧದ 'ವೀರ ಜೀವನ' ಪ್ರಕರಣದಲ್ಲಿ ಶೊ. ರಾ.ದಲ್ಲಿ ಉಕ್ತವಾದ ಆಯುಧಗಳ ಕುರಿತು ಇದೆ.

**ಅನುಬಂಧ–೬**

## ರಾಮಕಥಾ–ಸಾಹಿತ್ಯ (ಸಂಸ್ಕೃತ)

| ಲಲಿತ ಸಾಹಿತ್ಯ (ಕಾಲಾನುಕ್ರಮದಲ್ಲಿ) | ಧಾರ್ಮಿಕ ಸಾಹಿತ್ಯ |
|---|---|
| ವಾಲ್ಮೀಕಿ ರಾಮಾಯಣ | ವಿಷ್ಣು ಪುರಾಣ |
| ಪ್ರತಿಮಾನಾಟಕ | ಬ್ರಹ್ಮಾಂಡ ಪುರಾಣ |
| ಅಭಿಷೇಕ ನಾಟಕ | ಹರಿವಂಶ ಪುರಾಣ |
| ರಘುವಂಶ | ವಾಯು ಪುರಾಣ |
| ರಾವಣ ವಧ | ನೃಸಿಂಹ ಪುರಾಣ |
| ಭಟ್ಟಿಕಾವ್ಯ | ಕೂರ್ಮ ಪುರಾಣ |
| ಮಹಾವೀರ ಚರಿತೆ | ಭಾಗವತ ಪುರಾಣ |
| ಉತ್ತರರಾಮ ಚರಿತ | ವಿಷ್ಣು ಧರ್ಮೋತ್ತರ ಪುರಾಣ |
| ಉದಾತ್ತ ರಾಘವ | ಸ್ಕಂದ ಪುರಾಣ |
| ಜಾನಕೀ ಹರಣ | ವಾರಾಹ ಪುರಾಣ |
| ರಾಮ ಚರಿತ | ನಾರದೀಯ ಮಹಾಪುರಾಣ |
| ಕುಂದ ಮಾಲಾ | ಗರುಡ ಪುರಾಣ |
| ಅನರ್ಘರಾಘವ | ಬ್ರಹ್ಮ ಪುರಾಣ |
| ಬಾಲ ರಾಮಾಯಣ | ಲಿಂಗ ಪುರಾಣ |
| ಬೃಹತ್ಕಥಾಮಂಜರಿ | ಮಹಾಭಾಗವತ ಪುರಾಣ |
| ದಶಾವತಾರ ಚರಿತೆ | ದೇವೀ ಭಾಗವತ ಪುರಾಣ |
| ಆಶ್ಚರ್ಯಚೂಡಾಮಣಿ | ಸೌರ ಪುರಾಣ |
| ಮಹಾನಾಟಕ (ಹನುಮನ್ನಾಟಕ) | ಕಾಲಿಕಾ ಪುರಾಣ |
| ರಾಮಾಯಣ ಮಂಜರಿ | ಪದ್ಮ ಪುರಾಣ (ಪಾತಾಳ ಖಂಡ) |
| ಕಥಾಸರಿತ್ಸಾಗರ | ಬೃಹದ್ಧರ್ಮ ಪುರಾಣ |
| ಚಂಪೂ ರಾಮಾಯಣ | ಜೈಮಿನೀಯ ಅಶ್ವಮೇಧ |
| ಪ್ರಸನ್ನ ರಾಘವ | ಯೋಗವಾಸಿ ರಾಮಾಯಣ |
| ರಾಮಾಭ್ಯುದಯ | ಮೈರಾವಣ ಚರಿತ |
| ರಾಮ ಚರಿತ | ಅಗಸ್ತ್ಯ ಸಂಹಿತಾ |
| ರಾಘವ ಪಾಂಡವೀಯ | ರಾಮತಾಪನೀಯ ಉಪನಿಷತ್ |
| ಉಲ್ಲಾಸ ರಾಘವ | ಅಧ್ಯಾತ್ಮ ರಾಮಾಯಣ |
| ಮೈಥಿಲೀ ಕಲ್ಯಾಣ | ಅದ್ಭುತ ರಾಮಾಯಣ |
| ದೂತಾಂಗದ | ಶಿವ ಮಹಾಪುರಾಣ |
| ಹಂಸಸಂದೇಶ | ಸಹಸ್ರ ಮುಖರಾವಣ ಚರಿತ |
| ಉದಾರ ರಾಘವ | ಆನಂದ ರಾಮಾಯಣ |
| ಉನ್ಮತ್ತ ರಾಘವ (ಭಾಸ್ಕರ ಭಟ್ಟ) | ಧರ್ಮ ಖಂಡ |
| ಉನ್ಮತ್ತರಾಘವ (ವಿರೂಪಾಕ್ಷ) | ವಹ್ನಿ ಪುರಾಣ, ಅಗ್ನಿ ಪುರಾಣ |
| ರಘುನಾಥ ಚರಿತೆ | ಬ್ರಹ್ಮವೈವರ್ತ ಪುರಾಣ |
| ರಾಘವ ನೈಷಧೀಯ | ತತ್ತ್ವಸಂಗ್ರಹ ರಾಮಾಯಣ |

ರಾಮಕೃಷ್ಣ ವಿಲೋಮ ಕಾವ್ಯ
ರಾಮಲಿಂಗಾಮೃತ
ರಾಘವೋಲ್ಲಾಸ
ರಾಮ ರಹಸ್ಯ
ಜಾನಕೀ ಪರಿಣಯ (೧. ಚಕ್ರಕವಿ. ೨. ರಾಮಭದ್ರ ದೀಕ್ಷಿತ)
ಅದ್ಭುತದರ್ಪಣ
ರಾಮಕಥಾ
ರಾಘವ ಪಾಂಡವ ಯಾದವೀಯ
ಯಾದವ ರಾಘವೀಯ
ಭುಶುಂಡೀ ರಾಮಾಯಣ
ಮಹಾರಾಮಾಯಣ
ಹನುಮತ್ಸಂಹಿತಾ
ಬೃಹತ್ಕೋಶ ಖಂಡ

## ಸಂಸ್ಕೃತ ಲಲಿತ ಸಾಹಿತ್ಯದಲ್ಲಿ 'ರಾಮಕಥಾನಕ'ವುಳ್ಳ ಇನ್ನೂ ಕೆಲವು ನಾಟಕಗಳು

(ಅಕ್ಷರಾನುಕ್ರಮವಲ್ಲಿ)

ಅಂಗದ-ಭೂಭಟ್ಟ
ಅದ್ಭುತ ರಾಘವ-ವನಮಾಲೀ
ಅಭಿನವರಾಘವ ನಾಟಕ-ನೃಸಿಂಹ ಕವಿ
ಅಭಿನವ ರಾಘವಾನಂದ-ಮಣಿಕ
ಅಮೋಘ ರಾಘವ-?
ಆಂಜನೇಯ ವಿಜಯ ನಾಟಕ-ಭಾಷ್ಯಕಾರ
ಆನಂದ ರಾಘವ-ಚೂಡಾಮಣಿ ದೀಕ್ಷಿತ
ಉನ್ಮತ್ತ ರಾಘವ-ಮಹಾದೇವ ಶಾಸ್ತ್ರಿ
ಕೃತ್ಯಾ ರಾವಣ-?
ಚೂಡಾಮಣೀ ನಾಟಕ-?
ಜನಕಜಾನಂದ-ನೃಸಿಂಹ
ಜಾನಕೀ ಗೀತಾ-ಹರ್ಯಾಚಾರ್ಯ
ಜಾನಕೀ ಪರಿಣಯ-ರಾಮಭದ್ರ ದೀಕ್ಷಿತ
ಜಾನಕೀ ಪರಿಣಯ-ಸೀತಾರಾಮ
ಜಾನಕೀ ರಾಘವ-?
ದೂತಾಂಗದ (ಛಾಯಾ ನಾಟಕ)-ಸುಭಟ
ಪ್ರತಾಪ ರಾಘವ-ಗೋಪಾಲಾಚಾರ್ಯ
ಪ್ರಸನ್ನ ರಾಘವ-ಜಯದೇವ
ಪ್ರೌಢಾಭಿರಾಮನಾಟಕ-ವೆಂಕಟನಾಥ
ಮಾಯಾ ಕುರಂಗಿಕ-(ಈಹಾಮೃಗ)-?
ಮಾರೀಚ ವಂಚಿತ-?
ಮುದಿತ ರಾಘವ-ಬಾಲಕೃಷ್ಣ
ಮೈಥಿಲೀ ಪರಿಣಯ-ಹಸ್ತಿಮಲ್ಲ ಸೇನ
ಮೈಥಿಲೀಯ-ನಾರಾಯಣಶಾಸ್ತ್ರಿ
ಯಾಧವ ರಾಘವೀಯ-?
ರಘುನಾಥ ವಿಲಾಸ-ಯಜ್ಞರಾಯಣ
ರಘುವಿಲಾಸ-(ವಿಲಾಪ)-ರಾಮಚಂದ್ರ
ರಘುವೀರ ಚರಿತ-ಚಕ್ರವರ್ತಿ ವೇದಾಂತಸೂರಿ
ರಾಘವಾನಂದ-ವೆಂಕಟೇಶ್ವರ
ರಾಘವಾಭ್ಯುದಯ-ಗಂಗಾಧರ
ರಾಘವಾಭ್ಯುದಯ-ಭಗವಂತರಾಯ
ರಾಘವಾಭ್ಯುದಯ-ರಾಮಚಂದ್ರ
ರಾಘವಾಭ್ಯುದಯ-ವೆಂಕಟೇಶ್ವರ
ರಾಮಚಂದ್ರನಾಟಕ-?
ರಾಮಚರಿತ-?
ರಾಮ ನಾಟಕ-?
ರಾಮ ರಾಜ್ಯಾಭಿಷೇಕ-ವೀರರಾಘವ
ರಾಮಾಂಕ ನಾಟಕ-ಧರ್ಮಗುಪ್ತ
ರಾಮಾನಂದ-(ಶ್ರೀಗದಿತ)
ರಾಮಾಭಿನಂದ-?
ರಾಮಾಭ್ಯುದಯ ಛಾಯಾ ನಾಟಕ-ರಾಮದೇವ
ರಾಮಾಭ್ಯುದಯ ನಾಟಕ-ಯಶೋವರ್ಮ
ರಾಮಾಯಣ ನಾಟಕ-ಸೋಮೇಶ್ವರ
ರಾಮೋದಯ-ಶ್ರೀವತ್ಸಲಾಂಛನ
ವಾಲಿವಧ-(ಪ್ರೇಕ್ಷಣಿಕ)-?
ವಿಕ್ರಾಂತ ರಾಘವ-ವ್ಯಾಯೋಗ-ಕೃಷ್ಣ
ಸೀತಾಕಲ್ಯಾಣ ವೀಧೀ-ಪ್ರಧಾನಿ ವೆಂಕಭೂಪತಿ
ಸೀತಾನಂದ-ತಾತಾರ್ಯ
ಸೀತಾ ರಾಘವ-?
ಸೀತಾ ವಿವಾಹ-ಶೇಷಾದ್ರಿ
ಸೀತಾಸ್ವಯಂವರ-ಹನೂಮಾನ್ (ಮಹಾನಾಟಕದಿಂದ)
ಸುಗ್ರೀವ ಖೇಲನ-?

## ಅನುಬಂಧ–೭

### ಕನ್ನಡದಲ್ಲಿ ರಾಮಾಯಣ ಸಾಹಿತ್ಯ–೧

ಕ್ರಿ.ಶ. ೧೯ನೆಯ ಶತಕದ ಕೊನೆವರೆಗೆ ರಚಿತವಾಗಿರುವ ಉಪಲಬ್ಧ ಕೃತಿಗಳ ಪಟ್ಟಿ–ಅಕ್ಷರಾನುಕ್ರಮವಾಗಿ.

| ಕೃತಿ | ಕವಿ | ಕಾಲಶತಕ ಸಂಖ್ಯೆ |
|---|---|---|
| ಅಂಜನಾ ಚರಿತ್ರೆ | —?— | ೧೯ |
| ಅಚ್ಚಗನ್ನಡ ರಾಮಾಯಣ | ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿ | ೧೯ |
| ಅದ್ಭುತ ರಾಮಾಯಣ | ಮುದ್ದಣ | ೧೯ |
| ಅದ್ವೈತ ರಾಮಾಯಣ | ನಿಜಗುಣಾರ್ಯ | ೧೭ |
| ಅಧ್ಯಾತ್ಮ ರಾಮಾಯಣ | ಮುಮ್ಮಡಿ ಕೃಷ್ಣರಾಜ | ೧೯ |
| ಅಧ್ಯಾತ್ಮ ರಾಮಾಯಣ | ಶಂಕರನಾರಾಯಣ | ೧೮ |
| ಅಧ್ಯಾತ್ಮ ರಾಮಾಯಣ–ಉತ್ತರ ಕಾಂಡ | ಶಾಲ್ಯದ ಕೃಷ್ಣರಾಜ | ೧೯ |
| ಅಧ್ಯಾತ್ಮ ರಾಮಾಯಣ-ಟೀಕೆ | ಭಾಗವತ ಕೃಷ್ಣ | ೧೯ |
| ಅಧ್ಯಾತ್ಮ ರಾಮಾಯಣ ಮಹಾತ್ಮ್ಯೆ | ನರಸಿಂಹ | ೧೯ |
| ಆಂಜನೇಯ ವಿಜಯ | ಶಾಂತ ಕವಿ | ೧೯ |
| ಆನಂದ ರಾಮಾಯಣ (ರಾಮಾಭ್ಯುದಯ ಕಥಾ ಕುಸುಮಮಂಜರಿ) | ತಿಮ್ಮಾಮಾತ್ಯ | ೧೯ |
| ಆರ್ಯಾ ರಾಮಾಯಣ | ಮುಮ್ಮಡಿಕೃಷ್ಣರಾಜ | ೧೯ |
| ಉತ್ತರರಾಮಕಥೆ | ನಾರಾಯಣ ಕವಿ | ೧೭ |
| ಉತ್ತರರಾಮಕಥಾಸಂಗ್ರಹ | ಪಾ. ಭೀಮರಾವ್ | ೧೯ |
| ಉತ್ತರರಾಮಚರಿತ ಕಥೆ | ಮುಮ್ಮಡಿ ಕೃಷ್ಣರಾಜ | ೧೯ |
| ಉತ್ತರರಾಮಚರಿತ–ನಾಟಕ | ಬಸವಪ್ಪ ಶಾಸ್ತ್ರಿ | ೧೯ |
| ಉತ್ತರರಾಮಾಯಣ | ತಿರುಮಲೆ ವೈದ್ಯ | ೧೭ |
| ಉತ್ತರರಾಮಾಯಣ | ಯೋಗೀಂದ್ರ | ೧೭ |
| ಉತ್ತರರಾಮಾಯಣ | ನರಸಪ್ಪ | ೧೭ |
| ಉತ್ತರಸೀತಾಚರಿತೆ | ನಂಜನಗೂಡು ಸುಬ್ಬಾಶಾಸ್ತ್ರಿ | ೧೯ |
| ಉನ್ಮತ್ತ ರಾಘವಪ್ರೇಕ್ಷಣಿಕ | ಸಿದ್ಧಾಂತಿ ಶಿವಶಂಕರಶಾಸ್ತ್ರಿ | ೧೯ |
| ಋಷ್ಯಶೃಂಗೋಪಾಖ್ಯಾನ | ಪ. ರಾಮಶಾಸ್ತ್ರಿ | ೧೯ |
| ಕನ್ನಡ ಬಾಲರಾಮಾಯಣ | ಕೆ. ರಾಮಸ್ವಾಮಿ ಅಯ್ಯಂಗಾರ್ | ೧೯ |
| ಕನ್ನಡ ರಘುವಂಶ | ರಘುನಾಥ | ೧೯ |
| ಕಪೋತ ಚರಿತೆ | ವೆಂಕಟಾಚಲವಾಸ-ಅಂಕಿತ | ೧೯ |
| ಕರ್ಣಾಟಕ ರಾಮಾಯಣ ಸಂಗ್ರಹ | ಲಿಂಗರಾಜ ಅರಸ | ೧೯ |
| ಕುಮುದೇಂದುರಾಮಾಯಣ | ಕುಮುದೇಂದು | ೧೩ |
| ಕುಶಲವೋಪಾಖ್ಯಾನ (ಕನ್ನಡ ಜೈಮಿನಿಭಾರತದ ಭಾಗ) | ಲಕ್ಷ್ಮೀಶ | ೧೬ |
| ಕೌಸಲ್ಯಾಪರಿಣಯ | ಕೆ. ರಾ. ಮಾಗಡಿ | ೧೯ |

| | | |
|---|---|---|
| ಕೌಸಲ್ಯಾ ವಿವಾಹ | ವಾಲಗಳ್ಳಿವರದ ವಿಠಲ ಅಂಕಿತ | ೧೭ |
| ಚಾಮರಾಜೋಕ್ತಿವಿಲಾಸ (ವಾಲ್ಮೀಕಿ ರಾಮಾಯಣ ಟೀಕೆ) | ಚಾಮರಾಜ | ೧೭ |
| ಜಾನಕೀ ಪರಿಣಯ | ಸೂರ್ಯನಾರಾಯಣಪ್ಪ | ೧೯ |
| ಜಿನರಾಮಾಯಣ | ಚಂದ್ರಸಾಗರವರ್ಣಿ | ೧೮ |
| ತಿರುಮಲೇಶಚರಿತೆ (ರಾಮಕಥಾಯುಕ್ತ) | ತಿರುಮಲೇಶಾಧೀಶ ಅಂಕಿತ- | |
| ತೊರವೆ ರಾಮಾಯಣ | ಕುಮಾರ ವಾಲ್ಮೀಕಿ | ೧೪ |
| ದಶಕಂಠ ರಾಮಾಯಣ | —?— | ೧೮ |
| ದುಂದುಭಿ ಆಖ್ಯಾನ | ಬೋಳಾರ ವಾಸುದೇವಯ್ಯ | ೧೯ |
| ಪಂಚವಟೀ ರಾಮಾಯಣ | ವೀರನಗೆರೆ ಪುಟ್ಟಣ್ಣ | ೧೯ |
| ಪರಶುರಾಮ ರಾಮಾಯಣ | ಬಬ್ಬೂರುರಂಗ | ೧೮ |
| ಬತ್ತಲೆಶ್ವರ (ಕೌಶಿಕ) ರಾಮಾಯಣ | ಬತ್ತಲೇಶ್ವರ | ೧೩ |
| ಭುವನೈಕ ರಾಮಾಭ್ಯುದಯ (?) | ಪೊನ್ನ (?) | ೧೦ |
| ಮಾರ್ಕಂಡೇಯ ರಾಮಾಯಣ | ತಿಮ್ಮರಸ | ೧೭ |
| ಮೂಲಕ ರಾಮಾಯಣ | ವರದವಿಠಲ (?) | ೧೭ |
| ಮೂಲಬಲ ರಾಮಾಯಣ | ಹರಿದಾಸ | ೧೮ |
| ಮೈರಾವಣ ಕಾಳಗ | ನರಹರಿ | ೧೪ |
| ರಂಗನಾಥ ರಾಮಾಯಣ | ಕೆ. ರಾಮಸ್ವಾಮಿ ಅಯ್ಯಂಗಾರ್-ಮಾಗಡಿ | ೧೯ |
| ರಘುವಂಶ-ಟೀಕೆ | —?— | ೧೯ |
| ರಾಮಕಥಾ ಕಲ್ಪವೃಕ್ಷ | ಮುಮ್ಮಡಿ ಕೃಷ್ಣರಾಜ | ೧೯ |
| ರಾಮಕಥಾರಂಜನ | ನ್ಯಾಪತಿ ಲಕ್ಷ್ಮೀನರಸಿಂಹ | ೧೯ |
| ರಾಮಕಥಾವತಾರ | ದೇವಚಂದ್ರ | ೧೮ |
| ರಾಮಕಥೆ | ಮಾಘಣಂದಿ | ೧೯ |
| ರಾಮಕೊರವಂಜಿ | ವೆಂಕಟೇಶ | ೧೯ |
| ರಾಮಚಂದ್ರ ಚರಿತ | ಚಂದ್ರಶೇಖರ ಮತ್ತು ಪದ್ಮನಾಭ | ೧೮ |
| ರಾಮಚಂದ್ರಚರಿತಪುರಾಣ | ನಾಗಚಂದ್ರ (ಅಭಿನವಪಂಪ) | ೧೨ |
| (ಪಂಪರಾಮಾಯಣ) | | ೧೯ |
| ರಾಮಚಂದ್ರ ಷಟ್ಪದಿ | —?— | ೧೯ |
| ರಾಮಚರಿತದ ಹಾಡು | —?— | ೧೯ |
| ರಾಮತತ್ತ್ವಾಮೃತ | ಶಂಕರಾನಂದಯೋಗಿ | ೧೯ |
| ರಾಮದೂತ ವಿಜಯ | ತಿ. ಶ್ರೀನಿವಾಸ ಅಯ್ಯಂಗಾರ್ | ೧೯ |
| ರಾಮ ಪಾರಿಜಾತ | ಐಹೊಳೆ ಭೀಮರಾಯ | ೧೯ |
| ರಾಮ ಪಾರಿಜಾತ | ಭೀ. ರಾಘವೇಂದ್ರ | ೧೯ |
| ರಾಮಭಕ್ತಿಸಾರ | ನರಸ | ೧೯ |
| ರಾಮಭಕ್ತಿಸಾರ | ಶಂಕರಾನಂದಯೋಗಿ | ೧೯ |
| ರಾಮಧ್ಯಾನಾಮೃತ | —?— | ೧೯ |

| | | |
|---|---|---|
| ರಾಮವಿಜಯ | ದೇವಪ್ಪ | ೧೬ |
| ರಾಮವಿಜಯ ಕಾವ್ಯ | ಆತ್ಮಾರಾಮದಾಸ | ೧೯ |
| ರಾಮಾಯಣ | ವಾದಿಕುಮುದಚಂದ್ರ | ೧೩ |
| ರಾಮಾಯಣ ಕಥಾಸಾರ | ಅ. ಸುಬ್ಬಾಜಿ | ೧೯ |
| ರಾಮಾಯಣ ಟೀಕೆ | ಮುಮ್ಮಡಿ ಕೃಷ್ಣರಾಜ | ೧೯ |
| ರಾಮಾಯಣ ತಾತ್ಪರ್ಯ ದೀಪಿಕಾ ಟೀಕೆ | ,, | ೧೯ |
| ರಾಮಾಯಣ ವಚನ ಕಥೆ | —?— | ೧೯ |
| ರಾಮಾಷ್ಟಕ | —?— | ೧೯ |
| ರಾವಣ ದಿಗ್ವಿಜಯ | —?— | ೧೯ |
| ರಾವಣ ಮಂಡೋದರಿ ಸಂವಾದ | ನಿಜಗುಣಾರ್ಯ | ೧೬ |
| ವರದವಿಠಲ ರಾಮಾಯಣ | ವರದವಿಠಲ ಅಂಕಿತ | ೧೮ |
| ವಸಿಷ್ಠ ರಾಮಾಯಣ (ಸಾಂಗತ್ಯ) | ಸಂ : ಬೇಕಲ ರಾಮನಾಯಕ–(ಕವಿ ?) | |
| ವಾಕ್ಯ ರಾಮಾಯಣ | ಬಾಗಲೂರು ರಾಮಸ್ವಾಮಿ | ೧೯ |
| ವಾಸಿಷ್ಠ ರಾಮಾಯಣ | —?— | ೧೯ |
| ವಿಭೀಷಣ ಬುದ್ಧಿ | —?— | ೧೯ |
| ವಿಭೀಷಣ ನೀತಿ | —?— | ೧೯ |
| ಶಂಕರ ರಾಮಾಯಣ | ತಿಮ್ಮಣ್ಣ ? ದಾಸಪ್ಪ ? | ೧೮ |
| ಶತಕಂಠ ರಾಮಾಯಣ | ಕಂ. ಚ. ಶ್ರೀನಿವಾಸರಾಯ | ೧೯ |
| ಶ್ರೀಮದ್ರಾಮಾಯಣ (ರಾಮಕಥಾಭ್ಯುದಯ) | ವೆಂಕಾಮಾತ್ಯ | ೧೮ |
| ಶ್ರೀರಾಮಕಥಾ ಪ್ರಸಂಗ | ಬಿ. ರಾಮಕೃಷ್ಣಯ್ಯ | ೧೯ |
| ಶ್ರೀರಾಮಕಥಾ ಸಂಗ್ರಹವಚನವು | ಸಿದ್ಧಾಂತಿ ಶಿವಶಂಕರಶಾಸ್ತ್ರಿ | ೧೯ |
| ಶ್ರೀರಾಮಪಟ್ಟಾಭಿಷೇಕ | ಮುದ್ದಣ | ೧೯ |
| ಶ್ರೀರಾಮವಿಜಯ (ರಾಮಾಕ್ಷರಮಾಲೆ) | ಪಾರಿಶ (ಪಾರ್ಶ್ವನಾಥ) | ೧೮ |
| ಶ್ರೀರಾಮಾಶ್ವಮೇಧಮ್ | ಮುದ್ದಣ | ೧೯ |
| ಸಂಗ್ರಹರಾಮಾಯಣ | ಬಿ. ಲೂಯಿರೈಸ್ | ೧೯ |
| ಸದಾಶಿವರಾಮಾಯಣ | ಮಗತಲೆಪ್ರಭು ತೋದರಮಲ್ಲ ವೆಂಕಟಾಹ್ವಯ | ೧೯ |
| ಸೀತಾ ಉದಯವು | ಅ. ಕೃಷ್ಣವರ್ಣ | ೧೯ |
| ಸೀತಾಕಲ್ಯಾಣ | ಹು. ರಾಮಣ್ಣ ವೆಂಕಟಸುಬ್ಬಯ್ಯ | ೧೯ |
| ಸೀತಾ ಚರಿತೆ | ನಂಜನಗೂಡು ಸುಬ್ಬಾಶಾಸ್ತ್ರಿ | ೧೯ |
| ಸೀತಾ ಸ್ವಯಂವರ | ಪ್ರಾಣೇಶವಿಠಲ | ೧೯ |
| ಸೀತಾ ಸ್ವಯಂವರ | ಶ್ರೀಕಂಠೇಗೌಡ | ೧೯ |
| ಸೀತಾ ಸ್ವಯಂವರ | ಸಾಂಬಯ್ಯ | ೧೯ |
| ಸುಗ್ರೀವ ಸಖ್ಯ | ಕೆ. ಶ್ರೀನಿವಾಸಯ್ಯಂಗಾರ್ | ೧೯ |
| ಸೇತು ಮಹಿಮಾದರ್ಶ | ಕಳಲೆ ನಂಜರಾಜ | ೧೮ |
| ಸೇತು ಮಾಹಾತ್ಮ್ಯೆ | ವೈದ್ಯೇಶ್ವರ ಭಕ್ತ | ೧೮ |
| ಸಂಕ್ಷೇಪ ರಾಮಾಯಣ | ಭಾಷ್ಯಂ ತಿರುಮಲಾಚಾರ್ಯ | ೧೯ |

| | | |
|---|---|---|
| ಸಂಕ್ಷೇಪ ರಾಮಾಯಣಾದಿ | ಪ. ಸಿ. ಸುಬ್ರಹ್ಮಣ್ಯಶಾಸ್ತ್ರಿ | ೧೯ |
| ಸಂಕ್ಷೇಪ ಕನ್ನಡ ರಾಮಾಯಣ | ಹಾ. ಶ್ರೀನಿವಾಸರಾವ್ | ೧೯ |
| ಸಂಕ್ಷೇಪ ರಾಮಾಯಣ | ಗದುಗಿನ ವೀರನಾರಾಯಣ ಅಂಕಿತ | ? |
| ಹನುಮದ್ರಾಮಾಯಣ | ಸುಬ್ರಹ್ಮಣ್ಯ | ೧೮ |
| ಹನುಮದ್ವಿಲಾಸ | ಪ್ರಾಣೇಶವಿಠಲ | ? |
| ಹನುಮದ್ವಿಲಾಸ | ವೆಂಕಟನರಸಯ್ಯ | ೧೯ |
| ಹನುಮದ್ವಿಲಾಸ | ವೆಂಕಾಮಾತ್ಯ | ೧೮ |

## ಕನ್ನಡದಲ್ಲಿ ರಾಮಾಯಣ ಸಾಹಿತ್ಯ-೨

ಕ್ರಿ.ಶ. ೨೦ನೆಯ ಶತಮಾನದಲ್ಲಿ ರಚಿತವಾಗಿ-ಈ ಲೇಖಕನ ಗಮನಕ್ಕೆ ಬಂದ ಕೃತಿಗಳ ಪಟ್ಟಿ-ಇವುಗಳಲ್ಲಿ ಅನುವಾದ, ಸಂಪಾದನೆಗಳೂ ಸೇರಿವೆ.

| ಕೃತಿ | ಕವಿ-ಲೇಖಕ |
|---|---|
| ಅದ್ಭುತ ರಾಮಾಯಣ | ಶ್ರೀಕಂಠಶಾಸ್ತ್ರಿ |
| ಅದ್ಭುತ ರಾಮಾಯಣ (ಭಾ. ಷ) | ಪಂಡಿತ ಬಿ. ನಂಜುಂಡಯ್ಯ |
| ಅದ್ಭುತ ರಾಮಾಯಣ (ಹೊಸಗನ್ನಡ) | ಎಸ್ ಶಂಕರನಾರಾಯಣಭಟ್ |
| ಅದ್ಭುತ ರಾಮಾಯಣ (ಮುದ್ದಣ) | ರಾಮಾನುಜಯ್ಯಂಗಾರ್, ನರಸಿಂಹಾಚಾರ್ |
| ಅದ್ಭುತ ರಾಮಾಯಣ (ಮುದ್ದಣ) | ಎಸ್. ವಿ. ಪರಮೇಶ್ವರಭಟ್ಟ |
| ಅದ್ಭುತ ರಾಮಾಯಣ (ಮುದ್ದಣ) | ಪುಟ್ಟಣ್ಣ ಶೆಟ್ಟಿ |
| ಆಧ್ಯಾತ್ಮ ರಾಮಾಯಣ | ಎಸ್. ಶಂಕರಭಟ್ |
| ಆಧ್ಯಾತ್ಮ ರಾಮಾಯಣ | ಸಿ. ಎನ್. ರಾಘವಾಚಾರ್ಯ |
| ಅಭಿಷೇಕ ನಾಟಕ | ನಂಜುಂಡಸ್ವಾಮಿ ಬಿ. |
| ಅಭಿಷೇಕ ನಾಟಕ | ಎಸ್. ವಿ. ಪರಮೇಶ್ವರಭಟ್ಟ |
| ಅಹಲ್ಯೆ | ಪು. ತಿ. ನ. |
| ಆದಿಕವಿ ವಾಲ್ಮೀಕಿ | ಕೆ. ಎಸ್. ಪದ್ಮನಾಭಾಚಾರ್ |
| ಉತ್ತರರಾಮಚರಿತಮ್ | ಶಂಕರಭಟ್ಟ ಮೊ. |
| ಉತ್ತರರಾಮ ಚರಿತ | ಬಸವಪ್ಪಶಾಸ್ತ್ರಿ |
| ಉತ್ತರರಾಮ ಚರಿತ | ಕೆ. ಕೃಷ್ಣಮೂರ್ತಿ |
| ಉತ್ತರರಾಮ ಚರಿತ್ರೆ | ಧೋಂಡೋ ನರಸಿಂಹ ಮುಳಬಾಗಿಲು |
| ಉತ್ತರರಾಮ ಚರಿತ್ರ ಕಥೆ | ನರಸಿಂಹಾಚಾರ್ |
| ಉತ್ತರರಾಮಾಯಣದ ಕಥಾಚಿತ್ರ | ಎಸ್. ಎನ್. ವೀರಪ್ಪ |
| ಎಳೆಯರ ರಾಮಾಯಣ | ಮೈ. ನ. ನಾಗರಾಜ |
| ಕಂಬ ರಾಮಾಯಣ ಕಥಾಸಂಗ್ರಹ | ನಾರಾಯಣಸ್ವಾಮಿ, ಮತ್ತು ಉ. ಕಾ. ಸು. |
| ಕರ್ಣಾಟಕ ಉತ್ತರರಾಮ ಚರಿತಮ್ | ನಾಗೇಶಶಾಸ್ತ್ರಿ |
| ಕರ್ಣಾಟಕ ಉನ್ಮತ್ತ ರಾಘವಮ್ | ವೆಂಕಟಸುಬ್ಬಯ್ಯ |
| ಕನ್ನಡ ಮಹಾಕಾವ್ಯ ಕಥೆಗಳು (ರಾಮಾಯಣ) | ಎಸ್. ಚಿಕ್ಕಣ್ಣ |
| ಕನ್ನಡ ವಾಲ್ಮೀಕಿ ರಾಮಾಯಣ (ಎರಡು ಸಂಪುಟಗಳು) | ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ |

| ಕಾವ್ಯ ರಾಮಾಯಣ | ಲಕ್ಷ್ಮಣ ವಿ. ಜೋತಿ |
|---|---|
| ಗೀತ ರಾಮಾಯಣ | ಶ್ರೀನಿವಾಸ ತೋಪಖಾನೆ |
| ಜನಪದ ರಾಮಾಯಣ | ರಾಗೌ, ಪಿ. ಕೆ. ರಾಜಶೇಖರ, ಎಸ್ ಬಸವಯ್ಯ |
| ಜನಪ್ರಿಯ ವಾಲ್ಮೀಕಿ ರಾಮಾಯಣ | ಕುವೆಂಪು |
| ಜಾನಕೀ ಪರಿಣಯನಾಟಕಂ | ವೆಂಕಟರಾಯ |
| ತಪಸ್ವಿನೀ | ಭಾರತಿ (ತಿರುಮಲೆ ರಾಜಮ್ಮ) |
| ತ್ಯಾಗಮೂರ್ತಿ ಸೌಮಿತ್ರಿ | ಗಮಕಿ ಗುಂಡುರಾಮಯ್ಯ |
| ದಾಸ ರಾಮಾಯಣ (ಬಾಲಕಾಂಡ) | ಭದ್ರಗಿರಿ ಕೇಶವದಾಸ |
| ಧ್ಯಾನ ರಾಮಾಯಣ | ಪಾಲೆಪ್ಪಾಡಿ ಗೋಪಾಲಕೃಷ್ಣ ಭಟ್ |
| ನವನೀತ ರಾಮಾಯಣ | ಮುಳಿಯ ತಿಮ್ಮಪ್ಪಯ್ಯ |
| ನೀತಿ ರಾಮಾಯಣ | ಗಮಕಿ ಗುಂಡುರಾಮಯ್ಯ |
| ಪಂಪರಾಮಾಯಣದ ಕಥೆ | ಎಡನಾಡು ಗೋಪಾಲಕೃಷ್ಣ ಭಟ್ |
| ಪಂಪ ರಾಮಾಯಣ ಸಂಗ್ರಹ | ಡಿ. ಎಲ್. ನರಸಿಂಹಾಚಾರ್ |
| ಪದ್ಮಪುರಾಣದ ಕಥೆ (ರವಿಷೇಣ) | ಭುಜಬಲಿಶಾಸ್ತ್ರಿ |
| ಪರಶುರಾಮ ರಾಮಾಯಣ (ಗದ್ಯ) | ಬೆಳ್ಳಾವೆ ನರಹರಿಶಾಸ್ತ್ರಿ |
| ಪ್ರತಿಮಾ ನಾಟಕ | ಸಿ. ಪಿ. ಕೆ. |
| ಪ್ರತಿಮಾನಾಟಕ | ಎಸ್ ವಿ. ಪರಮೇಶ್ವರಭಟ್ಟ |
| ಪ್ರತಿಮಾನಾಟಕ | ಕೆ. ಕೃಷ್ಣಮೂರ್ತಿ |
| ಪ್ರತಿಮಾನಾಟಕಂ | ನ್ಯೈ. ಸೀತಾರಾಮಶಾಸ್ತ್ರಿ |
| ಭಗವಾನ್ ಶ್ರೀರಾಮ | ಬಾಲಚಂದ್ರಶಾಸ್ತ್ರಿ |
| ಭಗವಾನ್ ಶ್ರೀರಾಮ (ಅರ್ಥಾತ್ ಸಂಪೂರ್ಣರಾಮಾಯಣ) | ಸರಸ್ವತೀದೇವಿ ಚಿದಂಬರರಾವ್‌ಕುಲಕರ್ಣಿ |
| ಭಕ್ತಪ್ರಿಯ ರಾಮಾಯಣ | ಭಕ್ತಪ್ರಶಾಂತ |
| ಭರತನ ಬಂಧುಪ್ರೇಮ | ಹೊಸಕೆರೆ ಚಿದಂಬರಯ್ಯ |
| ಭರತ ಭಕ್ತಿ ಕಾವ್ಯಮ್ | ಕೆ. ರಾಮಸ್ವಾಮಿ ಅಯ್ಯಂಗಾರ್ |
| ಭಾಗ್ಯದರ್ಶನ (ನಾಟಕ) | ಪಿ. ಸಿ. ವಾಸುದೇವರಾವ್ |
| ಮಧ್ವ ರಾಮಾಯಣ | ಬನ್ನಂಜೆ ಗೋವಿಂದಾಚಾರ್ಯ |
| ಮಹಾಕಾವ್ಯ ಶ್ರೀಶಾಂಕರರಾಮಾಯಣ | ಹರಿಕಥೆ ರಾಮಣ್ಣ |
| ಮುತ್ತಣ್ಣನ ಬಾಲರಾಮಾಯಣ | ಐ. ಮಾ. ಮುತ್ತಣ್ಣ |
| ಮಂಡೋದರಿ | ಸಿ. ಕೆ. ವೆಂಕಟರಾಮಯ್ಯ |
| ಯಜ್ಞಫಲ | ಕೆ. ಕೃಷ್ಣಮೂರ್ತಿ |
| ಯಜ್ಞಫಲ | ಎಸ್. ವಿ. ಪರಮೇಶ್ವರಭಟ್ಟ |
| ರಘುವಂಶ | ಎಸ್. ವಿ. ಪರಮೇಶ್ವರಭಟ್ಟ |
| ರವಿಷೇಣ ರಾಮಾಯಣ | ಮಿರ್ಜಿ ಅಣ್ಣಾರಾಯ |
| ರಾಮಕಥಾವತಾರ ೧-೨ | ಮತ್ತೂರು ಕೃಷ್ಣಮೂರ್ತಿ |
| ರಾಮನವಮಿ | ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್) |
| ರಾಮಾಯಣ | ಸಾಲಿ ರಾಮಚಂದ್ರರಾಯ |
| ರಾಮಾಯಣ—ಕೀರ್ತನ ಕಂಠಾಭರಣ | ಹೊಸಕೆರೆ ಚಿದಂಬರಯ್ಯ |

| | |
|---|---|
| ರಾಮಾಯಣ (ಬಾಲಸಾಹಿತ್ಯ–ಸಚಿತ್ರ) | ಶಿವರಾಮಕಾರಂತ |
| ರಾಮಾಯಣ ಕಥಾಸಾರ ಮಾಲಿಕೆ | ಯಂ. ಬಿ. ಶಂಕರ ರಾವ್ |
| ರಾಮಾಯಣ ನಾಟಕ | ಸೋಸಲೆ ಅಯ್ಯಾಶಾಸ್ತ್ರಿ |
| ರಾಮಾಯಣ (ಬಾಲಕಾಂಡ) | ಸುಜನಾ |
| ರಾಮಾಯಣ ನಾಟಕ ತ್ರಿವೇಣಿ | ಬಸವರಾಜು, ಎಲ್. |
| ರಾಮವಿಜಯ ಕಾವ್ಯ | ಮೂರ್ತಿದೇವಿ |
| ರಾಮಾವತಾರ ೧–೨–೩ | ಸಿದ್ದವ್ವನಹಳ್ಳಿ ಕೃಷ್ಣಶರ್ಮ |
| ಲಕ್ಷ್ಮೀಶನ ರಾಮಾಯಣ | ಗೊ. ವೆ. ಚುಳಕಿ |
| ಲವಕುಶ | ಶಿವರಾಮಕಾರಂತ |
| ವಚನ ರಾಮಾಯಣ | ಪಟ್ಟವರ್ಧನ ಅಶ್ವತ್ಥ ನಾರಾಯಣಶಾಸ್ತ್ರಿ |
| ವಚನ ರಾಮಾಯಣ | ತ. ಸು. ಶಾಮರಾಯ |
| ವಚನರೂಪ ರಾಮಾಯಣ | ಸಿ. ಸಿ. ಶಾಬಾದಿಮಠ |
| ವಾಲ್ಮೀಕಿ | ಸುಬೋಧ ರಾಮರಾಯ |
| ವಾಲ್ಮೀಕಿ | ತ. ಸು. ಶಾಮರಾಯ |
| ವಾಲ್ಮೀಕಿ ರಾಮಾಯಣದ ಕಥೆ | ಪಿ. ಕೆ. ನಾರಾಯಣ |
| ವಾಲ್ಮೀಕಿಯಭಾಗ್ಯ–ಶೂದ್ರತಪಸ್ವಿ | ಕುವೆಂಪು |
| ವೀರವಿಲಸಿತ | ತೆಕ್ಕುಂಜ ಗೋಪಾಲಕೃಷ್ಣ ಭಟ್ಟ |
| ಶೇಷ ರಾಮಾಯಣ | ಸೋಸಲೆ ಅಯ್ಯಾಶಾಸ್ತ್ರಿ |
| ಶ್ರೀ ಚಾಮರಾಜೋಕ್ತಿ ವಿಲಾಸವೆಂಬ ಕನ್ನಡ ರಾಮಾಯಣ ಸಂಪುಟ ೧–೨ | ರಂಗನಾಥ ಶರ್ಮ |
| ಶ್ರೀ ತುಲಸೀ ರಾಮಾಯಣಮ್ | ವೈ. ಶೇ. ಅನಂತಪದ್ಮನಾಭರಾವ್ |
| ಶ್ರೀಮತ್ಸುಂದರಕಾಂಡ–ಕಾವ್ಯ– | ಎನ್. ಆರ್. ಗೋವಿಂದರಾವ್ |
| ಶ್ರೀಮದ್ರಾಮಾಯಣವು ೧–೭ ಕಾಂಡಗಳು | ದೇವಶಿಖಾಮಣಿ ಅಳಸಿಂಗರಾಚಾರ್ |
| ಶ್ರೀಮದ್ರಾಮಾಯಣ | ವೀರಕೇಸರಿ ಸೀತಾರಾಮಶಾಸ್ತ್ರಿ |
| ಶ್ರೀ ಮದ್ರಾಮ ಕರ್ಣಾಮೃತ (ಶ್ರೀಮಚ್ಛಂಕರಕೃತ) | ಬಿ. ಎಸ್. ಕಪನೀಪತಯ್ಯ |
| ಶ್ರೀಮದ್ವಾಲ್ಮೀಕಿ ರಾಮಾಯಣ | ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿ |
| ಶ್ರೀಮದ್ವಾಲ್ಮೀಕಿ ರಾಮಾಯಣಮ್(೧-೭ಕಾಂಡಗಳು) | ಎನ್. ರಂಗನಾಥಶರ್ಮ |
| ಶ್ರೀರಾಮಕಥಾಸಾರ | ಸುಬೋಧ ರಾಮರಾವ್ |
| ಶ್ರೀರಾಮಕಥಾಸುಧೆ | ಕೆ. ರಂಗದಾಸ್ |
| ಶ್ರೀರಾಮಚಂದ್ರ | ಜಿ. ಪಿ. ರಾಜರತ್ನಂ |
| ಶ್ರೀರಾಮಚರಿತಾಮೃತಮ್ | ದೇರಾಜೆ (ಜೊಕ್ಕಾಡಿ) ಸೀತಾರಾಮಯ್ಯ |
| ಶ್ರೀರಾಮಚರಿತ್ರೆ | ಸ. ರಾಮಕೃಷ್ಣಯ್ಯ |
| ಶ್ರೀರಾಮಗೀತೆ | ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿ |
| ಶ್ರೀರಾಮಹೃದಯ | ,, |
| ಶ್ರೀರಾಮಚರಿತಮಾನಸ | ಗುರುನಾಥ ಜೋಶಿ |
| ಶ್ರೀರಾಮಚರಿತಮಾನಸ | ಶಂಭುಭಟ್ಟ |
| ಶ್ರೀರಾಮ ಪರಂಧಾಮ (ವಸಂತಯಾಗ) | ಬಾಲಕವಿ ಹನುಮಂತ ಭಟ್ಟ |
| ಶ್ರೀ ರಾಮಾಯಣ–ನಾಟಕ | ಬೆಳ್ಳಾವೆ ನರಹರಿಶಾಸ್ತ್ರಿ |

| | |
|---|---|
| ಶ್ರೀರಾಮಾಯಣ ದರ್ಶನಂ | ಕುವೆಂಪು |
| ಶ್ರೀರಾಮಾಯಣ ದರ್ಶನ—ವಚನಚಂದ್ರಿಕೆ | ದೇ. ಜ. ಗೌ. |
| ಶ್ರೀರಾಮಪಟ್ಟಾಭಿಷೇಕ | ಶ್ರೀನಿವಾಸ (ಮಾಸ್ತಿ. ವೆಂ. ಅಯ್ಯಂಗಾರ್) |
| ಶ್ರೀರಾಮ ಪರೀಕ್ಷಣಂ | ಡಿ. ವಿ. ಜಿ. |
| ಶ್ರೀರಾಮನ ದಿವ್ಯ ಕಥೆ (ರಾಜಾಜಿ ರಾಮಾಯಣ) | ಕೆ. ಸಂಪದ್ಗಿರಿರಾವ್ |
| ಶ್ರೀರಾಮಾಶ್ವಮೇಧಮ್ (ಮುದ್ದಣ) (ಟೀಕೆ, ಟಿಪ್ಪಣಿ ಸಹಿತ) | ತೆಕ್ಕುಂಜ ಗೋಪಾಲಕೃಷ್ಣ ಭಟ್ಟ |
| ಶ್ರೀರಾಮಾಶ್ವಮೇಧ | ಎಸ್. ವಿ. ಪರಮೇಶ್ವರಭಟ್ಟ |
| ಶ್ರೀರಾಮಾಶ್ವಮೇಧ | ರಾಮಾನುಜಯ್ಯಂಗಾರ್ ಮತ್ತು ನರಸಿಂಹಾಚಾರ್ |
| ಶ್ರೀರಾಮಾಶ್ವಮೇಧ | ಅನಂತರಂಗಾಚಾರ್ |
| ಶ್ರೀರಾಮಾಶ್ವಮೇಧದ ಕಥೆ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ಶ್ರೀರಾಮಾಶ್ವಮೇಧ | ರಂಜಾಳ ರಾಮದೇವಶೆಣ್ಯೆ |
| ಶ್ರೀರಾಮಾಶ್ವಮೇಧಸಾರ ಸಂಗ್ರಹ | ಮ. ಪ್ರ. ಪೂಜಾರ |
| ಸಂಗ್ರಹ ರಾಮಾಯಣ (ನಾರಾಯಣ ಪಂಡಿತಾಚಾರ್ಯ) | ಬನ್ನಂಜೆ ಗೋವಿಂದಾಚಾರ್ಯ |
| ಸಂಕ್ಷೇಪ ಬಾಲರಾಮಾಯಣವು | ಎಸ್. ಎನ್. ಕೃಷ್ಣಶಾಸ್ತ್ರಿ |
| ಸಂಕ್ಷೇಪ ರಾಮಾಯಣಮ್ | ರಂಗನಾಥಶರ್ಮ |
| ಸಂಕ್ಷೇಪ ರಾಮಾಯಣ | ಕೆ. ಎಸ್. ವರದಾಚಾರ್ಯ ಮತ್ತು ಉ. ಕಾ. ಸುಬ್ಬರಾಯಾಚಾರ್ |
| ಸಂಕ್ಷೇಪ ರಾಮಾಯಣ (ಉತ್ತರ ಕಾಂಡ) | ಮಯ್ಯನಟ ವೆಂಕಟರಮಣಯ್ಯ |
| ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ | ಐರೋಡಿ ಶಿವರಾಮಯ್ಯ |
| ಸಂಪೂರ್ಣ ರಾಮಾಯಣ (ಗದ್ಯ) | ಸರಸ್ವತೀ ಚಿ. ಕುಲಕರ್ಣಿ |
| ಸಂಪೂರ್ಣ ರಾಮಾಯಣ (ನಾಟಕ) | ಬಿ. ಪುಟ್ಟಸ್ವಾಮಯ್ಯ |
| ಸನ್ಯಾಸಿ ಮಹಾರಾವಣ | ರಾ. ಗೋಪಾಲಕೃಷ್ಣ |
| ಸೀತಾ ವೃತ್ತಾಂತ | ಎಸ್. ಕೆ. ರಾಮಚಂದ್ರರಾವ್ |
| ಸೀತಾ ವನವಾಸ | ಬಿ. ವೆಂಕಟಾಚಾರ್ಯ |
| ಸೀತಾಮಾತೆ | ರೇ. ಸಿದ್ದಪ್ಪ |

## ಕನ್ನಡದಲ್ಲಿ ರಾಮಾಯಣ ಸಾಹಿತ್ಯ—೩

ಯಕ್ಷಗಾನ ಪ್ರಸಂಗಗಳು—ಇವುಗಳ ರಚನಾಕಾಲ ಸುಮಾರು ಕ್ರಿ.ಶ. ೧೬೦೦ರಿಂದ ೨೦ರ ಅವಧಿ.

| ಯಕ್ಷಗಾನ—ಪ್ರಸಂಗ | ಕವಿ |
|---|---|
| ಅಂಗದ ಸಂಧಾನ | ಪಾರ್ತಿಸುಬ್ಬ |
| ಅಂಗದ ಸಂಧಾನ | ಅಳಿಯ ಲಿಂಗರಾಜ |
| ಅತಿಕಾಯ ಕಾಳಗ | ಹ. ರಾಮಭಟ್ಟ |
| ಅಹಲ್ಯೋದ್ಧಾರ | ಆ. ರಾಮಣ್ಣ ಶಗ್ರಿತ್ತಾಯ |
| ಇಂದ್ರಜಿತು ಕಾಳಗ | ಹ. ರಾಮಭಟ್ಟ |
| ಇಂದ್ರಜಿತು ಕಾಳಗ | ಅ. ವೆಂ. ಸುಬ್ಬ |
| ಉಂಗುರ ಸಂಧಿ | ಪಾರ್ತಿಸುಬ್ಬ |

| | |
|---|---|
| ಕಪೋತ ಚರಿತೆ | ನಂಜಯ್ಯ |
| ಕಾಲನೇಮಿ ಕಾಳಗ | ಶ್ರೀಪತಿ-ಅಂಕಿತ |
| ಕುಂಭಕರ್ಣಕಾಳಗ | ಪಾರ್ತಿಸುಬ್ಬ |
| ಕುಂಭಕರ್ಣಕಾಳಗ | ಅ. ವೆಂ. ಸುಬ್ಬ |
| ಕುಶಲವರ ಕಥೆ | ಅಳಿಯ ಲಿಂಗರಾಜ |
| ಕುಶಲವರ ಕಾಳಗ | ತಿಪ್ಪಣಾರ್ಯ |
| ಕುಶಲವರ ಕಾಳಗ | ಮುದ್ದು ವಿಠಲ-ಅಂಕಿತ |
| ಕುಶಲವರ ಕಾಳಗ | ಪಾರ್ತಿಸುಬ್ಬ |
| ಚೂಡಾಮಣಿ | ಪಾರ್ತಿಸುಬ್ಬ |
| ಚೂಡಾಮಣಿ | ಅಳಿಯ ಲಿಂಗರಾಜ |
| ನಾಗಾಸ್ತ್ರ ಕುಂಭಕರ್ಣ ಕಾಳಗ | ಮಧುಪುರದ ಗಣಪತಿ.ಅಂಕಿತ |
| ಪಂಚವಟಿ ಖರದೂಷಣ ಕಾಳಗ | ಲೀಲಾವಿನೋದ ನರಸಿಂಹ-ಅಂಕಿತ |
| ಪಂಚವಟಿ ರಾಮಾಯಣ | ವೀ. ಪುಟ್ಟಣ್ಣ |
| ಪಂಚವಟೀ-ವಾಲಿಸುಗ್ರೀವರ ಕಾಳಗ | ಪಾರ್ತಿಸುಬ್ಬ |
| ಪಾದುಕಾ ಪಟ್ಟಾಭಿಷೇಕ | ಪಾರ್ತಿಸುಬ್ಬ |
| ಪಾದುಕಾ ಪಟ್ಟಾಭಿಷೇಕ | ಕಡಂದಲೆ ರಾಮರಾವ್ |
| ಪುತ್ರಕಾಮೇಷ್ಟಿ | ಗೇರುಸೊಪ್ಪೆ ಶಾಂತಯ್ಯ |
| ಪುತ್ರಕಾಮೇಷ್ಟಿ | ಲಕ್ಷ್ಮೀನರಸಿಂಹ |
| ಪುತ್ರಕಾಮೇಷ್ಟಿ | ಅಳಿಯ ಲಿಂಗರಾಜ |
| ಪುತ್ರಕಾಮೇಷ್ಟಿ-ಸೀತಾಕಲ್ಯಾಣ | ಪಾರ್ತಿಸುಬ್ಬ |
| ಪುತ್ರಕಾಮೇಷ್ಟಿ-ಸೀತಾಕಲ್ಯಾಣ | ಶರಪುರವಾಸ ಗಣಪತಿ-ಅಂಕಿತ |
| ಮೈರಾವಣ ಕಾಳಗ | ಅಳಿಯ ಲಿಂಗರಾಜ |
| ಮೈರಾವಣನ ಚರಿತ್ರೆ | ವೆಂಕಟಕವಿ |
| ರಾಮ-ರಾವಣ ಯುದ್ಧ | ? |
| ರಾಮಾಯಣ | ಅಳಿಯ ಲಿಂಗರಾಜ |
| ರಾಮಾಶ್ವಮೇಧ | ವೀ. ಪುಟ್ಟಣ್ಣ |
| ರಾಮೋದಯ | ಅಳಿಯ ಲಿಂಗರಾಜ |
| ರಾವಣ ದಿಗ್ವಿಜಯ | ಗೇರುಸೊಪ್ಪೆ ಶಾಂತಯ್ಯ |
| ರಾವಣ ವಧೆ | ಶಾಂತಕವಿ |
| ರಾವಣ ವಧೆ | ಕಾಸರಗೋಡು ಸುಬ್ರಾಯ |
| ರಾವಣ ವೇದವತಿ | ಶಾಂತಕವಿ |
| ರಾವಣೋದ್ಭವ | ಸುಬ್ಬಯ್ಯ |
| ಲಂಕಾದಹನ | ಅಳಿಯ ಲಿಂಗರಾಜ |
| ಲವಕುಶರ ಕಾಳಗ | ಹ. ರಾಮಭಟ್ಟ |
| ಲವಕುಶರ ಕಾಳಗ | ಹೆ. ಗಿರಿಯಮ್ಮ |
| ಲವಕುಶರ ಕಾಳಗ | ಭಾಳಾಕ್ಷ |
| ಲವಣ ಸಂಹಾರ | ಗೇರುಸೊಪ್ಪೆ ಶಾಂತಯ್ಯ |
| ವನವಾಸ ರಾಮಾಯಣ | ಅಳಿಯ ಲಿಂಗರಾಜ |

| | |
|---|---|
| ವಾಲಿಸುಗ್ರೀವ | ಕವಿಭೂಷಣ ವೆಂಕಪ್ಪಶೆಟ್ಟಿ |
| ವಾಲಿಸುಗ್ರೀವ ಕಾಳಗ | ಪಾರ್ತಿ ಸುಬ್ಬ |
| ವಾಲಿಸುಗ್ರೀವ ಕಾಳಗ | ಅಳಿಯ ಲಿಂಗರಾಜ |
| ವಾಲ್ಮೀಕಿ ವಿಜಯ | ಕೆ. ವಾಸುದೇವಾಚಾರ್ಯ |
| ಶತಾಸ್ಯ ರಾವಣ ಕಾಳಗ | ವಿಷ್ಣು ಸಭಾಹಿತ |
| ಶ್ರೀ ರಾಮಕಥಾ ಪ್ರಸಂಗ | ರಾಮಕೃಷ್ಣಯ್ಯ |
| ಶ್ರೀ ರಾಮ ನಿಜ ಪಟ್ಟಾಭಿಷೇಕ | ಎ. ಆರ್. ಶಗ್ರಿತ್ತಾಯ |
| ಸಂಪೂರ್ಣ ರಾಮಾಯಣ | ತಿಮ್ಮಪ್ಪ ವೆಂಕಟಪ್ಪ ಹೆಗ್ಗಡೆ |
| ಸಂಪೂರ್ಣ ರಾಮಾಯಣ | ಬೆಳಸವಿಗೆ ಗಣಪತಿ ಹೆಗ್ಗಡೆ |
| ಸೀತಾ ಕಲ್ಯಾಣ | ಗೇರುಸೊಪ್ಪೆ ಶಾಂತಯ್ಯ |
| ಸೀತಾ ಕಲ್ಯಾಣ | ಅಳಿಯ ಲಿಂಗರಾಜ |
| ಸೀತಾ ಕಲ್ಯಾಣ | ಹೆ. ಗಿರಿಯಮ್ಮ |
| ಸೀತಾಪಹಾರ | ಅಳಿಯ ಲಿಂಗರಾಜ |
| ಸೀತಾ ವಿಯೋಗ | ಗೇರುಸೊಪ್ಪೆ ಶಾಂತಯ್ಯ |
| ಸೀತಾ ಸ್ವಯಂವರ | ಸಾಂಬಯ್ಯ |
| ಸೇತು ಬಂಧನ | ಪಾರ್ತಿಸುಬ್ಬ |
| ಸೇತು ಬಂಧನ | ಅಳಿಯ ಲಿಂಗರಾಜ |
| ಸೇತು ಬಂಧನ | ಸೀತಾರಾಮಶಾಸ್ತ್ರಿ |
| ಸೇತು ಬಂಧನ | ಶ್ರೀಕೃಷ್ಣ—ಅಂಕಿತ |
| ಹನುಮದ್ವಿಜಯ ಮಂಜರಿ | ಸುಬ್ಬಣ್ಣ |
| ಹನುಮದ್ವಿಲಾಸ | ತಿಪ್ಪಣಾರ್ಯ |
| ಹನುಮದ್ವಿಲಾಸ | ಪ. ಮ. ಬಾಲಕೃಷ್ಣರಾವ್ |

## ಕನ್ನಡದಲ್ಲಿ ರಾಮಾಯಣ ಸಾಹಿತ್ಯ-೪

ರಾಮಾಯಣ ವಸ್ತು ಕುರಿತು ಗ್ರಂಥರೂಪದಲ್ಲಿ ಬಂದ ಪರಿಚಯ, ವಿಚಾರ, ವಿಮರ್ಶಾ ಸಾಹಿತ್ಯ.

| ಗ್ರಂಥ | ಲೇಖಕ |
|---|---|
| ಆಧುನಿಕ ಯುಗಕ್ಕೆ ರಾಮಾಯಣ ಸಂದೇಶ | ಅನು: ಲಕ್ಷ್ಮೀ ನರಸಿಂಹ |
| ಕೌಶಿಕ ರಾಮಾಯಣ | ಬಿ. ಎಚ್. ಶ್ರೀಧರ |
| ರಾಮಾಯಣದ ಕೆಲವು ವಿಚಾರಗಳು | ಅ. ಬಿ. ರಂಗಸ್ವಾಮಿ ಭಟ್ಟ |
| ರಾಮಾಯಣ ಮಹಾಪುರುಷರು | ದೇವುಡು |
| ರಾಮಾಯಣವೂ ಭಗವದ್ಗೀತೆಯೂ | ದೇವುಡು |
| ರಾಮಾಯಣ ಸಮೀಕ್ಷೆ | ಎಸ್. ಕೆ. ರಾಮಚಂದ್ರರಾವ್ |
| ಶ್ರೀಮಾನ್ ಡಿ ವಿ.ಜಿ. ಚಿತ್ರಿಸಿರುವ ರಾಮಚಂದ್ರಪ್ರಭು | ಜಿ. ಪಿ. ರಾಜರತ್ನಂ |
| ಶ್ರೀರಾಮಕಥೆಯಲ್ಲಿ ಆದರ್ಶಗಳು | ಅನು : ಸು. ನಾ. ಮಲ್ಯ |
| ಶ್ರೀ ರಾಮಾಯಣ ಶರಣಾಗತಿ ಸಿದ್ಧಾಂತ | ತಿ. ಅ. ಅ. ಸಂಪತ್ಕುಮಾರಾಚಾರ್ |

### ಪೀಠಿಕೆಗಳು, ಪ್ರಸ್ತಾವನೆಗಳು, ಮುನ್ನುಡಿಗಳು

| | |
|---|---|
| ಅದ್ಭುತ ರಾಮಾಯಣ | ಎಸ್. ವಿ. ಪರಮೇಶ್ವರ ಭಟ್ಟ |
| ಉತ್ತರರಾಮ ಚರಿತ್ರೆ | ಕೆ. ಕೃಷ್ಣಮೂರ್ತಿ |
| ಗುಣಭದ್ರನ ಉತ್ತರ ಪುರಾಣ | ಎ. ಶಾಂತಿರಾಜ ಶಾಸ್ತ್ರಿ |
| ಜನಪದ ರಾಮಾಯಣ | ರಾಗೌ, ಸಿ. ಕೆ. ರಾಜಶೇಖರ, ಎಸ್. ಬಸವಯ್ಯ |
| ತೊರವೆ ರಾಮಾಯಣ ಸಂ ೧-೨ | ಎನ್. ಬಸವಾರಾಧ್ಯ, ಬಿ. ಎಸ್. ಸಣ್ಣಯ್ಯ |
| ಪಂಪ ರಾಮಾಯಣ | ಸಾಹಿತ್ಯ ಪರಿಷತ್ತಿನ ಪ್ರಕಟಣೆ |
| ಪಂಪ ರಾಮಾಯಣ ಸಂಗ್ರಹ | ಡಿ. ಎಲ್. ನರಸಿಂಹಾಚಾರ್ |
| ಪ್ರತಿಮಾನಾಟಕ | ಕೆ. ಕೃಷ್ಣಮೂರ್ತಿ |
| ಭಾಸನ ಎರಡು ನಾಟಕಗಳು | ಸಿ. ಪಿ. ಕೆ. |
| ಯಜ್ಞಫಲ | ಕೆ. ಕೃಷ್ಣಮೂರ್ತಿ |
| ರವಿಷೇಣ ರಾಮಾಯಣ | ಮಿರ್ಜಿ ಅಣ್ಣಾರಾಯ |
| ಶ್ರೀಮದ್ವಾಲ್ಮೀಕಿ ರಾಮಾಯಣಕ್ಕೆ ಮುನ್ನುಡಿಗಳು : ಅನುಬಂಧಗಳು : | ಡಿ. ವಿ. ಜಿ., ಎನ್. ರಂಗನಾಥಶರ್ಮ |
| ಶ್ರೀರಾಮ ಪಟ್ಟಾಭಿಷೇಕ | ಎಸ್. ವಿ. ಪರಮೇಶ್ವರಭಟ್ಟ |
| ಶ್ರೀ ರಾಮಾಯಣ ವಚನ ಚಂದ್ರಿಕೆ | ದೇ. ಜ. ಗೌ. |

### ಕವಿ-ಕೃತಿ ಕುರಿತು ವಿಮರ್ಶೆ-ಪ್ರಶಸ್ತಿ ಗ್ರಂಥಗಳು

#### ಕಾಳಿದಾಸ

| | |
|---|---|
| ಕಾಳಿದಾಸ | ಶ್ರೀರಂಗ |
| ಕಾಳಿದಾಸನ ಕೃತಿಗಳ ವಿಮರ್ಶೆ | ಎಸ್. ವಿ ರಂಗಣ್ಣ |
| ಕಾಳಿದಾಸನ ನಾಟಕಗಳು | ಕೆ. ಕೃಷ್ಣಮೂರ್ತಿ |
| ಕಾಳಿದಾಸನ ಉಪಮೆಗಳು | ಎಂ. ರಾಜಗೋಪಾಲಾಚಾರ್ಯ |
| ಮಹಾಕವಿ ಕಾಳಿದಾಸ | ಸಿ. ಕೆ. ವೆಂಕಟರಾಮಯ್ಯ |

#### ಕುಮಾರ ವಾಲ್ಮೀಕಿ

| | |
|---|---|
| ಕುಮಾರ ವಾಲ್ಮೀಕಿ | ಕಾಶಿ ವಿಶ್ವನಾಥಶೆಟ್ಟಿ |
| ಕುಮಾರ ವಾಲ್ಮೀಕಿ | ರಾ. ಕುಲಕರ್ಣಿ |
| ಕುಮಾರ ವಾಲ್ಮೀಕಿ | ಕೆ. ಜಿ. ನಾರಾಯಣ ಪ್ರಸಾದ |
| ಕುಮಾರ ವಾಲ್ಮೀಕಿ | ಹೊಸಬೆಟ್ಟು ಸೀತಾರಾಮಾಚಾರ್ಯ |

#### ಕುವೆಂಪು

| | |
|---|---|
| ಅವಲೋಕನ | ಸಂಪಾದಿತ |
| ಕವಿಶೈಲ | ಸಂಪಾದಿತ |
| ಗಂಗೋತ್ರಿ | ಸಂಪಾದಿತ |
| ಶ್ರೀ ರಾಮಾಯಣ ದರ್ಶನಂ—ಮಹಾಕಾವ್ಯ ಸಮೀಕ್ಷೆ | ಕೋ. ಚೆನ್ನಬಸಪ್ಪ |

### ನಾಗಚಂದ್ರ (ಅಭಿನವ ಪಂಪ)

| | |
|---|---|
| ಅಭಿನವ ಪಂಪ | ಸಂಪಾದಿತ |
| ನಾಗಚಂದ್ರ | ಸಿ. ಪಿ. ಕೆ. |
| ನಾಗಚಂದ್ರ | ದೇವೇಂದ್ರ ಕುಮಾರ ಹಕಾರಿ |
| ನಾಗಚಂದ್ರನ ಕಾವ್ಯಗಳು | ಡಿ. ವಿ. ಶೇಷಗಿರಿರಾವ್ |
| ಪಂಪರಾಮಾಯಣ ಕಾವ್ಯಪರಿಚಯ | ಡಿ. ವಿ. ಶೇಷಗಿರಿರಾವ್ |
| ಭವಭೂತಿ | ಕೆ. ಕೃಷ್ಣಮೂರ್ತಿ |
| ಭಾಸಮಹಾಕವಿ | ಉಡುಪಿ ವೆಂಕಟಕೃಷ್ಣರಾವ್ |
| ಭಾಸಮಹಾಕವಿ | ಸಿ. ಕೆ. ವೆಂಕಟರಾಮಯ್ಯ |
| ಭಾಸ | ಎಚ್. ಎಲ್. ಹರಿಯಪ್ಪ |

### ಮುದ್ದಣ

| | |
|---|---|
| ಉದಯಭಾನು | ಸಂಪಾದಿತ, ನಂದಳಿಕೆ |
| ಚೆನ್ನಿಗ ಕವಿ ಮುದ್ದಣ | ಮಾಧವ ಪೈ |
| ಜಾಣ ಮುದ್ದಣ | ಸಂಪಾದಿತ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ |
| ಜಾಣ ಮುದ್ದಣ | ಸಂ : ಕು. ಶಿ. ಹರಿದಾಸಭಟ್ಟ |
| ನೆನಹು | ಸಂ : ಮುನಿಪಾಲರಾಜು |
| ಮುದ್ದಣ | ಸಂಪಾದಿತ, ಸೆಂಟ್ರಲ್ ಕಾಲೇಜು, ಬೆಂಗಳೂರು |
| ಮುದ್ದಣ | ತ. ಸು. ಶಾಮರಾಯ |
| ವರ ಕವಿ ಮುದ್ದಣ | ಚಂದ್ರರಾಜಶೆಟ್ಟಿ |
| ಶ್ರೀ ರಾಮಾಶ್ವಮೇಧದ ರಸತರಂಗಗಳು | ಏರ್ಯ ಲಕ್ಷ್ಮೀನಾರಾಯಣ ಆಳ್ವ |

### ವಾಲ್ಮೀಕಿ

| | |
|---|---|
| ಆದಿಕವಿ ವಾಲ್ಮೀಕಿ | ಮಾಸ್ತಿ ವೆಂಕಟೇಶ ಅಯ್ಯಂಗಾರ್ |
| ವಾಲ್ಮೀಕಿ ಕಂಡ ಶ್ರೀರಾಮ | ಸುಧಾಕರ ಜಿ ಪಂಡಿತ |
| ವಾಲ್ಮೀಕಿ ಮುನಿಗಳ ಹಾಸ್ಯ ಪ್ರವೃತ್ತಿ | ಎನ್. ರಂಗನಾಥಶರ್ಮ |
| ವಾಲ್ಮೀಕಿಯ ರಾಮ, ವ್ಯಾಸನ ಕೃಷ್ಣ | ರಾ. ಭ. ಹಾಸಣಗಿ |
| ವಾಲ್ಮೀಕಿ ರಾಮಾಯಣ | ಉ. ಕಾ. ಸುಬ್ಬರಾಯಾಚಾರ್ |

# ಗ್ರಂಥಋಣ


## ಕನ್ನಡ ಗ್ರಂಥಗಳು (ಪ್ರಾಚೀನ)

| | |
|---|---|
| ಉತ್ತರರಾಮಾಯಣ | ತಿರುಮಲೆ ವೈದ್ಯ |
| ಐರಾವತ | ಕುಮಾರವ್ಯಾಸ (?) |
| ಕರ್ಣಾಟಭಾರತ | ಕುಮಾರವ್ಯಾಸ |
| ಕನ್ನಡ ಭಾಗವತ | |
| ಹರಿಶ್ಚಂದ್ರಕಾವ್ಯ | ರಾಘವಾಂಕ |
| ಹನುಮದ್ರಾಮಾಯಣ | ಸಂ. ಮು. ಶಿವರಾಮಯ್ಯ |

## ಕನ್ನಡ ಆಧುನಿಕ ಕೃತಿಗಳು

| | |
|---|---|
| ಅಣ್ಣಾರಾವ್ ಮಿರ್ಜಿ | ರವಿಷೇಣ ರಾಮಾಯಣ |
| ಕಾರಂತ, ಶಿವರಾಮ | ಜಾನಪದ ಗೀತಗಳು |
| | ಯಕ್ಷಗಾನ ಬಯಲಾಟ |
| | ಕೌಶಿಕ ರಾಮಾಯಣ (ಸಂಪಾದಿತ) |
| ಕುವೆಂಪು | ಶ್ರೀರಾಮಾಯಣ ದರ್ಶನಂ |
| ಚೆನ್ನಬಸಪ್ಪ, ಕೋ. | ಶ್ರೀರಾಮಾಯಣ ದರ್ಶನಂ-ಮಹಾಕಾವ್ಯ ಸಮೀಕ್ಷೆ |
| ಕೃಷ್ಣರಾವ್, ಕೆ. | ಯಕ್ಷಗಾನ ಸಾಹಿತ್ಯ |
| ಕೃಷ್ಣ ಮೂರ್ತಿ, ಕೆ. | ಸಂಸ್ಕೃತಕಾವ್ಯ |
| ಕೃಷ್ಣಭಟ್, ಕೆ. | ಅರ್ಥಶಾಸ್ತ್ರ (ಅನುವಾದ) |
| ಕೃಷ್ಣಪ್ಪ, ಎಂ. | ಶ್ರೀರಾಮಚರಿತೆ (ರಘುವಂಶದ ಅನುವಾದ) |
| ಕೃಷ್ಣಶರ್ಮ ಬೆಟಗೇರಿ | ಕರ್ಣಾಟಕ ಜನಜೀವನ |
| ಕೃಷ್ಣಶಾಸ್ತ್ರಿ, ಎ. ಆರ್. | ಸಂಸ್ಕೃತ ನಾಟಕ |
| ಕೃಷ್ಣರಾವ್ ಮತ್ತು ಕೇಶವಭಟ್ | ಕರ್ಣಾಟಕದ ಇತಿಹಾಸ ದರ್ಶನ |
| ಗುರುನಾಥಜೋಶಿ | ಶ್ರೀರಾಮ ಚರಿತಮಾನಸ (ಸಂಗ್ರಹಾನುವಾದ) |
| ಗುರುರಾಜಭಟ್ | ತುಳುನಾಡಿನ ಇತಿಹಾಸದಲ್ಲಿ ಸ್ಥಾನಿಕರು |
| ಚಿದಾನಂದ ಮೂರ್ತಿ, ಎಂ. | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| ಡಿ. ವಿ. ಜಿ. | ಶ್ರೀರಾಮ ಪರೀಕ್ಷಣಂ |
| | ಎನ್. ರಂಗನಾಥ ಶರ್ಮರ "ವಾಲ್ಮೀಕಿ ರಾಮಾಯಣ"ದ ಪ್ರತಿ ಕಾಂಡಕ್ಕೂ ಬರೆದ ಮುನ್ನುಡಿ |
| ದೇ. ಜ. ಗೌ. | ಶ್ರೀರಾಮಾಯಣ ದರ್ಶನಂ ವಚನ ಚಂದ್ರಿಕೆ |
| ದೇವುಡು ನರಸಿಂಹ ಶಾಸ್ತ್ರಿ | ರಾಮಾಯಣವೂ ಭಗವದ್ಗೀತೆಯೂ |
| ನಂದೀಮಠ, ಎಸ್. ಸಿ. | ಕನ್ನಡನಾಡಿನ ಚರಿತ್ರೆ ಭಾಗ-೨. (ಧರ್ಮಗಳು) |
| ನರಸಿಂಹಾಚಾರ್, ಆರ್. | ಕರ್ಣಾಟಕ ಕವಿಚರಿತೆ ಸಂಪುಟ-೧, ೨, ೩. |
| ನಾಗೇಗೌಡ, ಎಚ್. ಎಲ್. | ಪ್ರವಾಸಿ ಕಂಡ ಇಂಡಿಯಾ ಭಾಗ ೧, ೨. |
| ನಾರಾಯಣಸ್ವಾಮಿ ಶಾಸ್ತ್ರಿ ಮತ್ತು ಉ. ಕಾ. ಸು. | ಕಂಬರಾಮಾಯಣ ಸಂಗ್ರಹ |
| ಪರಮೇಶ್ವರ ಭಟ್ಟ, ಎಸ್. ವಿ. | ಕನ್ನಡ ಕಾಳಿದಾಸ ಮಹಾ ಸಂಪುಟ |
| ಪಂಚಮುಖಿ, ಆರ್. ಎಸ್. | ಕರ್ಣಾಟಕದ ಹರಿದಾಸ ಸಾಹಿತ್ಯ |

| | |
|---|---|
| ಬೇಂದ್ರೆ, ದ. ರಾ. | ಸಾಹಿತ್ಯ ಮತ್ತು ವಿಮರ್ಶೆ<br>ಸಾಹಿತ್ಯ-ಸಂಶೋಧನ |
| ಮರಿಯಪ್ಪ ಭಟ್ | ಕನ್ನಡ ಸಾಹಿತ್ಯದ ಸಂಕ್ಷಿಪ್ತ ಚರಿತ್ರೆ |
| ಮಾಸ್ತಿ ವೆಂಕಟೇಶ ಅಯ್ಯಂಗಾರ್ | ಆದಿಕವಿ ವಾಲ್ಮೀಕಿ |
| ಮಾಳವಾಡ, ಸ. ಸ. | ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ |
| ಮುಗಳಿ, ರಂ. ಶ್ರೀ | ಕನ್ನಡ ಸಾಹಿತ್ಯ ಚರಿತ್ರೆ |
| ರಾಜಪುರೋಹಿತ, ನಾ. ಶ್ರೀ | ಶ್ರೀಮತ್ ಸುರೇಶ್ವರಾಚಾರ್ಯರ ಚರಿತ್ರೆ |
| ರಾಮಚಂದ್ರರಾವ್, ಎಸ್. ಕೆ. | ರಾಮಾಯಣ ಸಮೀಕ್ಷೆ |
| ರಾಮರಾವ್ ಬೆನಗಲ್ ಮತ್ತು ಪಾಸ್ಯಂ ಸುಂದರಶಾಸ್ತ್ರಿ | ಪುರಾಣ ನಾಮ ಚೂಡಾಮಣಿ |
| ರಂಗಣ್ಣ, ಎಸ್. ವಿ. | ಶೈಲಿ ೧-೪ |
| ವೆಂಕಟರಾಯ ಆಲೂರು | ಮಧ್ವಸಿದ್ಧಾಂತ ಪ್ರವೇಶಿಕೆ |
| ವೆಂಕಟಸುಬ್ಬಯ್ಯ, ಎ. | ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ |
| ವೆಂಕಟರಾಯಾಚಾರ್ಯ, ಕೆ. | ಸಾಹಿತ್ಯದ ಹಿನ್ನೆಲೆ |
| ವೆಂಕಟರಾಮಪ್ಪ, ಕೆ. | ಕನ್ನಡ ಸಾಹಿತ್ಯ ಚರಿತ್ರೆ |
| ಶಿವರುದ್ರಪ್ಪ, ಜಿ. ಎಸ್. | ವಿಮರ್ಶೆಯ ಪೂರ್ವ-ಪಶ್ಚಿಮ |
| ಸುಬ್ಬರಾಯಾಚಾರ್, ಉ. ಕಾ. | ವಾಲ್ಮೀಕಿ ರಾಮಾಯಣ |

## ಸಂಸ್ಕೃತ ಗ್ರಂಥಗಳು

| | |
|---|---|
| ಅಗ್ನಿಪುರಾಣ | ಆನಂದಾಶ್ರಮ ಗ್ರಂಥಮಾಲಾ-೪೧ (ಸಂಸ್ಕೃತ ಗ್ರಂಥಾವಲಿ) |
| ಅಧ್ಯಾತ್ಮ ರಾಮಾಯಣ | ಚೌಕಾಂಬಾ ಪ್ರೆಸ್ |
| ಅದ್ಭುತ ರಾಮಾಯಣ | ಚೌಕಾಂಬಾ ಪ್ರೆಸ್ |
| ಆನಂದ ರಾಮಾಯಣ | ಆನಂದಾಶ್ರಮ ಸಂಸ್ಕೃತ ಗ್ರಂಥಾವಲಿ |
| ಚಂಪೂ ರಾಮಾಯಣ | ಭೋಜರಾಜ ಕೃತ-ಬಾಲ ಮನೋರಮಾ ಸೀರೀಸ್ |
| ತೀರ್ಥ ಪ್ರಬಂಧ | ವಾದಿರಾಜ ಯತಿ (ಪ್ರ: ನಂಜನಗೂಡು) |
| ದಶಾವತಾರಚರಿತಮ್ | ಕ್ಷೇಮೇಂದ್ರ (ಪ್ರ: ಕಾವ್ಯಮಾಲಾ) |
| ದ್ವಾದಶ ಸ್ತೋತ್ರ | ಮಧ್ವಾಚಾರ್ಯ (ಪ್ರ: ಉಡುಪಿ) |
| ಪದ್ಮ ಪುರಾಣ-ಪಾತಾಳ ಖಂಡ | ಆನಂದಾಶ್ರಮ ಸಂಸ್ಕೃತ ಗ್ರಂಥಾವಲಿ |
| ಬೃಹತ್ಕಥಾಮಂಜರಿ | ಕ್ಷೇಮೇಂದ್ರ (ಪ್ರ: ಕಾವ್ಯಮಾಲಾ-೬೯) |
| ಮಹಾಭಾರತಮ್ (ವನಪರ್ವ) | ಚಿತ್ರಶಾಲಾ ಪ್ರೆಸ್-ಪುಣೆ |
| ಯೋಗವಾಸಿಷ್ಠ | ಪ್ರ: ಮೈಸೂರು |
| ರಘುವಂಶ | ಕಾಳಿದಾಸ (ಸಂ: ಕಾಶೀನಾಥ ಪಾಂಡುರಂಗ ಪರಾಬ್ ಶ್ರೀನಿವಾಸ ವೆಂಕಟ್ರಾಮ ಶಾಸ್ತ್ರಿ |
| ಶ್ರೀಮದ್ವಾಲ್ಮೀಕಿ ರಾಮಾಯಣಮ್ | ಮೂಲ ಮತ್ತು ಅನುವಾದ: ವಿದ್ವಾನ್ ಎನ್. ರಂಗನಾಥ ಶರ್ಮ |
| ಗೌಡೀಯ ಪಾಠ | ಕಲ್ಕತ್ತಾ ಸಂ. ಸೀರೀಸ್ |
| ದಾಕ್ಷಿಣಾತ್ಯ ಪಾಠ | ಸಂ: ವಾಸುದೇವ ಲಕ್ಷ್ಮಣಶಾಸ್ತ್ರಿ ಪಣ್ಸೀಕರ್ ನಿರ್ಣಯ ಸಾಗರ ಪ್ರೆಸ್ |

